# “ವಿಜಯನಗರ ಕಾಲದ ಸಾಗರೋತ್ತರ ಸಂಬಂಧಗಳು”

**ಡಾಕ್ಟರೇಟ್ ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸುತ್ತಿರುವ ಮಹಾಪ್ರಬಂಧ**


**ಸಂಶೋಧಕರು**

**ಧರ್ಮೇಶ.ಎ.ಜಿ**

ಇತಿಹಾಸ ಅಧ್ಯಯನ ವಿಭಾಗ
ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ,
ಮೈಸೂರು

**ಮಾರ್ಗದರ್ಶಕರು**

**ಡಾ.ಎನ್.ಸರಸ್ವತಿ** ಎಂ.ಎ., ಪಿಎಚ್.ಡಿ

ಪ್ರಾಧ್ಯಾಪಕರು
ಇತಿಹಾಸ ಅಧ್ಯಯನ ವಿಭಾಗ
ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ
ಮೈಸೂರು



**ಇತಿಹಾಸ ಅಧ್ಯಯನ ವಿಭಾಗ**
**ಮೈಸೂರು ವಿಶ್ವವಿದ್ಯಾನಿಲಯ**
**ಮಾನಸಗಂಗೋತ್ರಿ,**
**ಮೈಸೂರು–570006**

**2018**

Telephone No: (0) 0821-2419681
Fax : 0821-2415390
E-mail : ww.uomcist.org

**UNIVERSITY**  **OF MYSORE**

**DEPARTMENT OF STUDIES IN HISTORY**

# ಪ್ರಮಾಣ ಪತ್ರ

**ಶ್ರೀ ಧರ್ಮೇಶ ಎ.ಜಿ** ಆದ ನಾನು **"ವಿಜಯನಗರ ಕಾಲದ ಸಾಗರೋತ್ತರ ಸಂಬಂಧಗಳು"** ಎಂಬ ವಿಷಯವನ್ನು **ಡಾ.ಎನ್.ಸರಸ್ವತಿ** ರವರು ಪ್ರಾಧ್ಯಾಪಕರು, ಇತಿಹಾಸ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು ಇವರ ಮಾರ್ಗದರ್ಶನದಲ್ಲಿ ಸಂಶೋಧನಾ ಕಾರ್ಯವನ್ನು ಕೈಗೊಂಡು ಈ ಮಹಾಪ್ರಬಂಧವನ್ನು ಸಿದ್ಧಪಡಿಸಿ ಇತಿಹಾಸ ವಿಷಯದಲ್ಲಿ ಡಾಕ್ಟರೇಟ್ ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಮಂಡಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ವಿಶ್ವವಿದ್ಯಾನಿಲಯಗಳ ಡಿಪ್ಲೊಮೊ ಅಥವಾ ತತ್ಸಮಾನ ಪದವಿಗಾಗಿ ಅವರು ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಮಾರ್ಗದರ್ಶಕರು** **ಸಂಶೋಧಕರು**

**ಅಧ್ಯಕ್ಷರು**

# ಸಂಶೋಧಕರ ಪ್ರಮಾಣಪತ್ರ

ಮೈಸೂರು ವಿಶ್ವವಿದ್ಯಾನಿಲಯದ ಇತಿಹಾಸ ಅಧ್ಯಯನ ವಿಭಾಗದಲ್ಲಿ ಪ್ರಾಧ್ಯಾಪಕರಾಗಿರುವ **ಡಾ.ಎನ್.ಸರಸ್ವತಿ** ಅವರ ಮಾರ್ಗದರ್ಶನದಲ್ಲಿ **"ವಿಜಯನಗರ ಕಾಲದ ಸಾಗರೋತ್ತರ ಸಂಬಂಧಗಳು"** ಎಂಬ ವಿಷಯ ಕುರಿತು ಸಂಶೋಧನಾ ಕಾರ್ಯ ನಡೆಸಿ ಇತಿಹಾಸ ವಿಷಯದಲ್ಲಿ ಡಾಕ್ಟರೇಟ್ ಪದವಿಗಾಗಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸುತ್ತಿದ್ದೇನೆ.

ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಬಗೆಯ ಡಿಪ್ಲೊಮೊ ಅಥವಾ ತತ್ಸಮಾನ ಪದವಿಗಾಗಿ ಯಾವ ವಿಶ್ವವಿದ್ಯಾನಿಲಯಕ್ಕೂ ಈ ಹಿಂದೆ ಸಲ್ಲಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

**(ಧರ್ಮೇಶ.ಎ.ಜಿ)**

**ಸ್ಥಳ : ಮೈಸೂರು**

**ದಿನಾಂಕ :**

Telephone No : (0) 0821-2419681
Fax : 0821-2415390
E-mail : www.uomcist.org




**UNIVERSITY OF MYSORE**

**DEPARTMENT OF STUDIES IN HISTORY**

# ಮಾರ್ಗದರ್ಶಕರ ಪ್ರಮಾಣಪತ್ರ

ಶ್ರೀ **ಧರ್ಮೇಶ.ಎ.ಜಿ** ಅವರು ನನ್ನ ಮಾರ್ಗದರ್ಶನದಲ್ಲಿ **"ವಿಜಯನಗರ ಕಾಲದ ಸಾಗರೋತ್ತರ ಸಂಬಂಧಗಳು"** ಎಂಬ ವಿಷಯದಲ್ಲಿ ಸಂಶೋಧನಾ ಕಾರ್ಯವನ್ನು ಕೈಗೊಂಡು ಈ ಮಹಾಪ್ರಬಂಧವನ್ನು ಇತಿಹಾಸ ವಿಷಯದಲ್ಲಿ ಡಾಕ್ಟರೇಟ್ ಪದವಿಗಾಗಿ ಮೈಸೂರು ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸುತ್ತಿದ್ದಾರೆ.

ಈ ಮಹಾಪ್ರಬಂಧವನ್ನು ನಾನು ತಿಳಿದ ಮಟ್ಟಿಗೆ ಇದುವರೆಗೂ ಯಾವುದೇ ವಿಶ್ವವಿದ್ಯಾನಿಲಯದ ಡಿಪ್ಲೊಮೊ ಅಥವಾ ತತ್ಸಮಾನ ಪದವಿಗಾಗಿ ಅವರು ಸಲ್ಲಿಸಿಲ್ಲವೆಂದು ದೃಢೀಕರಿಸುತ್ತೇನೆ.

**ಡಾ.ಎನ್.ಸರಸ್ವತಿ**
ಪ್ರಾಧ್ಯಾಪಕರು
ಇತಿಹಾಸ ಅಧ್ಯಯನ ವಿಭಾಗ,
ಮೈಸೂರು ವಿಶ್ವವಿದ್ಯಾನಿಲಯ,
ಮಾನಸಗಂಗೋತ್ರಿ, ಮೈಸೂರು–570006

**ಸ್ಥಳ: ಮೈಸೂರು**
**ದಿನಾಂಕ:**

# ಕೃತಜ್ಞತೆಗಳು

ನಾನು ಸಂಶೋಧನಾ ಕಾರ್ಯವನ್ನು ಕೈಗೊಳ್ಳಲು ನನಗೆ ಮಾರ್ಗದರ್ಶನ ಮಾಡಿ ಪ್ರತಿ ಹಂತದಲ್ಲೂ ಸಲಹೆ ಮತ್ತು ಸೂಚನೆಗಳನ್ನು ನೀಡಿ ನನ್ನ ಸಂಶೋಧನಾ ಮಹಾ ಪ್ರಬಂದದ ರಚನೆಗೆ ಸಹಕರಿಸಿದ ನನ್ನ ಪೂಜ್ಯ ಗುರುಗಳಾದ ಡಾ. ಎನ್. ಸರಸ್ವತಿರವರು, ಪ್ರಾಧ್ಯಾಪಕರು, ಇತಿಹಾಸ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು ಇವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಡಾ.ವೈ.ಎಚ್.ನಾಯಕವಾಡಿರವರು, ಮುಖ್ಯಸ್ಥರು, ಇತಿಹಾಸ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ ಮಾನಸಗಂಗೋತ್ರಿ, ಮೈಸೂರು ಇವರಿಗೂ ಸಹ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಹಾಗೆಯೇ ಇತಿಹಾಸ ಅಧ್ಯಯನ ವಿಭಾಗದ ಪ್ರಾಧ್ಯಾಪಕರಾದ ಪ್ರೊ. ಅಶ್ವತ್ಥ ನಾರಾಯಣರವರು ನನ್ನ ಮಹಾ ಪ್ರಬಂಧದ ರಚನೆಯಲ್ಲಿ ಮಾರ್ಪಾಡು ಮಾಡಿಕೊಳ್ಳಲು ಸಲಹೆ ನೀಡಿದ್ದಾರೆ ಅವರಿಗೂ ಸಹ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಇತಿಹಾಸ ಅಧ್ಯಯನ ವಿಭಾಗದ ಪ್ರಾಧ್ಯಾಪಕರುಗಳಾದ ಡಾ.ಆರ್.ರಾಜಣ್ಣ, ಡಾ.ಕೆ.ಸದಾಶಿವ ಡಾ.ಪುಟ್ಟಯ್ಯ, ಡಾ.ಜಿ.ಟಿ.ಸೋಮ ಶೇಖರ್, ಡಾ.ಗುರುಸಿದ್ದಯ್ಯ, ಡಾ.ಗಂಗಮ್ಮರವರಿಗೂ ಸಹ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಹಾಗೆಯೇ ಇತಿಹಾಸ ವಿಭಾಗದ ಆಡಳಿತ ವರ್ಗದವರಿಗೆ ಸಂಶೋಧನಾ ವಿದ್ಯಾರ್ಥಿಗಳಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಶಿಕ್ಷಣದ ಏಳಿಗೆಗೆ ಸದಾಕಾಲ ಪ್ರೋತ್ಸಾಹದಾಯಕವಾಗಿರುವ ಪೂಜ್ಯ ತಂದೆ ತಾಯಿಗಳಾದ ಶ್ರೀಮತಿ ರತ್ನಮ್ಮ ಮತ್ತು ಶ್ರೀ ಗುರುಮಲ್ಲಪ್ಪರವರಿಗೆ, ನನ್ನ ಬಾಳ ಸಂಗಾತಿಯಾದ ಶ್ರೀಮತಿ ಸೌಮ್ಯರವರಿಗೆ, ನನ್ನ ಪ್ರೀತಿಯ ತಮ್ಮನಾದ ಶ್ರೀ ಸಂತೋಷ್ ಹಾಗೂ ಅವರ ಪತ್ನಿಯಾದ ಶ್ರೀಮತಿ ಶಿಲ್ಪಾ ಮತ್ತು ಇವರ ಮಗನಾದ ನಮ್ಮೆಲ್ಲರ ಪ್ರೀತಿಯ ಮಾಸ್ಟರ್ ವಿದಿಲ್ ಪ್ರಣವಚಂದ್ರ ಹಾಗೂ ನಮ್ಮ ಅತ್ತೆಯವರಾದ ಶ್ರೀಮತಿ ರತ್ನಮ್ಮನವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಸಂಶೋಧನೆಗೆ ಅಗತ್ಯವಾದಂತಹ ಪುಸ್ತಕಗಳನ್ನು ಒದಗಿಸಿಕೊಟ್ಟ, ಮೈಸೂರು ವಿಶ್ವವಿದ್ಯಾನಿಲಯದ ಗ್ರಂಥಾಲಯ ಸಿಬ್ಬಂದಿ ವರ್ಗದವರಿಗೂ, ಭಾರತೀಯ ಪುರಾತತ್ವ ಇಲಾಖೆ ಹೆಬ್ಬಾಳ ಮೈಸೂರು, ಅಧಿಕಾರಿಗಳಿಗೂ, ಮೈಥಿಕ್ ಸೊಸೈಟಿ ಬೆಂಗಳೂರು ಗ್ರಂಥಪಾಲಕರು ಮತ್ತು ಸಿಬ್ಬಂದಿಗಳಿಗೂ, ಎಸ್.ಬಿ.ಆರ್.ಆರ್ ಮಹಾಜನ ಪ್ರಥಮ ದರ್ಜೆ ಕಾಲೇಜಿನ ನಿವೃತ್ತ

ಪ್ರಾಂಶುಪಾಲರಾದ ಡಾ.ಕೆ.ವಿ.ಪ್ರಭಾಕರ ರವರಿಗೂ ಪ್ರಸ್ತುತ ಪ್ರಾಂಶುಪಾಲರಾದ ಡಾ.ಎಸ್.ವೆಂಕಟರಾಮುರವರಿಗೂ ಹಾಗೂ ಇತಿಹಾಸ ವಿಭಾಗದ ಮುಖ್ಯಸ್ಥರಾದ ಡಾ.ಶ್ರೀಧರ ಎಚ್.ರವರಿಗೂ ಶ್ರೀ ರುದ್ರೇಶ್ ವೈ.ಆರ್. ಜಯಣ್ಣ ಬಿ.ಆರ್. ಅಬಿಲಾಷ್, ಎಂ.ಎಸ್. ಪ್ರೀತಮ್ ರವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ನನ್ನ ಸಂಶೋಧನಾ ಮಹಾಪ್ರಬಂಧವನ್ನು ಅಚ್ಚುಕಟ್ಟಾಗಿ ಬೆರಳಚ್ಚು ಮಾಡಿ ಮುದ್ರಿಸಿಕೊಟ್ಟಂತಹ ಶ್ರೀ ಲಕ್ಷ್ಮೀಪ್ರಿಂಟರ್ಸ್‌ನ ಮಾಲೀಕರಾದ ಶ್ರೀಮತಿ ಸುಶೀಲ ರವರಿಗೆ, ಶ್ರೀ ರಾಜುರವರಿಗೆ ಹಾಗೂ ಉಳಿದ ಸಿಬ್ಬಂದಿ ವರ್ಗದವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ ಹಾಗೂ ನನ್ನ ಮಹಾಪ್ರಬಂಧಕ್ಕೆ ಪ್ರತ್ಯೇಕ್ಷವಾಗಿ ಮತ್ತು ಪರೋಕ್ಷವಾಗಿ ಸಹಕರಿಸಿದ ಎಲ್ಲರಿಗೂ ತುಂಬು ಹೃದಯದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

(ಧರ್ಮೇಶ.ಎ.ಜಿ)

## ಪರಿವಿಡಿ

# ಅಧ್ಯಾಯ–1

## ವಿಜಯನಗರ ಕಾಲದ ಸಾಗರೋತ್ತರ ಸಂಬಂಧಗಳು

### 1.1. ಪೀಠಿಕೆ :

ವಿಜಯನಗರವು ಸಾಮ್ರಾಜ್ಯ ಮತ್ತು ರಾಜಧಾನಿ ಎರಡರಲ್ಲೂ ಪ್ರತಿಧ್ವನಿಯಾಗುವ ಹೆಸರಾಗಿದ್ದು ವಿಜಯನಗರ ಸಾಮ್ರಾಜ್ಯವು ದಕ್ಷಿಣ ಭಾರತವನ್ನಾಳಿದ ಸಾಮ್ರಾಜ್ಯಗಳಲ್ಲಿ ಅತಿ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಇದು ಕೇವಲ ಇತಿಹಾಸವನ್ನಷ್ಟೇ ಶ್ರೇಷ್ಟೀಕರಿಸದೇ ವಾರ್ಷಿಕ ವೃತ್ತಾಂತಗಳನ್ನು ಸಹ ಐಶ್ವರ್ಯಗೊಳಿಸಿದೆ. ವಿಜಯನಗರ ಸಾಮ್ರಾಜ್ಯ ಸ್ಥಾಪನೆ ಕುರಿತು ಹಲವಾರು ವೃತ್ತಾಂತ ಹೇಳಿಕೆಗಳಿದ್ದವು ಅದರಲ್ಲಿ ಪ್ರಮುಖವಾದುದು, ವಿಜಯನಗರ ಸಾಮ್ರಾಜ್ಯವು ಹಿಂದೂ ಧರ್ಮ ಮತ್ತು ಸಂಸ್ಕೃತಿಯನ್ನು ಮುಸ್ಲಿಂ ದಾಳಿಕೋರರಿಂದ ಕಾಪಾಡಲು ಮುಖ್ಯವಾಗಿ ಸ್ಥಾಪಿತವಾಯಿತೆಂದು ನಂಬಲಾಗಿದೆ. ಆದರೆ ಈ ವಾದವನ್ನು ಹಲವಾರು ಇತಿಹಾಸಕಾರರು ಪ್ರಶ್ನಿಸಿದ್ದು, ಇದು ಕೇವಲ ಹಿಂದೂ ಧರ್ಮದ ಸಿದ್ಧಾಂತಗಳಿಗೆ ಸೀಮಿತ ವಾಗಿರದೇ ಇದೊಂದು ಜಾತ್ಯಾತೀತ ಸಾಮ್ರಾಜ್ಯವಾಗಿತ್ತೆಂದು ಹೇಳಿದ್ದಾರೆ. ವಿಜಯನಗರ ಸಾಮ್ರಾಜ್ಯವು ಆಡಳಿತ, ರಾಜಕೀಯ, ಕಲೆ ಮತ್ತು ವಾಸ್ತುಶಿಲ್ಪ, ವ್ಯಾಪಾರ ವಾಣಿಜ್ಯ ಕ್ಷೇತ್ರಗಳಲ್ಲಿ ಅಪಾರವಾದ ಸಾಧನೆ ಮಾಡಿದೆ.

ವಿಜಯನಗರ ಸಾಮ್ರಾಜ್ಯದ ಇತಿಹಾಸವು ದಕ್ಷಿಣ ಭಾರತದಲ್ಲೇ ಅತೀ ಹೆಚ್ಚು ವೈಭವಯುತವಾದ ಸಾಮ್ರಾಜ್ಯವಾಗಿದೆ. ಇವರ ಆಡಳಿತ ಅವಧಿಯಲ್ಲಿ ಮುತ್ತು ರತ್ನಗಳನ್ನು ರಸ್ತೆಯ ಬದಿಯಲ್ಲಿ ಇಟ್ಟು ಮಾರಾಟ ಮಾಡುತ್ತಿದ್ದರೆಂದು ಇತಿಹಾಸಕಾರರು ಅಭಿಪ್ರಾಯ ಪಟ್ಟಿದ್ದಾರೆ. ಇಂತಹ ಸಾಮ್ರಾಜ್ಯವು ಸಂಗಮ ಸಹೋದರರಿಂದ ಸ್ಥಾಪಿತವಾಯಿತು. ಹರಿಹರ ಮತ್ತು ಬುಕ್ಕರಿಂದ ಕ್ರಿ.ಶ. 1336ರಲ್ಲಿ ತುಂಗಭದ್ರಾ ನದಿಯ ದಡದ ಮೇಲೆ ಸ್ಥಾಪಿತವಾಯಿತು. ಹಾಗೂ ಇದಲ್ಲದೆ ಇನ್ನು ಮೂರು ಮನೆತನಗಳು ಆಳ್ವಿಕೆ ನಡೆಸಿದವು. ಅವುಗಳೆಂದರೆ ಸಾಳ್ವ, ತುಳುವ ಮತ್ತು ಅರವೀಡು. ವಿಜಯನಗರ ಸಾಮ್ರಾಜ್ಯವು ಸಾಮಾಜಿಕ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಅಪಾರ ಸಾಧನೆ ಮಾಡಿದ್ದು ದಕ್ಷಿಣ ಭಾರತದಲ್ಲಿ ಉತ್ತಮವಾದ ಆರ್ಥಿಕ ಪರಿಸ್ಥಿತಿಯನ್ನು ಸದೃಢಗೊಳಿಸಿ ರಾಜಕೀಯವಾಗಿ, ಸಾಂಸ್ಕೃತಿಕವಾಗಿ, ಹಿಂದೂ ಧರ್ಮದ ಬೆಳವಣಿಗೆಗೆ ಭದ್ರ ಬುನಾದಿ ಹಾಕಿತು. ಈ ಸಂದರ್ಭದಲ್ಲಿ ಸಮಾಜದಲ್ಲಿ ಕೆಲವೊಂದು ಮತೀಯ ಮತ್ತು ಅಮತೀಯ ಘಟನೆಗಳು ಅಥವಾ ಚಳುವಳಿಗಳು ಈ ಕಾಲದಲ್ಲಿ ಸಂಭವಿಸಿದವೆಂದು

ಹೇಳಬಹುದು. ಭಾರತಕ್ಕೆ 1498ರಲ್ಲಿ ಪೋರ್ಚುಗೀಸರು ಪಾದಾರ್ಪಣೆಯನ್ನು ಮಾಡಿದ ಮೇಲೆ ಕ್ರಿಶ್ಚಿಯನ್ ಧರ್ಮವು ಪ್ರಾಮುಖ್ಯತೆ ಪಡೆದುಕೊಂಡಿತು.

**1.2. ಐತಿಹಾಸಿಕ ಹಿನ್ನಲೆ:–**

ವಿಜಯನಗರ ಸಾಮ್ರಾಜ್ಯವು ಇದರ ಆಡಳಿತ ಯಂತ್ರದಿಂದ ಇಡೀ ದಕ್ಷಿಣ ಭಾರತದಾದ್ಯಂತ ಉತ್ತಮವಾದ ಆರೋಗ್ಯಕರವಾದ ಸಮಾಜವನ್ನು ತಮ್ಮ ಆಡಳಿತದ ಅವಧಿಯಲ್ಲಿ ಸ್ಥಾಪಿಸಲು ಸಾಕಷ್ಟು ಶ್ರಮಿಸಿ ಯಶಸ್ವಿಯಾಯಿತು. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದದ್ದು ದಕ್ಷಿಣ ಭಾರತದ ಇತಿಹಾಸದಲ್ಲೇ ಒಂದು ಪ್ರಮುಖ ಘಟನೆಯಾಗಿದೆ. 13ನೇ ಶತಮಾನದ ಆದಿ ಭಾಗದಲ್ಲಿ ಮುಸ್ಲಿಮರು ಉತ್ತರ ಭಾರತದಲ್ಲಿ ತಮ್ಮ ಪ್ರಾಬಲ್ಯವನ್ನು ಸ್ಥಾಪಿಸಿ ಶತಮಾನದ ಕೊನೆಗೆ ಅವರು ದಕ್ಷಿಣ ಭಾರತವನ್ನು ಆಕ್ರಮಿಸಲು ಪ್ರಯತ್ನಿಸುತ್ತಿದ್ದರು. ದೇವಗಿರಿಯ ಯಾದವರು, ವಾರಂಗಲ್ಲಿನ ಕಾಕತೀಯರು, ದ್ವಾರಸಮುದ್ರದ ಹೊಯ್ಸಳರು ಮಧುರೆಯ ಪಾಂಡ್ಯರು, ಅಲ್ಲಾವುದ್ದೀನ್ ಮತ್ತು ಆತನ ದಂಡನಾಯಕನಾಗಿದ್ದ ಮಲ್ಲಿಕಾಫರ್‌ನ ದಂಡೆಯಾತ್ರೆಗಳನ್ನು ಎದುರಿಸಲು ಅಶಕ್ತರಾಗಿದ್ದರು. ಇಂತಹ ಸಂದರ್ಭದಲ್ಲಿ ಜನ್ಮತಾಳಿದ ರಾಜ್ಯವೇ 'ವಿಜಯನಗರ ಸಾಮ್ರಾಜ್ಯ'. ಇದು ದಕ್ಷಿಣ ಭಾರತವನ್ನಾಳಿದ ಕೊನೆಯ ಪ್ರಸಿದ್ಧ ಮತ್ತು ವೈಭವ ಪೂರ್ಣ ಸಾಮ್ರಾಜ್ಯವಾಗಿದೆ.

ವಿಜಯನಗರ ಸ್ಥಾಪನೆಗೆ ಇದ್ದ ಪರಿಸ್ಥಿತಿಗಳನ್ನು ಅವಲೋಕಿಸಿದರೆ ಅದರ ಸ್ಥಾಪಕರು ಉಜ್ವಲ ದೇಶಪ್ರೇಮಿಗಳು ಮತ್ತು ತ್ಯಾಗಮಯಿಗಳು ಎಂಬ ವಿಷಯ ತಿಳಿಯುತ್ತದೆ. ಮುಸ್ಲೀಮರ ದಾಳಿ ತಡೆಯುವುದು, ಸನಾತನ ಧರ್ಮದ ವೈಭವವನ್ನು ಪುನಃ ಸ್ಥಾಪಿಸುವುದು ಎಲ್ಲಾ ಧರ್ಮಗಳನ್ನೂ ಸಂರಕ್ಷಿಸುವುದು, ಪ್ರಾಚೀನ ಶಿಕ್ಷಣ ಪದ್ಧತಿಯನ್ನು ಉಜ್ವಲಗೊಳಿಸುವುದು, ಸ್ಥಳೀಯ ಭಾಷೆ, ಸಾಹಿತ್ಯ, ಕಲೆಯನ್ನು ಪ್ರೋತ್ಸಾಹಿಸುವುದು ಅವರ ಉದ್ದೇಶವಾಗಿತ್ತು. ಬಹುಮನಿ ರಾಜ್ಯ ಬರುವ ವೇಳೆಗೆ ಹಿಂದೂ ರಾಜ್ಯ ರಕ್ಷಣೆಗೆ ಟೊಂಕ ಕಟ್ಟಿ ನಿಂತ ಸಾಮ್ರಾಜ್ಯವೇ ಈ 'ವಿಜಯನಗರ ಸಾಮ್ರಾಜ್ಯ'.

**1.3. ರಾಜಕೀಯ ಇತಿಹಾಸ:–**

ಸಂಗಮನೆಂಬುವವನಿಗೆ ಹರಿಹರ, ಬುಕ್ಕರಾಯ, ಮಾರಪ್ಪ, ಮುದಪ್ಪ ಮತ್ತು ಕಂಪಣ ಎಂಬ ಐವರು ಮಕ್ಕಳಿದ್ದರು. ಅವರಲ್ಲಿ ಹರಿಹರ ಮತ್ತು ಬುಕ್ಕರು ವಿಜಯನಗರ ಸ್ಥಾಪನಾ

ಕಾರ್ಯದಲ್ಲಿ ಪ್ರಮುಖ ಪಾತ್ರವಹಿಸಿದರು. ಸಂಗಮ ವಂಶದ ಹರಿಹರ ಮತ್ತು ಬುಕ್ಕರಾಯರ ಮನೆಯ ಗುರುಗಳಾಗಿದ್ದ ಕಾಶೀವಿಲಾಸ ಕ್ರಿಯಾಶಕ್ತಿ ಪಂಡಿತರು ವಿದ್ಯಾರಣ್ಯರೆಂಬ ಹೆಸರಿನಿಂದ 1336ರಲ್ಲಿ ಸಹೋದರರಿಗೆ ವಿಜಯನಗರ ಸಾಮ್ರಾಜ್ಯ ಸ್ಥಾಪಿಸಲು ಪ್ರಮುಖ ಪ್ರೇರಕ ಮತ್ತು ಕಾರಣಕರ್ತರಾದರು.

1346ರ ಶೃಂಗೇರಿ ಶಾಸನ ವಿವರಿಸುವಂತೆ ವಿದ್ಯಾತೀರ್ಥರು ಅಥವಾ ವಿದ್ಯಾಶಂಕರರು ವಿದ್ಯಾರಣ್ಯರ ಗುರುಗಳು ಹರಿಹರ, ಬುಕ್ಕ, ಮಾರಪ್ಪ, ಕಂಪಣ ಮತ್ತು ಮುದ್ದಪ್ಪ ರವರು ಒಮ್ಮೆ ಶೃಂಗೇರಿ ಯಾತ್ರೆಗೆ ಹೋಗಿದ್ದು, ವಿದ್ಯಾರಣ್ಯರ ಸೋದರ ಭಾರತೀ ತೀರ್ಥರಿಗೆ ಮತ್ತು ವಿದ್ಯಾಶಂಕರ ದೇವಾಲಯಕ್ಕೆ ಹಲವು ಹಳ್ಳಿಗಳನ್ನು ದಾನವಾಗಿ ನೀಡಿದರು. ವಿದ್ಯಾರಣ್ಯರು ಮತ್ತು ವಿದ್ಯಾಶಂಕರರು ಈ ಹಿರಿಯ ಸೋದರರಿಗೆ ವಿಜಯನಗರ ಸಾಮ್ರಾಜ್ಯ ಸಂಸ್ಥಾಪಿಸಲು ಪ್ರಮುಖ ಪ್ರೇರಕವಾಗಿದ್ದರೆಂದು ತಿಳಿದು ಬರುತ್ತದೆ.

ಒಟ್ಟಿನಲ್ಲಿ ಏನೇ ಅಭಿಪ್ರಾಯವಿದ್ದರೂ ಹರಿಹರ ಮತ್ತು ಬುಕ್ಕರು 1336ರಲ್ಲಿ ಸ್ಥಾಪಿಸಿದ ವಿಜಯನಗರ ಸಾಮ್ರಾಜ್ಯವು ಯಾವುದೇ ಸಂಶಯವಿಲ್ಲದೇ ನಾಲ್ಕು ಮನೆತನಗಳಿಂದ ಆಳಲ್ಪಟ್ಟಿದೆ. ಅವುಗಳೆಂದರೆ –

1. ಸಂಗಮ ವಂಶ – 1336–1485.
2. ಸಾಳುವ ವಂಶ – 1485–1505.
3. ತುಳುವ ವಂಶ – 1503–1570.
4. ಅರವೀಡು ವಂಶ – 1570–1646.

ವಿಜಯನಗರ ಸಾಮ್ರಾಜ್ಯವನ್ನಾಳಿದ ಪ್ರಮುಖ ರಾಜರು ಮತ್ತು ಸಾಧನೆಯ ಬಗೆಗೆ ಕೆಳಕಂಡಂತೆ ಸಾಧನೆಗಳನ್ನು ವಿವರಿಸಲಾಗಿದೆ.

**ವಿದ್ಯಾರಣ್ಯ:–**

ವಿದ್ಯಾರಣ್ಯರು ಶೃಂಗೇರಿ ಮಠದ ಮುಖ್ಯಸ್ಥರು ಮತ್ತು ಸಾಮ್ರಾಜ್ಯ ಸ್ಥಾಪನೆಯ ಪ್ರೇರಕ ಶಕ್ತಿಯಾಗಿದ್ದರೂ, ವಿದ್ಯಾರಣ್ಯರ ಕುರಿತು ಹಲವು ಗೊಂದಲವಾದ ವಿಚಾರಗಳಿವೆ. ವಿದ್ಯಾರಣ್ಯರು ವಿಜಯನಗರ ಸಾಮ್ರಾಜ್ಯ ಸ್ಥಾಪನೆ ಸಂದರ್ಭದಲ್ಲಿ ಶೃಂಗೇರಿ ಮಠದ ಗುರುಗಳಾಗಿರಲಿಲ್ಲ. ಆದರೆ ಅವರು 1380ರಲ್ಲಿ ಶೃಂಗೇರಿಯ ಗುರುಗಳಾದರು ಎಂದು ಹೇಳಲಾಗುತ್ತದೆ. ವಿದ್ಯಾರಣ್ಯರು

ಹರಿಹರನಿಗೆ ಸಾಮ್ರಾಜ್ಯ ಸ್ಥಾಪಿಸಲು ಹಣದ ಸಹಾಯ ಮಾಡಿದರೆನ್ನಲಾಗುತ್ತದೆ. ಇವರು ಕ್ರಿ.ಶ.1380–1386ರ ವರೆಗೆ ಶೃಂಗೇರಿ ಮಠದ ಮುಖ್ಯಸ್ಥರಾಗಿದ್ದರು. ಮತ್ತು ಇದಕ್ಕೆ ಮುಂಚೆ ಅವರು ಸನ್ಯಾಸಿಯಾಗಿದ್ದರೆಂದು ದಾಖಲೆಗಳು ಸ್ಪಷ್ಟಪಡಿಸುತ್ತವೆ. ಕೆಲವು ಇತಿಹಾಸಕಾರರು ವಿದ್ಯಾರಣ್ಯರನ್ನ ಮದ್ವಚಾರ್ಯರೊಂದಿಗೆ ಹೋಲಿಕೆ ಮಾಡಿದ್ದಾರೆ. ಮತ್ತೆ ಕೆಲವು ಇತಿಹಾಸಕಾರರು ಇವರನ್ನು ಕ್ರಿಯಾಶಕ್ತಿ ಗುರು ಎಂದು ಹಾಗೂ ಕಾಲಾಮುಖ ಗುರುಗಳೆಂದು ಕರೆಯುವುದುಂಟು. ವಿದ್ಯಾರಣ್ಯರೋ ಅಥವಾ ಕಾಲಮುಖ ಗುರುಗಳೋ ಎಂದು ಜಿಜ್ಞಾಸೆ ಮೂಡಿದೆ. ವಿದ್ಯಾರಣ್ಯರು 1386ರಲ್ಲಿ ಮರಣ ಹೊಂದಿದ್ದರು. ಕಾಲಾಮುಖ ಗುರುಗಳು 1388ರಲ್ಲಿ ಮರಣ ಹೊಂದಿದರು ಹಾಗೂ ಕಾಲಮುಖ ಗುರುಗಳೂ ಸಂಗಮ ವಂಶದ ಗುರುಗಳಾಗಿದ್ದರು. ಅದಾಗ್ಯೂ ಏನೇ ಜಿಜ್ಞಾಸೆಗಳಿದ್ದರೂ ವಿದ್ಯಾರಣ್ಯರು ವಿಜಯನಗರ ಸಾಮ್ರಾಜ್ಯದ ಪ್ರೇರಕ ಶಕ್ತಿಯಾಗಿದ್ದರೆಂಬುದು ಮಾತ್ರ ಸತ್ಯ ಸಂಗತಿಯಾಗಿದೆ.

ಶೃಂಗೇರಿ ಮಠವು ವಿಜಯನಗರ ಅರಸರಿಂದ ಬಹಳಷ್ಟು ಅನುದಾನಗಳನ್ನು ಮತ್ತು ದತ್ತಿಗಳನ್ನು ಪಡೆದುಕೊಂಡಿತ್ತು. ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೆ ವಿದ್ಯಾರಣ್ಯರು ಕೂಡ ಬಹಳಷ್ಟು ಹಣದ ಸಹಾಯ ಮಾಡುವ ಮೂಲಕ ಸಾಮ್ರಾಜ್ಯ ಸ್ಥಾಪನೆಗೆ ಸಹಕರಿಸಿದರು. ವಿದ್ಯಾರಣ್ಯರು ಸಂಗಮ ದೊರೆಗಳಿಗೆ ಆಪ್ತರಾಗಿದ್ದು ವೈದಿಕ ಧರ್ಮದ ಪುನರುಥ್ಥಾನಕ್ಕೆ ಶ್ರಮಿಸಿದರು.

**ಒಂದನೇ ಹರಿಹರ (1336–1356):–**

ಹರಿಹರನು ಸಂಗಮನ ಮಗನು ಹಾಗೂ ಹೊಯ್ಸಳ ದಂಡನಾಯಕನಾಗಿದ್ದನು. ಇವನಿಗೆ ಇತರ ನಾಲ್ಕು ಮಂದಿ ಸಹೋದರರಿದ್ದರು. ಬುಕ್ಕ, ಕಂಪಣ್ಣ, ಮುದ್ದಪ್ಪ ಮತ್ತು ಮಾರಪ್ಪ ಸ್ವತಂತ್ರವಾದ ರಾಜ್ಯವನ್ನು ಸ್ಥಾಪಿಸಿದ ಹರಿಹರನು ಅಂದು ತನ್ನ ಸಾಮ್ರಾಜ್ಯದ ಪ್ರಜೆಗಳಲ್ಲಿ ತುಂಬಿದ್ದ ಬೀತಿಯನ್ನು ನಿವಾರಿಸಿ ಅನಿಶ್ಚಿತತೆಯನ್ನು ಹೋಗಲಾಡಿಸಿ ವ್ಯವಸ್ಥಿತವಾದ ಆಡಳಿತವನ್ನು ರೂಪಿಸಿದನು. ಈತನ ಬೆಂಬಲವಾಗಿ ಉಳಿದ ನಾಲ್ವರು ಸೋದರರು ರಾಜ್ಯದ ಇತರ ಪ್ರಾಂತ್ಯಗಳ ಸಂರಕ್ಷಣೆಯ ಹೊಣೆಯನ್ನು ಹೊತ್ತರು. ಆಂಧ್ರ ಪ್ರದೇಶದ ನೆಲ್ಲೂರು ಮತ್ತು ಕಡಪ ಜಿಲ್ಲೆಗಳನ್ನೊಳಗೊಂಡ ಉದಯಗಿರಿ ಪ್ರಾಂತ್ಯಕ್ಕೆ ಪ್ರಾಂತ್ಯಾಧಿಕಾರಿಯಾಗಿ ಕಂಪಣ್ಣನೂ ದ್ವಾರ ಸಮುದ್ರ ಮತ್ತು ಸುತ್ತ ಮುತ್ತಲಿನ ಪ್ರದೇಶಗಳ ಆಡಳಿತದ ಜವಾಬ್ದಾರಿಯನ್ನು ಬುಕ್ಕನು

ವಹಿಸಿದರು. ಮಾರಪ್ಪನು ಕೊಂಕಣವನ್ನೊಳಗೊಂಡ ಮಾಲೆ ರಾಜ್ಯವನ್ನು ಆಳುತ್ತಿದ್ದನು. ಕೊನೆಯವನಾದ ಮುದ್ದಪ್ಪನಿಗೆ ಮುಳುಬಾಗಿಲು ಪ್ರಾಂತ್ಯದ ಅಧಿಕಾರವಹಿಸಿಕೊಡಲಾಯಿತು.

ಕಣ್ಣನೂರು ಶಾಸನವು ಹರಿಹರನು ಮೊದಲು ಪಂಪಾ ಕ್ಷೇತ್ರದ ಪಕ್ಕದ ಕುಂಜರಗೊಂಡ (ಆನೆಗೊಂದಿ) ಎಂಬ ರಾಜಧಾನಿಯಲ್ಲಿ ಆಳ್ವಿಕೆ ನಡೆಸುತ್ತಿದ್ದನೆಂದು ತಿಳಿಸುತ್ತದೆ. ಈತನು ಮೊದಲು ತನ್ನ ಸಾಮ್ರಾಜ್ಯದ ಗಡಿ ರಕ್ಷಣೆಯಲ್ಲಿ ಆಸಕ್ತಿವಹಿಸಿ 1336ರಲ್ಲಿಯೇ ಪಶ್ಚಿಮ ಕರಾವಳಿಯ ಬಾರಕೂರು ಬಂದರಿನಲ್ಲಿ ಒಂದು ಕೋಟೆಯನ್ನು ಕಟ್ಟಿದನು. ನಂತರ 1346ರಲ್ಲಿ ಹೊಯ್ಸಳರ ಉತ್ತರ ಭಾಗಗಳ ಮೇಲೆ ನಿಯಂತ್ರಣ ಹೊಂದುವಲ್ಲಿ ಯಶಸ್ವಿಯಾದನು. 1347ರಲ್ಲಿ ಕದಂಬರ ಗಡಿ ಪ್ರದೇಶಗಳ ಮೇಲೆ ಆಕ್ರಮಣ ಮಾಡಿ ಹರಿಹರನು ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿದನು. ತನ್ನ ಸಹೋದರರ ಸಹಾಯದಿಂದ ಪರಕೀಯರ ಆಕ್ರಮಣವನ್ನು ತಡೆಗಟ್ಟಿದ ಅನಂತರದಲ್ಲಿ ಹರಿಹರನು ತುಂಗಾಭದ್ರಾ ಪ್ರದೇಶದ ಮೇಲೂ ತನ್ನ ಹತೋಟಿಯನ್ನು ಸ್ಥಾಪಿಸಿದನು. 3ನೇ ಬಲ್ಲಾಳನು ಮಡಿದ ಮೇಲೆ ಹರಿಹರನು ಪೂರ್ಣವಾಗಿ ಅವನ ರಾಜ್ಯದ ಮೇಲೆ ಹತೋಟಿಯನ್ನು ಸ್ಥಾಪಿಸಿದನು. ಈ ಮಹತ್ ಕಾರ್ಯದಲ್ಲಿ ಹರಿಹರನಿಗೆ ಆತನ ಸಹೋದರರು ಬೆನ್ನೆಲುಬಾಗಿದ್ದರು. ಈತ ಮಹಾರಾಜಾಧಿರಾಜ, ರಾಜ ಪರಮೇಶ್ವರ, ಮಹಾ ಮಂಡಲೇಶ್ವರ ಎಂಬ ಬಿರುದುಗಳನ್ನು ಧರಿಸಿದನ್ನು 1339ರ ಕರ್ನೋಲ್ ಶಾಸನದ ಪ್ರಕಾರ ಹರಿಹರನು ಪೂರ್ವ–ಪಶ್ಚಿಮ ಸಮುದ್ರಾಧಿಪತಿಯೆಂಬ ಬಿರುದನ್ನು ಧರಿಸಿದ್ದು, ಗುತ್ತಿಯಿಂದ ತನ್ನ ರಾಜ್ಯವನ್ನು ಆಳುತ್ತಿದ್ದನೆಂದು ತಿಳಿದು ಬರುತ್ತದೆ.

**ಒಂದನೇ ಬುಕ್ಕ (1356–1377)**

ಒಂದನೇ ಬುಕ್ಕನು ಹರಿಹರನ ನಂತರ ಆಡಳಿತಕ್ಕೆ ಬಂದನು. ಇವನು 1356 ರಿಂದ 1377ರ ವರೆಗೆ ಅಧಿಕಾರದಲ್ಲಿದ್ದನು. ಸುಮಾರು 20 ವರ್ಷಗಳ ಕಾಲ ಆಡಳಿತ ನಡೆಸಿದ ಇವನು ಉತ್ತಮ ಸಾಮ್ರಾಟನಾಗಿದ್ದಾನೆ. ಒಂದನೇ ಬುಕ್ಕನು ಯುವರಾಜನಾಗಿದ್ದಾಗಲೇ ರಾಜ್ಯದ ಅಡಳಿತಾತ್ಮಕ ವಿಷಯದಲ್ಲಿ ಪರಿಣತಿ ಪಡೆದಿದ್ದನು. ಇವನು ತೆಲುಗು ಪ್ರದೇಶದ ಪಶ್ಚಿಮ ಜಿಲ್ಲೆಗಳ ಆಡಳಿತವನ್ನು ನಿರ್ವಹಿಸಿದ್ದೇ ಅಲ್ಲದೆ ತನ್ನ ಅಣ್ಣನಾದ ಹರಿಹರನಿಗೆ ಬಲಭುಜದಂತಿದ್ದು ಇಡೀ ಸಾಮ್ರಾಜ್ಯದ ಒಳಾಡಳಿತವನ್ನು ಸುಭದ್ರವಾಗಿರಿಸಿದ್ದನು. ಅಷ್ಟೇ ಅಲ್ಲದೆ ವಿಜಯನಗರ ಸ್ಥಾಪನಾ ಕಾರ್ಯದಲ್ಲಿ ಈತನ ಪಾತ್ರ ಬಹುಮುಖ್ಯವಾದುದಾಗಿದ್ದು ತನ್ನ ಅಣ್ಣನಿಗೆ ರಾಜಕೀಯ ಕಾರ್ಯದಲ್ಲಿ ಜೊತೆಯಾಗಿ ಸಂಪೂರ್ಣ ಸಹಕಾರ ನೀಡಿದ್ದನು. ಬುಕ್ಕರಾಯನು ಅಧಿಕಾರಕ್ಕೆ

ಬಂದ ನಂತರ ಆಡಳಿತವನ್ನು ಸುವ್ಯವಸ್ಥಿತಗೊಳಿಸಿ, ಸಾಮ್ರಾಜ್ಯದಲ್ಲಿ ಸಂಘಟನೆಯನ್ನು ಬಲಪಡಿಸಿ ರಾಜ್ಯ ವಿಸ್ತಾರಗೊಳಿಸುವ ನಿಟ್ಟಿನಲ್ಲಿ ಕಾರ್ಯನಿರತನಾದನು. ರಾಜ್ಯವನ್ನು ವಿಸ್ತರಿಸುವುದಷ್ಟೇ ಅಲ್ಲದೇ ರಾಜ್ಯ ವಿರೋದಿ ಶಕ್ತಿಗಳನ್ನು ಹತ್ತಿಕ್ಕುವುದು ಬುಕ್ಕರಾಯನ ಮತ್ತೊಂದು ಉದ್ದೇಶ ವಾಗಿತ್ತು. ಬುಕ್ಕರಾಯನು ಮಧುರೆಯ ಸುಲ್ತಾನನನ್ನು ಎದುರಿಸಿ ಆತನನ್ನು ಪದಚ್ಯುತ ಗೊಳಿಸಿದನು. ಮಧುರೆಯ ಸುಲ್ತಾನನು ದೆಹಲಿ ಅಧೀನತೆಯಿಂದ ತಾನು ಸ್ವತಂತ್ರ ಎಂದು ಘೋಷಿಸಿದ್ದು, ಈ ಗಲಬೆಗೆ ಪ್ರಮುಖ ಕಾರಣವಾಗಿತ್ತು.

**ಎರಡನೇ ದೇವರಾಯ (1424–1446):–**

ಎರಡನೇ ದೇವರಾಯನು ಸಂಗಮ ವಂಶದ ಅತ್ಯಂತ ಪ್ರಖ್ಯಾತ ಅರಸನಾಗಿದ್ದಾನೆ. ಈತನು ಕ್ರಿ.ಶ.15ನೇ ಶತಮಾನದಲ್ಲಿ ಕನ್ನಡ ನಾಡಿಗೆ ಮಾತ್ರವಲ್ಲ ಭಾರತದಲ್ಲಿಯೇ ಅಪೂರ್ವ ಕ್ರಿಯಾಶೀಲ ವ್ಯಕ್ತಿಯಾಗಿದ್ದನು. ಈತನ ಕಾಲದಲ್ಲಿ ಎಲ್ಲ ಕ್ಷೇತ್ರಗಳಲ್ಲೂ ಪ್ರಗತಿ ಕಂಡುಬಂದಿತು. ಈತನ ಕಾಲದಲ್ಲಿ ನಿಕೋಲೋಕೌಂಟಿ, ಪರ್ಷಿಯಾದ ಅಬ್ದುಲ್ ರಜಾಕ್ ವಿಜಯನಗರವನ್ನು ಸಂದರ್ಶಿಸಿದರು. ಇವನು 'ಪ್ರೌಢದೇವರಾಯ', 'ಅಭಿನವ ವೀರದೇವರಾಯ', 'ಪ್ರತಾಪದೇವ ರಾಯ', 'ಗಜಬೇಂಟೆಕಾರ', 'ಚತುಸುಮುದ್ರಾರೀಶ್ವರ', 'ಆದಿರಾಯರ ವಿಭಾಡ', ಮುಂತಾದ ಬಿರುದುಗಳಿಂದ ಪ್ರಖ್ಯಾತನಾಗಿದ್ದಾನೆ.

ಎರಡನೇ ದೇವರಾಯನು ಸಿಂಹಾಸನ ಏರುತ್ತಿದ್ದಂತೆಯೇ ರಾಜ್ಯದ ಈಶಾನ್ಯ ಭಾಗದಿಂದ ಒರಿಸ್ಸಾದ ಗಜಪತಿ ಮನೆತನದ ದಾಳಿಯನ್ನು ಎದುರಿಸಬೇಕಾಯಿತು. ಗಜಪತಿ ರಾಜ 4ನೇ ಭಾನುದೇವ 1423ರಲ್ಲಿ ರಾಜಮಂಡ್ರಿಯನ್ನು ವಶಪಡಿಸಿಕೊಂಡು ಕ್ರಿ.ಶ.1424ರಲ್ಲಿ ಭಾನುದೇವ ರೆಡ್ಡಿಗಳ ರಾಜ್ಯವಾದ ಕೊಂಡವೀಡುವಿನ ಮೇಲೆ ದಾಳಿ ಮಾಡಿದ. ದೇವರಾಯ ರಾಜಮಂಡ್ರಿಯನು ಮತ್ತು ಕೊಂಡವಿಡನ್ನು ರಕ್ಷಿಸಲು ಹೊರಟ ಭಾನುದೇವನನ್ನು ಸೋಲಿಸಿ ರೆಡ್ಡಿ ಅರಸರನ್ನು ರಾಜಮಂಡ್ರಿ ಮತ್ತೆ ಪುನರ್ ಪ್ರತಿಸ್ಥಾಪಿಸಲಾಯಿತು.

ಸಿಲೋನಿನ ಮೇಲೆ ದಾಳಿ ಮಾಡುವ ಯೋಜನೆಯನ್ನು ರೂಪಿಸಿದ ದೇವರಾಯನು ತನ್ನ ಸೇನಾದಿಪತಿಯಾಗಿದಂತಹ ಲಕ್ಕಣ್ಣ ದಂಡೇಶನ ನೇತೃತ್ವದಲ್ಲಿ ಶ್ರೀಲಂಕಾ ದ್ವೀಪದ ಮೇಲೆ ದಾಳಿ ಮಾಡಿದನು. ಈ ಸಂದರ್ಭದಲ್ಲಿ ಅಲ್ಲಿನ ರಾಜನು ಸೋತು ದೇವರಾಯನಿಗೆ ಶರಣಾದನು. ಹಾಗು ಕಪ್ಪ ಕಾಣಿಕೆಗಳನ್ನು ಸಹ ಕೊಡಲು ಒಪ್ಪಿದನು. ಈ ಸಂಗತಿಯು ಲಂಕೆಯ ಜಾನಪದ ಗೀತೆಗಳಲ್ಲಿ ರಚನೆಯಾಗಿದೆ. ಈ ವಿಜಯದ ಸವಿ ನೆನಪಿಗಾಗಿ ಲಕ್ಕಣ್ಣ ದಂಡೇಶನಿಗೆ

ದೇವರಾಯನು "ದಕ್ಷಿಣ ಸಮುದ್ರಾಧಿಪತಿ" ಎಂಬ ಬಿರುದನ್ನು ನೀಡಿ ಗೌರವಿಸಿದನೆಂದು ಇತಿಹಾಸದ ದಾಖಲೆಗಳು ಸಮರ್ಥಿಸುತ್ತವೆ. ಅನಂತರ ದೇವರಾಯ ಸಿಲೋನಿನೊಂದಿಗೆ ಉತ್ತಮ ಸಂಬಂಧವನ್ನು ಹೊಂದುತ್ತಾನೆ.

**ಸಾಳುವ ನರಸಿಂಹ (1485–1491):–**

ಸಾಳುವ ನರಸಿಂಹನು ಬಹಳ ಕಷ್ಟಕರ ಸನ್ನಿವೇಶದಲ್ಲಿದ್ದ ವಿಜಯನಗರದ ಸಾಮ್ರಾಜ್ಯವನ್ನು ಪಾರು ಮಾಡಿದ ಶ್ರೇಷ್ಠ ಅರಸನಾಗಿದ್ದಾನೆ. ಇವನು ಚಂದ್ರಗಿರಿಯ ರಾಜ್ಯಪಾಲನಾಗಿದ್ದ ಸಾಳುವ ಗುಂಡನ ಮಗನಾಗಿದ್ದನು. ಹಾಗೂ ಸೈನ್ಯದ ಮುಖ್ಯಸ್ಥನಾಗಿದ್ದನು. ಸಾಳುವ ಮನೆತನಕ್ಕೆ ಸೇರಿದವರು ಬಹಳ ಹಿಂದಿನ ಕಾಲದಿಂದಲೂ ಪ್ರಸಿದ್ಧರಾದ ನಾಯಕರಾಗಿದ್ದರು. ಮಲ್ಲಿಕಾರ್ಜುನನ ಮರಣದ ಅನಂತರ ಚಂದ್ರಗಿರಿ ಪ್ರಾಂತ್ಯದ ಮಾಂಡಲೀಕನಾದನು. ಆಗ ಗಜಪತಿಯು ವಿಜಯನಗರದ ಮೇಲೆ ದಾಳಿ ಮಾಡಿದಾಗ ಅವನನ್ನು ಹಿಮ್ಮೆಟ್ಟಿಸಿ ಉದಯಗಿರಿ ಮತ್ತು ಕೊಂಡವೀಡುಗಳನ್ನು ವಶಪಡಿಸಿಕೊಂಡನು. ಮಹಮ್ಮದ್ ಗವಾನನ ನೇತೃತ್ವದಲ್ಲಿ ಬಂದ ಮುಸ್ಲಿಂ ಸೈನ್ಯವು ಕೊಂಕಣ, ಗೋವಾ, ಬೆಳಗಾವಿ, ಮುಂತಾದ ಪ್ರದೇಶಗಳನ್ನು ಆಕ್ರಮಿಸಿಕೊಂಡಿತು. ಈ ಸಂದರ್ಭದಲ್ಲಿ ಸಾಳುವ ನರಸಿಂಹನು ಅವರನ್ನು ಹಿಮ್ಮೆಟ್ಟಿಸಿ ತಾನೇ ವಿಜಯನಗರದ ಅರಸನಾಗಿ ನೇಮಕಗೊಂಡನು.

**ಕೃಷ್ಣದೇವರಾಯ (1509–1529)**

ಕೃಷ್ಣದೇವರಾಯನು ವಿಜಯನಗರವನ್ನಾಳಿದ ಅರಸರಲ್ಲೇ ಅತಿ ಹೆಚ್ಚು ಖ್ಯಾತಿಗೊಳಿಸಿದ ರಾಜನಾಗಿದ್ದಾನೆ. ಇವನು ದಕ್ಷಿಣ ಭಾರತವನ್ನಾಳಿದ ಅರಸರಲ್ಲೇ ಅತಿ ಶ್ರೇಷ್ಠನಾಗಿದ್ದಾನೆ. ಇವನು ಉತ್ತಮ ಆಡಳಿತಗಾರ ಸಾಮ್ರಾಜ್ಯ ವಿಸ್ತಾರಕ ಮತ್ತು ಉತ್ತಮ ವಿದ್ವಾಂಸನಾಗಿದ್ದನು ಹಾಗೂ ಕಲೆ, ಸಾಹಿತ್ಯ ಮತ್ತು ವಾಸ್ತುಶಿಲ್ಪಗಳ ಆಸ್ತಿಭಾರಕನಾಗಿದ್ದಾನೆ.

ಕೃಷ್ಣದೇವರಾಯನು ಅಧಿಕಾರಕ್ಕೆ ಬಂದೊಡನೆ ಗಜಪತಿಯ ಆಕ್ರಮಣವನ್ನು ಎದುರಿಸ ಬೇಕಾಯಿತು. ಇವನನ್ನು ಸೋಲಿಸಿದ ನಂತರ ಬಹುಮನಿ ಸುಲ್ತಾನ ಮತ್ತು ಬಿಜಾಪುರದ ಆದಿಲ್‌ಶಾಹಿ ಸಂಯುಕ್ತ ಸೈನ್ಯವನ್ನು ರಚನೆ ಮಾಡಿ ಕೃಷ್ಣದೇವರಾಯನ ವಿರುದ್ಧ ದಂಡೆತ್ತಿ ಬಂದರು ಈ ಸೈನ್ಯವನ್ನು ಕೃಷ್ಣದೇವರಾಯನು ಕ್ರಿ.ಶ.1510 ರಲ್ಲಿ ದೇನಿ ಎಂಬ ಸ್ಥಳದಲ್ಲಿ ಸೋಲಿಸಿ ಹಿಮ್ಮೆಟಿಸಿದನು ನಂತರ ಅವರು ಕೋವಿಲಕೊಂಡದಲ್ಲಿ ಎರಡನೇ ಬಾರಿಗೆ ರಾಯನಿಂದ

ಸೋತರು. ನಂತರ ಬಿಜಾಪುರದ ಆದಿಲ್‌ಶಾಹಿಯನ್ನು ಕೊಲೆಮಾಡಿ ಸಾಮ್ರಾಜ್ಯ ರಕ್ಷಣೆ ಮಾಡುವಲ್ಲಿ ಪ್ರಮುಖ ಪಾತ್ರ ವಹಿಸಿದನು.

ಕ್ರಿ.ಶ. 1510 ರಲ್ಲಿ ಗೋವಾವನ್ನು ವಶಪಡಿಸಿಕೊಳ್ಳಲು ಬಿಜಾಪುರ ಸುಲ್ತಾನರ ವಿರುದ್ಧ ಪೋರ್ಚುಗೀಸರಿಗೆ ಸಹಾಯ ಮಾಡಿದನು ಹಾಗೂ ಪೋರ್ಚುಗೀಸರೊಂದಿಗೆ ಉತ್ತಮ ಬಾಂದವ್ಯವನ್ನು ಬೆಳಸಿಕೊಂಡನು. ಪೋರ್ಚುಗೀಸ್ ಪ್ರವಾಸಿಗಳಾದ ಬಾರ್ಬೊಸ ಮತ್ತು ಡೊಮಿಂಗೋ ಪಯಾಸರು ಇವನ ಆಸ್ಥಾನಕ್ಕೆ ಭೇಟಿ ನೀಡಿದ್ದರು ಇವರು ರಾಯನ ಆಸ್ಥಾನ ಮತ್ತು ವ್ಯಕ್ತಿತ್ವದ ಬಗ್ಗೆ ಹಲವು ಮೆಚ್ಚುಗೆಯ ಮಾತುಗಳನ್ನಾಡಿದ್ದಾರೆ. ಪಯಾಸ್‌ನು ಉತ್ತಮ ಆಡಳಿತಗಾರ ಮತ್ತು ನ್ಯಾಯಯುತ ಮನುಷ್ಯ ಎಂದು ಕೃಷ್ಣದೇವರಾಯನನ್ನು ಕರೆದಿದ್ದಾನೆ.

**ಅಳಿಯ ರಾಮರಾಯ (1551–1565)**

ಅರವೀಡು ರಂಗನ ಮಗನಾದ ರಾಮರಾಯನು ತುಳುವ ರಾಜರ ಅವಧಿಯಲ್ಲಿ ಸೈನ್ಯದ ಮುಖ್ಯಸ್ಥನಾಗಿದ್ದನು. ಕೃಷ್ಣದೇವರಾಯನ ಕಾಲದಲ್ಲಿ ಇವನು ಪ್ರಸಿದ್ಧ ದಂಡನಾಯಕನಾಗಿದ್ದನು. ರಾಮರಾಯ ಮತ್ತು ಇವನ ಸಹೋದರ ತಿರುಮಲ ಇಬ್ಬರು ಕೃಷ್ಣದೇವರಾಯನ ಹೆಣ್ಣು ಮಕ್ಕಳನ್ನು ವಿವಾಹವಾಗಿದ್ದರು ಹಾಗೂ ಇವರು ಅಳಿಯ ರಾಮರಾಯ ಮತ್ತು ಅಳಿಯ ತಿರುಮಲ ಎಂದು ಪ್ರಖ್ಯಾತಿ ಪಡೆದಿದ್ದರು. ಇವರಿಗೆ ಒಬ್ಬ ಕಿರಿಯ ಸಹೋದರನಾದ ವೆಂಕಟಾದ್ರಿ ಎಂಬುವವನಿದ್ದನು. ಈ ಅರವೀಡು ಸಹೋದರರು ಕೃಷ್ಣದೇವರಾಯನ ಕಾಲದಲ್ಲಿ ಅಪಾರ ಕೀರ್ತಿಗಳಿಸಿದ್ದರು ಕೃಷ್ಣದೇವರಾಯನು ಮರಣ ಹೊಂದಿದ ನಂತರ ಅಧಿಕಾರಕ್ಕೆ ಬರಲು ಪ್ರಯತ್ನಪಟ್ಟರು ಆದರೆ ಸಾಧ್ಯವಾಗಲಿಲ್ಲ. ಸದಾಶಿವ ಅಧಿಕಾರಕ್ಕೆ ಬಂದಾಗ ಅವನನ್ನು ನಾಮ ಮಾತ್ರ ದೊರೆಯನ್ನಾಗಿ ಮಾಡಿ ನಂತರ ಅವನನ್ನು ಸೆರೆವಾಸದಲ್ಲಿಟ್ಟು ಸಂಪೂರ್ಣವಾಗಿ ಆಡಳಿತ ಸೂತ್ರವನ್ನು ವಹಿಸಿಕೊಂಡನು.

ದಕ್ಷಿಣ ಭಾರತದ ಶಾಹಿಗಳು ತಮ್ಮ ಒಳ ಕಚ್ಚಾಟಗಳಲ್ಲಿ ತೊಡಗಿದ್ದಾಗ ಈ ಸಮಯವನ್ನು ಸದುಪಯೋಗ ಪಡಿಸಿಕೊಂಡ ರಾಮರಾಯನು ಕೃಷ್ಣ ನದಿಯ ತೀರದವರೆಗೂ ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿದನು. ಇಬ್ರಾಹಿಂ ಕುತುಬ್ ಷಾನು ರಾಮರಾಯನ ಸಹಾಯದಿಂದ ಗೊಲ್ಕೊಂಡದ ಸುಲ್ತಾನನಾದನು. ಇವನು ಸುಮಾರು ಏಳು ವರ್ಷಗಳ ಕಾಲ ರಾಮರಾಯನ ಆಶ್ರಯದಲ್ಲಿದ್ದನು. ರಾಮರಾಯನು ಚಂದ್ರಗಿರಿ ಮತ್ತು ತಿರುವಾಂಕೂರಿನ ದಾಳಿಗಳನ್ನು ಹತ್ತಿಕುವಲ್ಲಿ ಯಶಸ್ವಿಯಾದನು. ಸಿಲೋನಿನ ರಾಜನಾದ ಕ್ಯಾಂಡಿಯು ವಿಜಯನಗರಕ್ಕೆ ಕಪ್ಪಕಾಣಿಗೆ

ಕೊಡುವಂತೆ ಮಾಡಿದನು. ಪೋರ್ಚುಗೀಸರೊಂದಿಗೆ ಕೆಲವೊಂದು ಬಾರಿ ಕಠೋರವಾಗಿ ನಡೆದುಕೊಂಡನು ಹಾಗೂ ಪೋರ್ಚುಗೀಸರ ವ್ಯಾಪಾರ ಕೇಂದ್ರವಾದ ಸ್ಯಾನ್ ತೊಮಯ ಮೇಲೆ ದಾಳಿ ಮಾಡಿದನು.

**ತಾಳಿಕೋಟೆ ಯುದ್ಧ (1565)**

ವಯಸ್ಸಾದ ಮತ್ತು ಅತಿಯಾದ ಆತ್ಮವಿಶ್ವಾಸ ಹೊಂದಿದ್ದ ರಾಮರಾಯನು ಸೈನ್ಯವನ್ನು ಮುಂದುವರಿಸಿ ನೇತೃತ್ವ ವಹಿಸಿದನು. ಈ ಯುದ್ಧವು ಕೃಷ್ಣ ನದಿ ದಡದ ಮೇಲೆ ಅಂದರೆ ಇಂದಿನ ಬೀದರ್ ಜಿಲ್ಲೆಯ ರಕ್ಕಸಗಿ ಮತ್ತು ತಂಗಡಗಿ ಗ್ರಾಮಗಳಲ್ಲಿ ನಡೆಯಿತು. ಪ್ರಾರಂಭದಲ್ಲಿ ವಿಜಯನಗರವೇ ಗೆಲ್ಲುವ ಹಂತದಲ್ಲಿತ್ತು ಆದರೆ ಶತ್ರು ಪಾಳಯದಿಂದ ಹೊರದಾಳಿ ಮಾಡಲಾಗಿ ರಾಮರಾಯನನ್ನು ಬಂಧಿಸಿ ನಂತರ ಕೊಲ್ಲಲಾಯಿತು. ಅವನ ತಲೆ ಬುರಡೆಯನ್ನು ಈಟಿಗೆ ಅಥವಾ ಭರ್ಜಿಗೆ ಸಿಕ್ಕಿಸಿಕೊಂಡು ಶತ್ರು ಸೈನ್ಯ ಪಾರುಪತ್ಯ ಮೆರೆಯಿತು. ದೊರೆಯ ಸಾವು ವಿಜಯನಗರ ಸೈನ್ಯದಲ್ಲಿ ಆತಂಕವನ್ನುಂಟು ಮಾಡಿತು. ಇದರಿಂದಾಗಿ ಸೈನಿಕರೆಲ್ಲರೂ ದಿಕ್ಕಪಾಲಾಗಿ ಓಡಿಹೋದರು. ರಾಮರಾಯನ ತಮ್ಮನಾದ ತಿರುಮಲನು ರಾಜಧಾನಿಗೆ ವಾಪಸ್ಸು ಬಂದು ಅಪಾರವಾದ ಸಂಪತ್ತಿನೊಂದಿಗೆ ಸದಾಶಿವನೊಂದಿಗೆ ಪೆನುಗೊಂಡಗೆ ಹೋಗಿ ಅಲ್ಲಿ ಆಶ್ರಯ ಪಡೆದನು. ಶತ್ರು ಸೈನ್ಯವು ಹಂಪೆಯನ್ನು ಪ್ರವೇಶಿಸಿ ಸುಮಾರು ಐದು ತಿಂಗಳುಗಳ ಕಾಲ ಇಡೀ ಹಂಪಿಯನ್ನು ದೋಚಿದರು. ಸಂಪೂರ್ಣ ಹಂಪಿಯನ್ನು ನಾಶಮಾಡಿ ದೇವಾಲಯಗಳನ್ನು ನೆಲಸಮ ಮಾಡಿ ಕೊಳ್ಳೆ ಹೊಡೆಯುವ ಮೂಲಕ ವೈಭವಯುತವಾಗಿ ಬಾಳಿದ ಸಾಮ್ರಾಜ್ಯವನ್ನು ಸಂಪೂರ್ಣವಾಗಿ ನಿರ್ನಾಮ ಮಾಡಿದರು. ರಾಮರಾಯನ ತಮ್ಮನಾದ ತಿರುಮಲನು ಸೈನ್ಯವನ್ನು ಹುರಿದುಂಬಿಸಿ ಶತ್ರು ಸೈನ್ಯದೊಂದಿಗೆ ಕಾದಾಡಬಹುದಾಗಿತ್ತು ಆದರೆ ಅವನು ಆ ರೀತಿ ನಡೆದುಕೊಳ್ಳದೇ ಹೇಡಿಯಂತೆ ಓಡಿ ಹೋಗಿ ತನ್ನ ಪ್ರಾಣ ಉಳಿಸಿಕೊಂಡನು. ಅಳಿಯ ರಾಮರಾಯ ದಕ್ಷಿಣ ಭಾರತದ ಇತಿಹಾಸದಲ್ಲೇ ತನ್ನ ಸಾಧನೆಯಿಂದಾಗಿ ಧ್ರುವತಾರೆಯಾಗಿ ಉಳಿದಿದ್ದಾನೆ. ಆದರೆ ಅವನು ಮುಸ್ಲಿಮರ ಆಂತರಿಕ ವಿಚಾರಗಳಲ್ಲಿ ತಲೆಹಾಕದೇ ತನ್ನ ಆಡಳಿತವನ್ನು ಮುನ್ನಡೆಸಿಕೊಂಡು ಹೋಗಿದ್ದಲ್ಲಿ ಬಹುಶಃ ವಿಜಯನಗರಕ್ಕೆ ಬರಬಹುದಾಗಿದ್ದಂತಹ ಗಂಡಾಂತರವನ್ನು ತಡೆಯಬಹುದಿತ್ತು. ಈ ಕಾರಣಗಳಿಂದಾಗಿ ರಾಮ ರಾಯನನ್ನು ಖಳನಾಯಕನನ್ನಾಗಿ ಚಿತ್ರಸಲಾಗಿದೆ. ವಿಜಯನಗರದ ಅವನತಿಗೆ ರಾಮರಾಯನೇ ಕಾರಣವೆಂಬುದನ್ನು ಹಲವಾರು ಇತಿಹಾಸಕಾರರು ಅಭಿಪ್ರಾಯಪಡುತ್ತಾರೆ. ರಾಮರಾಯನ ಅತಿಯಾದ ಆತ್ಮವಿಶ್ವಾಸ ಅವನ ಸೋಲಿಗೆ ಕಾರಣವಾಯಿತು ಎಂದು ಹೇಳಿದರೆ ತಪ್ಪಾಗಲಾರದು.

ಏನೇ ಕಾರಣಗಳಿದ್ದರು ವೈಭವಯುತವಾಗಿ ಬಾಳಿಬೆಳಗಿದ ಸಾಮ್ರಾಜ್ಯವೊಂದು ಮುಸ್ಲಿಮರ ದಾಳಿಗೆ ತುತ್ತಾಗಿ ಅವನತಿ ಹೊಂದಿತ್ತು ಎಂಬುದಂತು ಕಟು ಸತ್ಯವಾಗಿದೆ.

## 1.4 ಭೌಗೋಳಿಕ ಲಕ್ಷಣಗಳು ಮತ್ತು ಸ್ಥಳ ಹಿನ್ನಲೆ

ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿದ್ದ ವಿಜಯನಗರ ಅಥವಾ ಹಂಪೆಯು ಕರ್ನಾಟಕ ರಾಜ್ಯದ ಬಳ್ಳಾರಿ ಜಿಲ್ಲೆಯ ಈಶಾನ್ಯ ದಿಕ್ಕಿಗೆ ಸುಮಾರು 57 ಕಿ.ಮೀ ದೂರದಲ್ಲಿ ಇದ್ದು $15^0$ $19^0$ 50" ಉತ್ತರ ಅಕ್ಷಾಂಶ ಮತ್ತು $76^0$ $30^0$ 100" ಪೂರ್ವ ರೇಖಾಂಶದಲ್ಲಿ ಕಂಡು ಬರುತ್ತದೆ. ತುಂಗಭದ್ರಾ ನದಿಯು ಇದಕ್ಕೆ ನೈಸರ್ಗಿಕ ಗಡಿಯಂತೆ ಇದ್ದು ಇದು ಧಾರವಾಡ ಜಿಲ್ಲೆಯನ್ನು ಪಶ್ಚಿಮದಿಂದಲೂ ಮತ್ತು ರಾಯಚೂರು ಜಿಲ್ಲೆಯನ್ನು ಉತ್ತರದಿಂದಲೂ ವಿಭಾಗಿಸುತ್ತದೆ. ಸಂಡೂರು ಬೆಟ್ಟಗಳು ಮತ್ತೊಂದು ನೈಸರ್ಗಿಕ ವಿಭಜನೆಯಂತೆ ಕಂಡುಬಂದಿವೆ. ಬಳ್ಳಾರಿ ಜಿಲ್ಲೆಯ ನದಿ ವ್ಯವಸ್ಥೆಯು ಸಾಮಾನ್ಯವಾಗಿದ್ದು ತುಂಗಭದ್ರಾ ಮತ್ತು ಅದರ ಉಪನದಿಗಳಾದ ಹಗರಿ ಮತ್ತು ಚಿಕ್ಕಹಗರಿಗಳು ಬಳ್ಳಾರಿ ಜಿಲ್ಲೆಯ ಪ್ರಮುಖ ನದಿಗಳಾಗಿವೆ ರಾಜಧಾನಿಯಾಗಿದ್ದ ವಿಜಯನಗರವು ತುಂಗಭದ್ರಾ ನದಿ ದಡದಲ್ಲಿ ಉಗಮಗೊಂಡಿದೆ. ಬಳ್ಳಾರಿ ಜಿಲ್ಲೆಯು ಮುಖ್ಯವಾಗಿ ಅರ್ಚಯನ್ ಲಕ್ಷಣ ಮಿಶ್ರಿತ ಕ್ರಿಸ್ಟಲಿಯನ್ ಸ್ಕಟ್ಸ್, ಎಪಿಡಿಯಾರೈಟ್ಸ್, ಗ್ರಾನ್ಸ್‌ಟಿಕ್, ಜೀನೇಸಿಸ್ ಮತ್ತು ಗ್ರಾನೈಟ್ ಬೆಟ್ಟಗುಡ್ಡಗಳಿಂದ ಕೂಡಿದೆ. ಮುಖ್ಯವಾಗಿ ಕ್ಯಾಟ್ರ್ಸ್ ಗಣಿಗಳು ಬಳ್ಳಾರಿ ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ಕಂಡು ಬರುತ್ತದೆ. ಜಿಲ್ಲೆಯ ಹವಮಾನವು ಮುಖ್ಯವಾಗಿ ಒಣಹವೆಯಿಂದ ಕೂಡಿದ್ದು ಸುಮಾರು 574.9 ಮೀ.ಮೀ. ವಾರ್ಷಿಕ ಮಳೆ ಹೊಂದಿದೆ.

## 1.5 ಆಧಾರಗಳ ಸಮೀಕ್ಷೆ

ಯಾವುದೇ ಇತಿಹಾಸವನ್ನು ರಚನೆ ಮಾಡುವಾಗ ಅಥವಾ ಪುನರ್ ರಚಿಸುವಾಗ ಅದಕ್ಕೆ ಸಂಬಂಧಿಸಿದ ವಿವಿಧ ರೀತಿಯ ಪ್ರಮಾಣಬದ್ಧ ಆಧಾರಗಳು ಅವಶ್ಯವಾಗಿರುತ್ತವೆ. ಅದರಂತೆ ವಿಜಯನಗರದ ಇತಿಹಾಸವನ್ನು ಪುನರ್ ರಚಿಸುವಾಗ ಹಲವಾರು ಬಗೆಯ ಅಮೂಲ್ಯ ಆಧಾರಗಳು ಅಧಿಕ ಪ್ರಮಾಣದಲ್ಲಿ ದೊರೆಯುತ್ತವೆ. ಆದ್ದರಿಂದ ಈ ಕಾಲದ ಇತಿಹಾಸವು ಖಚಿತವಾದ ನೆಲೆಗಟ್ಟಿನ ಮೇಲೆ ರೂಪುಗೊಳ್ಳುತ್ತದೆ. ಈ ಕಾಲದಲ್ಲಿ ಇತಿಹಾಸದ ಅಂಶಗಳನ್ನು ಒಳಗೊಂಡ ಸಾರ್ವತ್ರಿಕ ಸಾಹಿತ್ಯ ಕೃತಿಗಳು, ಐತಿಹಾಸಿಕ ಕಾವ್ಯಗಳು ಆಡಳಿತಾತ್ಮಕ ವಿಷಯಗಳನ್ನು ಒಳಗೊಂಡ ಕೈಪಿಯತ್ತುಗಳು ರಚನೆಯಾದವು. ವಿಜಯನಗರಕ್ಕೆ ಭೇಟಿ ನೀಡಿದ ವಿದೇಶಿಗರ

ಸಂಖ್ಯೆಯೂ ಸಹ ದೊಡ್ಡದಾಗಿದ್ದು ಅವರ ಅನುಭವಗಳು ಈ ಕಾಲದ ಇತಿಹಾಸ ರಚನೆಗೆ ಬಹು ಸಹಕಾರಿಯಾಗಿವೆ. ಹಿಂದೆಂದೂ ಕಾಣದಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಶಾಸನಗಳನ್ನು ಈ ಸಾಮ್ರಾಜ್ಯದ ಕಾಲದಲ್ಲಿ ಹೊರಡಿಸಲಾಗಿದೆ. ಒಟ್ಟಾರೆಯಾಗಿ ಈ ಆಧಾರಗಳನ್ನು ಎರಡು ವಿಭಾಗಗಳಾಗಿ ವಿಂಗಡಿಸಬಹುದು ಅವುಗಳೆಂದರೆ

1. ಪುರಾತತ್ವ ಆಧಾರಗಳು
2. ಸಾಹಿತ್ಯ ಆಧಾರಗಳು

**1) ಪುರಾತತ್ವ ಆಧಾರಗಳು**

1970ರ ನಂತರ ವಿಜಯನಗರ ಪುರಾತತ್ವ ಇತಿಹಾಸಕ್ಕೆ ಸಂಬಂಧಿಸಿದಂತೆ ರಾಷ್ಟ್ರೀಯ ಕಾರ್ಯಕ್ರಮದ ಅಡಿಯಲ್ಲಿ ರಾಜ್ಯ ಮತ್ತು ಕೇಂದ್ರ ಪುರಾತತ್ವ ಶಾಸ್ತ್ರಜ್ಞರು ವಿಜಯನಗರದಲ್ಲಿ ಸಂಶೋಧನೆಯನ್ನು ಕೈಗೊಂಡಿದ್ದರು. ಅಂತಹ ಪ್ರಮುಖವಾದ ಪುರಾತತ್ವ ಶಾಸ್ತ್ರಜ್ಞರುಗಳೆಂದರೆ ಎನ್.ಆರ್.ರಾವ್, ಆರ್.ಸಿ.ಅಗರ್‌ವಾಲ್, ಆರ್.ವಿ.ಜೋಷಿ, ವಿ.ಮಿಶ್ರ, ಎಂ.ಎಸ್.ನಾಗರಾಜರಾವ್, ಆ ಸುಂದರ್, ಸಿ.ಎಸ್.ಪಾಟೀಲ್, ಎನ್.ಎಸ್.ರಂಗರಾಜು ಮತ್ತು ರಾಜಾರಾಮ್ ಹೆಗಡೆ ಮುಂತಾದವರು. ಇವರೆಲ್ಲರೂ ಸಹ ವಿಜಯನಗರಕ್ಕೆ ಸಂಬಂಧಿಸಿದಂತೆ ಅನೇಕ ಪುರಾತತ್ವ ಆಧಾರಗಳನ್ನು ಪತ್ತೆ ಹಚ್ಚುವಲ್ಲಿ ಯಶಸ್ವಿಯಾಗಿದ್ದಾರೆ. ವಿಜಯನಗರ ಕಾಲದ ಜನರು ತಮ್ಮ ನಿತ್ಯ ಬಳಕೆಗಾಗಿ ಬಳಸುತ್ತಿದ್ದ ಅನೇಕ ಪರಿಕರಗಳು, ಮಡಿಕೆಗಳು, ವಿವಿಧ ಕಟ್ಟಡಗಳು ಇದರಿಂದ ಕಂಡುಬಂದಿದೆ.

**ಅ) ಶಾಸನಗಳು:**

ಶಾಸನಗಳು ಮೂಲ ದಾಖಲೆಗಳಾಗಿದ್ದು ಪ್ರಾಥಮಿಕ ಆಧಾರಗಳಾಗಿವೆ. ಈ ದಾಖಲೆಗಳು ಹೆಚ್ಚು ನಂಬಲರ್ಹವಾಗಿದ್ದು ಉಪಯುಕ್ತವಾದ ಮಾಹಿತಿಗಳನ್ನು ಒದಗಿಸುತ್ತವೆ. ಕರ್ನಾಟಕದಾದ್ಯಂತ ಹಲವಾರು ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಶಾಸನಗಳು ದೊರೆಯುತ್ತವೆ. ಸುಮಾರು ಐದು ಸಾವಿರ ಶಾಸನಗಳನ್ನು ಪತ್ತೆಹಚ್ಚಲಾಗಿದ್ದು, ಇವುಗಳಲ್ಲಿ ಅರ್ಧಕ್ಕು ಅಧಿಕ ಕನ್ನಡ ಶಾಸನಗಳು ದೊರೆತಿರುವುದು ಕನ್ನಡ ಭಾಷೆಯ ಬೆಳವಣಿಗೆಯ ಬಗ್ಗೆ ಬೆಳಕು ಚೆಲ್ಲುವುದರೊಂದಿಗೆ ವಿಜಯನಗರ ಸಾಮ್ರಾಜ್ಯಕ್ಕೆ ಕನ್ನಡ ಭಾಷೆಯ ಮೇಲೆ ಇದ್ದಂತಹ ಅಭಿಮಾನವನ್ನು ವ್ಯಕ್ತಪಡಿಸುತ್ತವೆ. ವಿಜಯನಗರದ ಶಾಸನಗಳು ಮುಖ್ಯವಾಗಿ ವಿಜಯನಗರ

ಸ್ಥಾಪನೆ, ವಿಜಯನಗರ ಬಹುಮನಿ ರಾಜ್ಯಗಳ ಸಂಬಂಧಗಳು, ಆಡಳಿತ, ಧಾರ್ಮಿಕ, ಕಲಾಭಿವೃದ್ಧಿ ವ್ಯಾಪಾರ ವಾಣಿಜ್ಯ, ವಿದೇಶಿ ಸಂಬಂಧಗಳ ಕುರಿತು ಮಾಹಿತಿ ನೀಡುತ್ತವೆ.

**ವಿಜಯನಗರ ಕಾಲಕ್ಕೆ ಸಂಬಂಧಿಸಿದ ಕೆಲವು ಪ್ರಮುಖ ಶಾಸನಗಳು:**

**ಶೃಂಗೇರಿ ಶಾಸನ:** ಇದು ಕೃಷ್ಣದೇವರಾಯನ ಪಟ್ಟಾಭಿಷೇಕ ಹಾಗೂ ಶೃಂಗೇರಿ ದೇವಾಲಯಕ್ಕೆ ನೀಡಿದ ದತ್ತಿಯ ಬಗ್ಗೆ ಮಾಹಿತಿ ನೀಡುತ್ತದೆ. ವೈಷ್ಣವರಿಗೂ ಮತ್ತು ಜೈನರಿಗೂ ನಡುವೆ ಘರ್ಷಣೆ ಹಾಗೂ ಕೃಷ್ಣದೇವರಾಯನ ಗುಣಗಾನ ಮಾಡಿದೆ.

**ಬಾರಕೂರು ಶಾಸನ:** ವ್ಯಾಪಾರಿ ಪಂಗಡಗಳ ನಡುವಿನ ತಿಕ್ಕಾಟ, ಭೂಮಿ ಮತ್ತು ರಹದಾರಿ ಹಕ್ಕುಗಳ ಹಂಚಿಕೆ ಬೆಲೆ ನಿರ್ಣಯದ ಬಗ್ಗೆ ಮಾಹಿತಿ ನೀಡುತ್ತದೆ.

**ಚಿಕ್ಕಬಳ್ಳಾಪುರ ಶಾಸನ:** ಇದರಲ್ಲಿ ವಿವಾಹ ಸಂಬಂಧಿ ಕಾಯ್ದೆಗಳ ಬಗ್ಗೆ ಮಾಹಿತಿ ಇದೆ. ವರದಕ್ಷಿಣೆ ಮತ್ತು ವಧುದಕ್ಷಿಣೆ ಪದ್ದತಿಯನ್ನು ತಿರಸ್ಕರಿಸುವುದನ್ನು ಇದರಲ್ಲಿ ಕಾಣಬಹುದು.

**ಉಮತ್ತೂರು ಶಾಸನ:** ವಿಜಯನಗರ ಸಾಮಂತರು ಹಾಗೂ ನಾಯಕರ ರಾಜಕೀಯ ಸಂಬಂಧದ ಬಗ್ಗೆ ವಿವರ ನೀಡುತ್ತದೆ. ತುಳುವ ವೀರ ನರಸಿಂಹನ ಕಾಲದಲ್ಲಿ ಆತನು ಸಾಮಂತ ಮಲ್ಲಿರಾಯ ನೊಂದಿಗೆ ಹೊಂದಿದ ರಾಜಕೀಯ ಸಂಬಂಧಗಳನ್ನು ಇಲ್ಲಿ ವಿವರಿಸಲಾಗಿದೆ.

**ಬಾದಾಮಿ ಶಾಸನ:** ಸಂಗಮ ವಂಶದ ಆರಂಭ ಹರಿಹರನ ರಾಜಕೀಯ ಸಾಧನೆಗಳು ಮತ್ತು ರಾಜನೀತಿಯ ಬಗೆಗೆ ವಿವರ ಹೊಂದಿದೆ. ಅನಂತರದಲ್ಲಿ ಕೇರಳದ ಭುವನೇಕಮಿತ್ತಮ್ ಮತ್ತು ಚರ್ತುವೇದ ಮಲಗಳಂ ಶಾಸನಗಳು ವ್ಯಾಪಾರಿ ಘಟಕಗಳ ಬೆಳವಣಿಗೆ, ವ್ಯಾಪಾರದ ನೀತಿಯ ಬಗ್ಗೆ ವಿವರ ನೀಡುತ್ತವೆ.

**ನಾಗಮಂಗಲ ಶಾಸನ:** ಕ್ರಿ.ಶ.1511 ರಲ್ಲಿ ಮಂಡ್ಯ ಜಿಲ್ಲೆಯ ನಾಗಮಂಗಲದಲ್ಲಿ ದೊರೆತಿರುವ ಶಾಸನವು ನಾಗಮಂಗಲದ ವೀರಭದ್ರ ದೇವರಿಗೆ ಮಂಟಪ ಕಟ್ಟಿಸಿ ಭೂಮಿಯನು ದಾನವಾಗಿ ನೀಡಿದ್ದರ ಬಗ್ಗೆ ಉಲ್ಲೇಖಿಸುತ್ತದೆ.

**ಮೇಲುಕೋಟೆ ಶಾಸನ:** ಕ್ರಿ.ಶ.1528 ರಲ್ಲಿ ಮಂಡ್ಯಜಿಲ್ಲೆಯ ಮೇಲುಕೋಟೆ ಶಾಸನವು ವಾರ್ಷಿಕವಾಗಿ ನೂರ ಐದು ಗದ್ಯಾಣಗಳನ್ನು ಸುಂಕವಾಗಿ ವಾರದ ಸಂತೆಗಳನ್ನು

ನಡೆಸುತ್ತಿದ್ದವರಿಂದ ವಸೂಲಿ ಮಾಡಿ ಸ್ಥಳೀಯ ದೇವಾಲಯಕ್ಕೆ ದೇಣಿಗೆ ಕೊಡುತ್ತಿದ್ದುದರ ಬಗ್ಗೆ ವಿವರಿಸುತ್ತದೆ.

**ಕಾಳಾಹಸ್ತಿಶಾಸನ :** ಕ್ರಿ.ಶ 1515ರ ಆಂದ್ರಪ್ರದೇಶದ ಕಾಳಾಹಸ್ತಿ ಶಾಸನವು ಸ್ಥಳೀಯ ವ್ಯಾಪಾರಿಗಳಿಂದ ಸುಂಕವನ್ನು ವಸೂಲಿಮಾಡಿ ಅದನ್ನು ಕಾಳಾಹಸ್ತೇಶ್ವರ ದೇವಾಲಯಕ್ಕೆ ದೇಣಿಗೆ ನೀಡಿದುದ್ದರ ಬಗ್ಗೆ ಉಲ್ಲೇಖಿಸುತ್ತದೆ.

**ವೇಲುಪಾಡಿಗೆ ಶಾಸನ :** ಕ್ರಿ.ಶ.1525 ರ ವೆಲುಪಾಡಿಗೆ ಶಾಸನವು ಆಂದ್ರಪ್ರದೇಶದಲ್ಲಿ ದೊರಕ್ಕಿದ್ದು ಈ ಶಾಸನವು ಸಂತೆಗಳಿಗೆ ಸುಂಕವನ್ನು ವಿದಿಸಿದುದರ ಬಗ್ಗೆ ಮಾಹಿತಿ ನೀಡುತ್ತದೆ. ಮುಂದುವರೆದಂತೆ ವೆಲುಪಾಡಿ ಹೆಸರನ್ನು ಕೃಷ್ಣರಾಯಪುರವೆಂದು ಬದಲಿಸಿ ಮೊದಲ ಮೂರು ವರ್ಷ ಯಾವುದೇ ತೆರಿಗೆ ವಿದಿಸದೆ ಮೂರು ವರ್ಷದ ತದನಂತರ, ಎಣ್ಣೆ ಮಿಲ್‌ಗಳಿಗೆ ವರಹವನ್ನು, ನೇಯ್ಗೆ ಕೇಂದ್ರಗಳಿಗೆ ಎಂಟು ಪೊನ್ನನು ಒಂದೇ ಅಂಗಡಿಗೆ ಮೂರು ಪೊನ್ನುಗಳನ್ನು ವಿದಿಸುತ್ತಿದ್ದುದರ ಬಗ್ಗೆ ಮಾಹಿತಿ ನೀಡುತ್ತದೆ.

**ಶಿವಗಂಗಶಾಸನ:** ಕ್ರಿ.ಶ.1527ರ ತಮಿಳುನಾಡಿನ ಶಿವಗಂಗಾ ಶಾಸನವು ಕುದುರೆ ವ್ಯಾಪಾರದ ಕುರಿತು ಮಾಹಿತಿ ನೀಡುತ್ತದೆ.

**ಮಲ್ಲಪುರಂ ಶಾಸನ:** ಕ್ರಿ.ಶ.1529ರ ತಮಿಳುನಾಡಿನ ಮಲ್ಲಪುರಂ ಶಾಸನವು ಮಲ್ಲಪುರಂನಲ್ಲಿ ಅಂಗಡಿಗಳನ್ನು ನಿರ್ಮಿಸಲು ದಾನ ನೀಡಿದುದರ ಬಗ್ಗೆ ಇದು ಉಲ್ಲೇಖಿಸುತ್ತದೆ.

**ಪುಟ್ಟಲಪುತ್ತೂರು ಶಾಸನ:** ಕ್ರಿ.ಶ.1517ರ ಆಂದ್ರಪ್ರದೇಶದ ಪುಟ್ಟಲ ಪುತ್ತೂರು ಶಾಸನವು, ಐಹೊಳೆ ವ್ಯಾಪಾರಿ ಸಂಘಗಳೊಂದಿಗೆ ವ್ಯಾಪಾರಿಗಳ ಒಪ್ಪಂದ ಮತ್ತು ವ್ಯಾಪಾರಿಗಳ ಮೇಲೆ ವಿಧಿಸುತ್ತಿದ್ದ ತೆರಿಗೆಯ ಬಗ್ಗೆ ಇದು ಮಾಹಿತಿ ನೀಡುತ್ತದೆ.

**ರಾಮಗಿರಿ ಶಾಸನ :** ಕ್ರಿ.ಶ.1519ರ ಕರ್ನಾಟಕದ ಚಿತ್ರದುರ್ಗ ಜಿಲ್ಲೆಯ ರಾಮಗಿರಿ ಶಾಸನವು. ಬಾಗೂರಿನ ಮಹಾಮಂಡಲೇಶ್ವರ ಮಲ್ಲರಸಯ್ಯನು ರಾಮಗಿರಿಯಲ್ಲಿ ಸಂತೆಗಳನ್ನು ಸ್ಥಾಪಿಸಿ ಅಲ್ಲಿನ ತೆರಿಗೆಯನ್ನು ರಾಮಲಿಂಗ ದೇವಾಲಯಕ್ಕೆ ದೇಣಿಗೆ ನೀಡಿದುದರ ಬಗ್ಗೆ ಮಾಹಿತಿ ನೀಡುತ್ತದೆ.

**ಕೈಕಿಣಿ ಶಾಸನ:** ಕ್ರಿ.ಶ.1522ರ ಕರ್ನಾಟಕದ ಉತ್ತರಕನ್ನಡ ಜಿಲ್ಲೆಯ ಕೈಕೀಣಿ ಶಾಸನವು ಗೋವಾದ ಪೋರ್ಚುಗೀಸ್ ಮಂಡಲಾಧಿಪತಿಯಾದ ಡಾಮ್-ಡು-ಆರ್ಟ್ ಮನ್‌ಜಸ್‌ನ ಬಗ್ಗೆ ಮಾಹಿತಿ ನೀಡುತ್ತದೆ.

**ತ್ರಿಯಂಬಕಪುರ ಶಾಸನ:** ಚಾಮರಾಜನಗರ ಜಿಲ್ಲೆಯ ತ್ರಿಯಂಬಕಪುರ ಶಾಸನವು ವಿವಿಧ ಉದ್ಯಮಗಳ ಮೇಲೆ ವಿಧಿಸಿದ್ದ ತೆರಿಗೆಯ ಬಗ್ಗೆ ಮಾಹಿತಿ ನೀಡುತ್ತದೆ. ಉದಾ: ಗಾಣ, ಕುಂಬಾರಿಕೆ, ನೇಯ್ಗೆ ಮುಂತಾದವು.

**ಕಲ್ಲಹಳ್ಳಿ ಶಾಸನ:** ಚಾಮರಾಜನಗರ ಜಿಲ್ಲೆಯ ಕಲ್ಲಹಳ್ಳಿ ಶಾಸನವು ಗಣಚಾರಿಗಳ ಮೇಲೆ ತೆರಿಗೆ ವಿಧಿಸಿದುದರ ಬಗ್ಗೆ ಮಾಹಿತಿ ನೀಡುತ್ತದೆ. ದಾಸ, ದೇಬಿ, ವೂಜಿ, ಕುಂಬಾರ, ಉಪ್ಪಾರ, ನೇಕಾರ, ವೇದ, ಎಣ್ಣೆ ತಯಾರಕರು.

**ಕೋಲಾರ ಶಾಸನ:** ಕ್ರಿ.ಶ.1404ರ ಕೋಲಾರ ಶಾಸನವು ಒಂದನೇ ದೇವರಾಯನು ನಾನಾದೇಶಿ ವ್ಯಾಪಾರ ಸಂಘಟನೆಯ ನಾಯಕನಾದ ಮಹಾದೇವ ಹರಿಯನು ಭೇಟಿಮಾಡಿದುದರ ಬಗ್ಗೆ ತಿಳಿಸುತ್ತದೆ.

**ನೆಲ್ಲೂರು ಶಾಸನ :** ಕ್ರಿ.ಶ.1364ರ ನೆಲ್ಲೂರಿನ ಶಾಸನವು ನೆಲ್ಲೂರಿನಲ್ಲಿ ಆಯೋಜನೆ ಮಾಡುತ್ತಿದ್ದ ಸಂತೆಗಳಲ್ಲಿ ವಿವಿದಡೆಗಳಿಂದ ವ್ಯಾಪಾರಿಗಳು ಬಂದು ವ್ಯಾಪಾರ ಮತ್ತು ವಾಣಿಜ್ಯ ಕೈಗೊಳ್ಳುತ್ತಿದುದರ ಬಗ್ಗೆ ಮಾಹಿತಿ ನೀಡುತ್ತದೆ.

**ಗುಂಡ್ಲುಪೇಟೆ ಶಾಸನ:** ಕೃಷ್ಣದೇವರಾಯನ ಕಾಲದ ಅಮರ ನಾಯಕನು ಮಗ್ಗ ಸುಂಕದಿಂದ ಬರುತ್ತಿದ್ದ ತೆರಿಗೆಯನ್ನು ದೇವಾಲಯಕ್ಕೆ ನೀಡಿದುದರ ಬಗ್ಗೆ ಉಲ್ಲೇಖವಿದೆ.

**ನಂಜನಗೂಡು ಶಾಸನ :** ಕ್ರಿ.ಶ.1490ರ ನಂಜನಗೂಡು ಶಾಸನವು ಎಣ್ಣೆಗಿರಣಿಗಳಿಂದ ಬಂದ ಹಣದಿಂದ ತಗಡೂರಿನ ಮೂಲನಾಥದೇವ ಮತ್ತು ಲಕ್ಷಿಕಾಂತದೇವರಿಗೆ ದಾನದತ್ತಿ ನಿಡುತ್ತಿದುದರ ಬಗ್ಗೆ ಉಲ್ಲೇಖಿಸುತ್ತದೆ.

**ಆ) ನಾಣ್ಯಶಾಸ್ತ್ರ**

ನಾಣ್ಯಗಳು ಮತ್ತು ನಾಣ್ಯವ್ಯವಸ್ಥೆ ವಿಜಯನಗರ ಸಾಮ್ರಾಜ್ಯದಲ್ಲಿನ ರಾಜಕೀಯ ಮತ್ತು ಸಾಂಸ್ಕೃತಿಕ ಬದುಕನ್ನು ತೋರಿಸುವ ಅಮೂಲ್ಯ ಆಧಾರಗಳಾಗಿವೆ. 'ಹನುಮಂತರಾಹಿ' ವರಹ

ಎಂಬ ನಾಣ್ಯವನ್ನು ಹನುಮಾನ್ ಚಿತ್ರದ ಮೂಲಕ ಸಂಗಮ ವಂಶದ ಸ್ಥಾಪಕ 1ನೇ ಹರಿಹರ ಮತ್ತು 1ನೇ ಬುಕ್ಕ ಟಂಕಿಸಿದ್ದರು. ದೇವರಾಯನ ಕಾಲದ ನಾಣ್ಯಗಳಲ್ಲಿ ಗಜಬೆಂಟೇಕಾರ ಎಂಬ ಅವನ ಬಿರುದನ್ನು ಕಾಣಬಹುದು. ಕೃಷ್ಣದೇವರಾಯನ ಕಾಲದಲ್ಲಿ ವೆಂಕಟೇನ, ಶಿವ, ಪಾರ್ವತಿ, ಬಾಲಕೃಷ್ಣ, ನಂದಿ, ಗರುಡ ಮುಂತಾದ ಅನೇಕ ದೇವರುಗಳ ಚಿತ್ರವಿರುವ ನಾಣ್ಯಗಳು ಮುದ್ರಣಗೊಂಡವು. ನಾಣ್ಯಗಳು ವಿಜಯನಗರ ಕಾಲದ ಧಾರ್ಮಿಕ ನಂಬಿಕೆಗಳನ್ನು ಕುರಿತು ಸಹ ತಿಳಿಸುತ್ತದೆ. ಹೆಚ್ಚಾಗಿ ಚಿನ್ನ ಮತ್ತು ತಾಮ್ರದ ನಾಣ್ಯಗಳು ವಿಜಯನಗರದ ಕಾಲದಲ್ಲಿ ಕಂಡುಬರುತ್ತದೆ. ಗದ್ಯಾಣ, ವರಹ, ಪಗೋಡ, ಪ್ರತಾಪ, ಮಾದ, ಕಟ, ಹಗ ಮುಂತಾದ ರೀತಿಯ ನಾಣ್ಯಗಳನ್ನು ವಿಜಯನಗರ ಕಾಲದಲ್ಲಿ ಕಾಣಬಹುದು. ಇವುಗಳು ವಿಜಯನಗರದ ಮೂಲ ಬೆಳವಣಿಗೆ ಹಾಗೂ ಅವನತಿಯ ಅಂಶಗಳನ್ನು ತಿಳಿಸುತ್ತವೆ.

**ಇ) ಸ್ಮಾರಕಗಳು:**

ವಿಜಯನಗರ ಸಾಮ್ರಾಜ್ಯದ ಕಾಲಾವಧಿಯಲ್ಲಿ ನಿರ್ಮಾಣವಾದಂತಹ ವಿವಿಧ ಸ್ಮಾರಕಗಳು ಹಾಗು ಅವುಗಳ ಮೇಲೆ ಆಗಿರುವಂತಹ ದಾಳಿಗಳು ಸಹ ವಿಜಯನಗರದ ಅವನತಿಯ ಬಗ್ಗೆ ಮಾಹಿತಿಯನ್ನು ನೀಡುತ್ತವೆ. ಹಂಪೆಯಲ್ಲಿರುವ ನೂರಾರು ದೇವಾಲಯಗಳು ಸ್ಮಾರಕಗಳು ವಿಜಯನಗರ ಅವನತಿಗೆ ಮೂಕ ಸಾಕ್ಷಿಯಂತೆ ಇರುವುದನ್ನು ನಾವು ಈಗಲೂ ಗಮನಿಸಬಹುದು. ಅದ್ದರಿಂದ ಅಂದಿನ ಕಾಲದ ಸ್ಮಾರಕಗಳು ಸಹ ಸಂಶೋಧನಾ ದೃಷ್ಟಿಯಿಂದ ಅಮೂಲ್ಯ ಆಧಾರಗಳಾಗಿವೆ.

ವಿಜಯನಗರ ಕಾಲದ ಶಾಸನಗಳು ಸಾಮಾನ್ಯವಾಗಿ ಕಲ್ಲಿನ ಮತ್ತು ತಾಮ್ರದ ಮೇಲೆ ಸಂಸ್ಕೃತ, ತಮಿಳು, ತೆಲುಗು ಮತ್ತು ಕನ್ನಡ ಭಾಷೆಗಳಲ್ಲಿ ಬರೆಯಲ್ಪಟ್ಟಿವೆ. ಈ ಶಾಸನಗಳು ಅಂದಿನ ಕಾಲದ ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ ಮತ್ತು ವ್ಯಾಪಾರ ವಾಣಿಜ್ಯದ ಬೆಳವಣಿಗೆಗೆ ಸಂಬಂಧಿಸಿದಂತೆ ಮಾಹಿತಿ ನೀಡುತ್ತವೆ. ಶಾಸನಗಳು ಸಾಮ್ರಾಜ್ಯದ ಸಾಮಾಜಿಕ ಜೀವನದ ಮೇಲೆ ಬೆಳಕು ಚೆಲ್ಲುತ್ತವೆ ಹಾಗೂ ಸಮಾಜದ ವಿಗಂಡನೆ, ಜಾತಿ, ಉಪಜಾತಿ, ಜನರ ಉದ್ಯೋಗ ಶಿಕ್ಷಣ, ಸ್ತ್ರೀಯರ ಸ್ಥಾನಮಾನ, ಧಾರ್ಮಿಕ ಆಚರಣೆಗಳು, ಹಬ್ಬಗಳು ಹಾಗೂ ವಿವಿಧ ರೀತಿಯ ಆಚಾರ ವಿಚಾರಗಳ ಬಗ್ಗೆ ಬೆಳಕು ಚೆಲ್ಲುತ್ತವೆ.

ಸಾಮಾನ್ಯವಾಗಿ ತಾಮ್ರದ ತಟ್ಟೆಯ ಮೇಲೆ ಬರೆದಿರುವ ಶಾಸನಗಳು ಅಗ್ರಹಾರಗಳಿಗೆ ದಾನ ನೀಡಿರುವ ಬಗ್ಗೆ ಮಾಹಿತಿ ನೀಡುತ್ತವೆ ಹಾಗೂ ಬ್ರಾಹ್ಮಣರಿಗೆ ಭೂಮಿದಾನ ಮಾಡಿರುವ

ವಿಚಾರಗಳನ್ನು ಸಹ ಒಳಗೊಂಡಿವೆ. ತಾಮ್ರದ ಶಾಸನಗಳು ತೆಲಗು, ತಮಿಳು ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿವೆ. ಇವು ಮೂರು, ನಾಲ್ಕು ಅಥವಾ ಐದು ತಟ್ಟೆಗಳನ್ನು ಒಳಗೊಂಡ ಶಾಸನಗಳಾಗಿವೆ. ಕಲ್ಲಿನ ಮೇಲೆ ಬರೆದಿರುವ ಶಾಸನಗಳು ದೇವಾಲಯಗಳಿಗೆ ದಾನ ನೀಡಿರುವ ಬಗ್ಗೆ ಮಾಹಿತಿ ನೀಡುತ್ತವೆ. ಇವು ರಾಜನಿಂದ ಅಧಿಕಾರಿಗಳಿಂದ ಅಥವಾ ಖಾಸಗಿ ವ್ಯಕ್ತಿಗಳಿಂದ ಹೊರಡಿಸಲ್ಪಟಿರಬಹುದು.

ಶಾಸನಗಳ ಆಳವಾದ ಮತ್ತು ವಿಸ್ತಾರವಾದ ಅಧ್ಯಯನವನ್ನು ಅವಿಶ್ರಾಂತವಾಗಿ ಕೈಗೊಂಡು ನಮ್ಮೆಲ್ಲರಿಗೂ ದಾರಿದೀಪವಾಗಿರುವ ಇಬ್ಬರು ಶಾಸನಶಾಸ್ತ್ರಜ್ಞರಾದ ಡಾ.ಫ್ಲೀಟ್ ಜೆ.ಎಫ್ ಮತ್ತು ಬಿ.ಎಲ್. ರೈಸ್ ಇವರನ್ನು ನಾವು ನೆನೆಯಲೇಬೇಕು. 12 ಸಂಪುಟಗಳ ಎಪಿಗ್ರಪಿಯಾ ಕರ್ನಾಟಕವು ಬಿ.ಎಲ್. ರೈಸ್‌ರಿಂದ ಪ್ರಕಟಗೊಂಡಿದ್ದು ಇದು ಸಂಶೋಧಕರಿಗೆ ಮಾರ್ಗದರ್ಶನವಾಗಿದೆ. ಮೈಸೂರು ಪುರಾತತ್ವ ಇಲಾಖೆಯ ವರದಿಗಳು (1906–1950), ಎಪಿಗ್ರಪಿಯಾ ಇಂಡಿಕಾ (1887 on words) ದಕ್ಷಿಣ ಭಾರತದ ಶಾಸನ ಸಂಪುಟಗಳ ಸಂಚಿಕೆ, **'ಕರ್ನಾಟಕ ಶಾಸನಗಳು'**, ಕರ್ನಾಟಕ ಸಂಶೋಧನ ಮಂಡಲಿ ಪ್ರಕಟಿಸಿರುವ ಐದು ಸಂಪುಟಗಳ ಸಂಚಿಕೆಗಳು ಇವೆಲ್ಲವೂ ಕರ್ನಾಟಕ ಮತ್ತು ದಕ್ಷಿಣ ಭಾರತಕ್ಕೆ ಸಂಬಂಧಿಸಿದ ಹಲವಾರು ಶಾಸನಗಳನ್ನು ಹೊಂದಿದೆ. ಇವು ಬಹಳಷ್ಟು ಮಾಹಿತಿಯನ್ನು ಒದಗಿಸುತ್ತವೆ. ಆಂಧ್ರಪ್ರದೇಶ ಸರ್ಕಾರ, ಮದ್ರಾಸ್ ಸರ್ಕಾರ ಮತ್ತು ತಿರುವಂಕೂರು ಸರ್ಕಾರಗಳು ಹಲವಾರು ಶಾಸನ ಸಂಪುಟಗಳನ್ನು ಪ್ರಕಟಿಸಿದ್ದು ಇವು ಹಲವಾರು ಸಂಚಿಕೆಗಳಲ್ಲಿ ಮತ್ತು ನಿಯತಕಾಲಿಕೆಗಳಲ್ಲಿ ಪ್ರಕಟಗೊಂಡಿವೆ. ರಾಯಲ್ ಏಷ್ಯಾಟಿಕ್ ಸೊಸೈಟಿಯು ಹಲವಾರು ಸಂಚಿಕೆಗಳನ್ನು ಪ್ರಕಟಿಸಿದ್ದು ಇದರೊಂದಿಗೆ ಭಾರತದ ಪ್ರಾಚೀನ ಪದಾರ್ಥ ಸಂಗ್ರಹಕಗಳಲ್ಲಿ ಪ್ರಕಟಗೊಂಡಿವೆ.

**2. ಸಾಹಿತ್ಯ ಆಧಾರಗಳು**

ಪುರಾತತ್ವ ಆಧಾರಗಳು ಕೇವಲ ಇತಿಹಾಸದ ಮೂಳೆಗಳಾಗಿದ್ದು ಸಾಹಿತ್ಯವು ರಕ್ತ ಮತ್ತು ಮಾಸಖಂಡಗಳಾಗಿವೆ. ಸಾಹಿತ್ಯವು ಇತಿಹಾಸವನ್ನು ಪುನರ್ ನಿರ್ಮಿಸಲು ಸಹಾಯಕವಾಗಿದೆ. ಸಾಹಿತ್ಯ ಆಧಾರಗಳು ನಮ್ಮ ಜ್ಞಾನವನ್ನು ಹಿಮ್ಮಡಿಗೊಳಿಸುತ್ತವೆ. ಐತಿಹಾಸಿಕ ಚಿತ್ರಣಗಳೊಂದಿಗೆ ಸಾಮಾಜಿಕ ಮತ್ತು ಧಾರ್ಮಿಕ ಅಂಶಗಳನ್ನು ಶಕ್ತಗೊಳಿಸುತ್ತವೆ. ಸಾಹಿತ್ಯ ಆಧಾರಗಳು ಎರಡು ವಿಧಗಳಾಗಿವೆ. ಮೊದಲ ವಿಧ ಕನ್ನಡ, ತಮಿಳು ಮತ್ತು ಸಂಸ್ಕೃತ ಆಧಾರಗಳಾಗಿವೆ. ಎರಡನೆಯ

ವಿಧ ಪರ್ಷಿಯನ್ ವಿದ್ವಾಂಸರು ಮತ್ತು ಕೆಲವು ಮುಸ್ಲಿಂ ಪ್ರವಾಸಿಗರು, ಯೂರೋಪ್ ದಾಖಲೆಗಳು ಮತ್ತು ಜೀವನ ಚರಿತ್ರೆಗಳಾಗಿವೆ.

ಮದ್ರಾಸ್ ವಿಶ್ವವಿದ್ಯಾನಿಲಯವು ಭಾರತದ ಸಾಹಿತ್ಯ ಆಧಾರಗಳಲ್ಲಿ ವಿಜಯನಗರ ಕಾಲದ ಆಧಾರಗಳನ್ನು ಎರಡು ಭಾಗಗಳಾಗಿ ವಿಂಗಡಿಸಿದೆ. ವಿಜಯನಗರ ಕಾಲದ ರಾಜರು ಅವರ ಪೂರ್ವಿಕರ ಕಾಲದ ಸಂವಿಧಾನವನ್ನು ಬಳಸಿದ್ದರು, ವಿಜಯನಗರ ಪೂರ್ವ ಕಾಲದ ದಾಖಲೆಗಳು ಕೂಡ ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯ ಬಗ್ಗೆ ಮಾಹಿತಿ ನೀಡುತ್ತವೆ. ಮಿತಾಕ್ಷರ, ಕೌಟಿಲ್ಯನ ಅರ್ಥಶಾಸ್ತ್ರ, ಮನುವಿನ ಧರ್ಮಶಾಸ್ತ್ರ ಮತ್ತು ಶುಕ್ರನೀತಿಗಳು ಮಾನವನ ವಿವಿಧ ಆಯಾಮಗಳನ್ನು ತಿಳಿಸುತ್ತವೆ. ಹಲವಾರು ಸಂಸ್ಕೃತ, ಕನ್ನಡ ಮತ್ತು ತೆಲಗು ದಾಖಲೆಗಳನ್ನು ಅಧ್ಯಯನ ಮಾಡುವ ಮೂಲಕ ವಿಜಯನಗರ ಕಾಲದ ಜನ ಜೀವನ ಮತ್ತು ಆಡಳಿತವನ್ನು ತಿಳಿಯಬಹುದಾಗಿದೆ.

ಒಂದನೇ ಬುಕ್ಕನ ಮಗ ಕಂಪಣ್ಣನ ಹೆಂಡತಿ ಗಂಗಾದೇವಿ ಸಂಸ್ಕೃತದಲ್ಲಿ ರಚಿಸಿರುವ ಮಧುರ ವಿಜಯಂ ಅಥವಾ ಕಂಪರಾಯ ಚರಿತಂ ಒಂದು ಪ್ರಮುಖ ದಾಖಲೆಯಾಗಿದೆ, ಇದು ಸಂಸ್ಕೃತ ಭಾಷೆಯ ಉತ್ತಮ ಕಾವ್ಯವಾಗಿದ್ದು ಇದರಲ್ಲಿ ಗಂಗಾದೇವಿಯ ತನ್ನ ಗಂಡನ ಸೈನಿಕ ಸಾಧನೆಗಳನ್ನು ವಿವರಿಸಿದ್ದಾಳೆ. ಇದು ಮನುಶಾಸ್ತ್ರದ ದಾಖಲೆಯಾಗಿದ್ದು ಇಂದಿಗೂ ದೊರೆಯುತ್ತದೆ. ಮಧುರ ವಿಜಯಂ ಎರಡು ಪ್ರಮುಖ ಘಟನೆಗಳ ಬಗ್ಗೆ ಮಾಹಿತಿ ನೀಡುತ್ತದೆ. ತೊಂಡೈಮಂಡಲಂನ ದೊರೆ ಸಂಭುವರಾಜನ ವಿನಾಶ, ಮದುರೈ ಸುಲ್ತಾನನ ವಿನಾಶ ಹಾಗೂ ಈ ಘಟನೆಗಳೊಂದಿಗೆ ಜನರ ಜೀವನಮಟ್ಟ, ಜಾತಿಪದ್ಧತಿ, ಅಭಿರುಚಿ, ಉದ್ಯೋಗ ಮತ್ತು ಮಹಿಳೆ ಹಾಗೂ ವಿವಿಧ ಸ್ಪರ್ಧೆಗಳ ಬಗ್ಗೆ ಮಾಹಿತಿ ನೀಡುತ್ತದೆ. ಗಂಗಾದೇವಿಯ ಆ ಕಾಲದ ಪ್ರಸಿದ್ಧ ಕವಯತ್ರಿಯಾಗಿದ್ದಳು.

ತಿರುಮಲಾಂಭ ಬರೆದಿರುವ ಚಂಪುಕಾವ್ಯವಾದ ಉರ್ದಾಂಬಿಕ ಪರಿಣಯಂ ಅಚ್ಯುತರಾಯ ಮತ್ತು ವರದಾಂಬಿಕಳ ಮದುವೆಯ ಬಗ್ಗೆ ಮಾಹಿತಿ ನೀಡುತ್ತದೆ. ತಿರುಮಲಾಂಭ ಸಂಸ್ಕೃತ ಸಾಹಿತ್ಯದಲ್ಲಿ ಅಪಾರವಾದ ಖ್ಯಾತಿಗಳಿಸಿದ್ದಳು. ಇವಳು ವಿಜಯನಗರದ ರಾಜ ಮನೆತನಕ್ಕೆ ಸೇರಿದವಳು ತಿರುಮಲಾಂಭೆ ಅಚ್ಚುತರಾಯನ ಮಡದಿಯಾಗಿದ್ದು, ಅವಳ ಸಾಹಿತ್ಯವು ಅಚ್ಚುತರಾಯನ ಆಸ್ಥಾನದಲ್ಲಿದ್ದ ಎಲ್ಲಾ ಕವಿಗಳಿಗಿಂತಲೂ ಹೆಚ್ಚು ಪ್ರಾಶಸ್ತ್ಯ ಪಡೆದಿದ್ದು ಎಲ್ಲರಿಂದ

ಹೊಗಳಿಕೆಯನ್ನು ಪಡೆದುಕೊಂಡಿತ್ತು. ಅವಳ ಸಾಹಿತ್ಯವು ಮುಖ್ಯವಾಗಿ ಆ ಕಾಲದ ಸಾಮಾಜಿಕ ಜೀವನದ ಬಗ್ಗೆ ಹೆಚ್ಚು ಮಾಹಿತಿ ನೀಡುತ್ತದೆ.

ಒಂದನೇ ಅಚ್ಚುತರಾಯನ ಅಳಿಯನಾದ ಶಾವ್ಯಂಬುವಿನ ಸೋದರನಾದ ಅಭಿರಾಮ ಕಾಮಾಕ್ಷಿ ರಚಿಸಿರುವ ಅಭಿನವ ರಾಮಭ್ಯುದಯ್ಯಂ ಕೃತಿಯು ರಾಮಾಯಣವನ್ನು ಕುರಿತು ತಿಳಿಸುತ್ತದೆ.

ಒರಿಯನ್ ರಾಜಕುಮಾರಿಯಾದ ತುಕ್ಕಳು ಕೃಷ್ಣದೇವರಾಯನ ಪತ್ನಿಯಾಗಿದ್ದಳು 'ತುಕ್ಕ-ಪಂಚಕಮ್' ಕೃತಿ ಅವಳಿಗೆ ಸೇರಿದದಾಗಿದೆ. ಕೃಷ್ಣದೇವರಾಯನ ಮಗಳು ಹಾಗೂ ಮೊಹನಾಂಗಿ ಎಂಬ ಹೆಸರನ್ನು ಉಹಿಸಲಾಗಿದ್ದು ಮತ್ತು ರಾಮರಾಯನ ಹೆಂಡತಿಯಾಗಿ ಉಪನಾಮವಾದ ತಿರುಮಲಾಂಭ ಎಂದು ಕರೆಯಲ್ಪಟ್ಟು ಇವಳು 'ಮಾರೀಚ ಪಾರಿಣಯಂ' ಎಂಬ ಪ್ರೇಮ ಕಥೆಯನ್ನು ಬರೆದಿದ್ದಾಳೆ.

ರಾಜನಾಥ ಡಿಂಡಿಮನು ಬರೆದಿರುವ ಅಚ್ಯುತರಾಯಭ್ಯುದಯಂ ಕೃತಿಯು ಐತಿಹಾಸಿಕ ಕಾವ್ಯವಾಗಿದ್ದು, ವಿಜಯನಗರ ಸಾಮ್ರಾಟನಾದ ಅಚ್ಚುತರಾಯನ ಆರಂಭಿಕ ಜೀವನ, ಜೀವನಕ್ರಮ ಮತ್ತು ಸಾಧನೆಗಳನ್ನು ತಿಳಿಸುತ್ತದೆ. ಇದು ಹನ್ನೆರಡು ಚರಣಗಳಲ್ಲಿರುವ ಕಾವ್ಯವಾಗಿದೆ.

ಸಾಯಣಚಾರ್ಯ ಮತ್ತು ಮಾಧವಾಚಾರ್ಯರಿಂದ ರಚಿತವಾಗಿರುವ ವೇದಾಂತ ಪ್ರಕಾಶ ರಾಜಕಾಲ ನಿರ್ಣಯ ಶೃಂಗೇರಿ ಜಗದ್ಗುರುಗಳ ಬಗ್ಗೆ ವಿವರಿಸುತ್ತದೆ. ಬಸವ ಭೂಪಾಲ ರಚಿಸಿರುವ ಶಿವತತ್ವ ರತ್ನಾಕರ ಎಂಬ ಕೃತಿಯ ಕೆಳದಿ ನಾಯಕರ ಮತ್ತು ವಿಜಯನಗರದ ನಡುವಿನ ಸಂಬಂಧದ ಬಗ್ಗೆ ತಿಳಿಸುತ್ತದೆ.

ಕೃಷ್ಣದೇವರಾಯನು ರಚಿಸಿರುವ ಜಾಂಬವತೀ ಕಲ್ಯಾಣ ವಿರೂಪಾಕ್ಷ ದೇವರ ಉತ್ಸವದ ವರ್ಣನೆ ಹೊಂದಿದೆ. ಇಂತಹ ಸಂಸ್ಕೃತ ಸಾಹಿತ್ಯದಲ್ಲಿ ಸಮಕಾಲೀನ ಸಮಾಜ ಪ್ರತಿಬಿಂಬವಾಗಿದ್ದು ಐತಿಹಾಸಿಕ ಸಂಗತಿಗಳನ್ನು ಸರಿಹೊಂದಿಸುವುದು.

**ಕನ್ನಡ ಸಾಹಿತ್ಯ:**

ವಿಜಯನಗರ ಸಾಮ್ರಾಜ್ಯದ ಆಡಳಿತಕ್ಕೆ ಸಂಬಂಧಿಸಿದಂತೆ ಹಲವಾರು ಕನ್ನಡ ಗ್ರಂಥಗಳು ರಚನೆಯಾಗಿವೆ. ಅವುಗಳಲ್ಲಿ ಮುಖ್ಯವಾದವುಗಳೆಂದರೆ.

ಬಸವಪುರಾಣವನ್ನು ಭೀಮ ಕವಿ ಭಾಷಾಂತರ ಗೊಳಿಸಿದ್ದನು ಇದು ಆ ಕಾಲದ ಪ್ರಮುಖ ಕೃತಿ, ಲಕ್ಕಣದಂಡೇಶನ –ಶಿವತತ್ವ ಚಿಂತಾಮಣಿ ಇದೊಂದು ವೇದಾಂತ ಕೃತಿಯಾಗಿದೆ. ಚಾಮರಸನು ಬರೆದಿರುವ ಪ್ರಭುಂಗಲೀಲೆ ಬಹಳಷ್ಟು ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ.

**ಕುಮಾರ ರಾಮನ ಕತೆ:** ಶೈವ ಕವಿ ನಂಜುಂಡ ಬರೆದಿರುವ ಈ ಕೃತಿಯು ಬಹಳಷ್ಟು ಪ್ರಾಮುಖ್ಯ ತೆಗಳಿಸಿಕೊಂಡಿದ್ದು, ಕುಮಾರರಾಮನು ಈ ಕೃತಿಯ ಕಥಾನಾಯಕನಾಗಿದ್ದಾನೆ. ಕುಮಾರರಾಮನು ಪೌರುಷ ಮತ್ತು ಶೌರ್ಯಗಳಿಗೆ ಹೆಸರಾದವನು ಅವನು ಅತಿ ಚಿಕ್ಕವಯಸ್ಸಿನಲ್ಲೆ ಮುಸ್ಲಿಮರ ವಿರುದ್ಧ ದಾಳಿನಡೆಸಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೆ ತಳಹದಿ ಹಾಕಿದುದರ ಬಗ್ಗೆ ಮಾಹಿತಿ ನೀಡುತ್ತದೆ.

**ಕೆಳದಿನೃಪವಿಜಯ:** ಕವಿ ಲಿಂಗಣ್ಣನು ಚಂಪೂ ಕಾವ್ಯ ಶೈಲಿಯಲ್ಲಿ ಈ ಗ್ರಂಥ ಬರೆದಿದ್ದಾನೆ. ಇದು ವಿಜಯನಗರ ಸಾಮ್ರಾಜ್ಯದ ಮೂಲಕ್ಕೆ ಸಂಬಂಧಿಸಿದಂತೆ ಹಲವು ಘಟನೆಗಳನ್ನು ವಿವರಿಸುತ್ತದೆ.

**ಶಿವತತ್ವ ಚಿಂತಾಮಣಿ:** 2ನೇ ದೇವರಾಯನ ದಂಡನಾಯಕ ಮತ್ತು ಮಂತ್ರಿಯಾದ ಲಕ್ಕಣದಂಡೇಶನು 1428ರಲ್ಲಿ ಈ ಕೃತಿ ರಚಿಸಿದ್ದಾನೆ. ಇದು 2200 ಕ್ಕು ಹೆಚ್ಚು ಪದ್ಯಗಳುಳ್ಳ ಕೃತಿಯಾಗಿದ್ದು ಅಂದಿನ ಧಾರ್ಮಿಕ ಪರಿಸ್ಥಿತಿ ಮೇಲೆ ಬೆಳಕು ಚೆಲ್ಲುತ್ತದೆ.

**ತೆಲಗು ಸಾಹಿತ್ಯ:** ವಿಜಯನಗರ ಇತಿಹಾಸದ ಸಾಹಿತ್ಯಿಕ ಮೂಲಗಳಲ್ಲಿ ಶ್ರೇಷ್ಠ ಕೃತಿ ಕೃಷ್ಣದೇವರಾಯನು ಬರೆದಿರುವ ಅಮುಕ್ತ ಮೌಲ್ಯದ. ಈ ಕೃತಿಯು ಆಡಳಿತ ಸಿದ್ಧಾಂತಗಳ ಮೇಲೆ, ರಾಜಕೀಯದ ಮೇಲೆ, ಹಾಗೂ ಕೃಷ್ಣದೇವರಾಯನ ದಿನಚರಿಯನ್ನು ಕುರಿತು ಸಮಗ್ರ ಮಾಹಿತಿ ನೀಡುತ್ತದೆ.

ಜೈಮಿನಿ ಭಾರತಂ ಎಂಬ ಕೃತಿಯ ಪಿನ್ನ ವೀರ ಭದ್ರನಿಂದ ರಚಿಸಲ್ಪಟ್ಟಿದ್ದು. ಈ ಗ್ರಂಥ ವಿಜಯನಗರದ ಸಾಳ್ವ ನರಸಿಂಹನ ಸಾಧನೆ ಬಗ್ಗೆ ತಿಳಿಸುತ್ತದೆ. ನರಸಿಂಹನ ಬಿರುದು, ಅವನು ತೆಲಗು ದೇಶವನ್ನು ಗೆದ್ದ ವಿಚಾರ, ಒರಿಸ್ಸಾದ ರಾಜಧಾನಿ ಕಿತ್ತುಕೊಂಡ ಬಗ್ಗೆ ಮಾಹಿತಿ ನೀಡುತ್ತದೆ.

**ಪಾರಿಜಾತಾಪಹರಣಂ:** ಕೃಷ್ಣದೇವರಾಯನ ಆಸ್ಥಾನ ಕವಿ ನಂದಿತಿಮ್ಮಣ್ಣ ರಚಿಸಿದ್ದು, ರಾಯನ ಕುಟುಂಬ ಮತ್ತು ಅವನ ದಂಡೆಯಾತ್ರೆಗಳ ಬಗೆಗೆ ವಿವರಿಸುವ ಉಪಯುಕ್ತ ಗ್ರಂಥವಾಗಿದೆ.

ದೇವರಾಯನು ನಾನಾ ಭಾಗಗಳಿಂದ ವಿದ್ವಾಂಸರನ್ನು ಕವಿಗಳನ್ನು ಕರೆಸಿ, ಗೌರವಿಸಿ, ಬಂಗಾರ ವಜ್ರ ವೈಡೂರ್ಯಗಳನ್ನು ವಿದ್ವಾಂಸರಿಗೆ ಹಂಚಿದ ವಿಚಾರ ಈ ಗ್ರಂಥದಿಂದ ತಿಳಿಯುತ್ತದೆ.

**ಮನುಚರಿತ್ರೆ:** ಅಲ್ಲಸಾನಿ ಪೆದ್ದಣನ ಈ ಗ್ರಂಥ ಕೃಷ್ಣದೇವರಾಯನ ಮರಣದ ನಂತರ ವಿಜಯನಗರದ ಗಡಿಭಾಗದ ಗಜಪತಿಯ ದಾಳಿಯನ್ನು ತಿಳಿಸುತ್ತದೆ.

**ಶ್ರೀ ಕೃಷ್ಣದೇವರಾಯನ ದಿನಚರಿ:** ಇದೊಂದು ತಾಳೆಗರಿ ಹಸ್ತಪ್ರತಿಯಾಗಿದ್ದು ವಿಜಯನಗರದ ರಾಜ ಕೃಷ್ಣದೇವರಾಯನ (ಕ್ರಿ.ಶ.1509–1529) ಪ್ರತಿನಿತ್ಯದ ದಿನಚರಿಯನ್ನು ಸೂಚಿಸುತ್ತದೆ. ಇದನ್ನು ಮೊಕ್ಕತಿಮ್ಮಯ್ಯ ಮತ್ತು ಮಾದಯ್ಯನವರ ಮಲ್ಲಯ್ಯ ಇವರುಗಳು ದಾಖಲಿಸಿರುವುದಾಗಿ ಹೇಳಲಾಗಿದೆ. ಇದನ್ನು 63 ತಾಳೆಗರಿಗಳ ಎರಡು ಬದಿಗಳಲ್ಲಿ ಬರೆಯಲಾಗಿದೆ. ಪ್ರತಿ ತಾಳೆಗರಿಗೆ ಸಂಖ್ಯೆಗಳನ್ನು ನೀಡಲಾಗಿದೆ. ಇದು ಕನ್ನಡ ಭಾಷೆಯಲ್ಲಿದ್ದು ಲಿಪಿಯು ಬಹುಶಃ ಕ್ರಿ.ಶ. 10ನೇ ಶತಮಾನದ್ದಾಗಿದೆ.

**ಕೈಪಿಯತ್ ಮತ್ತು ಬಖೈರುಗಳು**

ವಿಜಯನಗರ ದಾಖಲೆಗಳ ಸಾಲಿನಲ್ಲಿ ಬರುವ ಆಧಾರಗಳಲ್ಲಿ ಕೈಪಿಯತ್ತು ಮತ್ತು ಬಖೈರ್‌ಗಳು ಪ್ರಮುಖವಾಗಿವೆ. ಇವು ಅಂದಿನ ಜನಜೀವನ, ಸರ್ಕಾರದ ನಡವಳಿಕೆ, ರಾಜರ ವರದಿ ಇವುಗಳನ್ನು ಹೇಗೆ ಬರಹಕ್ಕೆ ಇಳಿಸುತ್ತಿದ್ದರು ಎಂಬುದನ್ನು ಸೂಚಿಸುತ್ತವೆ. ಈ ದಾಖಲೆಗಳನ್ನು ಬರೆದವರು ಸಾಮಾನ್ಯ ಅಧಿಕಾರಿಗಳು.

ಕೈಪಿಯತ್ತು ಎಂದರೆ ಹೇಳಿಕೆ, ವಿವರಣೆ ಎಂದರ್ಥ, ಇವು ಸ್ಥಳ ಪುರಾಣ, ಜನಜನಿತ ಕಲ್ಪಿತ ವಿಷಯಗಳನ್ನೊಳಗೊಂಡ ಬರಹಗಳಾಗಿವೆ. ಕರ್ನಲ್ ಮೆಕಂಜಿ, ದಕ್ಷಿಣ ಭಾರತದಲ್ಲಿ ಸಂಚರಿಸಿ ಇಂತಹ 2070 ಕೈಪಿಯತ್ತುಗಳನ್ನು ಸಂಗ್ರಹಿಸಿದ್ದಾನೆ. ವಿಜಯನಗರಕ್ಕೆ ಸಂಬಂಧ ಪಟ್ಟಂತೆ ಶೃಂಗೇರಿ ಮಠದ ಕೈಪಿಯತ್ತು ಕಂಪ್ಲಿ ತಾಲ್ಲೂಕಿನ ಕೈಪಿಯತ್ತು, ಸಂಡೂರು ಕೈಪಿಯತ್ತು ಮುಖ್ಯವಾದವು.

ರಾಜಮಹಾರಾಜರು ತಮ್ಮ ಆಸ್ಥಾನದಲ್ಲಿ ರಾಯಭಾರಿಗಳನ್ನು ಇಟ್ಟುಕೊಳ್ಳುತ್ತಿದ್ದರು. ಆಯಾ ರಾಜ್ಯದ ರಾಯಭಾರಿಗಳು ಇಲ್ಲಿಯ ರಾಜಕೀಯ ಸ್ಥಿತಿ ಕುರಿತು ತಮ್ಮ ರಾಜರಿಗೆ ಪತ್ರ ಬರೆಯುತ್ತಿದ್ದರು ಈ ಪತ್ರಗಳಿಗೆ ಬಖೈರು ಎಂದು ಹೆಸರಾಗಿದೆ. ರಾಮರಾಯನ ಬಖೈರು ವಿಜಯನಗರಕ್ಕೆ ಸಂಬಂದಪಟ್ಟ ಉತ್ತಮ ಪತ್ರವಾಗಿದೆ. ಈ ಬಖೈರ್‌ನಲ್ಲಿ ಸೈನಿಕರ ಸಂಖ್ಯೆ

ಸಾಮಂತರ, ದಂಡನಾಯಕರ ಹೆಸರು, ವಿಜಯನಗರ ರಾಮರಾಯನಿಗೆ ಮತ್ತು ಬಹುಮನಿ ಸುಲ್ತಾನನಿಗೆ ನಡೆದ ಯುದ್ಧ ತಾಳಿಕೋಟೆಯಲ್ಲಲ್ಲ, ರಕ್ಕಸಗಿ–ತಂಗಡಗಿ ಎಂಬ ಹಳ್ಳಿಯಲ್ಲಿ ಎಂಬ ವಿಷಯ ತಿಳಿಸುತ್ತದೆ. ಹಾಗೆಯೇ ರಾಮರಾಯ ಯುದ್ಧಕ್ಕೆ ಹೊರಡುವಾಗ ಅವನ ತಾಯಿ ಜೀವಿಸಿದ್ದು, ರಾಮರಾಯ ಭೇಟಿ ಮಾಡಿದಾಗ ಹರಸಿ ದೇವರನ್ನು ಪ್ರಾರ್ಥಿಸಿ, ಜಯಿಸಿಬಾರಪ್ಪ ಎಂದು ಹೇಳಿದ ವಿಷಯ ರಾಮರಾಯನ ಬಖೈರ್‌ನಿಂದ ತಿಳಿಯುತ್ತದೆ.

ಕೈಫಿಯತ್ತುಗಳು ಸಾಮಾನ್ಯವಾಗಿ ಸಂಸ್ಥಾನ, ಮಠ, ಸ್ಥಳಗಳ ಬಗ್ಗೆ ಇದ್ದರೆ ಬಖೈರುಗಳ ಬಗ್ಗೆ ಹೆಚ್ಚು ಕೆಲಸ ನಡೆದಿಲ್ಲ. ಕರ್ನಲ್ ಮೆಕೆಂಜಿ ತಮ್ಮ ಸರ್ಕಾರಿ ಕೆಲಸದೊಂದಿಗೆ ಹಲವಾರು ಕೈಫಿಯತ್ತುಗಳನ್ನು ಸಂಗ್ರಹಿಸಿದ್ದಾರೆ. ಇವು ಮದರಾಸಿನ ಓರಿಯಂಟಲ್ ಲೈಬರಿಯಲ್ಲಿವೆ. ಇವುಗಳಲ್ಲಿ ಐತಿಹಾಸಿಕ ವಿಷಯಗಳು ಸಾಕಷ್ಟು ಅಡಕವಾಗಿವೆ.

ಕರ್ನಲ್ ಮೆಕೆಂಜಿಯು ಮಧ್ಯಕಾಲಿನ ಇತಿಹಾಸದ ಆಧಾರ ವಸ್ತುವಾಗಿ ಪ್ರಾಚೀನ ದಾಖಲೆಗಳ ಪ್ರಾಮುಖ್ಯತೆಯನ್ನು ಎತ್ತಿ ಹಿಡಿದಿದ್ದಾನೆ ಅವನ ಗುಮಾಸ್ತರು ಜಿಲ್ಲೆಗಳಲೆಲ್ಲಾ ಸುತ್ತುತ್ತಿದ್ದರು ಹಾಗೂ ಗ್ರಾಮಲೆಕ್ಕಿಗರುಗಳ, ಬಳಿಯಿದ್ದ ಕವಿಲೆಗಳು ಅಥವಾ ದಂಡಗಳನ್ನು ಸಂಗ್ರಹಿಸುತ್ತಿದ್ದರು.

**ವಿದೇಶೀಯರ ಬರವಣಿಗೆಗಳು**

14 ಮತ್ತು 15 ನೇ ಶತಮಾನದಲ್ಲಿ ಭಾರತಕ್ಕೆ ಬಂದ ಅನೇಕ ವಿದೇಶಿ ಪ್ರವಾಸಿಗರು ವಿಜಯನಗರದ ವೈಭವವನ್ನು ಕಣ್ಣಾರೆ ಕಂಡು, ಕೇಳಿ ತಮ್ಮ ಅಭಿಪ್ರಾಯಗಳನ್ನು ಬರವಣಿಗೆ ರೂಪದಲ್ಲಿ ಬಿಟ್ಟುಹೋಗಿದ್ದಾರೆ. ಇವು ವಿಜಯನಗರದ ಇತಿಹಾಸ ರಚಿಸಲು ಸಾಕಷ್ಟು ಸಹಕಾರಿಯಾಗಿವೆ.

**ನಿಕೋಲೊಕೌಂಟಿ:** ಇಟಲಿ ಪ್ರವಾಸಿಯಾದ ಇವನು 1420ರಲ್ಲಿ ವಿಜಯನಗರಕ್ಕೆ ಭೇಟಿ ನೀಡಿ ಇಲ್ಲಿಯ ಸಂಪತ್ತು, ಆಡಳಿತ, ಸಾಮಾಜಿಕ, ಆರ್ಥಿಕ ಸ್ಥಿತಿಯ ಬಗ್ಗೆ ವಿವರಣೆ ನೀಡಿದ್ದಾನೆ. 1ನೇ ದೇವರಾಯನ ಕಾಲದಲ್ಲಿ ಬಂದ ಇವನು ಅಂದು ರಾಜಧಾನಿ 60 ಮೈಲಿ ಸುತ್ತಳತೆ ಹೊಂದಿದ್ದು, ಕೋಟೆಗಳಿಂದ ಕೂಡಿತ್ತು, ಇಲ್ಲಿ 90,000 ಶಶಾಸ್ತ್ರ ಪ್ರವೀಣರಿದ್ದು, ಅಂತಃಪುರದಲ್ಲಿ 12,000 ವನಿತೆಯರಿದ್ದು, ರಾಜ್ಯದಲ್ಲಿ ಪ್ರತಿವರ್ಷ 3 ದೊಡ್ಡ ಹಬ್ಬಗಳು ಆಚರಿಸುತ್ತಿದ್ದರು. ಇಲ್ಲಿನ ವಿವಾಹ,

ಸಂಪ್ರದಾಯ, ಸಂಗೀತ, ನೃತ್ಯ ಮೊದಲಾದ ಸಾಮಾಜಿಕ ಪದ್ಧತಿಗಳನ್ನು ವರ್ಣಿಸಿದ್ದಾನೆ. ಗೊಲ್ಕೊಂಡದಲ್ಲಿ ವಜ್ರದ ಗಣಿಗಳಿದ್ದ ಮಾಹಿತಿ ನೀಡುತ್ತಾನೆ.

**ಅಬ್ದುಲ್ ರಜಾಕ್:** ಪರ್ಷಿಯಾದ ರಾಯಭಾರಿಯಾಗಿ 1443 ರಲ್ಲಿ ವಿಜಯನಗರಕ್ಕೆ ಭೇಟಿ ನೀಡಿದ ಇವನು ವಿಜಯನಗರದ ವಿಸ್ತೀರ್ಣ, ಸಂಪತ್ತು ಆಡಳಿತದ ಬಗ್ಗೆ ಮಾಹಿತಿ ನೀಡುತ್ತಾನೆ. ವಿಜಯನಗರ ಬಂಗಾಳದಿಂದ ಸಿಲೋನ್‌ವರೆಗೂ ಹಬ್ಬಿದ್ದು ಸುಮಾರು 300 ಬಂದರುಗಳು, 11 ಲಕ್ಷ ಸೈನಿಕರು ಇದ್ದರೆಂದು, ವಿಜಯನಗರದಂತಹ ನಗರವನ್ನು ಕಣ್ಣು ಕಂಡಿಲ್ಲ, ಕಿವಿ ಕೇಳಿಲ್ಲವೆಂದು ತಿಳಿಸಿದ್ದಾನೆ. ಈ ನಗರ 7 ಸುತ್ತಿನ ಕೋಟೆಯಿಂದ ಆವರಿಸಿದ್ದು ವ್ಯಾಪಾರಿಗಳು ಮುತ್ತು ರತ್ನ, ವಜ್ರ ವೈಡೂರ್ಯವನ್ನು ಅಂಗಡಿ ಬೀದಿಗಳಲ್ಲಿ ಮಾರುತ್ತಿದ್ದರೆಂದು 2ನೇ ದೇವರಾಯನನ್ನು ಕಣ್ಣಾರೆ ನೋಡಿದ್ದು, ಅವನ ಆಸ್ಥಾನದ ದರ್ಭಾರು, ಮಹಾನವಮಿ ಹಬ್ಬದ ಬಗ್ಗೆ ವರ್ಣಿಸಿದ್ದಾನೆ. ಆನೆ ಹಿಡಿಯುವ ವಿಧಾನ, ವೇಶ್ಯವಾಟಿಕೆಯ ಬಗ್ಗೆ, ವ್ಯಾಪಾರ ವಾಣಿಜ್ಯ, ಆಹಾರ, ಉಡುಪು, ಆಭರಣಗಳ ಬಗ್ಗೆಯೂ ವಿವರಿಸಿದ್ದಾನೆ.

**ಬಾರ್ಬೋಸಾ:** ಕ್ರಿ.ಶ. 1500 –1516 ರವರೆಗೆ ಭಾರತದಲ್ಲಿದ್ದ ಪೋರ್ಚುಗಲ್ ಪ್ರವಾಸಿಯಾದ ಇವನು ಕೃಷ್ಣದೇವರಾಯನಲ್ಲಿ ಆಶ್ರಯ ಪಡೆದಿದ್ದನು. ಇಲ್ಲಿಯ ಅಮದು–ರಫ್ತು, ವ್ಯಾಪಾರ, ಬಂದರುಗಳು, ಸಾಮಾಜಿಕ ಪದ್ಧತಿಗಳನ್ನು ವಿವರಿಸಿರುವನು. ಭೂಮಿಯ ಫಲವತ್ತತೆಯ ಬಗ್ಗೆ ತಿಳಿಸುತ್ತಾ ಭೂಮಿ ಬಹಳ ಫಲವತ್ತತೆಯಿಂದ ಕೂಡಿದ್ದು, ಬಣ್ಣದ ಕೈಗಾರಿಕೆ, ಸಕ್ಕರೆ ಕೈಗಾರಿಕೆ ಮತ್ತು ಬೆಲೆಯ ಬಗ್ಗೆ ವಿವರಿಸುತ್ತಾನೆ. ಸ್ತ್ರೀಯರ ಸ್ಥಾನಮಾನ, ಸತಿಪದ್ಧತಿ, ವೇಶ್ಯವಾಟಿಕೆ, ಜನರ ಆಹಾರ, ಉಡುಪು ವಿಚಾರಗಳನ್ನು ತಿಳಿಸುತ್ತಾನೆ. ದೇಶಿಯರು, ವಿದೇಶಿಯರು, ಅಸಂಖ್ಯಾತ ವ್ಯಾಪಾರಿಗಳು ಶ್ರೀಮಂತರು ಇದ್ದು, ಹೆಚ್ಚು ವ್ಯಾಪಾರ ನಡೆಯುತ್ತಿತ್ತೆಂದು ವಿವರಿಸುತ್ತಾನೆ.

**ಡೋಮಿಂಗೋ ಪಯಾಸ್:** ಪೋರ್ಚುಗೀಸ್ ಪ್ರವಾಸಿಯಾದ ಇವನು ಕ್ರಿ.ಶ.1522ರಲ್ಲಿ ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರಕ್ಕೆ ಬಂದಿದ್ದ. ವಿಜಯನಗರದ ಜನಸಂಖ್ಯೆ ಹೇಳಲಾಸಾಧ್ಯವೆಂದು, ತಾನು ನೋಡಿದ ವಿಜಯನಗರದ ಭಾಗ ಇಡೀ ರೋಮ್ ನಗರದಷ್ಟಿತ್ತೆಂದು ವರ್ಣಿಸಿದ್ದಾನೆ. ಸಾಮ್ರಾಜ್ಯದ ಗ್ರಾಮ ಪಟ್ಟಣಗಳು ಹಾಗೂ ಸಾಮಾಜಿಕ ಸ್ಥಿತಿಯನ್ನು ವಿವರಿಸಿದ್ದಾನೆ. ಇವನು ಕೃಷ್ಣದೇವರಾಯನನ್ನು ವರ್ಣಿಸುತ್ತಾ ಕೃಷ್ಣದೇವರಾಯ ಸುಮಾರು ಎತ್ತರವಾಗಿದ್ದು, ಕಪ್ಪು ಬಣ್ಣದವನಾಗಿದ್ದು ಮುಖದ ಎಡಭಾಗದಲ್ಲಿ ಕಪ್ಪು ಮಚ್ಚೆ ಇತ್ತು ಎಂದು ಹೇಳಿದ್ದಾನೆ. ಪಯಾಸ್ ಪೇಟೆಗಳಲ್ಲಿ ಮುತ್ತು ರತ್ನಗಳನ್ನು ಮಾರಾಟ ಮಾಡುತ್ತಿದ್ದರೆಂದು

ಪ್ರತಿ ಸಂಜೆ ಜನರು ಸಂತೋಷ ಕೂಟಗಳಲ್ಲಿ ಭಾಗವಹಿಸುತ್ತಿದ್ದು, ಕಿತ್ತಳೆ, ದ್ರಾಕ್ಷಿ, ನಿಂಬೆ ಹಣ್ಣಿನರಸ ಕುಡಿಯುತ್ತಿದ್ದು, ಹಂದಿ, ಹಸಿ ಮತ್ತು ಒಣಗಿದ ಮೀನನ್ನು ಶುಕ್ರವಾರದ ಸಂತೆಯಲ್ಲಿ ಮಾರಾಟ ಮಾಡುತ್ತಿದ್ದರು. ಸಾಮ್ರಾಜ್ಯದಲ್ಲಿ ಗೋಧಿ, ಬಾರ್ಲಿ ದವಸಧಾನ್ಯ ಹೆಸರುಕಾಳು, ಹುರಳಿ ಮುಂತಾದ ಕಾಳುಗಳನ್ನು ಕಡಿಮೆ ಬೆಲೆಗೆ ಮಾರಾಟ ಮಾಡಲಾಗುತ್ತಿತ್ತು. ಮಹಾನವಮಿ ಹಬ್ಬವನ್ನು ಸಂಭ್ರಮದಿಂದ ಆಚರಿಸುತ್ತಿದ್ದು, ರಾಯ ತನ್ನ ಶಕ್ತಿ ಪ್ರದರ್ಶನಕ್ಕಾಗಿ ಸೈನ್ಯ ಪ್ರದರ್ಶನ ಕಾರ್ಯಕ್ರಮ ಹಾಕಿಕೊಳ್ಳುತ್ತಿದ್ದ ಎಂದು ತಿಳಿಸಿದ್ದಾನೆ.

**ನ್ಯೂನಿಚ್:** ಕ್ರಿ.ಶ.1536–37 ರಲ್ಲಿ ಅಚ್ಚುತರಾಯನ ಕಾಲದಲ್ಲಿ ವಿಜಯನಗರಕ್ಕೆ ಭೇಟಿ ನೀಡಿದ್ದ ಇವನು ಅಚ್ಚುತರಾಯನ ಕಾಲದ ಪರಿಸ್ಥಿತಿ, ಹೊಸ ಪೇಟೆಯಲ್ಲಿ ಕೃಷ್ಣದೇವರಾಯ 4700 ಹೆಜ್ಜೆ ಉದ್ದ 40 ಹೆಜ್ಜೆ ಅಗಲ ಇರುವ ರಸ್ತೆ ಮಾಡಿಸಿದನೆಂದು ಹಾಗೂ 1520 ರಲ್ಲಿ ಇಸ್ಮಾಯಿಲ್ ಆದಿಲ್ ಷಾ ಮತ್ತು ಕೃಷ್ಣದೇವರಾಯನಿಗು ನಡೆದ ರಾಯಚೂರು ಯುದ್ಧದ ಬಗ್ಗೆ ಅದ್ಬುತವಾಗಿ ಬರೆದಿದ್ದಾನೆ. ರಾಯಚೂರು ನಗರದ ವಿವರಣೆ ತಿಳಿಯಲು ಈತನ ಬರವಣಿಗೆ ಸಹಾಯಕ ವಾಗಿದೆ.

**ಸೀಜರ್ ಪೆಡರಿಕ್:** ವೆನಿಸ್ ನವನಾದ ಇವನು 1567 ರಲ್ಲಿ ಭೇಟಿ ನೀಡಿದ್ದು ವಿಜಯನರ ಸಂಪೂರ್ಣ ನಾಶವಾಗಿದೆ ಎಂದೇಳಲಾರೆ, ಈಗಲೂ ಅಲ್ಲಿ ಮನೆಗಳಿವೆ. ಆದರೆ ಜನ ವಾಸಿಸುತ್ತಿಲ್ಲ ಎಂದು ತಾಳಿಕೋಟೆ ಕದನದ ವಿವರಣೆ ನೀಡುತ್ತಾನೆ.

**ನಿಕಟಿನ್:** ರಷ್ಯಾದವನಾದ ಕ್ರಿ.ಶ.1480 ರಲ್ಲಿ ವಿರೂಪಾಕ್ಷನ ಆಡಳಿತ ಅವಧಿಯಲ್ಲಿ ಭೇಟಿ ನೀಡಿದ್ದನು. ಇವನು ವಿಜಯನಗರ ಮತ್ತು ಬಹುಮನಿ ರಾಜ್ಯಗಳೊಡನೆ ಆಗಾಗ್ಗೆ ನಡೆಯುತ್ತಿದ್ದ ಕದನಗಳು ಹಾಗೂ ವ್ಯವಸಾಯದ ಬಗ್ಗೆ ವಿವರಿಸಿದ್ದಾನೆ. ಸಾಮ್ರಾಜ್ಯದಲ್ಲಿ ಸಾಕಷ್ಟು ಭೂಮಿ ಇದ್ದರೂ ಜನ ಜೀವನ ಕಷ್ಟವಾಗಿತ್ತೆಂದು ವಿವರಿಸಿದ್ದಾನೆ.

ಪ್ರವಾಸಿಗರ ಮನಸ್ಸನು ಸೆಳೆದ ಮತ್ತೊಂದು ವಸ್ತುವೆಂದರೆ ಅಂತಃಪುರ ಇದನ್ನು ವಿಜಯನಗರ ಸಾಮ್ರಾಟರು ಜೋಪಾನ ಮಾಡುತ್ತಿದ್ದರು ಪ್ರಿಯಾಟ್ರೋ ಡೆಲ್ಲಾ–ವೆಲ್ಲಾ ಎಂಬ ಇಟಲಿಯ ಪ್ರವಾಸಿಗನು ಕೆಳದಿ ರಾಜಧಾನಿಯ ಪ್ರವಾಸ ಮಾಡಿದನು ಮತ್ತು ತೀರ ಪ್ರದೇಶದಲ್ಲಿನ ಇಕ್ಕೇರಿ ಹಾಗೂ ಇತರ ಸ್ಥಳಗಳಿಗೆ ಭೇಟಿನೀಡಿದನು ಇವನು ಸಮಾಜದ ಪದ್ಧತಿಗಳು ಮತ್ತು ಜನರ ನಡೆ ನುಡಿಗಳ ಬಗ್ಗೆ ಆಕರ್ಷಕವಾದ ವರ್ಣನೆಯನ್ನು ನೀಡಿದ್ದಾನೆ.

**1.6 ಇದುವರೆವಿಗೂ ನಡೆದಿರುವ ಅಧ್ಯಯನದ ಚರ್ಚೆ:**

ಯಾವುದೇ ವಿಷಯದ ಸಂಶೋಧನೆಯಲ್ಲಿ ಪ್ರಾಥಮಿಕ ಆಧಾರಗಳು ಪ್ರಮುಖವಾಗಿದ್ದು ಅವುಗಳನ್ನು ಹೊರತುಪಡಿಸಿ ಸಂಶೋಧನಗೆ ಯಾವುದೇ ರೀತಿಯ ಮಾನ್ಯತೆ ದೊರೆಯುವುದಿಲ್ಲ ಹಾಗೂ ಪ್ರಾಥಮಿಕ ಆಧಾರ ರಹಿತ ಸಂಶೋಧನೆಯು ಪ್ರಮಾಣಬದ್ದವೂ ಆಗಿರುವುದಿಲ್ಲ. ಹಾಗಾಗಿ ಯಾವುದೇ ವಿಷಯ ಸಂಶೋಧನೆಯಲ್ಲಿ ಪ್ರಾಥಮಿಕ ಆಧಾರಗಳು ಬಹುಮುಖ್ಯ ಎನಿಸುತ್ತವೆ. ನನ್ನ ಸಂಶೋಧನೆಗೆ ಪೂರಕವಾಗಿ ಕೆಲವೊಂದು ಪ್ರಮುಖ ವಿಜಯನಗರ ಕಾಲಕ್ಕೆ ಸಂಬಂಧಿಸಿದ ಗ್ರಂಥಗಳ ಅಧ್ಯಯನ ಕೈಗೊಂಡು ಮಹಾಪ್ರಬಂಧವನ್ನು ರಚಿಸಲಾಗಿದೆ.

ಮೈಸೂರು ಒಡೆಯರ ಆಸ್ಥಾನದಲ್ಲಿ ಬ್ರಿಟಿಷರ ರೆಸಿಡೆಂಟನಾಗಿದ್ದ ಮಾರ್ಕ್ ವಿಲ್ಕ್ಸನು 1810 ರಲ್ಲಿ ಕರ್ನಾಟಕದ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಪ್ರಯತ್ನಮಾಡಿದನು. ಇದರೊಂದಿಗೆ ಸಂಶೋಧಕರ ಗಮನವನ್ನು ಈ ವಿಷಯದ ಮೇಲೆ ಕೇಂದ್ರಿಕರಿಸುವಂತೆ ಮಾಡಿದನು. ಮತ್ತೊಬ್ಬ ಬ್ರಿಟಿಷ್ ಅಧಿಕಾರಿಯಾದ ಕರ್ನಲ್ ಮೆಕಂಜಿಯು 1815 ರಲ್ಲಿ ಈ ವಿಷಯದ ಮೇಲೆ ಬೆಳಕು ಚೆಲ್ಲಿದನು. ದಕ್ಷಿಣ ಭಾರತದ ಇತಿಹಾಸವನ್ನು ಪುನರ್ ರಚಿಸಲು ಅವಶ್ಯಕವಾಗಿರುವಂತಹ ಹಲವಾರು ಪ್ರಾಥಮಿಕ ಆಕರಗಳಾದ ಶಾಸನಗಳು, ಗ್ರಂಥಗಳು, ದಾಖಲೆಗಳನ್ನು ಪತ್ತೆಮಾಡಿದನು. ಬರ್ಟನ್ ಸ್ಟೇನಿನ ಪ್ರಕಾರ ವಿಜಯನಗರ ಕಾಲದ ಅರಸರು ನೇರವಾಗಿ ತಮ್ಮ ಬರವಣಿಗೆಯ ಮೂಲಕ ಐತಿಹಾಸಿಕ ದಾಖಲೆಗಳನ್ನು ನಿರ್ಮಾಣ ಮಾಡಿದ್ದಾರೆ ಇದರೊಂದಿಗೆ ತಮ್ಮದೆಯಾದ ಇತಿಹಾಸವನ್ನು ರಚಿಸಿದ್ದಾರೆ ಎಂಬುದು ಮೆಕೆಂಜ್ ಸಂಗ್ರಹಸಿರುವ ದಾಖಲೆಗಳಿಂದ ತಿಳಿಯಬಹುದಾಗಿದೆ.

ಕ್ರಿ.ಶ.1900 ರಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಕುರಿತು ರಾಬರ್ಟ್ ಸಿವೆಲ್‌ರವರು ರಚಿಸಿರುವ 'ಮರೆತು ಹೋದ ಮಹಾ ಸಾಮ್ರಾಜ್ಯ' ಪ್ರಮುಖವಾದುದಾಗಿದೆ. ಈ ಗ್ರಂಥವನ್ನು ರಚಿಸಲು ಸಿವೆಲ್‌ರವರು ವಿಜಯನಗರ ಸ್ಮಾರಕಗಳು ಸಾಹಿತ್ಯ ಮತ್ತು ವಿವಿಧ ಇತರೆ ದಾಖಲೆಗಳನ್ನು ಬಳಸಿಕೊಂಡಿದ್ದಾರೆ. ವಿಜಯನಗರದ ಅರಸರ ಕಾಲದ ರಾಜಕೀಯ ಮತ್ತು ಸಾಂಸ್ಕೃತಿಕ ಸಾಧನೆಗಳನ್ನು ಚಿತ್ರಿಸುವ ಪ್ರಯತ್ನವನ್ನು ಮಾಡಿದ್ದಾರೆ. ಈ ಎಲ್ಲ ಅಂಶಗಳನ್ನು ದಾಖಲಿಸಲು ಸಿವೆಲ್‌ನು ಆ ಕಾಲದಲ್ಲಿ ಭಾರತಕ್ಕೆ ಭೇಟಿ ನೀಡಿದ್ದ ವಿದೇಶಿಗರ ನಂಬಲಾರ್ಹ ದಾಖಲೆಗಳನ್ನು ಬಳಸಿಕೊಂಡಿದ್ದಾರೆ. ಸಿವೆಲ್‌ನ ಬರವಣಿಗೆಯು ಇತ್ತೀಚಿನ ದಿನಗಳಲ್ಲಿ ಸಾಕಷ್ಟು ಟೀಕೆಗೆ ಇತಿಹಾಸಕಾರದಿಂದ ಒಳಗಾಗಿದ್ದು ಸಿವೆಲನು ಹಿಂದೂ ಮತ್ತು ಮುಸ್ಲಿಮರ ನಡುವೆ

ದ್ವೇಷದ ಬೀಜ ಬಿತ್ತುವ ಕೆಲಸ ಮಾಡಿದನೆಂದು ಹೇಳಲಾಗಿದೆ. ಬರ್ಟನ್ ಸ್ಟೇನಿನ ಪ್ರಕಾರ ಬ್ರಿಟಿಷರು ಅಂದರೆ (ಮಾರ್ಕ್‌ವಿಲ್ಸ್, ಕರ್ನಲ್‌ಮೆಕೆಂಜಿ ಮತ್ತು ರಾಬರ್ಟ್ ಸಿವೆಲ್) ಭಾರತದ ಇತಿಹಾಸವನ್ನು ಪರಿಚಯಿಸುವ ಪ್ರಯತ್ನಿಸಿದರು ಕಾರಣ ಇತಿಹಾಸವನ್ನು ಪೂರ್ತಿ ತಿಳಿಸುವುದಕ್ಕಲ್ಲ, ಆದರೆ ವಿಷಯ ಪರಿಣಿತರನ್ನು ನಿಯಂತ್ರಿಸುವುದಕ್ಕಾಗಿ, ಹಾಗೂ ಬ್ರಿಟಿಷರ ಅಧಿಕಾರವನ್ನು ಶಾಶ್ವತಕರಿಸಲು".

ಎಸ್.ಕೃಷ್ಣಸ್ವಾಮಿ ಅಯ್ಯಂಗಾರ್‌ರವರು ರಾಬರ್ಟ್ ಸಿವೆಲ್ ನ ನಂತರ ಈ ಕ್ಷೇತ್ರದಲ್ಲಿ ಅಪಾರವಾದ ಸೇವೆ ಸಲ್ಲಿಸಿದವರು. ಅವರು ತಮ್ಮ ಸ್ನಾತಕೋತ್ತರ ಪದವಿಯನ್ನು ಮುಗಿಸಿದ ನಂತರ 1897ರಲ್ಲಿ ಬೆಂಗಳೂರಿನ ಕಾಲೇಜಿನಲ್ಲಿ ಒಂದು ದಶಕಗಳ ಕಾಲ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದರು. 1914ರಲ್ಲಿ ಮದ್ರಾಸ್ ವಿಶ್ವವಿದ್ಯಾನಿಲಯ ಪ್ರಾರಂಭಿಸಿದ ಇತಿಹಾಸ ಮತ್ತು ಪುರಾತತ್ವಶಾಸ್ತ್ರ ವಿಭಾಗದ ಮುಖ್ಯಸ್ಥರಾಗಿ ನೇಮಕಗೊಂಡರು. ರಾಬರ್ಟ್ ಸಿವೆಲ್‌ರು ರಚಿಸಿದ ಎಲ್ಲಾ ದಾಖಲೆಗಳನ್ನು ಓದಿದ ತರುವಾಯ 1920ರ ಮಧ್ಯಭಾಗದಲ್ಲಿ ವಿಜಯನಗರ ಸಾಮ್ರಾಜ್ಯದ ಮೇಲೆ ಹಲವಾರು ಲೇಖನಗಳನ್ನು ಬರೆದು ಪ್ರಕಟಿಸಿದರು. ಇವರು ಸಿವೆಲ್ ಮತ್ತು ಇತರ ಯೂರೋಪಿಯನ್ನರ ಕಲೆ ಮತ್ತು ಸಾಹಿತ್ಯವನ್ನು ಎರಡು ವಿಶೇಷ ಮಾರ್ಗಗಳಲ್ಲಿ ವಿವರಿಸಿದ್ದಾರೆ. ಒಂದು ವಿಜಯನಗರ ಸ್ಥಾಪನೆ ಮಾಡುವಲ್ಲಿ ಹೇಗೆ ಹಿಂದೂ ಮತ್ತು ಮುಸ್ಲಿಮರ ನಡುವಿನ ಘರ್ಷಣೆ ಕಾರಣವಾಯಿತು. ಪ್ರಾಚೀನ ಭಾರತ 1911 ಮತ್ತು ದಕ್ಷಿಣಭಾರತದ ಮೇಲೆ ಮುಸ್ಲಿಮರ ದಾಳಿ 1921 ಗ್ರಂಥಗಳು ಬಹಳಷ್ಟು ವಿಚಾರಗಳನ್ನು ಕುರಿತು ಮಾಹಿತಿ ನೀಡುತ್ತವೆ.

ಮತ್ತೊಂದು ಪ್ರಮುಖ ಬೆಳವಣಿಗೆ ಎಂದರೆ ಪ್ರಾದೇಶಿಕ ರಾಷ್ಟ್ರೀಯತೆ ಹೇಗೆ ಮದ್ರಾಸ್ ಪ್ರೆಸಿಡೆನ್ಸಿ ಭಾಗಗಳಲ್ಲಿ ಮುಖ್ಯವಾಗಿ ಕರ್ನಾಟಕ ಮತ್ತು ಆಂಧ್ರಭಾಗಗಳಲ್ಲಿ ಬೆಳವಣಿಗೆ ಹೊಂದಿತ್ತೆಂದು ತಿಳಿಸಿದ್ದಾರೆ. 1930ರ ಸಂದರ್ಭದಲ್ಲಿ ಯುವ ಸಂಶೋಧಕರಾದ ಬಿ.ಎ ಸಾಲತೊರೆಯವರು ಕರ್ನಾಟಕ ಇತಿಹಾಸದ ಮೇಲೆ ಹಾಗೂ ಎನ್ ವೆಂಕಟರಮಣಯ್ಯರವರು ಆಂಧಪ್ರದೇಶದ ಇತಿಹಾಸದ ಮೇಲೆ ಆಸಕ್ತಿ ಹೊಂದಿರುವುದರೊಂದಿಗೆ ಕೃಷ್ಣಸ್ವಾಮಿ ಅಯ್ಯಂಗಾರ ರವರ ಸಾಹಿತ್ಯ ಆಧಾರಗಳನ್ನು ಒಪ್ಪಿರುತ್ತಾರೆ. ಬಿ.ಎ ಸಾಲತೊರೆಯವರು 1934ರಲ್ಲಿ ಬರೆದ 'ವಿಜಯನಗರ ಸಾಮ್ರಾಜ್ಯದ ಸಾಮಾಜಿಕ ಮತ್ತು ರಾಜಕೀಯ ಜೀವನ' ಎಂಬ ಗ್ರಂಥದಲ್ಲಿ ವಿಜಯನಗರ ಸ್ಥಾಪನೆ ಕರ್ನಾಟಕದಿಂದಾಗಿದೆ ಎಂದು ತೋರಿಸುವ ಪ್ರಯತ್ನಮಾಡಿದ್ದಾರೆ. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗಲು ಮುಖ್ಯಕಾರಣ ದಕ್ಷಿಣಭಾರತದಲ್ಲಿ ಹಿಂದೂ ಧರ್ಮವನ್ನು ಮುಸ್ಲಿಮರಿಂದ ರಕ್ಷಿಸಿಕೊಳ್ಳಲು.

ಎನ್.ವೆಂಕಟರಮಣ್ಣಯ್ಯನವರು ಸಾಲತೊರೆಯವರ ವಾದಕ್ಕೆ ವಿರುದ್ದವಾಗಿ ವಿಜಯನಗರ ಸ್ಥಾಪಿಸಿದ ಸಂಗಮ ಸಹೋದರರು ಕರ್ನಾಟಕದವರಲ್ಲ ಅವರು ಆಂಧ್ರದವರೆಂದು ಪ್ರತಿಪಾದಿಸಿದ್ದಾರೆ. ವೆಂಕಟರಮಣಯ್ಯನವರ ಎರಡು ಪ್ರಮುಖ ಕೃತಿಗಳಾದ 'ವಿಜಯನಗರದ ಉಗಮ ನಗರ ಮತ್ತು ಸಾಮ್ರಾಜ್ಯ' (1933) ಮತ್ತು 'ವಿಜಯನಗರದ ಮೂರನೇ ಸಾಮ್ರಾಜ್ಯದ ಅಧ್ಯಯನ (1935) ಗ್ರಂಥದಲ್ಲಿ ಸಂಗಮನ ಮಕ್ಕಳಾದ ಹರಿಹರ ಮತ್ತು ಬುಕ್ಕರು ಓರಂಗಲ್ಲಿನ ಕಾಕತೀಯ ಅರಸ ಪ್ರತಾಪರುದ್ರನ ಅಧಿಕಾರಿಗಳಾಗಿದ್ದರು. ದೆಹಲಿಯ ಸುಲ್ತಾನ ಮಹಮ್ಮದ್ ಬಿನ್ ತುಘಲಕ್ ಕಾಕತೀಯರನ್ನು ಸೋಲಿಸಿ ಓರಂಗಲ್ಲನ್ನು ಆಕ್ರಮಿಸಿ ಅದರ ಆಳ್ವಿಕೆಯನ್ನು ನೋಡಿಕೊಳ್ಳಲು ಮಲ್ಲಿಕ್ ಮಾಕ್ಬೂಲನನ್ನು ನೇಮಿಸಿ, ಹರಿಹರ ಮತ್ತು ಬುಕ್ಕರನ್ನು ಸೆರೆಹಿಡಿದು ದೆಹಲಿಗೆ ಕಳುಹಿಸಿಲಾಯಿತು. ಅವರು ಮತಾಂತರವಾಗಿ ಸುಲ್ತಾನನಿಗೆ ನಿಷ್ಠೆಯಿಂದ ಸೇವೆ ಸಲ್ಲಿಸಿದರು. ಇದರಿಂದ ಸಂತೋಷಗೊಂಡ ಸುಲ್ತಾನನು ಕಂಪಿಲ ಪ್ರದೇಶದಲ್ಲಿ ದಂಗೆ ನಡೆದಾಗ ಅವರಿಬ್ಬರನ್ನು ಅಲ್ಲಿನ ಆಡಳಿತ ನೋಡಿಕೊಳ್ಳಲು ಕಳುಹಿಸಿದನು. ಆದರೆ ಅವನು ಪುನಃ ಹಿಂದೂ ಧರ್ಮವನ್ನು ಸ್ವೀಕರಿಸಿ ಸ್ವತಂತ್ರವಾದ ಸಾಮ್ರಾಜ್ಯವನ್ನು ಕಟ್ಟಿದರು.

ಕೆಲವು ಮುಸ್ಲಿಂ ಸಮಕಾಲೀನ ಬರಹಗಾರರು ಇದೇ ಕಥೆಯನ್ನು ವಿಭಿನ್ನವಾಗಿ ತಿಳಿಸುತ್ತಾರೆ. ತೆಲುಗು ಮೂಲವನ್ನು ಕೆ.ಎ.ಎನ್ ಶಾಸ್ತ್ರೀಯವರು ಹಾಗೂ ವೆಂಕಟರಮಣಯ್ಯರವರು ಮತ್ತಷ್ಟು ಸಮರ್ಥಿಸುತ್ತಾರೆ. ಕಾಕತೀಯರು ವರಹ ಲಾಂಛನವನ್ನು ಧರಿಸಿದ್ದರು ಹಾಗೂ ನಾಯಕರ ಆಡಳಿತ ವ್ಯವಸ್ಥೆಯನ್ನು ರೂಪಿಸಿದ್ದರು. ಇವೆರಡನ್ನು ಹರಿಹರ ಮತ್ತು ಬುಕ್ಕರು ಅಳವಡಿಸಿಕೊಂಡಿದ್ದರೆಂದು ತಮ್ಮ **"Further source of vijayanagar"** ಕೃತಿಯಲ್ಲಿ ತಿಳಿಸುತ್ತಾರೆ. ಇದಕ್ಕೆ ಬೆಂಬಲವಾಗಿ ನೆಲ್ಲೂರು ಜಿಲ್ಲೆಯ ಕನಿಗಿರಿ ತಾಲ್ಲೂಕಿನ ಗೋಜಲವೀಡು ಶಾಸನವನ್ನು ಉದ್ದರಿಸುತ್ತಾರೆ. ಈ ಶಾಸನದ ಕಾಲ ಕ್ರಿ.ಶ.1314 ಎಂದು ಅವರು ಭಾವಿಸಿದ್ದಾರೆ.

ಕ್ರಿ.ಶ.1940ರ ನಂತರ ಯುರೋಪಿನ ಇತಿಹಾಸಕಾರರು ವಿಜಯನಗರ ಸಾಮ್ರಾಜ್ಯದ ಬರವಣಿಗೆಗೆ ಸಂಬಂಧಿಸಿದಂತೆ ಹಲವಾರು ಬದಲಾವಣೆಗಳನ್ನು ಮಾಡಿದರು. ಕೃಷ್ಣಸ್ವಾಮಿ ಅಯ್ಯಂಗಾರ್ ಮತ್ತು ಹೆನ್ರಿಹೆರಾಸ್ ರವರು ವಿಜಯನಗರ ಇತಿಹಾಸ ಬರೆಯುವಲ್ಲಿ ವಿಜಯನಗರ ಸಾಮ್ರಾಜ್ಯವು ಮುಸ್ಲಿಮರ ವಿರುದ್ದ ಹಿಂದೂ ಧರ್ಮದ ರಕ್ಷಣೆಗೆ ರಚನೆಯಾದ

ಸಾಮ್ರಾಜ್ಯವೆಂದು ಹೇಳಿದ್ದಾರೆ. ಬಿ.ವಿ.ಸಾಲತೊರೆ ಮತ್ತು ಎನ್.ವೆಂಕಟರಮಣಯ್ಯರವರು ಕರ್ನಾಟಕ ಮತ್ತು ಆಂಧ್ರ ಭಾಗಗಳಲ್ಲಿ ಸಾಮ್ರಾಜ್ಯದ ಬೆಳವಣಿಗೆಯ ಬಗ್ಗೆ ವಿವರಿಸಿದ್ದಾರೆ.

ಮತ್ತೊಂದು ಮಹತ್ವವಾದ ವಿಜಯನಗರ ಸಾಮ್ರಾಜ್ಯದ ಮೇಲಿನ ಬರವಣಿಗೆ ಎಂದರೆ ಅದು ಟಿ.ವಿ.ಮಹಾಲಿಂಗುರವರ ಬರವಣಿಗೆ, ಇವರು ತಮ್ಮ ಕೃತಿ 'ವಿಜಯನಗರ ಕಾಲದ ಆಡಳಿತಾತ್ಮಕ ಮತ್ತು ಆರ್ಥಿಕ ಇತಿಹಾಸ, ಇದರ ಪ್ರಮುಖ ಭಾಗಗಳಾದ 1940, 1951 ಮತ್ತು 1955 ಪ್ರಕಟವಾದ ಕೃತಿಯಲ್ಲಿ ವಿಜಯನಗರ ಸಾಮ್ರಾಜ್ಯದ ಮೇಲೆ ಮಹತ್ತರವಾದ ಬೆಳಕನ್ನು ಚೆಲ್ಲುತ್ತದೆ. ಟಿ.ವಿ.ಮಹಾಲಿಂಗಂ ರವರು ಮುಖ್ಯವಾಗಿ ತಮಿಳುನಾಡಿನಲ್ಲಿ ಉಳಿಗಮಾನ್ಯ ಪದ್ಧತಿಯ ಹುಟ್ಟು ಬೆಳವಣಿಗೆ ದಕ್ಷಿಣ ಭಾರತದಲ್ಲಿ ಇದರ ಸ್ಥಾನಮಾನವನ್ನು ಕುರಿತು ಚರ್ಚಿಸುತ್ತಾರೆ. ಮಧ್ಯಕಾಲಿನ ದಕ್ಷಿಣ ಭಾರತದ ಇತಿಹಾಸದಲ್ಲಿ ವಿಜಯನಗರ ಕಾಲದಲ್ಲಿ ಉಳಿಗಮಾನ್ಯ ಪದ್ಧತಿಯ ಬೆಳವಣಿಗೆ ಕುರಿತು 'ದಕ್ಷಿಣ ಭಾರತದ ರಾಜಕೀಯ' ಎಂಬ ಗ್ರಂಥದಲ್ಲಿ ವಿವರಿಸಿದ್ದಾರೆ.

ಕೃಷ್ಣಸ್ವಾಮಿ ಅಯ್ಯಂಗಾರ್‌ರವರ ನಂತರ ವಿಜಯನಗರ ಸಾಮ್ರಾಜ್ಯದ ಮೇಲೆ ಅತಿಹೆಚ್ಚು ಬೆಳಕನ್ನು ಚೆಲ್ಲಿ ಇತಿಹಾಸ ರಚಿಸಿದ ಇತಿಹಾಸಕಾರರೆಂದರೆ ಕೆ.ಎ.ನೀಲಕಂಠಶಾಸ್ತ್ರೀ. ಇವರು ಕೃಷ್ಣಸ್ವಾಮಿ ಅಯ್ಯಂಗಾರ್ ರವರು ಮದ್ರಾಸ್ ವಿಶ್ವವಿದ್ಯಾನಿಲಯದಲ್ಲಿ ಸೇವೆ ಸಲ್ಲಿಸುತ್ತಿದ್ದರು. ಕೆ.ಎ.ನೀಲಕಂಠ ಶಾಸ್ತ್ರೀಯವರು 'Further sources of Vijayanagara history' ಎಂಬ ಗ್ರಂಥವನ್ನು ಮೂರು ಸಂಪುಟಗಳಲ್ಲಿ 1946ರಲ್ಲಿ ಪ್ರಕಟಿಸಿದರು. ದಕ್ಷಿಣ ಭಾರತದ ಇತಿಹಾಸ ಎಂಬ ಗ್ರಂಥವನ್ನು 1955ರಲ್ಲಿ ಪ್ರಕಟಿಸಿದರು. ನೀಲಕಂಠ ಶಾಸ್ತ್ರೀಯವರ ಪ್ರಕಾರ ವಿಜಯನಗರ ಪೂರ್ಣವಾಗಿ ಕೇಂದ್ರಿಕೃತವಾಗಿರಲಿಲ್ಲ, ಕಾರಣ ಮುಸ್ಲಿಮರ ದಾಳಿಗಳಿಂದ ಪೂರ್ಣವಾಗಿ ಕೇಂದ್ರಿಕರಣವಾಗುವಲ್ಲಿ ವಿಫಲವಾಯಿತು.

ಬರ್ಟನ್ ಸ್ಟೇನ್ ರವರು The New Cambridge History of India, Vijayanagar" ಎಂಬ ಗ್ರಂಥದಲ್ಲಿ ಕೃಷಿಗೆ ಸಂಬಂಧಿಸಿದ ಭೂಹಿಡುವಳಿಗಳ ಬಗ್ಗೆ ಉಳಿಗಮಾನ್ಯ ಪದ್ಧತಿಯ ಬಗ್ಗೆ ವಿಫಲವಾದ ಮಾಹಿತಿಯನ್ನು ನೀಡುತ್ತಾರೆ.

ರಾಬರ್ಟ್ ಸಿವೆಲ್ ರವರು ರಚಿಸಿರುವ ಮರೆತು ಹೋದ ಮಹಾಸಾಮ್ರಾಜ್ಯ ಎಂಬ ಕೃತಿಯ ಹಲವಾರು ಮಾಹಿತಿಗಳನ್ನು ನೀಡುತ್ತದೆ. ಬಳ್ಳಾರಿಯ ಬ್ರಿಟಿಷ್ ಅಧಿಕಾರಿಯಾಗಿ

ನೇಮಕಗೊಂಡ ಸಿವೆಲ್‌ರವರು ಹಂಪಿ ಮತ್ತು ಸುತ್ತಮುತ್ತಲ ಪ್ರದೇಶದಲ್ಲಿ ವ್ಯಾಪಾಕ ಸಂಶೋಧನೆ ಕೈಗೊಂಡು ಈ ಪುಸ್ತಕ ರಚನೆ ಮಾಡುತ್ತಾರೆ. ಇದು ವಿಜಯನಗರ ಇತಿಹಾಸಕ್ಕೆ ಸಂಬಂಧಿಸಿದಂತೆ ರಚನೆಯಾದ ಪ್ರಥಮ ಪುಸ್ತಕ ಎಂಬ ಹೆಮ್ಮಗೆ ಪಾತ್ರವಾಗಿದೆ. ಇದರಲ್ಲಿ ರಾಬರ್ಟ್ ಸಿವೆಲ್‌ರವರು ವಿಜಯನಗರದ ಉಗಮ, ಬೆಳವಣಿಗೆ, ಕೀರ್ತಿ ವಿಶಾಲಸಾಮ್ರಾಜ್ಯ, ಆಡಳಿತ, ಯುದ್ಧಗಳು, ಅವನತಿ ಮುಂತಾದ ವಿಚಾರಗಳ ಬಗ್ಗೆ ದೀರ್ಘವಾಗಿ ಚರ್ಚಿಸಿದ್ದಾರೆ. ರಾಬರ್ಟ್ ಸಿವೆಲ್ ರವರ ಮತ್ತೊಂದು ಗ್ರಂಥವಾದ 'The historical incriptions of southern India' ಎಂಬ ಗ್ರಂಥವು ಮಹತ್ತರವಾದ ವಿಚಾರಗಳ ಬಗ್ಗೆ ಮಾಹಿತಿ ನೀಡುತ್ತದೆ.

ವಿಜಯನಗರ ಸಾಮ್ರಾಜ್ಯದ ಮೇಲೆ ಬೆಳಕು ಚೆಲ್ಲುವಲ್ಲಿ ಪಿ.ಬಿ.ದೇಸಾಯಿ ಯವರ ಬರವಣಿಗೆಗಳು ಹೆಚ್ಚು ಪ್ರಾಮುಖ್ಯತೆ ಪಡೆದುಕೊಂಡಿವೆ. ಇವರ ಪ್ರಮುಖ ಕೃತಿಯಾದ ಕರ್ನಾಟಕದ ಇತಿಹಾಸ 1974 ಈ ಕೃತಿಯಲ್ಲಿ ಪಿ.ಬಿ.ದೇಸಾಯಿಯವರು ವಿಜಯನಗರ ಸಾಮ್ರಾಜ್ಯದ ಹುಟ್ಟು, ಬೆಳವಣಿಗೆ, ರಾಜಕೀಯ, ಆಡಳಿತ, ಮುಂತಾದ ವಿಚಾರಗಳ ಬಗ್ಗೆ ಮಾಹಿತಿಯನ್ನು ನೀಡುತ್ತಾರೆ.

1. Krishnaswamy Aiyangar; Source of Vijayanagara History, University of Madras, 1919.
2. K.A. Neelakanta Shastri; Further Sources of Vijayanagara History, Venkataramanayya, Madras 1946.

ಕೃಷ್ಣಸ್ವಾಮಿ ಅಯ್ಯಂಗಾರ್‌ರವರ Source of Vijayanagara History ಎಂದು ಪುಸ್ತಕವು ವಿಜಯನಗರ ಇತಿಹಾಸವನ್ನು ಆಧಾರಗಳ ಸಹಿತವಾಗಿ ಕೂಲಂಕುಷವಾಗಿ ಅಧ್ಯಯನ ಮಾಡಿರುತ್ತದೆ. ಈ ಪುಸ್ತಕದಲ್ಲಿ ವಿಜಯನಗರ ಮೂಲದ ಬಗ್ಗೆ ದೀರ್ಘ ಚರ್ಚೆ ನಡೆದಿರುವುದು ಕಂಡುಬರುತ್ತದೆ. 1323ರಲ್ಲಿ ಕಾಕತೀಯರ ಪತನ ಅದರೊಂದಿಗೆ 1327ರಲ್ಲಿ ಕಪಿಲ ರಾಜ್ಯದ ನಾಶದಿಂದ ಮುಸ್ಲಿಮರ ದಾಳಿಗಳಿಗೆ ಹೊಯ್ಸಳರ ರಾಜ್ಯ ತುತ್ತಾಯಿತು. ಹೊಯ್ಸಳ ಅರಸ ಬಲ್ಲಾಳನು ಇಳಿ ವಯಸ್ಸಿನಲ್ಲಿದ್ದರೂ ಉತ್ತರದ ಮುಸ್ಲಿಂ ದಾಳಿಗಳನ್ನು ಎದುರಿಸಲು ಸನ್ನದ್ಧನಾದ ಅವನಲ್ಲಿದ್ದ ದೂರದೃಷ್ಟಿ ಜಾಗೃತವಾಯಿತು. ವಿಶಾಲವಾದ ರಾಜ್ಯದಲ್ಲಿ ಅವನು ಹೋರಾಡುವುದು ಕಷ್ಟವಾಯಿತು. ಈ ವೇಳೆಗಾಗಲೇ ಬಲ್ಲಾಳನು 70ರ ಪ್ರಾಯದಲ್ಲಿದ್ದನು. ಆಂಧ್ರದಲ್ಲಿ ರೆಡ್ಡಿ ಜನಾಂಗದ ಪ್ರೋಲನಾಯಕ ಮತ್ತು ಕಾಪನಾಯಕರು ಅವನಿಂದ ಸ್ಫೂರ್ತಿ ಪಡೆದು ಮುಸ್ಲಿಂ

ದಾಳಿಗಳನ್ನು ಎದುರಿಸ ತೊಡಗಿದರು. ಬಲ್ಲಾಳನೇ ಸ್ವತಃ ದಕ್ಷಿಣದಲ್ಲಿ ಮಧುರೆಯ ಸುಲ್ತಾನನ ಕ್ರೂರ ದಬ್ಬಾಳಿಕೆಯ ವಿರುದ್ಧ ಹೋರಾಡ ಬೇಕಾಗಿತ್ತು. ಅದೇ ಸಮಯದಲ್ಲಿ ಉತ್ತರದ ಗಡಿಗಳನ್ನು ರಕ್ಷಿಸಬೇಕಾಗಿತ್ತು. ಅವುಗಳ ರಕ್ಷಣೆಯನ್ನು ಬಲ್ಲಪ್ಪ ದಣ್ಣಾಯಕ, ಹರಿಹರ ಮುಂತಾದವರಿಗೆ ವಹಿಸಿದ ಬಲ್ಲಪ್ಪ ದಣ್ಣಾಯಕನು ಬಲ್ಲಾಳನ ಸೋದರಳಿಯ ಹಾಗೂ ಹರಿಹರನ ಅಳಿಯನು ಹೌದು ಅವರಿಬ್ಬರ ನಡುವೆ ಹಗೆತನವಿತ್ತು ಮತ್ತು ಹೋರಾಟ ನಡೆಯಿತು ಎಂದು ತೀರ್ಮಾನಿಸುವ ಆಂಧ್ರದ ಇತಿಹಾಸ ಪಂಡಿತರ ವಾದಗಳು ನಿರರ್ತಕವಾದದು ಎಂದು ಕೃಷ್ಣಸ್ವಾಮಿ ಅಯ್ಯಂಗಾರ್ ತಿಳಿಸುತ್ತಾರೆ.

ವಿಶಾಲವಾಗಿ ಪ್ರಸರಿಸಿದ್ದ ಹೊಯ್ಸಳ ರಾಜ್ಯವನ್ನು ಸಂರಕ್ಷಿಸುವುದು ಬಲ್ಲಾಳನಿಗೆ ಕಷ್ಟವೇ ಆಗಿತ್ತು. ಅವನ ಏಕಮಾತ್ರ ಪುತ್ರ ವಿರೂಪಾಕ್ಷ 4ನೇ ಬಲ್ಲಾಳ ಅವನ ಉತ್ತರಾಧಿಕಾರಿ ಯಾಗುವನಾದರೂ ಹಂಪಿ ಪ್ರದೇಶದಿಂದಲೇ ಬಲ್ಲಾಳನು ಅಲ್ಲಿನ ಗಡಿಗಳನ್ನು ರಕ್ಷಿಸುವ ಹೊಣೆಯನ್ನು ತನ್ನ ನಿಷ್ಠಾವಂತ ಅಧಿಕಾರಿಕಾದ ಹರಿಹರನಿಗೆ ವಹಿಸಿದ. ಇವನ ತನ್ನ ಹೊಣೆಗಾರಕೆಯನ್ನು ಅತ್ಯಂತ ಸಮರ್ಪಕವಾಗಿಯೇ ನಿರ್ವಹಿಸಿದ.

ಇವನನ್ನು ಶಾಸನದಲ್ಲಿ ಹರಿಯಪ್ರೊಡೆಯ, ಮಂಡಲೇಶ್ವರ ಎಂದೆಲ್ಲ ವರ್ಣಿಸಿರುವುದರಿಂದ ಇವನು ಹಂತಹಂತವಾಗಿ ಮೇಲೆರಿರುವುದು ಗೋಚರಿಸುತ್ತದೆ ಎಂದು ಕೃಷ್ಣಸ್ವಾಮಿ ಅಯ್ಯಂಗಾರ್ ರವರು ತಿಳಿಸುತ್ತಾರೆ. ಹೀಗೆ ಹಂತ ಹಂತವಾಗಿ ಮೇಲೆರಿದ ಹರಿಹರನು ಕ್ರಿ.ಶ. 1336ರ ಸುಮಾರಿನಲ್ಲಿ ವಿದ್ಯಾರಣ್ಯರ ಕೃಪಾಕಾಟಾಕ್ಷದಿಂದಲೂ ತನ್ನ ಸಹೋದರ ಕಂಪಣ, ಬುಕ್ಕ ಮಾರಪ್ಪ ಮತ್ತು ಮುದ್ದಪ್ಪರ ನೆರವಿನೊಂದಿಗೆ ವಿಜಯನಗರ ಸಾಮ್ರಾಜ್ಯವನ್ನು ನಿರ್ಮಾಣ ಮಾಡಿದನು. ಹಂಪಿ, ಹಸ್ತಿನಾಟ ಎಂಬ ಹೊಸ ರಾಜ್ಯದ ರಾಜನನ್ನಾಗಿ ಹರಿಹರನಿಗೆ ಕ್ರಿ.ಶ. 1336ರಲ್ಲಿ ಕಿರೀಟಧಾರಣೆ ಮಾಡಲಾಯಿತು. ಆ ಘಟನೆಯ ಸ್ಮರಣಾರ್ಥವಾಗಿ ಅವನು ತನ್ನ ಹೊಸ ರಾಜಧಾನಿ ವಿಜಯನಗರಕ್ಕೆ ಅದೇ ದಿನ ಆಸ್ತಿಬಾರಹಾಕಿದನೆಂದು ತಿಳಿದು ಬರುತ್ತದೆ.

ಕೃಷ್ಣಸ್ವಾಮಿ ಐಯ್ಯಂಗಾರ್‌ರವರು ವಿಜಯನಗರದ ಮೂಲವನ್ನು ಕನ್ನಡ ಮೂಲ ಎಂದು ಪ್ರತಿಪಾದಿಸಿದ್ದಾರೆ. ಆದರೆ ಕೆ.ಎ. ನೀಲಕಂಠಶಾಸ್ತ್ರಿ ಮತ್ತು ಎನ್. ವೆಂಕಟರಮಣಯ್ಯ ರವರು ತಮ್ಮ ಕೃತಿಯಾದ "Further Sources of Vijayanagara" ಎಂಬುದರಲ್ಲಿ ವಿಜಯನಗರದ ಮೂಲವನ್ನು ತೆಲುಗು ಮೂಲ ಎಂದು ಪ್ರತಿಪಾದಿಸುತ್ತಾರೆ. ಸಂಗಮನ ಮಕ್ಕಳಾದ ಹರಿಹರ ಮತ್ತು ಬುಕ್ಕರು ಓರಂಗಲ್ಲಿನ ಕಾಕತೀಯ ಅರಸ ಪ್ರತಾಪರುದ್ರನ ಅಧಿಕಾರಿಗಳಾಗಿದ್ದರು.

ದೆಹಲಿಯ ಸುಲ್ತಾನ ಮಹಮದ್ ಬಿನ್ ತುಘಲಕ್‌ನ ಕಾಕತೀಯರನ್ನು ಸೋಲಿಸಿ ಓರಂಗಲ್ಲನ್ನು ಆಕ್ರಮಿಸಿ ಅದರ ಆಳ್ವಿಕೆಯನ್ನು ನೋಡಿಕೊಳ್ಳಲು ಮಲಿಕ್ ಮಕ್ಬೂಲನನ್ನು ನೇಮಿಸಿದ ಹರಿಹರ ಮತ್ತು ಬುಕ್ಕರನ್ನು ಸೆರೆಹಿಡಿದು ದೆಹಲಿಗೆ ಕಳುಹಿಲಾಯಿತು. ಅವರು ಮತಾಂತರವಾಗಿ ಸುಲ್ತಾನನಿಗೆ ನಿಷ್ಠೆಯಿಂದ ಸೇವೆ ಸಲ್ಲಿಸಿದರು. ಇದರಿಂದ ಸಂತೋಷಗೊಂಡ ಸುಲ್ತಾನನು ಕಂಪಿಲ ಪ್ರದೇಶದಲ್ಲಿ ದಂಗೆ ನಡೆದಾಗ ಅವರಿಬ್ಬರನ್ನು ಅಲ್ಲಿನ ಆಡಳಿತ ನೋಡಿಕೊಳ್ಳಲು ಕಳುಹಿಸಿದನು. ಅವನು ಪುನಃ ಹಿಂದೂಧರ್ಮವನ್ನು ಸ್ವೀಕರಿಸಿ ಸ್ವತಂತ್ರವಾದ ಸಾಮ್ರಾಜ್ಯವನ್ನು ಕಟ್ಟಿದರು. ಅದೇ ವಿಜಯನಗರ ಸಾಮ್ರಾಜ್ಯ ಇದೇ ಕಥೆಯನ್ನು ವಿಭಿನ್ನವಾಗಿ ಸಮಕಾಲೀನ ಮುಸ್ಲಿಂ ಬರಹಗಾರರು ತಿಳಿಸುತ್ತಾರೆ. ಈ ತೆಲುಗು ಮೂಲವನ್ನು ಕೆ.ಎ.ಎನ್. ಶಾಸ್ತ್ರಿಯವರು ಹಾಗೂ ವೆಂಕಟರಮಣಯ್ಯರವರು ಮತ್ತಷ್ಟು ಸಮರ್ಥಿಸುತ್ತಾರೆ. ಕಾಕತೀಯರು ವರಹ ಲಾಂಛನವನ್ನು ಧರಿಸಿದ್ದರು ಹಾಗೂ ನಾಯಕರ ಆಡಳಿತ ವ್ಯವಸ್ಥೆಯನ್ನು ರೂಪಿಸಿದ್ದರು. ಇವೆರೆಡನ್ನು ಹರಿಹರ ಮತ್ತು ಬುಕ್ಕರು ಅಳವಡಿಸಿಕೊಂಡಿದ್ದರೆಂದು ತಮ್ಮ "Further Sources of Vijayanagara" ಕೃತಿಯಲ್ಲಿ ತಿಳಿಸುತ್ತಾರೆ. ಇದಕ್ಕೆ ಬೆಂಬಲವಾಗಿ ನೆಲ್ಲೂರು ಜಿಲ್ಲೆಯ ಕನಿಗಿರಿ ತಾಲ್ಲೂಕಿನ ಗೋಚಲವೀಡು ಶಾಸನವನ್ನು ಉದ್ಧರಿಸುತ್ತಾರೆ. ಈ ಶಾಸನದ ಕಾಲ ಕ್ರ.ಶ. 1314 ಎಂದು ಅವರು ಭಾವಿಸಿದ್ದಾರೆ. ಸಂಗಮನ ತಂದೆಯಾದ ಬುಕ್ಕನು ನೆಲ್ಲೂರು ಪ್ರದೇಶದಲ್ಲಿ ಕಾಕತೀಯರ ಅಧೀನದಲ್ಲಿ ಒಡೆಯನಾಗಿದ್ದರೆಂದು ವೆಂಕಟರಮಣಯ್ಯನವರು ಹೇಳಿರುತ್ತಾರೆ. ಬುಕ್ಕನ ಮೊಮ್ಮಗ ಹಾಗೂ ಸಂಗಮನ ಐವರು ಮಕ್ಕಳಲ್ಲಿ ಹಿರಿಯವನಾದ ಹರಿಹರನು ಕಾಕತೀಯರ ಪತನಾನಂತರ ಇಸ್ಲಾಂ ಧರ್ಮವನ್ನು ಸ್ವೀಕರಿಸಿದ. ಓರಂಗಲ್ಲನ್ನು ಆಕ್ರಮಿಸಿದ ಮಹಮದ್ ಬಿನ್ ತುಘಲಕ್‌ನು ಇವನನ್ನು ಕ್ರಿ.ಶ. 1327ರಲ್ಲಿ ಕಂಪಿಲಿಯು ಪ್ರಾಂತಾಧಿಕಾರಿಯನ್ನಾಗಿ ನೇಮಿಸಿದ ಮುಂದೆ ಹರಿಹರನು ವಿದ್ಯಾರಣ್ಯರ ಅನುಗ್ರಹದಿದ ಹಿಂದೂ ಧರ್ಮವನ್ನು ಸ್ವೀಕರಿಸಿ ವಿಜಯನಗರ ಸಾಮ್ರಾಜ್ಯವನ್ನು ಕ್ರಿ.ಶ. 1336ರಲ್ಲಿ ಸ್ಥಾಪಿಸಿದ ಮೊದಲಿಗೆ ಇವನು ಕುಂಜಾರಕೋಣ (ಆನೆಗೊಂದಿ) ದಿಂದ ಅನಂತರ ವಿಜಯನಗರದಿಂದ ಆಳಿದ ಇದು "Furthen Sources of Vijayanagara" ಕೃತಿಯಲ್ಲಿ ವೆಂಕಟರಮಣಯ್ಯನವರು ಪ್ರತಿಪಾದಿಸಿದ ವಿಜಯನಗರದ ಮೂಲದ ಬಗೆಗಿನ ಮುಖ್ಯ ಸಿದ್ಧಾಂತವಾಗಿದೆ. ಹೀಗೆ ವಿಜಯನಗರ ಇತಿಹಾಸದ ಮೂಲದ ಬಗ್ಗೆ ಇತಿಹಾಸಕಾರರಲ್ಲಿ ಒಮ್ಮತದ ಅಭಿಪ್ರಾಯವಿಲ್ಲದಿರಬಹುದು. ದುರಾದುಷ್ಟಕರ ವಿಜಯನಗರವನ್ನು ಕುರಿತು ಸಂಶೋಧಿಸಿದ ಅನೇಕ ಇತಿಹಾಸಕಾರರು ಈ ಎರಡು ಸಿದ್ಧಾಂತವನ್ನು ಪ್ರತಿಪಾದಿಸುತ್ತಾರೆ. ಹಾಗೂ ಅನೇಕರಲ್ಲಿ ಕೆಲವರು ತೆಲುಗು ಮೂಲವನ್ನು ಹಾಗೂ ಕೆಲವರು ಕನ್ನಡ ಮೂಲವನ್ನು

ಒಪ್ಪಿಕೊಳ್ಳೂತ್ತಾರೆ. ಈ ವಿಚಾರವಾಗಿ ಕೃಷ್ಣಸ್ವಾಮಿ ಅಯ್ಯಂಗಾರ್‌ರವರು ಕೃತಿ ಹಾಗೂ ಕೆ.ಎ.ಎನ್. ಶಾಸ್ತ್ರೀ ಮತ್ತು ವೆಂಟರಮಣಯ್ಯರವರು ಕೃತಿಗಳ ಸಾಹಿತ್ಯ ಪುನರ್ ವಿಮರ್ಶೆಯು ಸಂಶೋಧನ ವಿಷಯದಲ್ಲಿ ಪ್ರಮುಖವೆನಿಸುತ್ತದೆ. 225 ವರ್ಷಗಳ ಕಾಲ ನಿರೀಕ್ಷೆಗೂ ಮೀರಿದ ವೈಭವದಿಂದ ವಿಜಯನಗರ ಸಾಮ್ರಾಜ್ಯವು ಆಡಳಿತ ಕ್ಷೇತ್ರವೂ ಸೇರಿದಂತೆ ಬದುಕಿನ ಎಲ್ಲಾ ಕ್ಷೇತ್ರಗಳಲ್ಲೂ ಅಪೂರ್ವವಾದ ಆಡಳಿತ ವ್ಯವಸ್ಥೆಯನ್ನು ರೂಪಿಸಿ ತೊಡಗಿದರು. ಅತ್ಯಂತ ಪ್ರಬಲವಾದ ಹಾಗೂ ದಕ್ಷಿಣ ಭಾರತವನ್ನೆಲ್ಲಾ ವ್ಯಾಪಿಸಿದ ವಿಜಯನಗರ ಸಾಮ್ರಾಜ್ಯವು ಆಡಳಿತ ಕ್ಷೇತ್ರವೂ ಸೇರಿದಂತೆ ಬದುಕಿನ ಎಲ್ಲಾ ಕ್ಷೇತ್ರಗಳಲ್ಲೂ ಅಪೂರ್ವವಾದ ಆಡಳಿತ ವ್ಯವಸ್ಥೆಯನ್ನು ರೂಪಿಸಿ ತೊಡಗಿದರು. ಅತ್ಯಂತ ಪ್ರಬಲವಾದ ಹಾಗೂ ದಕ್ಷಿಣ ಭಾರತವನ್ನೆಲ್ಲಾ ವ್ಯಾಪಿಸಿದ ವಿಜಯನಗರ ಸಾಮ್ರಾಜ್ಯಕ್ಕೆ ದಕ್ಷವು, ಸಮರ್ಥವೂ ಆದ ಆಡಳಿತ ವ್ಯವಸ್ಥೆಯು ಇದ್ದುದು ಕಂಡುಬರುತ್ತದೆ. ವಿಜಯನಗರ ಆಡಳಿತ ವ್ಯವಸ್ಥೆಯು ಕೇಂದ್ರಿಕೃತವಾಗಿತ್ತು. ಅರಸರು ಪಟ್ಟಾಭಿಷಕ್ತನಾಗುವುದದರ ಮೂಲಕ ಆಳುವ ಹಕ್ಕನ್ನು ವಿಧಿವತ್ತಾಗಿ ಪಡೆಯುತ್ತಿದ್ದನು. ಆದ್ದರಿಂದ ಪಟ್ಟಾಭಿಷೇಕ ಸಮಾರಂಭಕ್ಕೆ ಹೆಚ್ಚಿನ ಮಹತ್ವ ದೊರೆಯುತ್ತಿತ್ತು. ಸಾಮ್ರಾಜ್ಯದ ಆಡಳಿತದಲ್ಲಿ ಅರಸನಿಗೆ ನೆರವಾಗಲು ಅವನೇ ನೇಮಿಸಿದ ಮಂತ್ರಿಮಂಡಲವಿತ್ತು. ಮಂತ್ರಿಗಳು, ದಣ್ಣಾಯಕರು, ಶ್ರೀಮಂತರು, ಈ ಮಂತ್ರಿಮಂಡಲದ ಸದಸ್ಯರ ಅರಸರು ಮಂತ್ರಿಮಂಡಲದ ಸಲಹೆಗಳನ್ನು ಪಡೆಯುತ್ತಿದ್ದರು ಎಂದು ಕೃಷ್ಣಸ್ವಾಮಿ ಅಯ್ಯಂಗಾರ್ ರವರು ತಿಳಸುತ್ತಾರೆ.

ರಾಜರು ಮಠ ಮತ್ತು ದೇಗುಲಗಳಿಗೆ ಹಣ ಸಹಾಯ ನೀಡಿ ಅವುಗಳ ನಿರ್ವಹಣೆಗೆ ನೆರವಾಗುತ್ತಿದ್ದರು. ವ್ಯವಸಾಯಕ್ಕೆ ಪ್ರೋತ್ಸಾಹ ಕೊಡಲು ಕಾಲುವೆಗಳನ್ನು ನಿರ್ಮಿಸುತ್ತಿದ್ದರು. ಕಾಡುಗಳನ್ನು ಕಡಿದು ಹೊಸ ಹಳ್ಳಿಗಳನ್ನು ಸ್ಥಾಪಿಸುತ್ತಿದ್ದರು. ನಾಡಿನ ಆರ್ಥಿಕ ಪ್ರಗತಿ ಸಾಮಾಜಿಕ ಭದ್ರತೆ ಮತ್ತು ಶಾಂತಿ, ನ್ಯಾಯಪಾಲನೆ, ರಾಜನ ಆದ್ಯ ಕರ್ತವ್ಯಗಳಾಗಿದ್ದವು. ರಾಜನು ನ್ಯಾಯಾಧೀಶನಾಗಿದ್ದನು. ವಿದ್ಯೆ ಮತ್ತು ಸಂಸ್ಕೃತಿಯ ಚಾಲನೆಗೆ ಅರಸ ಸಹಕಾರ ನೀಡುತ್ತಿದ್ದನು. ಎಂದು ಕೃಷ್ಣಸ್ವಾಮಿ ಅಯ್ಯಂಗಾರ್‌ರವರ ಕೃತಿ ಪರಮಾರ್ಶೆ ಮಾಡಿದಾಗ ತಿಳಿದು ಬರುತ್ತದೆ.

ವಿಜಯನಗರ ಕಾಲದಲ್ಲಿ ರಾಜಪ್ರತಿನಿಧಿಯ ಪದವಿಯೂ ಇತ್ತು. ರಾಜನು ಕಿರಿಯ ಬಾಲಕನಾಗಿದ್ದರೆ ಅವನು ಪ್ರಾಪ್ತ ವಯಸ್ಕನಾಗುವವರೆಗೂ ರಾಜಪ್ರತಿನಿಧಿಯಾಗಿ ಬಾಲಕ ಅರಸರ ಪರವಾಗಿ ಅಧಿಕಾರವನ್ನು ನಿರ್ವಹಿಸಬೇಕಾಗಿತ್ತು. ಸಾಳುವ ಮಗ ವೆಂಕಟಾದ್ರಿಯ ಪ್ರತಿನಿಧಿಯಾಗಿ ಅವನ ಸೋದರ ಮಾವ ಸಲಕದರಾಜನ ತಮ್ಮ ಸದಾಶಿವ ರಾಜಪ್ರತಿನಧಿಯಾಗಿ ಅಳಿಯ ರಾಮರಾಯ ಅರಸನ ಅಧಿಕಾರವನ್ನು ಪಡೆದಿದ್ದರು ಎಂಬುದು ಮೇಲ್ಕಂಡ ಕೃತಿಗಳ

ಪರಾಮರ್ಶೆಯಿಂದ ತಿಳಿದು ಬರುತ್ತದೆ. ಸದಾಶಿವರಾಯ ಇನ್ನು ಕಿರಿಯವನಾಗಿದ್ದರಿಂದ ಇವನು ಕೇವಲ ಹೆಸರಿಗಷ್ಟೇ ಅರಸನಾಗಿದ್ದನು. ಎಲ್ಲಾ ಅಧಿಕಾರವು ಅಳಿಯ ರಾಮರಾಯನ ಕೈಯಲ್ಲಿಯೇ ಇದ್ದಿತು. ಮೊದಲಿಗೆ ರಾಮರಾಯರು ರಾಜ ಪ್ರತಿನಿಧಿಯಾಗಿ ಕ್ರಿ.ಶ. 1550 ರವರೆಗೆ ಆಳಿದ ಈ ವೇಳೆಗೆ ಸದಾಶಿವರಾಯನು ಪ್ರಾಪ್ತ ವಯಸ್ಕನಾಗಿದ್ದು ಸ್ವತಂತ್ರವಾಗಿ ಆಳ್ವಿಕೆ ನಡೆಸಲು ಪ್ರಯತ್ನಗಳನ್ನು ಕೈಗೊಂಡ ಆದರೆ ರಾಮರಾಯ ಅದನ್ನು ವಿಫಲಗೊಳಿಸಿ ಅವನನನು ಬಂಧನದಲ್ಲಿಟ್ಟು ಆಳ್ವಿಕೆಯನ್ನು ಮುಂದುವರೆಸಿದ. ಆದರೆ ಹೋರ ನೋಟಕ್ಕೆ ಸದಾಶಿವನೇ ಅರಸನಾಗಿದ್ದ ಈ ವ್ಯವಸ್ಥೆಯ ವಿನಾಶಕಾರಿ ರಕ್ಕಸತಂಗಡಿ ಯುದ್ಧದವರೆಗೂ ಮುಂದುವರೆಯಿತು.

ರಾಮರಾಯ ದೀರ್ಘಕಾಲ ಅಧಿಕಾರದಲ್ಲಿ ಮುಂದುವರೆಯುವ ಸೂಚನೆಗಳು ಕಂಡಾಗ ಅವನ ವಿರೋಧಿಗಳು ಹತಾಶರಾಗಿ ಬಂಡಾಯವನ್ನು ಆರಂಭಿಸಿದರು. ಚಂದ್ರಗಿರಿ ಮತ್ತು ಚೋಳಮಂಡಲದಲ್ಲಿ ಗಲಭೆಗಳು ಉಂಟಾದವು. ಈ ಬಂಡಾಯವನ್ನು ಅಡಗಿಸಲು ರಾಮರಾಯ ಯಶಸ್ವಿಯಾದನು. ಪೋರ್ಚುಗೀಸರ ವಸಾಹತು ಪ್ರದೇಶಗಳಲ್ಲಿ ಕ್ರಿಶ್ಚಿಯನ್ ಪಾದ್ರಿಗಳ ಮತಾಂತರ ಪ್ರಕ್ರಿಯೆ ಹೆಚ್ಚಾದಾಗ ರಾಮರಾಯನು ವಿಠಲನ ನೇತೃತ್ವದಲ್ಲಿ ಬಲವಾದ ಸೇನೆಯನ್ನು ಕಳಹಿಸಿ ಅದನ್ನು ಹತ್ತಿಕ್ಕಿದ ಇದರಿಂದ ವಿಜಯನಗರ ಮತ್ತು ಪೋರ್ಚುಗೀಸರ ನಡುವಿನ ಸಂಬಂಧ ಹದಗೆಟ್ಟಿತು. ದಖನ್ ಸುಲ್ತಾನರ ಆಂತರಿಕ ವ್ಯವಹಾರದಲ್ಲಿ ರಾಮರಾಯನು ಪದೇ ಪದೇ ಪ್ರವೇಶಿಸುವುದನ್ನು ಅವರು ಸಹಿಸಲಿಲ್ಲ. ಅವನು ಪ್ರಬಲನಾಗುತ್ತಿರುವುದನ್ನು ನೋಡಿ ಕೆರಳಿದ ಅವರೆಲ್ಲರೂ ಅವನ ವಿರುದ್ಧವಾಗಿ ಒಕ್ಕೂಟವನ್ನು ರಚಿಸಿಕೊಂಡರು. ಗೋಲ್ಕಂಡದ ಇಬ್ರಾಹಿಂ ಕುತುಬ್ ಷಾ, ಅಹಮದ್ ನಗರದ ಹುಸೇನ್ ನಿಜಾಮ್ ಷಾ, ಬಿಜಾಪುರದ ಆಲಿ ಆದಿಲ್ ಷಾ, ಬೀದರ್‌ನ ಆಲಿ ಬರೀದ್ ಷಾ ಹುಸೇನ್ ನಿಜಾಮ್ ಈ ಒಕ್ಕೂಟದ ಸದಸ್ಯರು ಈರ್ಷೆ ಮತ್ತು ದ್ವೇಷಗಳಷ್ಟೇ ಈ ಒಕ್ಕೂಟಕ್ಕೆ ಜೀವಂತಿಕೆಯನ್ನು ತಂದವು ಎಂದು ಕೆ.ಎ.ಎನ್. ಶಾಸ್ತ್ರೀಯವರು ಅಭಿಪ್ರಾಯ ಪಡುತ್ತಾರೆ. ಮತೀಯ ಭಾವನೆಗಳ ಹಿನ್ನೆಲೆಯಲ್ಲಿ ಒಕ್ಕೂಡ ಬಲಯುತವಾಗಿ ಒಂದುಗೂಡಿ ವಿಜಯನಗರದ ವಿನಾಶಕ್ಕೆ ಸುಲ್ತಾನರು ಕಂಕಣಬದ್ಧರಾದರು ಎಂದು ಮೇಲಿನ ಕೃತಿಗಳ ಪರಾಮರ್ಶೆಯಿಂದ ತಿಳಿದುಬರುತ್ತದೆ.

ಶೈವ ಮತ್ತು ವೈಷ್ಣವರ ಸಂಘರ್ಷಗಳು, ಆಧುನಿಕ ಯುದ್ಧೋಪಕರಣಗಳನ್ನು ಬಳಸದೇ ಇರುವುದು, ಮತೀಯ ಸಂಘರ್ಷ, ಗಿಲಾನಿ ಸೋದರರ ವಿಶ್ವಾಸ ದ್ರೋಹ ಇವುಗಳೆಲ್ಲವು 1565ರ ರಕ್ಕಸತಂಗಡಿ ಯುದ್ಧದಲ್ಲಿ ವಿಜಯನಗರದ ಪತನಕ್ಕೆ ಕಾರಣಗಳಾದವು.

ವಿಜಯನಗರ ಸಾಮ್ರಾಜ್ಯ ರಕ್ಕಸತಂಗಡಿ ಯುದ್ಧದಲ್ಲಿ ಪೂರ್ಣವಾಗಿ ನಾಶವಾಗಲಿಲ್ಲ. ಯುದ್ಧದಿಂದ ತಪ್ಪಿಸಿಕೊಂಡು ಹೋದ ತಿರುಮಲ ಪೆನುಗೊಂಡದಿಂದ ಆಳ್ವಿಕೆ ನಡೆಸಿದ ಇವನು ಕ್ರಿ.ಶ. 1570 ವೇಳೆಗೆ ಸದಾಶಿವರಾಯನನ್ನು ಕೊಂದು ಸ್ವತಂತ್ರ ಆಳ್ವಿಕೆಯನ್ನು ಆರಂಭಿಸಿದ ಅಂದಿನಿಂದ ಅರವೀಡು ವಂಶದ ಆಳ್ವಕೆ ಆರಂಭವಾಗುತ್ತದೆ. ಇವರು ಆ ನಂತರದ ರಾಜಧಾನಿಯನ್ನು ಚಂದ್ರಗಿರಿಗೆ ಸ್ಥಳಾಂತರಿಸಿ ಆಳ್ವಿಕೆ ಮಾಡುತ್ತಾರೆ ಎಂದು ಮೇಲಿನ ಕೃತಿಗಳ ಪರಾಮರ್ಶೆಯಿಂದ ತಿಳಿದುಬರುತ್ತದೆ.

ಒಟ್ಟಿನಲ್ಲಿ ಈ ಮೇಲ್ಕಂಡ ಕೃತಿಗಳ ಸಾಹಿತ್ಯ ಪರಾಮರ್ಶೆಯ ಸಂಶೋಧನ ಮಹಾಪ್ರಬಂಧದ ರಚನೆಗೆ ಬಹುಮುಖ್ಯ ಅಂಶವಾಗಿದೆ ಎಂಬುದು ತಿಳಿದುಬರುತ್ತದೆ. ಸಾಹಿತ್ಯ ಪುನರ್ ವಿಮರ್ಶೆಯಲ್ಲದೆ ಯಾವುದೇ ರೀತಿಯ ಸಂಶೋಧನ ಮಹಾಪ್ರಬಂಧ ರಚಿಸಲಾಗುವುದಿಲ್ಲ ಎಂಬುದು ಇಲ್ಲಿ ಗಮನಾರ್ಹ.

Robert Sewell: A forgotten empire A.E.S. (Reprint) New Delhi-2004.

ಬಳ್ಳಾರಿಯ ಬ್ರಿಟಿಷ್ ಅಧಿಕಾರಿಯಾಗಿ ನೇಮಕಗೊಂಡ ರಾಬರ್ಟ್ ಸಿವೆಲ್‌ರವರು ಹಂಪಿ ಮತ್ತು ಸುತ್ತಮುತ್ತಲ ಪ್ರದೇಶದಲ್ಲಿ ವ್ಯಾಪಕ ಸಂಶೋಧನೆ ಕೈಗೊಂಡು "ಒಂದು ಮರೆತ ಸಾಮ್ರಾಜ್ಯ" ಎಂಬ ಪುಸ್ತಕವನ್ನು ರಚನೆ ಮಾಡುತ್ತಾರೆ. ಇದು ವಿಜಯನಗರ ಇತಿಹಾಸಕ್ಕೆ ಸಂಬಂಧಿಸಿದಂತೆ ರಚನೆಯಾದ ಪ್ರಥಮ ಪುಸ್ತಕ ಎಂಬ ಹೆಮ್ಮೆಗೆ ಪಾತ್ರವಾಗಿದೆ. ಇದರಲ್ಲಿ ರಾಬರ್ಟ್ ಸಿವೆಲ್‌ರವರು ವಿಜಯನಗರದ ಉಗಮ, ಬೆಳವಣಿಗೆ, ಕೀರ್ತಿ, ವಿಶಾಲ, ಸಾಮ್ರಾಜ್ಯ ಆಡಳಿತ, ಯುದ್ಧಗಳು, ಅವನತಿ ಮುಂತಾದ ವಿಚಾರಗಳ ಬಗ್ಗೆ ದೀರ್ಘವಾಗಿ ಚರ್ಚಿಸಿದ್ದಾರೆ.

Robert Sewell : The Historical Inscriptions of Southern India. Madras 1932. ಇದು ಸಹ ರಾಬರ್ಟ್ ಸಿವೆಲ್‌ರವರ ಮೇಲೆ ಬೆಳಕು ಚೆಲ್ಲುತ್ತದೆ.

Robert Natalie : Anegondi: Architectural Ethnography of a Roayal Village, New Delhi 2000. ಈ ಕೃತಿಯಲ್ಲಿ ಆನೆಗೊಂದಿ ಸುತ್ತಮುತ್ತಲ ಪ್ರದೇಶದ ಇತಿಹಾಸವನ್ನು ಕುರಿತು ಚರ್ಚಿಸಲಾಗಿದೆ. ಆನೆಗೊಂದಿಯಲ್ಲಿ ಕಲೆ ಮತ್ತು ವಾಸ್ತುಶಿಲ್ಪಗಳನ್ನು ವಿವರಿಸಲಾಗಿದೆ. ಆದ್ದರಿಂದ ವಿಜಯನಗರ ಇತಿಹಾಸದ ರಚನೆಗೆ ಇದು ಸಹ ಮುಖ್ಯವೆನಿಸಿದೆ.

B.A. Salerote Vijayanagare Art, Sundeep, Prakashan, Delhi, 1982.

ಬಿ.ಎ.ಸಾಲತೊರೆಯವರು ಸಹ ಪ್ರಸಿದ್ಧ ಇತಿಹಾಸಕಾರರಾಗಿದ್ದು ವಿಜಯನಗರ ಇತಿಹಾಸದ ಮೇಲೆ ಬೆಳಕು ಚೆಲ್ಲುವ ಅಮೂಲ್ಯ ಗ್ರಂಥ "Vijayanagare Art" ಎಂಬ ಕೃತಿಯನ್ನು ರಚಿಸಿದ್ದಾರೆ. ಇದು ಸಹ ವಿಜಯನಗರ ಇತಿಹಾಸಕ್ಕೆ ಸಂಬಂಧಿಸಿದಂತೆ ಅಮೂಲ್ಯ ಕೃತಿ ಎನಿಸಿದ್ದು ಇದನ್ನು ಸಹ ಪರಾಮರ್ಶಿಸಲಾಗುತ್ತದೆ.

Burton Stein: The New Cambridge History of India, Vijayanagara Cambridge, 1993.

ಬರ್ಟನ್ ಸ್ಟೈನ್‌ರವರು ಸಹ ಭಾರತೀಯ ಇತಿಹಾಸದ ಮೇಲೆ ಅನೇಕ ಕೃತಿಗಳನ್ನು ರಚಿಸಿದ್ದು ವಿಜಯನಗರಕ್ಕೆ ಸಂಬಂಧಿಸಿದ ಅವರ ಈ ಕೃತಿಯು ಆ Agrarian Structure & ಭೂ ಹಿಡುವಳಿ ನೀತಿಯ ಬಗ್ಗೆ ಉಳಿಗಮಾನ್ಯ ಪದ್ಧತಿಯ ವಿಫುಲವಾದ ಮಾಹಿತಿಯನ್ನು ನೀಡುತ್ತದೆ.

P.B. Desai: ಕನ್ನಡ ಶಾಸನಗಳು 1971, ಕರ್ನಾಟಕ ವಿಶ್ವವಿದ್ಯಾನಿಲಯ ಧಾರವಾಡ, A History of Karnataka, 1974, ಪಿ.ಬಿ. ದೇಸಾಯಿಯವರು ಸಹ ಕರ್ನಾಟಕದ ಪ್ರಸಿದ್ಧ ಇತಿಹಾಸಕಾರರಾಗಿದ್ದು ಕನ್ನಡ ನಾಡಿನ ಚರಿತ್ರೆಯ ಬಗ್ಗೆ ಅನೇಕ ಪುಸ್ತಕಗಳನ್ನು ಬರೆದಿದ್ದಾರೆ. ಅದರಂತೆ ಇವರ A History of Karnataka ಕೃತಿಯಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಸಂಬಂಧಿಸಿದಂದತೆ ಅನೇಕ ವಿಚಾರಗಳನ್ನು ಕುರಿತು ಚರ್ಚಿಸಿದ್ದಾರೆ. ಈ ಕೃತಿಯು ಸಹ ವಿಜಯನಗರ ಸಂಶೋಧನೆಗೆ ಮುಖ್ಯವೆನಿಸುತ್ತದೆ.

A.V. Venkatarathnam: Local Givernament is Vijayaanagara Empire, 1974, Prasaranaga, Mysore University.

ಎ.ವಿ. ವೆಂಕಟರತ್ನಂರವರ ಈ ಕೃತಿಯು ವಿಜಯನಗರದ ಅಢಳಿತ ಸಾಮಂತರ ಆಡಳಿತ, ಸ್ಥಳೀಯ ಸರ್ಕಾರಗಳ ಆಡಳಿತ ಮುಂತಾದ ವಿಚಾರಗಳ ಬಗ್ಗೆ ಕೂಲಂಕುಷವಾಗಿ ಚರ್ಚಿಸಿದ್ದಾರೆ. ಈ ಕೃತಿಯನ್ನು ಸಹ ಸಾಹಿತ್ಯ ಪರಾಮರ್ಶೆಗೆ ಚರ್ಚಿಸಿದ್ದಾರೆ. ಈ ಕೃತಿಯನ್ನು ಸಹ ಸಾಹಿತ್ಯ ಪರಾಮರ್ಶೆಗೆ ಒಳಪಡಿಸಲಾಗಿದೆ.

**ಕೃತಿ – ವಿಜಯನಗರದ ಇಮ್ಮಡಿ ದೇವರಾಯ**

**ಲೇಖಕರು – ಡಾ. ಹೆಚ್. ಎಂ. ನಾಗರಾಜು**

**ಶ್ರೀ ರಾಜೇಂದ್ರ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್, ಶಿವರಾಂಪೇಟೆ, ಮೈಸೂರು.**

ಈ ಗ್ರಂಥವು ಬಹಳ ವಿಶೇಷವಾದುದಾಗಿದ್ದು ವಿಜಯನಗರ ಸಾಮ್ರಾಜ್ಯವನ್ನು ಆಳಿದಂತಹ ಇಮ್ಮಡಿ ದೇವರಾಯನ ಕುರಿತಾದಾಗಿದೆ. ಈ ಗ್ರಂಥವನ್ನು ಮುಖ್ಯವಾಗಿ ಇಮ್ಮಡಿ ದೇವರಾಯನ ವೈಯಕ್ತಿಕ ಹಾಗೂ ಕೌಟುಂಬಿಕ ಜೀವನಕ್ಕೆ ಸಂಬಂಧಿಸಿದ ವಿವರಗಳನ್ನು ಅವನ ಆಳ್ವಿಕೆಯ ಬಹಳ ಸವಿಸ್ತಾರವಾಗಿ ಈ ಗ್ರಂಥದಲ್ಲಿ ವಿವರಿಸಲಾಗಿದೆ.

ಈ ಪುಸ್ತಕವು 293 ಪುಟಗಳನ್ನು ಹೊಂದಿದ್ದು ಪ್ರಾರಂಭದಲ್ಲಿ ವಿದ್ವಾಂಸರ ಅಭಿಪ್ರಾಯಗಳನ್ನು ಸಂಗ್ರಹಿಸಿ ಬರೆಯಲಾಗಿದೆ. ಇಮ್ಮಡಿ ದೇವರಾಯನ ಕುರಿತು ಅವನ ಜೀವನ ಸಾಧನೆಯನ್ನು ಕುರಿತು ಸವಿಸ್ತಾರವಾಗಿ ಈ ಗ್ರಂಥದಲ್ಲಿ ವಿವರಸಿಲಾಗಿದೆ. ಲೇಖಕರಾದ ಡಾ ಹೆಚ್. ಎಂ.ನಾಗರಾಜು ರವರು ಬಹಳಷ್ಟು ಶ್ರಮವಹಿಸಿ ಈ ಗ್ರಂಥವನ್ನು ರಚಿಸಿದ್ದಾರೆ.

ಇಮ್ಮಡಿ ದೇವರಾಯನ ಕಾಲದಲ್ಲಿ ಆದಂತಹ ಸಾಮ್ರಾಜ್ಯದ ಕ್ರೋಢಿಕರಣ ಮತ್ತು ವಿಸ್ತರಣೆಗೆ ಸಂಬಂಧಿಸಿದಂತೆ ಹಲವಾರು ವಿಶೇಷ ಪ್ರುಯತ್ನಗಳು ಇಮ್ಮಡಿ ದೇವರಾಯನಿಂದ ನಡೆದಂತಹದನ್ನು ಬಹಳ ಸವಿಸ್ತಾರವಾಗಿ ವಿವರಿಸಲಾಗಿದೆ.

ಇಮ್ಮಡಿ ದೇವರಾಯನ ಕಾಲದಲ್ಲಿ ಇದ್ದಂತಹ ಆಡಳಿತ ವ್ಯವಸ್ಥೆಯ ಬಗ್ಗೆ ವಿವರಿಸಲಾಗದೆ. ಹಾಗೂ ಅಂದಿನ ಕೇಂದ್ರ ಸರ್ಕಾರ, ಮಂತ್ರಿ ಪರಿಷತ್ತು, ಸಚಿವಾಲಯ ಮುಂತಾದ ವಿಶೇಷ ಆಡಳಿತ ಆಡಳಿತ ವ್ಯವಸ್ಥೆಯ ಬಗ್ಗೆ ಈ ಗ್ರಂಥದಲ್ಲಿ ವಿವರಿಸಲಾಗಿದೆ. ಸ್ಥಳೀಯ ಆಡಳಿತ ಜಿಲ್ಲಾಡಳಿತ ಗ್ರಾಮಾಡಳಿತಗಳ ಬಗ್ಗೆ ವಿಶೇಷವಾದಂತಹ ಮಾಹಿತಿಯನ್ನು ನೀಡಲಾಗಿದೆ. ವಿಶೇಷವಾಗಿ ನ್ಯಾಯಾಂಗ ಆಡಳಿತ ಮತ್ತು ಪೋಲಿಸ್ ವ್ಯವಸ್ಥೆ ಮಾತ್ರವಲ್ಲದೇ ಕಂದಾಯ ಆಡಳಿತ ವ್ಯವಸ್ಥೆಯ ಬಗ್ಗೆ ಈ ಗ್ರಂಥದಲ್ಲಿ ವಿವರಿಸಲಾಗಿದೆ.

ಹಾಗೆಯೇ ಈ ಗ್ರಂಥದಲ್ಲಿ ಕೃಷಿ, ಕೈಗಾರಿಕೆ, ವಾಣಿಜ್ಯ ಮತ್ತು ಹಣಕಾಸು ವ್ಯವಸ್ಥೆಯ ಬಗ್ಗೆಯೂ ಸಹ ವಿವರಿಸಲಾಗಿದೆ. ಅಂದಿನ ಕೃಷಿ ವ್ಯವಸ್ಥೆ ಪ್ರಮುಖ ಬೆಳೆಗಳು ಎಲ್ಲವನ್ನು ವಿಶೇಷವಾಗಿ ವಿವರಿಸಲಾಗಿದೆ. ಹಾಗೆಯೇ ಸಾಮಾಜಿಕ ಮತ್ತು ಧಾರ್ಮಿಕ ಜೀವನದ ಬಗೆಯೂ ಅವನ ಕಾಲದಲ್ಲಿ ಆದಂತಹ ಸಾಹಿತ್ಯಕ ಪ್ರಗತಿಯನ್ನು ವಿವರಿಸದ್ದಾರೆ.

ಒಟ್ಟಿನಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಆಳಿದಂತಹ ಇಮ್ಮಡಿ ದೇವರಾಯನ ಕುರಿತಾದ ಪ್ರಮುಖ ಹಾಗೂ ಸಮಗ್ರ ಮಾಹಿತಿಯನ್ನು ಈ ಗ್ರಂಥದಲ್ಲಿ ಹೆಚ್.ಎಂ. ನಾಗರಾಜುರವರು ಬಹಳ ವಿಶೇಷವಾಗಿ ವಿವರಿಸಿದ್ದಾರೆ. ವಾಸ್ತುಶಿಲ್ಪ ಬೆಳವಣಿಗೆಯನ್ನು ಸಹ ಕುರಿತು ಈ ಗ್ರಂಥದಲ್ಲಿ ವಿವರಿಸಲಾಗಿದೆ.

**ಕೃತಿ – ಶ್ರೀ ಕೃಷ್ಣದೇವರಾಯ**

**ತೆಲಗು ಮೂಲ ಲೇಕಖಕರು – ಡಾ. ನೇಲಟೂರು ವೆಂಕಟರಮಣಯ್ಯ**

**ಅನುವಾದ ಕನ್ನಡಕ್ಕೆ – ಗುರುಮೂರ್ತಿ ಪೆಂಡಕೂರು**

ಮೂಲವಾಗಿ ಈ ಕೃತಿಯು ತೆಲಗು ಭಾಷೆಯಲ್ಲಿ ಬರೆಯಲ್ಪಟ್ಟಿದ್ದು, ಕನ್ನಡಕ್ಕೆ ಗುರು ಮೂರ್ತಿ ಪೆಂಡಕೂರುರವರು 'ಅನುವಾದಿಸಿದ್ದಾರೆ. ಈ ಕೃತಿಯು ಬಹಳ ವಿಶೇಷವಾಗಿ ಶ್ರೀ ಕೃಷ್ಣದೇವರಾಯನ ಕುರಿತಾದುದಾಗಿದೆ. ವಿಜಯನಗರ ಸಾಮ್ರಾಜ್ಯವನ್ನು ಹತ್ತು ಹಲವಾರು ರೀತಿಗಳಲ್ಲಿ ಉತ್ತುಂಗಕ್ಕೊಯ್ದ ವ್ಯಕ್ತಿ ಶ್ರೀ ಕೃಷ್ಣದೇವರಾಯ ಆತನ ಕಾಲ ಒಂದು ಸುವರ್ಣಯುಗ, **'ಸಾಹಿತಿ ಸಮರಾಂಗಣ ಸೂತ್ರಧಾರ'** ಎಂಬ ಕೀರ್ತಿಯನ್ನು ಪಡೆದು ಆತನ ಅವಧಿಯಲ್ಲಿ ಸಾಹಿತ್ಯ ಉದಾರ ಪೋಷಣೆಯನ್ನು ಪಡೆಯಿತು. ಅವನ ಕಾಲದ ವಿಜಯನಗರ ಇತಿಹಾಸವನ್ನು ಕುರಿತು ಈ ಗ್ರಂಥದಲ್ಲಿ ವಿವರಿಸಲಾಗಿದೆ.

ಈ ಗ್ರಂಥವು ಸುಮಾರು 187 ಪುಟಗಳನ್ನು ಒಳಗೊಂಡಿದ್ದು, 12 ಅಧ್ಯಾಯಗಳಾಗಿ ವಿಂಗಡಿಸಲಾಗಿದೆ. ಮೊದಲನೇ ಅಧ್ಯಾಯದಲ್ಲಿ ಈ ಸಾಮ್ರಾಜ್ಯಕ್ಕೆ ಸಂಬಂಧಿಸಿದ ಮೂಲ ಆಧಾರಗಳನ್ನು ಕುರಿತು ವಿವರಿಸಲಾಗಿದೆ. ಸಾಹಿತ್ಯಿಕ ಆಧಾರಗಳು, ಶಾಸನಗಳು, ಕೋಟೆ ಕೊತ್ತಲಗಳ ಬಗ್ಗೆ ಸಮಗ್ರ ಮಾಹಿತಿಯನ್ನು ಈ ಗ್ರಂಥದಲ್ಲಿ ಬಹಳ ಸವಿಸ್ತಾರವಾಗಿ ವಿವರಿಸಲಾಗಿದೆ.

ಶ್ರೀ ಕೃಷ್ಣದೇವರಾಯನ ವಂಶಾವಳಿ ಹಾಗೂ ವಿಜಯನಗರ ಕಾಲದ ವಂಶಾವಳಿಯನ್ನು ಕುರಿತು ಈ ಗ್ರಂಥದಲ್ಲಿ ವಿವರಿಸಲಾಗಿದೆ. ಶ್ರೀ ಕೃಷ್ಣದೇವರಾಯ ಪಟ್ಟಾಭಿಷೇಕ ಹಾಗೂ ಅವನ ಕಾಲದ ಆಡಳಿತವನ್ನು ಕುರಿತು ಬಹಳ ಸವಿಸ್ತಾರವಾಗಿ ವಿವರಿಸಲಾಗಿದೆ.

ಶ್ರೀ ಕೃಷ್ಣದೇವರಾಯನ ಹಾಗೂ ಅವನು ಮಹಮದೀಯರೊಂದಿಗಿನ ಸಂಬಂಧವನ್ನು ಕುರಿತು ಈ ಗ್ರಂಥದಲ್ಲಿ ವಿವರಿಸಲಾಗಿದೆ. ಕೃಷ್ಣದೇವರಾಯನು ಮಹಮದೀಯರೊಂದಿಗೆ

ಹೊಂದಿದ ಸಂಬಂಧ ಅವರಿಬ್ಬರ ನಡುವೆ ನಡೆದ ಯುದ್ಧಗಳ ಬಗ್ಗೆಯೂ ಈ ಗ್ರಂಥದಲ್ಲಿ ವಿವರಿಸಲಾಗಿದೆ.

ಶ್ರೀ ಕೃಷ್ಣದೇವರಾಯನ ರಾಣಿಯರು ಅವನು ತಿರುಪತಿ ದೇವಾಲಯಕ್ಕೆ ನೀಡಿದ ಕೊಡುಗೆ ಅವನ ಕಾಲದಲ್ಲಿ ಕಳಿಂಗ ಚೈತ್ರಯಾತ್ರೆಯನ್ನು ಕುರಿತು ವಿವರಿಸಲಾಗಿದೆ. ಕೃಷ್ಣದೇವರಾಯನ ಕಾಲದಲ್ಲಿ ರಾಯಚೂರು ಮುತ್ತಿಗೆ ಹಾಗೂ ರಾಯಚೂರು ಪತನದ ಬಗ್ಗೆಯೂ ವಿವರಿಸಲಾಗಿದೆ. ಕೃಷ್ಣದೇವರಾಯನ ಕಾಲದಲ್ಲಿನ ವ್ಯಾಪಾರ, ವಾಣಿಜ್ಯಕ್ಕೆ ಸಂಬಂಧಿಸಿದಂತೆ ಅಂದಿನ ಕಾಲದ ಸಾಗರೋತ್ತರ ವ್ಯವಹಾರಗಳ ಬಗ್ಗೆ ವಿವರಸಲಾಗಿದೆ.

**ಕೃತಿ–ಕರ್ನಾಟಕ ಪರಂಪರೆ ಸಂಪುಟ 1 ಮತ್ತು 2, ಕರ್ನಾಟಕ ಸರ್ಕಾರ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.**

ಈ ಗ್ರಂಥವು ಮುಖ್ಯವಾಗಿ ಎರಡು ಸಂಪುಟಗಳನ್ನು ಹೊಂದಿದೆ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಹೊರತರಲಾಗಿದೆ. ಎರಡು ಸಂಪುಟಗಳನ್ನು ಸೇರಿ ಸುಮಾರು 1200 ಪುಟಗಳನ್ನು ಹೊಂದಿದೆ. ಸುಮಾರು 20 ಅಧ್ಯಾಯಗಳಾಗಿ ವಿಂಗಡಿಸಲಾಗಿದೆ. ಈ ಗ್ರಂಥದಲ್ಲಿ ಮುಖ್ಯವಾಗಿ ವಿಜಯನಗರ ಕಾಲದ ಇತಿಹಾಸ ಮಾತ್ರವಲ್ಲದೆ ಪ್ರಾಗೈತಿಹಾಸ ಕಾಲದಿಂದ ವಿಜಯನಗರ ಕಾಲದ ವರೆಗೆ ಎಲ್ಲಾ ಮುಖ್ಯವಾದ ಇತಿಹಾಸವನ್ನು ಈ ಗ್ರಂಥದಲ್ಲಿ ವಿವರಿಸಲಾಗಿದೆ.

ವಿಜಯನಗರ ಕಾಲದಲ್ಲಿನ ರಾಜಕೀಯ ವ್ಯವಸ್ಥೆ ವಿಜಯನಗರವನ್ನಾಳಿದ ಮನೆತನಗಳು ಪ್ರಮುಖ ರಾಜರುಗಳು ಹಾಗೂ ಆಡಳಿತ, ನ್ಯಾಯಾಂಗ ವ್ಯವಸ್ಥೆ ಮುಂತಾದ ವಿಚಾರಗಳನ್ನು ಕುರಿತು ಈ ಗ್ರಂಥದಲ್ಲಿ ಬಹಳ ಸವಿಸ್ತಾರವಾಗಿ ವಿವರಿಸಲಾಗಿದೆ. ಹಾಗೆಯೇ ವಿಜಯನಗರದ ಸ್ಥಾಪನೆಗೆ ಪ್ರೇರಣೆಯಾದ ಅಂಶಗಳನ್ನು ವಿವರಿಸಲಾಗಿದೆ.

ವಿಜಯನಗರ ಕಾಲದ ಧಾರ್ಮಿಕ ಜೀವನ ಕುರಿತು ಆರ್ಥಿಕ ಸ್ಥಿತಿಗಳನ್ನು ಕುರಿತು ವಿಶೇಷವಾಗಿ ಈ ಗ್ರಂಥಗಳಲ್ಲಿ ವಿವರಿಸಲಾಗಿದೆ. ಆರ್ಥಿಕ ಸ್ಥಿತಿಗತಿಗಳಿಗೆ ಸಂಬಂಧಿಸಿದಂತೆ ಜನರ ಆದಾಯ ರಾಜ್ಯದ ಆದಾಯ ಖರ್ಚು ವೆಚ್ಚಗಳು, ಕಂದಾಯ ಹಾಗೂ ರಾಜರ ಲೋಕೋಪಯೋಗಿ ಕಾರ್ಯಕ್ರಮಗಳ ಬಗ್ಗೆ ವಿವರಿಸಲಾಗಿದೆ.

ವಿಜಯನಗರ ಕಾಲದ ಸಾಮಾಜಿಕ ಜೀವನ, ಶಿಕ್ಷಣ ಪದ್ಧತಿ, ಕಲೆ, ವಾಸ್ತುಶಿಲ್ಪ ಮುಂತಾದ ವಿಚಾರಗಳ ಬಗ್ಗೆ ಈ ಗ್ರಂಥದಲ್ಲಿ ಸವಿಸ್ತಾರವಾಗಿ ವಿವರಿಸಲಾಗಿದೆ. ವಿಜಯನಗರ ಕಾಲದಲ್ಲಿ ಅರಸರು ಆಚರಿಸುತ್ತಿದಂತಹ ಯಾಗಗಳು ಹಾಗೂ ದೇವದಾಸಿ, ಪದ್ಧತಿಯ ಬಗ್ಗೆಯೂ ಸಹ ಈ ಗ್ರಂಥದಲ್ಲಿ ವಿವರಿಸಲಾಗಿದೆ. ಒಟ್ಟಾರೆಯಾಗಿ ವಿಜಯನಗರ ಕಾಲದಲ್ಲಿದಂತಹ ಸಂಪೂರ್ಣ ಆಚರಣೆಗಳು ಹಾಗೂ ರಾಜಕೀಯ ಸಾಂಸ್ಕೃತಿಕ ವಿಚಾರಗಳ ಬಗ್ಗೆ ವಿವರಿಸಲಾಗಿದೆ.

**ಗ್ರಂಥ – ಪ್ರವಾಸಿ ಕಂಡ ವಿಜಯನಗರ**

**ಸಂಪಾದಕ – ಡಾ. ಬಿ.ಎ. ವಿವೇಕ ರೈ**

ಪ್ರವಾಸಿ ಕನ್ನಡ ವಿಜಯನಗರ ಗ್ರಂಥವು ವಿಜಯನಗರ ಸಾಮ್ರಾಜ್ಯಕ್ಕೆ ಆಡಳಿತ ಅವಧಿಯಲ್ಲಿ ಭೇಟಿ ನೀಡಿರುವಂತಹ ವಿದೇಶೀಯವರು ಬರೆದ ಅವರ ಲೇಖನಗಳನ್ನು ಈ ಗ್ರಂಥದಲ್ಲಿ ವಿವರಿಸಲಾಗಿದೆ. ಈ ಗ್ರಂಥವು ಸುಮಾರು 305 ಪುಟಗಳನ್ನು ಹೊಂದಿದ್ದು ವಿಜಯನಗರಕ್ಕೆ ಭೇಟಿ ನೀಡಿದ್ದ ಎಲ್ಲಾ ಪ್ರವಾಸಿಗರ ಕಥನಗಳನ್ನು ಈ ಗ್ರಂಥದಲ್ಲಿ ವಿವರಿಸಲಾಗಿದೆ.

ಇಬನ್ ಬತುತಾ ನ ಕಾಲದಿಂದ ಹಿಡಿದು ವಿಜಯನಗರಕ್ಕೆ ಭೇಟಿ ನೀಡಿದ ಎಲ್ಲಾ ಮಹಾನ್ ದಾರ್ಶಕನಿಕರ ಪ್ರವಾಸಿ ಕಥನಗಳನ್ನು ಕನ್ನಡ ಭಾಷೆಗೆ ಅನುವಾದಿಸಿ ವಿವರಿಸಲಾಗಿದೆ. ಇಬನ್ ಬತೂತನು ಅಂದಿನ ಸಂಸ್ಕೃತಿ ಮತ್ತು ಆಚಾರ ವಿಚಾರಗಳ ಬಗ್ಗೆ ಬರೆದಿದ್ದಾರೆ.

ನಿಕೋಲೊ–ದಿ–ಕೌಂಟ್ ರವರು ಕೂಡ ವಿಜಯನಗರಕ್ಕೆ ಭೇಟಿ ನೀಡಿದ್ದನ್ನು. ಇವನು ಅಂದಿನ ಕಾಲದ ಮದುವೆಗಳು ವಾದ್ಯಗಳನ್ನು ಬಾರಿಸುತ್ತಾರೆ ಭೋಜನ ಕೂಟಗಳನ್ನು ಏರ್ಪಡಿಸುತ್ತಾರೆ. ಕೆಲವರು ಹಾಡಿದರೆ ಮತ್ತೆ ಕೆಲವರು ತಮ್ಮ ರೀತಿಯಲ್ಲಿ ಕುಣಿಯುತ್ತಾರೆ. ಕೆಲವರು ಬಣ್ಣದ ಕೋಲುಗಳನ್ನು ಹಿಡಿದು ಕೋಲಾಟ ಮಾಡುತ್ತಾರೆ ಎಂದು ತಿಳಿಸಿದ್ದಾರೆ.

**ಕೃತಿ – ನಡಹಬ್ಬ ದಸರಾ**

**ಕವಿ – ಡಾ. ವಿ. ರಂಗನಾಥ್**

ಈ ಗ್ರಂಥವು ಬಹಳ ಪ್ರಮುಖವಾದುದಾಗಿದೆ. ಮುಖ್ಯವಾಗಿ ವಿಜಯನಗರ ಸಾಮ್ರಾಜ್ಯದಲ್ಲಿ ಆರಂಭವಾದ ವಿಜಯದಶಮಿಯ ಬಗ್ಗೆ ಈ ಗ್ರಂಥದಲ್ಲಿ ವಿವರಿಸಲಾಗಿದೆ. ನವರಾತ್ರಿ ಆಚರಣೆಯ ಹಿನ್ನೆಲೆ ಅದರ ಉಗಮ ಬೆಳವಣಿಗೆ ಮುಂತಾದ ವಿಚಾರಗಳೊಂದಿಗೆ ವಿಜಯನಗರ ಕಾಲದಲ್ಲಿ ದಸರಾ ಉತ್ಸವದ ಬಗ್ಗೆ ವಿವರಿಸಿದ್ದಾರೆ, ಈ ಗ್ರಂಥವು ಸುಮಾರು

444 ಪುಟಗಳನ್ನು ಹೊಂದಿದ್ದು 10 ಅಧ್ಯಾಯಗಳಾಗಿ ವಿಂಗಡಿಸಲಾಗಿದೆ. ನವರಾತ್ರಿಯ ಸಂದರ್ಭದಲ್ಲಿ ಕುಮಾರಿ ಪೂಜೆ ನೆರವೇರಿಸುತ್ತಿದ್ದನು. ಪ್ರಾಣಿಬಲಿ ಕೊಡುತ್ತಿದ್ದರು. ದುರ್ಗಾಪೂಜೆ ಮಾಡುತ್ತಿದುದನ್ನು ಈ ಗ್ರಂಥದಲ್ಲಿ ವಿವರಿಸಲಾಗಿದೆ.

ನವರಾತ್ರಿ ಸಂದರ್ಭದಲ್ಲಿ ಇದ್ದಂತಹ 9 ದೇವತೆಗಳನ್ನು ಪೂಜೆ ಮಾಡುತ್ತಿದ್ದ ಪ್ರತಿ ನಿತ್ಯದ ಬೆಳವಣಿಗೆಗಳನ್ನು ಈ ಗ್ರಂಥದಲ್ಲಿ ವಿವರಿಸಲಾಗಿದೆ. ಒಟ್ಟಾರೆಯಾಗಿ ವಿಜಯದಶಮಿಯ ಬಗ್ಗೆಯೇ ಈ ಗ್ರಂಥದಲ್ಲಿ ಸವಿಸ್ತಾರವಾಗಿ ವಿವರಿಸಲಾಗಿದೆ. ವಿಜಯನಗರ ಮಾತ್ರವಲ್ಲದೇ ಮೈಸೂರು ದಸರಾ ಬಗ್ಗೆಯು ಈ ಗ್ರಂಥದಲ್ಲಿ ವಿವರಿಸಲಾಗಿದೆ.

## 1.7 ಅಧ್ಯಯನದ ಸ್ವರೂಪ

ನನ್ನ ಸಂಶೋಧನಾ ವಿಷಯವಾಗಿ ವಿಜಯನಗರ ಕಾಲದ ಸಾಗರೋತ್ತರ ಸಂಬಂಧಗಳು ಎಂಬ ಶೀರ್ಷಿಕೆಯಡಿಯಲ್ಲಿ ದಕ್ಷಿಣ ಭಾರತದಲ್ಲಿ ಸುಮಾರು 300 ವರ್ಷಗಳ ಕಾಲ ಆಡಳಿತ ನಡೆಸಿದ ವಿಜಯನಗರ ಸಾಮ್ರಾಜ್ಯವು ತನ್ನ ಆಡಳಿತದ ಅವಧಿಯಲ್ಲಿ ಯಾವ ರೀತಿಯ ಸಾಗರೋತ್ತರ ಸಂಬಂಧಗಳನ್ನು ಏರ್ಪಾಡು ಮಾಡಿಕೊಂಡಿತ್ತು ಹಾಗೂ ಅವರ ಕಾಲದ ಪ್ರಮುಖ ಆಮದು, ರಫ್ತುಗಳು ಹಾಗೂ ಇತರ ರಾಷ್ಟ್ರಗಳೊಂದಿಗಿನ ಸಂಬಂಧ, ಪೋರ್ಚುಗೀಸರೊಂದಿಗಿನ ಸಂಬಂಧ, ವ್ಯಾಪಾರ ಮಾರ್ಗಗಳು ವ್ಯಾಪಾರದ ಉನ್ನತಿ, ಅವನತಿ ಪ್ರಮುಖ ಬಂದರುಗಳ ಬೆಳವಣಿಗೆ ಹೀಗೆ ವಿಜಯನಗರ ಕಾಲದ ಸಾಗರೋತ್ತರ ಸಂಬಂಧಗಳನ್ನು ಮುಖ್ಯವಾಗಿ ತಿಳಿಯವುದು ನನ್ನ ಸಂಶೋಧನೆಯ ಸ್ವರೂಪವಾಗಿದೆ.

## 1.8 ಅಧ್ಯಯನದ ವ್ಯಾಪ್ತಿ:

ವಿಜಯನಗರ ಕಾಲದ ಸಾಗರೋತ್ತರ ಸಂಬಂಧಗಳು ಎಂಬ ವಿಷಯಕ್ಕೆ ಸಂಬಂಧಿಸಿದಂತೆ ನನ್ನ ಅಧ್ಯಯನದ ವ್ಯಾಪ್ತಿಯ ವಿಜಯನಗರ ಕಾಲದ ಸಾಗರೋತ್ತರ ಸಂಬಂಧಗಳಿಗೆ ಸೀಮಿತವಾಗಿದೆ. ವಿಜಯನಗರದ ಕಾಲದಲ್ಲಿ ಅದು ಹೊಂದಿದ್ದ ವಿದೇಶಿಗಳೊಂದಿಗಿನ ಸಂಬಂಧ, ಅರಬ್ಬರೊಂದಿಗಿನ ವ್ಯಾಪಾರ ಸಂಬಂಧಗಳು, ವಿಜಯನಗರ ಅರಬ್ಬರ ವ್ಯಾಪಾರ ಏಕಸ್ವಾಮ್ಯತೆ, ವಿಜಯನಗರ ಮತ್ತು ಯುರೋಪಿನ ರಾಷ್ಟ್ರಗಳೊಂದಿಗಿನ ಸಂಬಂಧಗಳು ಮುಖ್ಯವಾಗಿ ಪೋರ್ಚುಗೀಸರು ಮತ್ತು ವಿಜಯನಗರ ಅರಸರ ವ್ಯಾಪಾರ ಸಂಬಂಧಗಳು ವಿಜಯನಗರ ಮತ್ತು ಏಷ್ಯಾರಾಷ್ಟ್ರಗಳೊಂದಿನ ಸಂಬಂಧಗಳು, ವಿಜಯನಗರ

ಮತ್ತು ಆಫ್ರಿಕಾ ರಾಷ್ಟ್ರಗಳೊಂದಿಗಿನ ಸಂಬಂಧಗಳು, ಸಾಂಸ್ಕೃತಿಕ ಬೆಳವಣಿಗೆ, ವ್ಯಾಪಾರಿ ಮಾರ್ಗಗಳು, ಪ್ರಮುಖ ಬಂದರುಗಳು, ವ್ಯಾಪಾರ ಮತ್ತು ನಗರೀಕರಣ ಹಾಗೂ ವ್ಯಾಪಾರ ಸಂಘಗಳ ಬಗ್ಗೆ ನನ್ನ ಅಧ್ಯಯನವು ವ್ಯಾಪ್ತಿಯನ್ನು ಹೊಂದಿದೆ.

## 1.9 ಅಧ್ಯಯನ ಮಹತ್ವ

ನನ್ನ ಅಧ್ಯಯನವು ಮುಖ್ಯವಾಗಿ ವಿಜಯನಗರ ಕಾಲದ ಸಾಗರೋತ್ತರ ಸಂಬಂಧಗಳನ್ನು ಕುರಿತು ಸಂಶೋಧನೆ ನಡೆಸುವುದಾಗಿದೆ. ಇದರ ಜೊತೆಗೆ ವಿಜಯನಗರ ಕಾಲದ ಆಂತರಿಕ ವ್ಯಾಪಾರ, ವ್ಯಾಪಾರ ಮಾರ್ಗಗಳು, ವಿದೇಶಿ ವ್ಯಾಪಾರ, ಹೊರ ದೇಶಗಳೊಂದಿಗಿನ ಸಂಬಂಧಗಳು, ಪ್ರಮುಖ ಬಂದರುಗಳು, ವ್ಯಾಪಾರದ ಮಾಧ್ಯಮ, ಆಮದು ಮತ್ತು ರಫ್ತುಗಳು, ವ್ಯಾಪಾರ ಮತ್ತು ವಹಿವಾಟವನ್ನು ಅಭಿವೃದ್ಧಿ ಪಡಿಸಿಕೊಳ್ಳಲು ಕೈಗೊಂಡ ಕ್ರಮಗಳು ವಿದೇಶೀಯರ ಸಾರ್ವಭೌಮತೆ, ವಿಜಯನಗರದೊಂದಿಗೆ ಅದರ ಸಮಕಾಲೀನ ಸಾಮ್ರಾಜ್ಯಗಳು ಹೊಂದಿದ್ದ ಸಂಬಂಧಗಳು ಇವೆಲ್ಲವನ್ನು ಅಧ್ಯಯನ ಮಾಡುವುದು ನನ್ನ ಸಂಶೋಧನೆಯ ಮಹತ್ವವಾಗಿದೆ. ವಿದೇಶೀ ವ್ಯಾಪಾರಕ್ಕೆ ರಾಜರ ಕೊಡುಗೆಯನ್ನು ಸ್ಮರಿಸುವುದು ಮತ್ತು ಅವರ ವಿದೇಶಿ ಸಂಬಂಧಗಳನ್ನು ಅಧ್ಯಯನ ಮಾಡುವುದು ಬಹಳ ಮುಖ್ಯವಾದ ನನ್ನ ಅಧ್ಯಯನದ ಮಹತ್ವವಾಗಿದೆ.

## 1.10 ಅಧ್ಯಯನದ ಉದ್ದೇಶ

ವಿಜಯನಗರ ಕಾಲದ ಸಾಗರೋತ್ತರ ಸಂಬಂಧಗಳು ಎಂಬ ಶೀರ್ಷಿಕೆಯಡಿಯಲ್ಲಿ ಈ ಕೆಳಗಿನ ಉದ್ದೇಶಗಳನ್ನು ಆಧಾರವಾಗಿಟ್ಟುಕೊಂಡು ಸಂಶೋಧನೆಯನ್ನು ಕೈಗೊಳ್ಳಲಾಗಿದೆ.

- ವಿಜಯನಗರ ಮತ್ತು ಅರಬ್ಬರ ನಡುವಿನ ಸಂಬಂಧಗಳನ್ನು ತಿಳಿಯುವುದು
- ವಿಜಯನಗರ ಮತ್ತು ಪೋರ್ಚುಗೀಸರ ಸಂಬಂಧಗಳನ್ನು ತಿಳಿಯುವುದು
- ವಿಜಯನಗರ ಮತ್ತು ಏಷ್ಯಾ ರಾಷ್ಟ್ರಗಳೊಂದಿಗಿನ ನಡುವಿನ ಸಂಬಂಧ ತಿಳಿಯುವುದು
- ವಿಜಯನಗರ ಕಾಲದ ಆಫ್ರಿಕಾ ದೇಶಗಳೊಂದಿಗಿನ ಸಂಬಂಧ ತಿಳಿಯುವುದು
- ವಿಜಯನಗರ ಕಾಲದ ಪ್ರಮುಖ ಬಂದರುಗಳನ್ನು ತಿಳಿಯುವುದು
- ವಿಜಯನಗರ ಕಾಲದಲ್ಲಿನ ಆಂತರಿಕ ಮತ್ತು ವಿದೇಶಿ ವ್ಯಾಪಾರಗಳ ಮಾರ್ಗಗಳನ್ನು ತಿಳಿಯವುದು

* ವಿಜಯನಗರ ಕಾಲದಲ್ಲಿನ ವ್ಯಾಪಾರ ಅಭಿವೃದ್ಧಿ ಮತ್ತು ನಗರಗಳ ಬೆಳವಣಿಗೆ ಕುರಿತು ತಿಳಿಯುವುದು.
* ವಿಜಯನಗರ ಕಾಲದ ಆಮದು ಮತ್ತು ರಫ್ತುಗಳನ್ನು ಕುರಿತು ತಿಳಿಯುವುದು.
* ವಿಜಯನಗರ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಪ್ರಮುಖ ವ್ಯಾಪಾರ ಸಂಘಟನೆಗಳ ಬಗ್ಗೆ ತಿಳಿಯುವುದು.

### 1.11 ಸಂಶೋಧನಾ ವಿಧಾನ

ಐತಿಹಾಸಿಕ ಸಂಶೋಧನಾ ಕ್ರಮಗಳನ್ನು ಬಳಸಿ ಅಧ್ಯಯನ ಕೈಗೊಳ್ಳಲಾಗುತ್ತದೆ. ವಿಷಯ ಸಂಗ್ರಹಣೆ, ಬಾಹ್ಯ ವಿಮರ್ಶೆ, ಆಂತರಿಕ ವಿಮರ್ಶೆಗಳು, ವಿಶ್ಲೇಷಣಾ ಕ್ರಮಗಳು ಮತ್ತು ನಿರೂಪಣಾ ತತ್ವಗಳನ್ನು ಬಳಸಿ ಈ ಸಂಶೋಧನೆಯನ್ನು ಕೈಗೊಳ್ಳಲಾಗಿದೆ.

### 1.12 ಅಧ್ಯಯನದ ವಿಭಾಗೀಕರಣ

"ವಿಜಯನಗರ ಕಾಲದ ಸಾಗರೋತ್ತರ ಸಂಬಂಧಗಳು" ಎಂಬ ವಿಷಯನ್ನು ಕುರಿತು ಸಂಶೋಧನೆ ಯನ್ನು ಕೈಗೊಂಡಿದ್ದು, ನನ್ನ ಸಂಶೋಧನೆಯ ವಿಷಯವನ್ನು ಏಳು ಅಧ್ಯಾಯಗಳಾಗಿ ವಿಂಗಡಿಸಿ ಪ್ರತಿ ಅಧ್ಯಾಯದಲ್ಲೂ ಪ್ರತ್ಯೇಕವಾದ ವಿಚಾರಗಳನ್ನು ಚರ್ಚಿಸಿ ನನ್ನ ಸಂಶೋಧನೆಯನ್ನು ಪೂರ್ಣಗೊಳಿಸಿದ್ದೇನೆ. ಪ್ರತಿ ಅಧ್ಯಾಯದಲ್ಲಿ ನಾವು ಚರ್ಚಿಸಿರುವ ವಿಚಾರಗಳನ್ನು ಕ್ರಮವಾಗಿ ಈ ಕೆಳಗೆ ಸಂಕ್ಷಿಪ್ತವಾಗಿ ವಿವರಿಸಿದ್ದೇನೆ.

**ಮೊದಲ ಅಧ್ಯಾಯ:** ಮೊದಲ ಅಧ್ಯಾಯವು ಪ್ರಮುಖವಾದುದಾಗಿದ್ದು ಈ ಅಧ್ಯಾಯದಲ್ಲಿ ಸಂಶೋದನೆಯ ಹಿನ್ನಲೆ, ಐತಿಹಾಸಿಕ ಹಿನ್ನಲೆ, ರಾಜಕೀಯ ಇತಿಹಾಸ, ಭೌಗೋಳಿಕ ಲಕ್ಷಣಗಳು ಮತ್ತು ಸ್ಥಳ ಹಿನ್ನಲೆ, ಆಧಾರಗಳ ಸಮೀಕ್ಷೆ, ಇದುವರೆಗೂ ನಡೆದಿರುವ ಅಧ್ಯಯನ ಚರ್ಚೆ, ಅಧ್ಯಯನದ ಸ್ವರೂಪ, ವ್ಯಾಪ್ತಿ, ಮಹತ್ವ, ಉದ್ದೇಶ ಮತ್ತು ಸಂಶೋಧನಾ ವಿಧಾನಗಳ ಕುರಿತು ಕೂಲಂಕುಷವಾಗಿ ವಿವರಿಸಲಾಗಿದೆ. ನನ್ನ ಸಂಶೋಧನೆಯ ಸಂಪೂರ್ಣವಾದ ಮಾಹಿತಿಗಳನ್ನು ಈ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ವಿವರಿಸಿದ್ದು, ಸಂಶೋಧನೆಗೆ ಪೂರಕವಾದ ವಿಜಯನಗರದ ಕಾಲದ ಪ್ರಮುಖ ಗ್ರಂಥಗಳು ಕೈಪಿಯತ್ತುಗಳನ್ನು ಬಳಸಿ ಹಾಗೂ ಹಲವಾರು ಶಾಸನಗಳನ್ನು ಅಧ್ಯಯನ ಮಾಡಿ ನನ್ನ ಸಂಶೋಧನಾ ಪ್ರಬಂಧವನ್ನು ತಯಾರಿಸಿದ್ದೇನೆ.

**ಎರಡನೇ ಅಧ್ಯಾಯ:** ನನ್ನ ಸಂಶೋದನೆಯಲ್ಲಿ ಎರಡನೇಯ ಅಧ್ಯಾಯವು ಬಹಳಷ್ಟು ಪ್ರಮುಖವಾದುದಾಗಿದೆ. ಈ ಅಧ್ಯಾಯದಲ್ಲಿ ವಿಜಯನಗರ ಸಾಮ್ರಾಜ್ಯ ಮತ್ತು ಅರಬ್ಬರ ನಡುವಿನ

ಸಂಬಂಧಗಳ ಬಗ್ಗೆ ಸಂಪೂರ್ಣವಾಗಿ ವಿವರಿಸಲಾಗಿದೆ. ಅರಬ್ಬರ ವ್ಯಾಪಾರದ ಏಕಸ್ವಾಮ್ಯ ಅರಬ್ಬರ ಕಾಲದ ಪ್ರಮುಖ ವ್ಯಾಪಾರ ಮತ್ತು ವಾಣಿಜ್ಯ ಸಂಪರ್ಕಗಳು, ಮಲಬಾರ್ ತೀರ ಪ್ರದೇಶಗಳೊಂದಿಗೆ ಅರಬ್ಬರ ಏಕಸ್ವಾಮ್ಯ, ಕರ್ನಾಟಕದ ಪ್ರಮುಖ ಬಂದರುಗಳಲ್ಲಿ ಮತ್ತು ಮಲಬಾರ್ ಬಂದರುಗಳಲ್ಲಿ ಅರಬ್ಬರು, ಪ್ರಮುಖ ಮುಸ್ಲಿಂ ಪಂಗಡಗಳು, ಪೂರ್ವಭಾರತ ದೊಂದಿಗೆ ಅರಬ್ಬರ ವ್ಯಾಪಾರ, ಸಿಂದ್ ಪ್ರಾಂತ್ಯದೊಂದಿಗೆ ಅರಬ್ಬರ ವ್ಯಾಪಾರ, ಬಂಗಾಳ ಮತ್ತು ಭಾರತದ ದ್ವೀಪಗಳೊಂದಿಗೆ ಅರಬ್ಬರ ವ್ಯಾಪಾರ, ಅರಬ್ಬರು ವ್ಯಾಪಾರ ಕೈಗೊಂಡ ಪ್ರಮುಖ ಬಂದರುಗಳು, ಅರಬ್ಬರು ಮತ್ತು ವಿಜಯನಗರ ಸಾಮ್ರಾಜ್ಯದೊಂದಿಗಿನ ವ್ಯಾಪಾರ ವಹಿವಾಟು ಆಮದು ಮತ್ತು ರಫ್ತು ಪ್ರಮುಖ ಸರಕು ಮತ್ತು ಸೇವೆಗಳು, ಭಾರತದಲ್ಲಿ ಅರಬ್ ವ್ಯಾಪಾರ ಮತ್ತು ಸಂಸ್ಕೃತಿಯಿಂದ ಉಂಟಾದ ಪರಿಣಾಮಗಳು, ಕೊನೆಯದಾಗಿ ಅರಬ್ಬರ ವ್ಯಾಪಾರ ಅನವತಿಗೆ ಪ್ರಮುಖ ಕಾರಣಗಳು ಈ ಎಲ್ಲಾ ಅಂಶಗಳನ್ನು ಎರಡನೇ ಅಧ್ಯಾಯದಲ್ಲಿ ಸವಿಸ್ತಾರವಾಗಿ ಚರ್ಚಿಸಿದ್ದೇನೆ. ಹಾಗೆಯೇ ಭಾರತದಲ್ಲಿ ಅರಬ್ಬರ ಧಾರ್ಮಿಕ ಬೆಳವಣಿಗೆಗಳು ಮತಾಂತರ ನೀತಿ ಸಾಮಾಜಿಕ, ಆರ್ಥಿಕ ಬದಲಾವಣೆಗಳು ಹೀಗೆ ಈ ಎಲ್ಲಾ ಅಂಶಗಳನ್ನು ಈ ಅಧ್ಯಾಯದಲ್ಲಿ ಸಂಪೂರ್ಣವಾಗಿ ಚರ್ಚಿಸಿದ್ದೇನೆ.

**ಮೂರನೇ ಅಧ್ಯಾಯ**: ಮೂರನೇ ಅಧ್ಯಾಯದಲ್ಲಿ ವಿಜಯನಗರ ಸಾಮ್ರಾಜ್ಯ ಮತ್ತು ಪೋರ್ಚುಗೀಸರ ಡುವಿನ ಸಂಬಂಧಗಳನ್ನು ಕುರಿತು ಚರ್ಚಿಸಲಾಗಿದೆ. ಕ್ರಿ.ಶ.1498ರಲ್ಲಿ ಭಾರತಕ್ಕೆ ಮೊಟ್ಟ ಮೊದಲ ಯೂರೋಪಿಯನ್ನರಾಗಿ ಬಂದ ಪೋರ್ಚುಗೀಸರು ಆ ಕಾಲಘಟ್ಟದ ದಕ್ಷಿಣಭಾರತದ ದೊಡ್ಡ ಸಾಮ್ರಾಜ್ಯವಾದ ವಿಜಯನಗರ ಸಾಮ್ರಾಜ್ಯದೊಂದಿಗೆ ಉತ್ತಮವಾದ ಸಂಬಂಧವನ್ನು ಅಭಿವೃದ್ಧಿಪಡಿಸಿ ಕೊಂಡರು. ಈ ಅಧ್ಯಾಯದಲ್ಲಿ ಬಹಳ ಮುಖ್ಯವಾಗಿ ಕೆಲವೊಂದು ಪ್ರಮುಖ ಅಂಶಗಳನ್ನು ಚರ್ಚೆ ಮಾಡಲಾಗಿದೆ. ಪೋರ್ಚುಗೀಸರು ಭಾರತಕ್ಕೆ ಹೊಸ ಜಲಮಾರ್ಗವನ್ನು ಕಂಡು ಹಿಡಿಯಲು ಪ್ರೇರಕವಾದ ಕಾರಣ, ಪೋರ್ಚುಗೀಸರ ಆಗಮನ, ವ್ಯಾಪಾರದ ಉದ್ದೇಶದಿಂದ ಬಂದ ಪೋರ್ಚುಗೀಸರ ದಬ್ಬಾಳಿಕೆಗಳು, ಸ್ಥಳೀಯರೊಂದಿಗೆ ಅವರ ಸಂಬಂಧ, ಸಾಗರಾಧಿಕಾರಕ್ಕೆ ಅರಬ್ಬರು ಮತ್ತು ಸ್ಥಳೀಯರೊಂದಿಗೆ ಅವರ ಸಂಘರ್ಷಗಳು, ಗೋವಾದ ಆಕ್ರಮಣ, ಕರ್ನಾಟಕದ ಇತರ ಸಂಸ್ಥಾನಗಳೊಂದಿಗೆ ಸಂಬಂಧ, ಪೋರ್ಚುಗೀಸರು ಮತ್ತು ಆದಿಲ್ ಶಾಹಿಗಳ ಸಂಬಂಧ, ಪೋರ್ಚುಗೀಸರು ಮತ್ತು ಬಂಗವಾಡಿಯ ಬಂಗರ ನಡುವಿನ ಸಂಬಂಧ, ವಿಜಯನಗರ ಸಾಮ್ರಾಜ್ಯದ ರಾಜದೊಂದಿಗೆ ಸಂಬಂಧ, ಮುಖ್ಯವಾಗಿ, ನರಸಿಂಗರಾಯ ಅಥವಾ ವೀರ ನರಸಿಂಹ, ಕೃಷ್ಣದೇವರಾಯ, ಪೋರ್ಚುಗೀಸರ ನಿಯೋಗಗಳು,

ಅಚ್ಯುತರಾಯ, ವೀರ ಸದಾಶಿವರಾಯ, ಅಳಿಯರಾಮರಾಯ, ವೆಂಕಟ, ಮಲಬಾರ್ ತೀರ ಪ್ರದೇಶಗಳಲ್ಲಿ ಪೋರ್ಚುಗೀಸರು ಪೋರ್ಚುಗೀಸರ ಆರ್ಥಿಕ ಮತ್ತು ರಾಜಕೀಯ ಏಕಸ್ವಾಮ್ಯ, ಜಾಮೋರಿನ್‌ನೊಂದಿಗೆ ಸಂಬಂಧಗಳು, ಭಾರತದಲ್ಲಿ ಕ್ರೈಸ್ತಧರ್ಮದ ಪ್ರಚಾರ, ಕೃಷ್ಣದೇವರಾಯ ಕೈಸ್ತಧರ್ಮದ ಬೆಳಣಿಗೆಗೆ ನೀಡಿದ ಸಹಕಾರ ಪೋರ್ಚುಗೀಸರ ಕಾಲದ ಪ್ರಮುಖ ಬಂದರುಗಳು, ಬಂದರುಗಳಲ್ಲಿ ಅವರ ವ್ಯಾಪಾರ ವಾಣಿಜ್ಯ, ವಹಿವಾಟು ಆಮದು ಮತ್ತು ರಫ್ತು, ಮುಖ್ಯವಾಗಿ ಸಾಂಬಾರ ವ್ಯಾಪಾರ ಮತ್ತು ಕುದುರೆ ವ್ಯಾಪಾರದಲ್ಲಿ ಪೋರ್ಚುಗೀಸರ ಏಕಸ್ವಾಮ್ಯ, ಪೋರ್ಚುಗೀಸರ ಅವನತಿಗೆ ಕಾರಣಗಳು ಮತ್ತು ಅವರ ಕೊಡುಗೆಗಳನ್ನು ಕುರಿತು ಈ ಅಧ್ಯಾಯದಲ್ಲಿ ಸವಿಸ್ತಾರವಾಗಿ ವಿವರಿಸಲಾಗಿದೆ.

**ನಾಲ್ಕನೇ ಅಧ್ಯಾಯ :** ನಾಲ್ಕನೇ ಅಧ್ಯಾಯದಲ್ಲಿ ಮುಖ್ಯವಾಗಿ ವಿಜಯನಗರ ಸಾಮ್ರಾಜ್ಯ ಮತ್ತು ಏಷ್ಯಾ ರಾಷ್ಟ್ರಗಳೊಂದಿಗಿನ ಸಂಬಂಧವನ್ನು ಕುರಿತು ಚರ್ಚಿಸಲಾಗಿದೆ. ಮುಖ್ಯವಾಗಿ ವಿಜಯನಗರ ಮತ್ತು ಚೀನಾದ ನಡುವಿನ ಸಂಬಂಧಗಳು, ವ್ಯಾಪಾರ ಮತ್ತು ವಾಣಿಜ್ಯ ಸಂಬಂಧಗಳು, ಮಲಬಾರ್ ಬಂದರುಗಳಲ್ಲಿ ಚೀನಾದ ವ್ಯಾಪಾರಿಗಳ ಏಕಸ್ವಾಮ್ಯ, ವಿಜಯನಗರ ಸಾಮ್ರಾಜ್ಯಕ್ಕೆ ಭೇಟಿ ನೀಡಿದ್ದ ಚೀನಾ ಧರ್ಮಪ್ರಚಾರಕ ಮಂಡಲಿಗಳು, ವಿಜಯನಗರ ಸಾಮ್ರಾಜ್ಯ ಮತ್ತು ಚೀನಾದ ನಡುವೆ ಪ್ರಮುಖ ರಫ್ತು ಮತ್ತು ಆಮದು ಪ್ರಕ್ರಿಯೆಗಳು, ವಿಜಯನಗರ ಸಾಮ್ರಾಜ್ಯ ಮತ್ತು ಚೀನಾದ ನಡುವಿನ ವ್ಯಾಪಾರ ಮಾರ್ಗಗಳು, ಹಾಗೆಯೇ ವಿಜಯನಗರ ಸಾಮ್ರಾಜ್ಯ ಮತ್ತು ಶ್ರೀಲಂಕಾದ ನಡುವಿನ ಸಂಬಂಧಗಳನ್ನು ಸಹ ಚರ್ಚಿಸಲಾಗಿದೆ. ಶ್ರೀಲಂಕಾದ ಇತಿಹಾಸ ವೀರ ಕುಮಾರ ಕಪ್ಪಣ್ಣನ ಮತ್ತು ಶ್ರೀಲಂಕಾದ ನಡುವಿನ ಸಂಬಂಧ, ಎರಡನೇ ದೇವರಾಯ ಮತ್ತು ಶ್ರೀಲಂಕಾದ ನಡುವಿನ ಸಂಬಂಧ ಶ್ರೀಕೃಷ್ಣದೇವರಾಯ ಮತ್ತು ಶ್ರೀಲಂಕಾದ ನಡುವಿನ ಸಂಬಂಧ, ಕೃಷ್ಣಪ್ಪನಾಯಕ ಮತ್ತು ಶ್ರೀಲಂಕಾದ ನಡುವಿನ ಸಂಬಂಧ, ವಿಜಯನಗರ ಕಾಲದಲ್ಲಿ ಶ್ರೀಲಂಕಾದೊಂದಿಗೆ ಉಂಟಾದ ನೌಕಾದಂಡೆಯಾತ್ರೆಗಳು, ವಿಜಯನಗರ ಸಾಮ್ರಾಜ್ಯ ಮತ್ತು ಶ್ರೀಲಂಕಾದ ನಡುವಿನ ವ್ಯಾಪಾರ ಮತ್ತು ವಾಣಿಜ್ಯ ಸಂಬಂಧಗಳು, ರಫ್ತು ಮತ್ತು ಅಂದು ಪ್ರಕ್ರಿಯೆಗಳು, ವಿಜಯನಗರ ಸಾಮ್ರಾಜ್ಯ ಮತ್ತು ಶ್ರೀಲಂಕಾದ ನಡುವಿನ ವ್ಯಾಪಾರ ಮಾರ್ಗಗಳು, ಏಷ್ಯಾದ ಮತ್ತೊಂದು ರಾಷ್ಟ್ರವಾದ ಬರ್ಮಾ ಅಥವಾ ಮಯನ್ಮಾರ್ ಮತ್ತು ವಿಜಯನಗರ ಸಾಮ್ರಾಜ್ಯದ ನಡುವಿನ ಸಂಬಂಧಗಳನ್ನು ವಿವರಿಸಲಾಗಿದೆ. ವ್ಯಾಪಾರ ಮತ್ತು ವಾಣಿಜ್ಯ ಸಂಬಂಧಗಳು ಪ್ರಮುಖ ಸರಕುಗಳ ವಿನಿಮಯ ಕುರಿತಾಗಿ ನಾಲ್ಕನೇ ಅಧ್ಯಾಯದಲ್ಲಿ ಸವಿಸ್ತಾರವಾಗಿ ವಿವರಿಸಲಾಗಿದೆ.

**ಐದನೇ ಅಧ್ಯಾಯ :** ಐದನೇ ಅಧ್ಯಾಯದಲ್ಲಿ ಬಹಳ ಮುಖ್ಯವಾಗಿ ವಿಜಯನಗರ ಸಾಮ್ರಾಜ್ಯ ಮತ್ತು ಆಫ್ರಿಕಾ ಈಜಿಪ್ಟ್ ದೇಶಗಳ ನಡುವಿನ ಸಂಬಂದವನ್ನು ಕುರಿತು ಚರ್ಚಿಸಲಾಗಿದೆ. ಆಫ್ರಿಕಾದ ಸಂಕ್ಷಿಪ್ತ ಇತಿಹಾಸ ವಿಜಯನಗರ ಸಾಮ್ರಾಜ್ಯ ಮತ್ತು ಆಫ್ರಿಕಾದ ನಡುವಿನ ಸಂಬಂಧಗಳು ಜಲಸಂಚಾರ ಮತ್ತು ಸಮುದ್ರಯಾನದ ತಂತ್ರಗಾರಿಕೆ ಗುಲಾಮರ ವ್ಯಾಪಾರ ಸಂಘಟನೆ, ಗಾಜಿನ ಮಣಿಗಳ ವ್ಯಾಪಾರ , ಮಲಬಾರ್ ಬಂದರುಗಳಿಂದ ರಫ್ತಾಗುತ್ತಿದ್ದ ಪ್ರಮುಖ ಸರಕುಗಳು, ಮಡಿಕೆ, ಪಿಂಗಾಣಿ ಪಾತ್ರೆಗಳು, ರತ್ನ ಮಣಿಗಳು, ಮರ, ಸಾಂಬಾರ ಪದಾರ್ಥಗಳು ಹಾಗೆಯೇ ಆಫ್ರಿಕಾದಿಂದ ಭಾರತಕ್ಕೆ ರಫ್ತಾಗುತ್ತಿದ್ದ ಪ್ರಮುಖ ಸರಕುಗಳು, ದಂತ, ಗುಲಾಮರು ಪ್ರಾಣಿಗಳ ಚರ್ಮ, ಲೋಹಗಳು, ವ್ಯಾಪಾರದ ಪರಿಣಾಮ ಕುರಿತು ಚರ್ಚಿಸಲಾಗಿದೆ. ಹಾಗೆಯೇ ಈಜಿಪ್ಟ್ ಮತ್ತು ವಿಜಯನಗರ ಸಾಮ್ರಾಜ್ಯ ದೊಂದಿಗಿನ ಸಂಬಂಧವನ್ನು ಸಹ ಚರ್ಚಿಸಲಾಗಿದ್ದು ವ್ಯಾಪಾರ ಮತ್ತು ವಾಣಿಜ್ಯ ಸಂಬಂಧಗಳು, ಪ್ರಮುಖ ಮಾರ್ಗಗಳು, ಬಣ್ಣದ ವ್ಯಾಪಾರ, ಬಟ್ಟೆ ವ್ಯಾಪಾರ, ಸಾಂಬಾರ ಪದಾರ್ಥಗಳ ವ್ಯಾಪಾರ ಪ್ರಮುಖ ಬಂದರು ಪಟ್ಟಣಗಳ ಬೆಳವಣಿಗೆ ಕುರಿತು ಈ ಅಧ್ಯಾಯದಲ್ಲಿ ಪ್ರಮುಖವಾಗಿ ವಿವರಿಸಲಾಗಿದೆ.

**ಆರನೇ ಅಧ್ಯಾಯ :** ಆರನೇ ಅಧ್ಯಾಯದಲ್ಲಿ ಮುಖ್ಯವಾಗಿ ವಿಜಯನಗರ ಕಾಲದಲ್ಲಿ ಬೆಳವಣಿಗೆ ಹೊಂದಿದ್ದ ಪ್ರಮುಖ ನಗರಗಳು, ವ್ಯಾಪಾರ ಮಾರ್ಗಗಳು, ಆಂತರಿಕ ಮತ್ತು ವಿದೇಶೀ ವ್ಯಾಪಾರ ಕುರಿತು ಬಹಳಷ್ಟು ವಿಚಾರಗಳನ್ನು ಚರ್ಚಿಸಲಾಗಿದೆ. ಆಂತರಿಕ ಮತ್ತು ವಿದೇಶೀ ವ್ಯಾಪಾರದ ಲಕ್ಷಣಗಳು, ವಿಜಯನಗರ ಕಾಲದ ಪ್ರಮುಖ ವ್ಯಾಪಾರಿ ಮಾರ್ಗಗಳು, ಭೂ ಮಾರ್ಗಗಳು, ಜಲಮಾರ್ಗಗಳು, ಬಂದರುಗಳಿಂದ ವಿವಿಧ ಭಾಗಗಗಳಿಗೆ ಸಂಪರ್ಕ ಕಲ್ಪಿಸುತ್ತಿದ ಪ್ರಮುಖ ಮಾರ್ಗಗಳು ಅರೇಬಿಯಾ ಪರ್ಷಿಯಾಕ್ಕೆ, ಚೀನಾ ಮಲಯಾ ಮತ್ತು ಯುರೋಪಿಗೆ ಸಂಪರ್ಕ ಕಲ್ಪಿಸುತ್ತಿದ್ದ ಪ್ರಮುಖ ಜಲಮಾರ್ಗಗಳು, ವಿಜಯನಗರ ಕಾಲದ ಪ್ರಮುಖ ಬಂದರುಗಳು ಕರ್ನಾಟಕ ಕರಾವಳಿ ಬಂದರುಗಳ ಸಾಮಾನ್ಯ ಲಕ್ಷಣಗಳು ತುಳುನಾಡಿನ ರಾಜ್ಯಪಾಲರು, ಈ ಕಾಲದ ಪ್ರಮುಖ ನಗರಗಳು, ನಗರಗಳ ಬೆಳವಣಿಗೆಗೆ ಪೂರಕವಾದ ಭೌಗೋಳಿಕ, ಆಡಳಿತಾತ್ಮಕ, ಆರ್ಥಿಕ, ವಾಣಿಜ್ಯ, ಧಾರ್ಮಿಕ , ಸೈನಿಕ ಭೌದ್ಧಿಕ, ಲಲಿತಕಲಾ, ಶೈಕ್ಷಣಿಕ ಅಂಶಗಳು, ಪ್ರಮುಖ ನಗರಗಳಾದ ಬಂಕಾಪುರ, ಪೆನುಗೊಂಡ, ಗೋವಾ, ಕೃಷ್ಣಾಪುರ, ಮಂಗಳೂರು, ಕ್ಯಾಲಿಕಟ್ ವಿಜಯನಗರ ಪ್ರಮುಖ ವ್ಯಾಪಾರಿ ಸಂಘಗಳು, ಬಣಜಿಗರು, ವೀರ ಬಣಜಿಗರು, ಶೆಟ್ಟಿಗಳು ವಿದೇಶೀ ವ್ಯಾಪಾರಿ ಸಂಘಗಳಾದ ಹಂಜಮಾನರು ವ್ಯಾಪಾರಿ ಸಂಘಗಳ ಕಾರ್ಯಗಳು, ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯಲ್ಲಿ ಸಂತೆಗಳ ಪಾತ್ರ, ವ್ಯಾಪಾರ ಮತ್ತು ವಾಣಿಜ್ಯದ

ಬೆಳವಣಿಗೆಯಲ್ಲಿ ಉದ್ಯಮಗಳ ಪಾತ್ರ, ಲೋಹದ ಉದ್ಯಮಗಳು ಮಡಿಕೆ ತಯಾರಿಕೆ ಉದ್ಯಮಗಳು, ಉಪ್ಪು ತಯಾರಿಕೆ ಉದ್ಯಮಗಳು,. ಮರಗೆಲಸ ಉದ್ಯಮ ಹೀಗೆ ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಕುರಿತು ಈ ಅಧ್ಯಾಯದಲ್ಲಿ ಸವಿಸ್ತಾರವಾಗಿ ವಿವರಿಸಲಾಗಿದೆ.

**ಏಳನೇ ಅಧ್ಯಾಯ :** ಇದು ಕೊನೆಯ ಅಧ್ಯಾಯವಾಗಿದ್ದು ನನ್ನ ಸಂಶೋಧನೆಯ ಒಟ್ಟಾರೆ ಫಲಿತಾಂಶದ ಸಂಕ್ಷಿಪ್ತವಾದ ವಿವರಣೆಗಳನ್ನು ಒಳಗೊಂಡಿದೆ. 'ವಿಜಯನಗರ ಕಾಲದ ಸಾಗರೋತ್ತರ ಸಂಬಂಧಗಳು' ಎಂಬ ವಿಷಯವನ್ನು ಕುರಿತು ನನ್ನ ಸಂಶೋಧನಾ ಪ್ರಬಂಧದ ಫಲಿತಗಳು, ಸಂಕ್ಷಿಪ್ತ ವಿವರಣೆ, ಸಂಶೋಧನೆಗೆ ಸಂಬಂಧಿಸಿದ ಕೆಲವೊಂದು ಭೂಪಟಗಳು, ಚಿತ್ರಗಳು ಮತ್ತು ಆಕರ ಗ್ರಂಥಗಳನ್ನು ಒಳಗೊಂಡಿದೆ. ನನ್ನ ಸಂಪೂರ್ಣ ಸಂಶೋಧನೆಯ ಚಿತ್ರಣವನ್ನು ಈ ಅಧ್ಯಾಯವು ಒದಗಿಸಿಕೊಡುತ್ತದೆ.

ಹೀಗೆ ನನ್ನ ಸಂಶೋಧನೆಯ ವಿಷಯವನ್ನು ಪ್ರಮುಖವಾಗಿ ಏಳು ಅಧ್ಯಾಯಗಳಾಗಿ ವಿಂಗಡಿಸಿ ಪ್ರತಿ ಅಧ್ಯಾಯದಲ್ಲಿಯೂ ಹಲವಾರು ಅಂಶಗಳನ್ನು ಚರ್ಚಿಸಿ ನನ್ನ ಸಂಶೋಧನೆಯ ಉದ್ದೇಶವನ್ನು ಸಾಧ್ಯವಾದ ಮಟ್ಟಿಗೆ ಈಡೇರಿಸುವ ಪ್ರಯತ್ನವನ್ನು ಮಾಡಲಾಗಿದೆ.

# ಅಧ್ಯಾಯ–2

## ವಿಜಯನಗರ ಸಾಮ್ರಾಜ್ಯ ಮತ್ತು ಅರಬ್ಬರ ಸಂಬಂಧಗಳು

### 2.1 ಅರಬ್ಬರ ಕಾಲ

ವಿಜಯನಗರ ಮತ್ತು ಅರಬ್ಬರ ಸಂಬಂಧವು ಪ್ರಾಚೀನ ಕಾಲದಿಂದಲೂ ಬೆಳವಣಿಗೆ ಹೊಂದಿದೆ. ಅರಬ್ಬರು ದಿನಬಳಕೆಯ ಪದಾರ್ಥಗಳನ್ನು ಯೂರೋಪಿನ ಮಾರುಕಟ್ಟೆಗಳಿಗೆ ರಫ್ತು ಮಾಡುತ್ತಿದ್ದರು. ಮತ್ತು ಭಾರತದ ಪದಾರ್ಥಗಳಾದ ಸಾಂಬಾರ ಪದಾರ್ಥಗಳು ಶುಂಠಿ ಮತ್ತು ಬಟ್ಟೆಗಳನ್ನು ಭಾರತದಲ್ಲಿ ಕೊಂಡುಕೊಂಡು ತಮ್ಮ ದೇಶಗಳಿಗೆ ರಫ್ತು ಮಾಡುತ್ತಿದ್ದರು. ಭಾರತಕ್ಕೆ ಮಹಮ್ಮದ್ದರ ಆಕ್ರಮಣದ ನಂತರ ಅಶ್ವದಳವು ಒಂದು ಪ್ರಮುಖವಾದ ಯುದ್ಧಬಲವಾಯಿತು. ಹಾಗೂ ಅರಬ್ ದೇಶದ ಅದರಲ್ಲೂ ಮುಖ್ಯವಾಗಿ ಪರ್ಷಿಯಾದ ಕುದುರೆಗಳಿಗೆ ಭಾರತದಲ್ಲಿ ಅಪಾರವಾದ ಬೇಡಿಕೆ ಉಂಟಾಯಿತು. ಮುಸ್ಲಿಂ ರಾಜ್ಯಗಳು ಮತ್ತು ಹಿಂದೂ ರಾಜ್ಯಗಳೆರಡು ಸಹ ಆಶ್ವಬಲವನ್ನು ಹೆಚ್ಚಿಸಿಕೊಳ್ಳಲು ಬಹಳಷ್ಟು ಪ್ರಯತ್ನಮಾಡಿ ಸಫಲಗೊಂಡವು.[1] ಅಶ್ವಗಳು ಭಾರತದ ಮಣ್ಣಿನಲ್ಲಿ ಏಳಿಗೆ ಹೊಂದಿರಲಿಲ್ಲವಾದ ಕಾರಣದಿಂದ ಅರೇಬಿಯಾ ಮತ್ತು ಪರ್ಷಿಯಾಗಳಿಂದ ಆಮದು ಮಾಡಿಕೊಳ್ಳಲಾಯಿತು. ತದನಂತರ ಅಶ್ವ ವ್ಯಾಪಾರವು ಒಂದು ಲಾಭದಾಯಕವಾದ ವ್ಯಾಪಾರವಾಯಿತು. ಈ ಪ್ರಯೋಜನವನ್ನು ಸಮರ್ಪಕವಾಗಿ ಬಳಸಿಕೊಂಡ ಅರಬ್ಬರು ಅತಿ ಹೆಚ್ಚು ಆಧಾಯವನ್ನು ಗಳಿಸಲು ಆರಂಭಿಸಿದರು. ಅರಬ್ಬರು ತಾತ್ವಿಕವಾದ ಅಶ್ವ ವ್ಯಾಪಾರದ ಏಕಸಾಮ್ಯವನ್ನು ಪಡೆದುಕೊಂಡು, ತಮ್ಮ ಧಾರ್ಮಿಕ ತಾರತಮ್ಯದ ನೀತಿಯಿಂದಾಗಿ ಮುಸ್ಲಿಮರಿಗೆ ಅತಿ ಹೆಚ್ಚು ಕುದುರೆಗಳನ್ನು ಸರಬರಾಜು ಮಾಡಿ ಭಾರತದ ಹಿಂದೂ ರಾಜರಿಗೆ ಅದರಲ್ಲೂ ಮುಖ್ಯವಾಗಿ ವಿಜಯನಗರದ ಅರಸರಿಗೆ ಕುದುರೆಗಳ ಸರಬರಾಜು ನಿಲ್ಲಿಸಿದರು.

ಅರಬ್ಬರು 2ನೇ ವಿರೂಪಾಕ್ಷನನ್ನು ಪ್ರಚೋದಿಸಿದರು. ಈ ಕಾರಣದಿಂದಾಗಿ 2ನೇ ವಿರೂಪಾಕ್ಷನು ತನ್ನ ಸೈನ್ಯಕ್ಕೆ ಗೋವಾದಲ್ಲಿರುವ ಎಲ್ಲಾ ಮುಸ್ಲಿಮರನ್ನು ಸಾಮೂಹಿಕವಾಗಿ ಹತ್ಯೆ ಮಾಡುವಂತೆ ಆಜ್ಞೆ ಮಾಡಿದನು. ಆದರೆ ಈ ಕಾರ್ಯ ಸುಗಮವಾಗಿ ನಡೆಯಲಿಲ್ಲ. ಹಿಂದೂ ರಾಜರು ಮುಸ್ಲಿಂ ವ್ಯಾಪಾರಿಗಳನ್ನು ತಮ್ಮ ಬಂದರುಗಳಿಂದ ಹೊರಗಿಡುವಲ್ಲಿ ಯಶಸ್ವಿಯಾದರು. ಮತ್ತು ಈ ಕಾರಣದಿಂದಾಗಿ ವಿಜಯನಗರ ಸಾಮ್ರಾಜ್ಯಕ್ಕೆ ಕುದುರೆಗಳ ಪೂರೈಕೆ ಕುಂಠಿತಗೊಂಡಿತು.[2] 2ನೇ ವಿರೂಪಾಕ್ಷನ ನಂತರ ಸಾಳ್ವ ನರಸಿಂಹನು ವಿಜಯನಗರ ಸಾಮ್ರಾಜ್ಯದ ಅರಸನಾದನು. ಇವನು ವಿಜಯನಗರ ಸಾಮ್ರಾಜ್ಯದ ಗೌರವ ಮತ್ತು ಪ್ರತಿಷ್ಠೆಯನ್ನು

ತನ್ನ ನೆರೆಯ ಮುಸ್ಲಿಂ ರಾಜ್ಯಗಳ ಮುಂದೆ ಹೆಚ್ಚಿಸುವ ಪ್ರಯತ್ನ ಮಾಡಿದನು. ಇವನು ತನ್ನ ಸೈನ್ಯವನ್ನು ಉನ್ನತೀಕರಿಸಲು ಮುಸ್ಲಿಮರ ಮನವೊಲಿಸಿ ತನ್ನ ಸಾಮ್ರಾಜ್ಯಕ್ಕೆ ಕುದುರೆಗಳನ್ನು ಮತ್ತೆ ಪೂರೈಕೆ ಮಾಡಿಸಿಕೊಳ್ಳಲು ಪ್ರಯತ್ನಿಸಿದನು.

ನ್ಯೂನಿಚ್‌ನ ಪ್ರಕಾರ "ಸಾಳ್ವ ನರಸಿಂಹನು ಓರ್ಮಜ್ ಮತ್ತು ಅಡಂ ದೇಶದಿಂದ ಕುದುರೆಗಳನ್ನು ಆಮದು ಮಾಡಿಕೊಳ್ಳಲು ಕಾರಣವಾದನು. ಇದರಿಂದಾಗಿ ವ್ಯಾಪಾರಗಾರರು ಅತಿಯಾದ ಲಾಭಗಳಿಸಿದರು. ವ್ಯಾಪಾರಸ್ಥರು ಎಷ್ಟು ಹಣವನ್ನು ಕೇಳುತ್ತಾರೋ ಅಷ್ಟು ಹಣವನ್ನು ಕೊಟ್ಟರು. ವ್ಯಾಪಾರಸ್ಥರು ಸತ್ತ ಅಥವಾ ಜೀವಂತವಾಗಿ ಕೊಟ್ಟ ಕುದುರೆಗಳನ್ನು ಸಾಳ್ವ ನರಸಿಂಹನು ಸ್ವೀಕರಿಸಿದ್ದನು. ಮೂರು ಕುದುರೆಗಳಿಗೆ ಒಂದು ಸಾವಿರ ಪಗೋಡಗಳು ಕೆಲವೊಂದು ಕುದುರೆಗಳು ಸಮುದ್ರದ ಬಳಿಯೇ ಸತ್ತರೆ, ಕೆಲವೊಂದು ದಾರಿ ಮಧ್ಯದಲ್ಲಿ ಸತ್ತವು. ಕೊನೆಗೆ ವಿಜಯನಗರ ಸಾಮ್ರಾಜ್ಯಕ್ಕೆ ಕೇವಲ ಕುದುರೆಯ ಬಾಲವಷ್ಟೇ ತಲುಪುತ್ತಿತ್ತು. ಸಾಳ್ವ ನರಸಿಂಹನು ಇದಕ್ಕೆ ಹಣವನ್ನು ನೀಡಿದ್ದನು."[3]

ಬಹಳ ವರ್ಷಗಳಿಂದಲೂ ಈ ವ್ಯಾಪಾರ ಕ್ಷೇತ್ರದಲ್ಲಿ ಯಾವುದೇ ರೀತಿಯ ಸ್ಪರ್ಧೆಗಳಿರಲಿಲ್ಲ. ಅರಬ್ಬರು ಮಾತ್ರವೇ ಇದರ ಸಂಪೂರ್ಣವಾದ ಏಕಸ್ವಾಮ್ಯವನ್ನು ಹೊಂದಿದ್ದರು. ಆದರೆ ಅವರು ಹೆಚ್ಚು ಕಾಲ ಏಕಾಂಗಿಯಾಗಿ ಭಾರತದ ರಾಜರಿಗೆ ಕುದುರೆ ಸರಬರಾಜು ಮಾಡುವ ಸ್ಥಿತಿಯಲ್ಲಿ ಇರಲಿಲ್ಲ. 15ನೇ ಶತಮಾನದ ಕೊನೆಯ ಭಾಗದಲ್ಲಿ ಭಾರತಕ್ಕೆ ಪೋರ್ಚುಗೀಸರ ಪಾದಾರ್ಪಣೆ ಆದ ನಂತರ ಅರಬ್ಬರನ್ನು ಸಂಪೂರ್ಣವಾಗಿ ಭಾರತದಿಂದ ಹೊರ ಹಾಕುವಲ್ಲಿ ಅವರು ಯಶಸ್ವಿಯಾದರು.

### 2.2 ಅರಬ್ಬರ ವ್ಯಾಪಾರದ ಏಕಸ್ವಾಮ್ಯ:

ವಿಜಯನಗರ ಪೂರ್ವ ವ್ಯಾಪಾರ ಸಂಬಂಧವು ಪರ್ಷಿಯನ್ ಕೊಲ್ಲಿ ಮತ್ತು ಚೀನಾದ ಸಮುದ್ರ ಮಾರ್ಗಗಳೊಂದಿಗೆ ಏಷ್ಯಾ ಮತ್ತು ಅರಬ್ ದೇಶಗಳೊಂದಿಗೆ ವ್ಯಾಪಕವಾಗಿ ನಡೆಯುತ್ತಿತ್ತು. ವ್ಯಾಪಾರದಿಂದಾಗಿ ವಿವಿಧ ದೇಶಗಳೊಂದಿಗೆ ಭಾರತ ವ್ಯಾಪಾರ ಸಂಪರ್ಕ ಹೊಂದಿತ್ತು. 10ನೇ ಶತಮಾನದ ಹಿಂದಿನಿಂದಲೂ ಭಾರತ ಮತ್ತು ಇತರ ದೇಶಗಳೊಂದಿಗೆ ಆಮದು ಮತ್ತು ರಫ್ತು ವ್ಯಾಪಕವಾಗಿ ನಡೆಯುತ್ತಿತ್ತು.[4] ಅರಬ್ಬರು ಭಾರತದ ವಿದೇಶಿ ವ್ಯಾಪಾರದಲ್ಲಿ ಅಗ್ರಗಣ್ಯಸ್ಥಾನ ಪಡೆದಿದ್ದರು. ಅರೇಬಿಯಾದ ದಾಖಲೆಗಳು ಮತ್ತು ಚೀನಾದ ದಾಖಲೆಗಳು ಹಾಗೂ ಭಾರತದ ಸಮಕಾಲೀನ ದಾಖಲೆಗಳು ಭಾರತ ಮತ್ತು ಅರಬ್ಬರ ಸಂಬಂಧದ ಬಗ್ಗೆ

ಮಾಹಿತಿ ನೀಡುತ್ತವೆ. ಭಾರತದ ದಾಖಲೆಗಳು ಅತಿ ಹೆಚ್ಚಾಗಿ ಭಾರತದ ವ್ಯಾಪಾರ ಮತ್ತು ವಾಣಿಜ್ಯದ ಬಗ್ಗೆ ಮಾಹಿತಿ ದೊರಕಿಸಿಕೊಡುವುದಿಲ್ಲ. ಕೆಲವೊಂದು ಭಾರತೀಯ ಕಥೆಗಳು ಭಾರತವು ಮಧ್ಯ ಏಷ್ಯಾ ಮತ್ತು ಆಗ್ನೇಯ ಏಷ್ಯಾ ರಾಷ್ಟ್ರಗಳೊಂದಿಗೆ ವ್ಯಾಪಾರವನ್ನು ಹೊಂದಿತ್ತೆಂದು ತಿಳಿಸುತ್ತವೆ. ಈ ಎಲ್ಲಾ ಕಥೆಗಳು ಭಾರತದ ಪುರಾತನ ಗ್ರಂಥವಾದ ಗುಣಾಢ್ಯನ ಬೃಹತ್ ಕಥಾವನ್ನು ಆದರಿಸಿರುವ ಕಥೆಗಳಾಗಿವೆ. ಭಾರತದ ದಾಖಲೆಗಳು ಮೂಲಭೂತದ ಕೊರತೆಯನ್ನು ಹಾಗೂ ವಾಣಿಜ್ಯ ಅಂಕಿಅಂಶಗಳ  ನ್ಯೂನತೆಯನ್ನು ಹೊಂದಿವೆ.

ಭಾರತೀಯ ದಾಖಲೆಗಳ ಪ್ರಕಾರ ಪಶ್ಚಿಮ ಕರಾವಳಿಯು ಸಂಪೂರ್ಣವಾಗಿ ಅರಬ್ಬರ ವ್ಯಾಪಾರ ಕೇಂದ್ರಗಳಾಗಿ ಬೆಳವಣಿಗೆ ಹೊಂದಿದ್ದವು. ಪ್ರಾರಂಭದಲ್ಲಿ ಅವರು ಶಾಶ್ವತವಾದ ನೆಲೆಗಳನ್ನು ನಿರ್ಮಿಸಲಿಲ್ಲ. ಇದರ ಬದಲಾಗಿ ಆ ಭಾಗಗಳಲ್ಲಿ ಮಾರುತಗಳ ಬದಲಾಗುವಿಕೆಗೆ ಕಾಯುತ್ತಿದ್ದರು ಮತ್ತು ಸರಕುಗಳನ್ನು ಪಡೆದುಕೊಳ್ಳಲು ಅಲ್ಲಿ ವಾಸ್ತವ್ಯ ಹೂಡುತ್ತಿದ್ದರು. ಸಾಗರ ವ್ಯಾಪಾರ ಬೆಳವಣಿಗೆ ಹೊಂದಿದಂತೆಲ್ಲ ಹಾಗೂ ಜಲಮಾರ್ಗ ಬದಲಾವಣೆ ಹೊಂದಿದಂತೆಲ್ಲ ಬಾರತದಲ್ಲಿ ಮೂಲಭೂತ ಮುಸ್ಲಿಂ ಪಂಗಡವು ಶೀಘ್ರವಾಗಿ ಬೆಳವಣಿಗೆ ಪಡೆಯಿತು. ಭಾರತದಲ್ಲಿ ಮುಸ್ಲಿಮರ ಜನಸಂಖ್ಯೆ ಮೂರು ಕಾರಣಗಳಿಂದಾಗಿ ಬೆಳವಣಿಗೆ ಹೊಂದಿತ್ತು. (1) ಭಾರತದ ಹಿಂದೂಗಳನ್ನು ಮುಸ್ಲಿಮರು ತಮ್ಮ ಧರ್ಮಕ್ಕೆ ಮತಾಂತರಿಸುವ ಮೂಲಕ ಹೆಚ್ಚಿಸಿಕೊಂಡರು. (2) ಭಾರತೀಯರೊಂದಿಗೆ ವಿವಾಹ ಸಂಬಂಧವನ್ನು ಏರ್ಪಡಿಸಿಕೊಳ್ಳುವ ಮೂಲಕ ಹೆಚ್ಚಿಸಿಕೊಂಡರು. (3) ಭಾರತೀಯರನ್ನು ಮುಸ್ಲಿಂ ದರ್ಜೆಯ ವ್ಯಾಪಾರಿಗಳಾಗಿ ಸೇರಿಸಿಕೊಂಡಿದ್ದು ಮುಸ್ಲಿಮರ ಸಂಖ್ಯೆ ಹೆಚ್ಚಾಗಲು ಕಾರಣವಾಯಿತು.[5]

ಉತ್ತರ ಭಾರತದಲ್ಲಿ ಟರ್ಕರು ತಮ್ಮ ಆದಿಪತ್ಯವನ್ನು ಸ್ಥಾಪಿಸಿದ ಮೇಲೆ ಅರಬ್ಬರು ತಮ್ಮ ವ್ಯಾಪಾರವನ್ನು ಮತ್ತಷ್ಟು ಅಭಿವೃದ್ಧಿ ಪಡಿಸಿಕೊಂಡರು. ಹಾಗೂ ಮುಸ್ಲಿಮ್ ಧರ್ಮದ ಪ್ರಭಾವವು ದಕ್ಷಿಣ ಭಾರತದ ಕರಾವಳಿ ಭಾಗಗಳಲ್ಲಿಯೂ ಹರಡಿತು. ಅರಬ್ಬರು ಪ್ರಾರಂಭದಿಂದಲೂ ಭಾರತದ ವಸ್ತುಗಳ ಬಗ್ಗೆ ಬಹಳಷ್ಟು ಕುತೂಹಲ ಹೊಂದಿದ್ದರು. ಒಂದು ಸಾಮಾನ್ಯ ನಂಬಿಕೆಯ ಪ್ರಕಾರ "ಭಾರತದಲ್ಲಿ ಸಮುದ್ರಗಳು ಮುತ್ತಿಗೆ ಹೆಸರುವಾಸಿಯಾಗಿವೆ. ಪರ್ವತಗಳು ಹವಳಗಳಿಗೆ ಹೆಸರುವಾಸಿಯಾಗಿವೆ. ಮತ್ತು ಮರಗಳು ಶೋಭಾಯಮಾನವಾಗಿವೆ. ಮಸ್ಲಿಮರು ಧಾರ್ಮಿಕವಾಗಿ ಮತ್ತು ರಾಜಕೀಯವಾಗಿ ತಮ್ಮನ್ನು ತಾವು ಏಕೀಕರಿಸಿಕೊಂಡ ನಂತರ ತಮ್ಮ ಗಮನವನ್ನು ಸಂಪೂರ್ಣವಾಗಿ ಭಾರತದ ಮೇಲೆ ಕೇಂದ್ರೀಕರಿಸಿದರು. ಮೊದಲ ಅರಬ್ಬರ ದಾಳಿಯು ಕ್ರಿ.ಶ. 636ರಲ್ಲಿ ನಡೆಯಿತು. ಪ್ರವಾದಿ ಮಹಮ್ಮದ್‌ನ ಮರಣದ ಕೆಲವೇ ವರ್ಷಗಳ ನಂತರ, ಬರಾನ್

ಪ್ರಾಂತ್ಯದ ರಾಜ್ಯಪಾಲನು ಥಾಣ ಮತ್ತು ಬ್ರೋಚ್‌ಗಳ ಮೇಲೆ ಸೋಲಿನ ದಾಳಿ ಮಾಡಿದನು. ಕ್ರಿ.ಶ712ರಲ್ಲಿ ಅರಬ್ಬರು ಸಿಂದ್ ಮೇಲೆ ದಾಳಿ ಮಾಡಿ ನಂತರ ತಮ್ಮ ಪ್ರಭಾವವನ್ನು ಭಾರತದ ಮೇಲೆ ಹೆಚ್ಚಿಸಿಕೊಂಡರು.[6]

ಭಾರತೀಯರು ಅರಬ್ಬರ ದಾಳಿಯಿಂದ ಸಾಕಷ್ಟು ಆಘಾತಕ್ಕೀಡಾದರು. ಮತ್ತು ಭಾರತೀಯ ರಾಜರು ಅರಬ್ಬರ ದಾಳಿಯನ್ನು ತಮ್ಮ ತಮ್ಮ ಬಂದರುಗಳಲ್ಲಿ ಪ್ರತಿಭಟಿಸಿದರು. ನಂತರ ಅವರನ್ನು ತಮ್ಮ ಆಸ್ಥಾನಕ್ಕೆ ಸ್ವಾಗತಿಸಿ ಅನುಕಂಪದಿಂದ ಉಪಚರಿಸಿದರು. ಅಲ್‌ಮಸೂದಿಯ ಪ್ರಕಾರ 10ನೇ ಶತಮಾನದ ಸಂದರ್ಭದಲ್ಲಿ ಸುಮಾರು ಹತ್ತು ಸಾವಿರ ಮುಸ್ಲಿಮರಿದ್ದರೆಂದು ಹೇಳಿದ್ದಾನೆ. ಕೆಲವರನ್ನು ಬಿಯಸಾರರೆಂದು ಕರೆಯುವರು. ಇವರು ಭಾರತದಲ್ಲಿ ಜನಿಸಿದ ಮುಸ್ಲಿಮರು ಉಳಿದ ಮುಸ್ಲಿಮರೆಂದರೆ ಸಿರಪ್, ಓಮನ್, ಬಸ್ರಾ ಮತ್ತು ಬಾಗ್ದಾದ್‌ನಿಂದ ಬಂದು ಭಾರತದಲ್ಲಿ ನೆಲೆಸಿದ್ದ ಮುಸ್ಲಿಂ ವರ್ಗವಾಗಿತ್ತು. ಇವರಲ್ಲಿ ಕೆಲವು ಮುಸ್ಲಿಮರು ಶ್ರೀಮಂತ ವ್ಯಾಪಾರಿಗಳಾಗಿದ್ದರು. ಅವರು ಎಲ್ಲೆಲ್ಲಿ ಸಂಘಟಿತರಾಗಿದ್ದರು ಅಲ್ಲೆಲ್ಲಾ ಅವರು ಪ್ರಾರ್ಥನೆ ಮಾಡುವ ಉದ್ದೇಶದಿಂದ ಮಸೀದಿಗಳನ್ನು ನಿರ್ಮಿಸಿಕೊಂಡಿದ್ದರು. ಇವರು ರಾಜಕೀಯವಾಗಿ ತಮ್ಮನ್ನು ಬಲಿಷ್ಠ ಪಡಿಸಿಕೊಳ್ಳಲು ಪ್ರಯತ್ನಿಸಿದರು ಇದಲ್ಲದೆ ಅವರಿಗೆ ಸಂಪೂರ್ಣವಾದ ಧಾರ್ಮಿಕ ಸ್ವಾತಂತ್ರವಿತ್ತು.[7]

10ನೇ ಶತಮಾನದ ನಂತರ ಅರಬ್ ವ್ಯಾಪಾರಸ್ಥರು ತಮ್ಮ ಆರ್ಥಿಕ ಚಟುವಟಿಕೆಗಳನ್ನು ಅಂತರಿಕ ನಗರ ಪ್ರದೇಶಗಳಿಗೆ ವಿಸ್ತರಿಸಿದರು. ಭಾರತದ ಪ್ರಮುಖ ನಗರ ಪ್ರದೇಶಗಳಾದ ಅಹಮದಾಬಾದ್, ಕ್ಯಾಂಬೆ, ಸೋಪಾರ ಮತ್ತು ಮಂಗಳೂರುಗಳಲ್ಲಿ ಮುಸ್ಲಿಮರು ತಮ್ಮ ಆಧಿಪತ್ಯವನ್ನು ಸ್ಥಾಪಿಸಿದರು. ಭಾರತದ ರಾಜರು ಮುಸ್ಲಿಮರನ್ನು ಆತ್ಮೀಯವಾಗಿ ಸ್ವಾಗತಿಸಿ ಅವರ ಆಸ್ತಿ ಪಾಸ್ತಿಗಳನ್ನು ಸಂರಕ್ಷಿಸುವ ಭರವಸೆ ನೀಡಿದರು. ಕೆಲವು ಮುಸ್ಲಿಂ ಇತಿಹಾಸಕಾರರ ಪ್ರಕಾರ ಭಾರತದಲ್ಲಿ ಅರಬ್ಬರ ಸಂಖ್ಯೆ ಹೆಚ್ಚಳವಾದಂತೆ ಅವರು ಬಹಳಷ್ಟು ಪ್ರಭಾವಶಾಲಿಗಳಾದರು. ಹಾಗೂ ಸ್ಥಳೀಯ ನವಾಬರು ಮತ್ತು ರಾಜರೊಂದಿಗೆ ತಾವು ಯುದ್ಧ ಮಾಡುವ ಮಟ್ಟಿಗೆ ತಮ್ಮ ಶಕ್ತಿಯನ್ನು ಹೆಚ್ಚಿಸಿಕೊಂಡಿದ್ದರು.[8] ರಸೀದುದ್ದೀನನ ಪ್ರಕಾರ ಕರ್ನಾಟಕ ಮಲಬಾರ್ ತೀರ ಪ್ರದೇಶದಲ್ಲಿ ಮತ್ತು ಕೋರಮಂಡಲದ ತೀರ ಪ್ರದೇಶಗಳಲ್ಲಿ ಮುಸ್ಲಿಮರ ಸಂಖ್ಯೆ ಅಧಿಕವಾಗಿದ್ದು ಅವರು ಕುದುರೆಗಳನ್ನು ಭಾರತದಲ್ಲಿ ಮಾರಾಟ ಮಾಡಿ ತಮ್ಮ ಹಣ ಮತ್ತು ಅಧಿಕಾರವನ್ನು ಹೆಚ್ಚಿಸಿಕೊಂಡರು.

13ನೇ ಶತಮಾನಕ್ಕೆ ಸಂಬಂಧಿಸಿರುವ ಕೆಲವು ಶಾಸನಗಳ ಪ್ರಕಾರ ಹಲವಾರು ಮುಸ್ಲಿಂ ವ್ಯಾಪಾರಸ್ಥರು ಮತ್ತು ನಾವಿಕರು ಭಾರತದ ಕರಾವಳಿ ಭಾಗಗಳಲ್ಲಿ ಹೆಚ್ಚಾಗಿ ನೆಲೆಸಿದ್ದರು. ಈ ಶಾಸನಗಳು ಅರೇಬಿಯಾದ ಮಾದರಿಯಲ್ಲಿದ್ದು ಕ್ರಿ.ಶ.1218–1291ರ ಸಂದರ್ಭದಲ್ಲಿ ರಚನೆಯಾಗಿವೆ. ಈ ದಾಖಲೆಗಳ ಪ್ರಕಾರ ಮುಸ್ಲಿಮರು ಕೇವಲ ಕರಾವಳಿ ತೀರಗಳಲ್ಲಿ ಮಾತ್ರವಲ್ಲದೆ ಉಳಿದ ಪ್ರಮುಖ ನಗರಗಳಾದ ಅನಿಲವಾಡ ಹಾಗೂ ಕರ್ನಾಟಕದ ಪ್ರಮುಖ ಕರಾವಳಿ ಭಾಗಗಳಾದ ಮಂಗಳೂರು, ಹೊನ್ನಾವರ, ಭಟ್ಕಳ ಮುಂತಾದ ಕಡೆ ತಮ್ಮ ಪ್ರಭಾವ ಬಲಪಡಿಸಿಕೊಂಡರು.

ಶಾಸನಗಳಲ್ಲಿ ಉಲ್ಲೇಖಿಸಿರುವಂತೆ ಎಲ್ಲಾ ಅರಬ್ ಮತ್ತು ಪರ್ಷಿಯಾದ ವ್ಯಾಪಾರಸ್ಥರು ಭಾರತದಲ್ಲಿ ಸ್ವಾಗತಿಸಲ್ಪಟ್ಟಿದ್ದರು. ಮಾತ್ರವಲ್ಲದೆ ಅವರು ಹಡಗುಗಳ ಒಡೆತನ ಹೊಂದಿ ಭಾರತದಲ್ಲಿ ವ್ಯಾಪಾರವನ್ನು ನಡೆಸುತ್ತಿದ್ದರು. ನಾವಿಕರ ರಾಜ ಮತ್ತು ಮುಖ್ಯ ವ್ಯಾಪಾರಸ್ಥರಾಗಿದ್ದ ಹಾಜ್ ಇಬ್ರಾಹಿಂನ ಪ್ರಕಾರ “ಅರಬ್ಬರು ವೀಳ್ಯದೆಲೆ ಮತ್ತು ಅಡಿಕೆ ವ್ಯಾಪಾರವನ್ನು ಅಧಿಕವಾಗಿ ಮಾಡುತ್ತಿದ್ದರು. ಹಾಗೂ ಈ ವೀಳ್ಯದೆಲೆ ಅಡಿಕೆಯನ್ನು ಬಹಳ ಪ್ರದಾನವಾಗಿ ಕೊಂಕಣದ ಮತ್ತು ಮಲಬಾರ್ ತೀರ ಪ್ರದೇಶಗಳಲ್ಲಿ ಹೆಚ್ಚಾಗಿ ಬೆಳೆಯುತಿದ್ದರು. ಇದಲ್ಲದೆ ಅಸ್ಸಾಂ ಮತ್ತು ಬಂಗಾಳ ಪ್ರಾಂತ್ಯಗಳಲ್ಲಿಯೂ ವೀಳ್ಯದ ಎಲೆ ಮತ್ತು ಅಡಿಕೆ ಪ್ರದಾನವಾಗಿತ್ತು. ಹಾಜ್ ಇಬ್ರಾಹಿಂನು ಕರ್ನಾಟಕ ಮತ್ತು ಬಂಗಾಳದ ಬಂದರುಗಳಲ್ಲಿ ವೀಳ್ಯದೆಲೆ ಮತ್ತು ಅಡಿಕೆಯನ್ನು ಕೊಂಡುಕೊಂಡು ಅದನ್ನು ಗುಜರಾತಿನ ಕ್ಯಾಂಬ್ ಬಂದರಿನಲ್ಲಿ ಸ್ಥಳೀಯರಿಗೆ ಮತ್ತು ವಿದೇಶೀಯರಿಗೆ ಮರಾಟ ಮಾಡುತ್ತಿದ್ದನು. ಇದರಿಂದಾಗಿ ಇವನು ಹೆಚ್ಚು ಆದಾಯವನ್ನು ಗಳಿಸಿ ವ್ಯಾಪಾರಸ್ಥರ ಮುಖ್ಯಸ್ಥ ಎಂಬ ಬಿರುದು ಪಡೆದುಕೊಂಡಿದ್ದನು.[9]

ಸ್ಮರಣ ಸಂಚಿಕೆಗಳು ಅಥವಾ ಸಮಾದಿ ಮೇಲಿನ ಲಿಪಿಗಳ ಪ್ರಕಾರ ಕ್ರಿ.ಶ.1232ರಲ್ಲಿ ಪ್ರಕೃದೀನ್ ಇಬ್ರಾಹಿಂನ್ನು ಸಿದ್ದಿಕ್‌ನ ಮೊಮ್ಮಗನಾಗಿದ್ದು, ಆಧುನಿಕ ಇರಾಕಿನ ಶಾರ್ಜರ್ ಎಂಬ ನಗರದಿಂದ ಭಾರತಕ್ಕೆ ವ್ಯಾಪಾರಕ್ಕಾಗಿ ಬಂದಿದ್ದನು. ಇವನ ಕುಟುಂಬವು ಇರಾಕಿನ ಪ್ರಮುಖ ವ್ಯಾಪಾರಿ ಕುಟುಂಬವಾಗಿತ್ತು. ಇವನು ಅನಿಲವಾಡದಲ್ಲಿ ನೆಲೆಸಿದ್ದು ಇವನು ರೋಗದಿಂದಾಗಿ ಭಾರತದಲ್ಲೇ ಮರಣ ಹೊಂದಿದ್ದನು. ಜುನಾಗಡದ ಶಾಸನದ ಪ್ರಕಾರ ಅಬ್ದುಲ್ ಖಾಸಿಮನು ಒಂದು ಮಸೀದಿಯನ್ನು ಕಟ್ಟಿಸಿ ಇದರಿಂದ ಬೇರೊಬ್ಬರಿಗೆ ಪರೋಪಕಾರಿಯಾದನು. ಈ ಒಂದು ಮಸೀದಿಯಿಂದ ಯಾರು ಮೆಕ್ಕಾ ಮತ್ತು ಮದೀನಗಳಿಗೆ ಯಾತ್ರೆಯನ್ನು ಕೈಗೊಳ್ಳುತ್ತಿದ್ದರೋ ಅವರಿಗೆ ಸಹಾಯ ಮಾಡಿ ಪರೋಪಕಾರಿಗಳ ರಾಜನೆಂದು ತನ್ನನ್ನು ತಾನು ಕರೆಸಿಕೊಂಡನು.

ಇವನು ಬಹಳಷ್ಟು ಪ್ರಭಾವಶಾಲಿ ವ್ಯಾಪಾರಸ್ಥನಾಗಿದ್ದನು. ತನ್ನ ಹಡಗುಗಳಿಂದಲ್ಲೇ ಭಾರತದಿಂದ ಮೆಕ್ಕಾ ಮತ್ತು ಮದೀನ ಯಾತ್ರೆಗೆ ಮುಸ್ಲಿಮರನ್ನು ಕಳುಹಿಸುತ್ತಿದ್ದನು.

ಮತ್ತೊಂದು ಈ ಕಾಲಘಟ್ಟದ ಮಹತ್ವವಾದ ದಾಖಲೆ ಎಂದರೆ ಕ್ರಿ.ಶ.1264ರ ಸೋಮನಾಥದಲ್ಲಿರುವ ಎರಡು ಭಾಷೆಗಳ ಶಾಸನದ ಪ್ರಕಾರ ಓರ್ಮಜ್‌ನ ವ್ಯಾಪಾರಿಯಾದ ನೂರುದ್ದೀನ್ ಫಿರೋಜ್‌ನು ಒಬ್ಬ ಶ್ರೀಮಂತ ವ್ಯಾಪಾರಿಯಾಗಿದ್ದು, ಇವನು ಸೋಮನಾಥದಲ್ಲಿ ಒಂದು ಮಸೀದಿಯನ್ನು ಕಟ್ಟಲು ಧನ ಸಹಾಯ ಮಾಡಿದನು. ಈ ಮಸೀದಿಯನ್ನು ನಿರ್ಮಿಸಲು ಸ್ಥಳೀಯ ರಾಜನಾದ ಶ್ರೀಚಂದ್ರನಿಂದ ಭೂಮಿಯನ್ನು ಖರೀದಿಸಲಾಯಿತು.[10] ಶ್ರೀಚಂದ್ರನನ್ನು ಫಿರೋಜನು ಧರ್ಮ ಬಾಂಧವನೆಂದು ಕರೆದಿದ್ದಾನೆ. ಫಿರೋಜ್ ಮತ್ತು ಶ್ರೀಚಂದ್ರನ ನಡುವೆ ಕೆಲವು ವಾಣಿಜ್ಯ ಒಪ್ಪಂದಗಳು ಕೂಡ ಇದ್ದವೆಂದು ಉಲ್ಲೇಖಿಸಲಾಗಿದೆ. ಈ ಮಸೀದಿಯಲ್ಲಿ ಫಿರೋಜನು ಹಲವಾರು ಮರಣ ಶಾಸನಗಳನ್ನು ಶಾಸನಗಳ ರೂಪದಲ್ಲಿ ಬರೆಸಿದ್ದಾನೆ. ಇದರ ಉದ್ದೇಶ ಮುಂದಿನ ಪೀಳಿಗೆಯ ಜನರಿಗೆ ಈ ಮಸೀದಿಯಲ್ಲಿ ನಡೆಯುತ್ತಿದ್ದ ಹಬ್ಬಗಳು, ಉತ್ಸವಗಳು ಮತ್ತು ಧಾರ್ಮಿಕ ಸಭೆಗಳನ್ನು ಸಂಗ್ರಹಿಸಿಡುವ ಉದ್ದೇಶವಾಗಿತ್ತು. ಶಾಸನಗಳ ಪ್ರಕಾರ ಈ ಮಸೀದಿಯಿಂದ ಬರುವ ಆದಾಯವನ್ನು ಅಲ್ಲಿನ ಆಡಳಿತ ಮಂಡಲಿ ಹಾಗೂ ಮಸೀದಿಯಲ್ಲಿ ಧಾರ್ಮಿಕ ಕ್ರಿಯೆಗಳನ್ನು ನಡೆಸುತ್ತಿದ್ದ ಪುರೋಹಿತರು, ನಾವಿಕರು ಮತ್ತು ಹಡಗುಗಳ ಮಾಲೀಕರು ನಿರ್ವಹಿಸುತ್ತಿದ್ದರು. ಪಶ್ಚಿಮ ಭಾಗದ ಕರಾವಳಿ ಪ್ರದೇಶಗಳಲ್ಲಿ ಅರಬ್ಬರ ವಸಾಹತುಗಳು ಏರಿಕೆಯಾಗದಂತೆ ಅವರು ಸ್ಥಳೀಯ ಜನರೊಂದಿಗೆ ಬೆರೆತು ಸ್ಥಳೀಯರೊಂದಿಗೆ ವೈವಾಹಿಕ ಸಂಬಂಧವನ್ನು ಏರ್ಪಡಿಸಿಕೊಂಡು ತಮ್ಮ ಜನಸಂಖ್ಯೆ ಹೆಚ್ಚಿಸಿಕೊಂಡರು.[11]

ಅರಬ್ಬರು ಈ ಕಾಲಘಟ್ಟದಲ್ಲಿ ಸಂಪೂರ್ಣವಾಗಿ ಭಾರತದ ಪ್ರಮುಖ ಬಂದರುಗಳನ್ನು ನಿಯಂತ್ರಿಸುತ್ತಿದ್ದರು. ಮತ್ತು ಸಾಗರೋತ್ತರ ವ್ಯಾಪಾರದ ಸಂಪೂರ್ಣವಾದ ಹಿಡಿತವನ್ನು ಹೊಂದಿದ್ದರು. ಹಂತ ಹಂತವಾಗಿ ಅವರು ತಮ್ಮ ವಿದೇಶಿ ವ್ಯಾಪಾರವನ್ನು ಮತ್ತಷ್ಟು ಬಲಿಷ್ಠಗೊಳಿಸಿಕೊಂಡರು ಮತ್ತು ಪಶ್ಚಿಮ ಕರಾವಳಿಯ ಭಾಗಗಳಲ್ಲಿ ಹಡಗುಗಳ ಮೇಲೆ ಮತ್ತು ಸಮುದ್ರದ ಮೇಲೆ ನಿಯಂತ್ರಣ ಹೊಂದಿದ್ದರು. ಇದರಿಂದಾಗಿ ಬಹಳಷ್ಟು ಕಾಲದಿಂದ ಸಮುದ್ರ ವ್ಯಾಪಾರದ ಮೇಲೆ ಹಿಡಿತಹೊಂದಿದ್ದ ಭಾರತೀಯರು ತಮ್ಮ ವ್ಯಾಪಾರವನ್ನು ಕಡಿಮೆ ದರ್ಜೆಗೆ ಇಳಿಸಿಕೊಳ್ಳುವಂತಾಯಿತು. ಭಾರತೀಯ ಕರಾವಳಿ ವ್ಯಾಪಾರ ಅಂತರಿಕ ವ್ಯಾಪಾರ ಮತ್ತು ವಿದೇಶೀ ವ್ಯಾಪಾರಗಳು ನಶಿಸಿಹೋದವು. ಇದಾಗಿಯೂ ಕೂಡ ಭಾರತದ ಸ್ಥಳೀಯ ರಾಜರು ಮತ್ತು ವ್ಯಾಪಾರಸ್ಥರಿಗೆ ಯಾವುದೇ ಪರ್ಯಾಯ ಮಾರ್ಗಗಳಿಲ್ಲದೇ ಅರಬ್ಬರನು

ಎದುರಿಸಲಾಗದೇ ಶಾಂತರಾಗಿಯೇ ಉಳಿದರು ಮತ್ತು ಅವರೊಂದಿಗೆ ಸಾಮರಸ್ಯವನ್ನು ಬೆಳೆಸಿಕೊಂಡರು. ಇದಕ್ಕೆ ಪ್ರಮುಖ ಕಾರಣವೆಂದರೆ, ವಾಣಿಜ್ಯ ವ್ಯಾಪಾರವು ಅರಬರಿಂದಾಗಿ ಹೆಚ್ಚು ಆದಾಯ ಮತ್ತು ಅಬ್ಯುದಯವನ್ನು ಭಾರತೀಯರಿಗೆ ತಂದುಕೊಟ್ಟಿತ್ತು. ಆದ್ದರಿಂದ ಭಾರತೀಯ ರಾಜರು ಮತ್ತು ಸ್ಥಳೀಯ ವ್ಯಾಪಾರಸ್ಥರು ಅವರೊಂದಿಗೆ ಉತ್ತಮವಾದ ಸಂಬಂಧವನ್ನು ಇಟ್ಟುಕೊಂಡಿದ್ದರು.[12]

ಅರಬ್ ವ್ಯಾಪಾರಸ್ಥರ ಸಂಖ್ಯೆ ಹೆಚ್ಚಿದಂತೆಲ್ಲ ಅವರು ಪಶ್ಚಿಮ ಕರಾವಳಿ ಭಾಗಗಳಲ್ಲಿ ತಮ್ಮ ವ್ಯಾಪಾರವನ್ನು ಬಲಪಡಿಸಿಕೊಂಡರು. ವಿದೇಶಿ ವ್ಯಾಪಾರ ಮತ್ತು ಹಡಗು ಯಾನಗಳ ಮೇಲೆ ನಿಯಂತ್ರಣ ಪಡೆದುಕೊಂಡ ಅರಬ್ಬರು ತಮ್ಮ ತಮ್ಮ ಬಂದರುಗಳಲ್ಲಿ ಮಸೀದಿಗಳನ್ನು ನಿರ್ಮಿಸಿ ಆ ಮಸೀದಿಗಳಲ್ಲಿ ಮುಸ್ಲಿಂ ವ್ಯಾಪಾರಸ್ಥರು ಮತ್ತು ನಾವಿಕರು ತಂಗುವುದಕ್ಕಾಗಿ ವ್ಯವಸ್ಥೆ ಮಾಡಿಕೊಂಡರು. ಇಬನ್ ಬತೂತ ಹೇಳುವಂತೆ ಅರಬ್ಬರು ಕೋರಮಂಡಲ, ಕ್ಯಾಂಬ್ ಮತ್ತು ಮಲಬಾರ್ ಪ್ರದೇಶಗಳಲ್ಲಿ ವ್ಯಾಪಾರ ಆದಿಪತ್ಯವನ್ನು ಹೊಂದಿದ್ದರು. ಈ ಭಾಗಗಳಲ್ಲಿ ಹಿಂದೂ ರಾಜರು ಆಳ್ವಿಕೆ ಮಾಡುತ್ತಿದ್ದರೂ ಸಹ ಪ್ರಮುಖ ಬಂದರುಗಳು ಆಮದು ಮತ್ತು ರಫ್ತು ಸಂಪೂರ್ಣವಾಗಿ ಅರಬರಲ್ಲಿ ಕೇಂದ್ರಿಕೃತಗೊಂಡಿತು.[13]

ಮಧ್ಯಕಾಲೀನ ಭಾರತದಲ್ಲಿ ಮುಖ್ಯ ಆದಾಯದ ಮೂಲ ಕೃಷಿಯಾಗಿತ್ತು. ಈ ನಂತರ ವ್ಯಾಪಾರದ ಏಕೀಕರಣ ಉಂಟಾದ ಮೇಲೆ ವ್ಯಾಪಾರ ಮತ್ತು ವಾಣಿಜ್ಯದಿಂದಲೂ ಆದಾಯ ಹೆಚ್ಚಾಯಿತು. ಮಧ್ಯಪ್ರಾಚ್ಯ, ಮೆಡಿಟರೇನಿಯನ್ ಪ್ರದೇಶ ಮತ್ತು ಭಾರತದ ನಡುವೆ ಬೆಳವಣಿಗೆಯಾದ ವ್ಯಾಪಾರಿ ಮಾರ್ಗವು ಭಾರತ ಮತ್ತು ವಿಶ್ವದ ಇತರ ರಾಷ್ಟ್ರಗಳೊಂದಿಗಿನ ವ್ಯಾಪಾರ ಸಂಪರ್ಕಕ್ಕೆ ಮುನ್ನುಡಿಯಾಯಿತು. ಈ ವ್ಯಾಪಾರದಿಂದ ಐಷರಾಮಿ ವಸ್ತುಗಳಾದ ರೇಷ್ಮೆ, ಪಿಂಗಾಣಿ ಪಾತ್ರೆಗಳು ಭಾರತದಿಂದ ಅರಬ್ ದೇಶಗಳಿಗೆ ರಫ್ತಾದವು. ಶ್ರೀಲಂಕಾ ಕೆಂಪು ಸಮುದ್ರ ಮತ್ತು ಪರ್ಷಿಯನ್ ಕೊಲ್ಲಿ ದೇಶಗಳಿಗೆ ಸಂಪರ್ಕವಾಗಿದ್ದ ಮುಖ್ಯ ಜಲಮಾರ್ಗವು ವಾರ್ಷಿಕ ಮಾನ್ಸೂನ್ ಮಾರುತಗಳನ್ನು ಅವಲಂಬಿಸಿತ್ತು.[14]

ಭಾರತದ ಸಾಗರೋತ್ತರ ವ್ಯಾಪಾರವು ಹನ್ನೊಂದನೇ ಶತಮಾನದಿಂದ ಹದಿನಾಲ್ಕನೇ ಶತಮಾನದವರೆಗೆ ಕರೀಮ್(ವ್ಯಾಪಾರಸ್ಥರು)ಎಂಬ ವ್ಯಾಪಾರ ಸಂಘಟನೆಯ ಏಕಸ್ವಾಮ್ಯವನ್ನು ಹೊಂದಿತ್ತು. ಐವತ್ತು ಜನರಿಂದ ಕೂಡಿದ್ದ ಈ ವ್ಯಾಪಾರ ಸಂಘಟನೆಯು ಈಜಿಪ್ಟ್, ಯಮನ್, ಶ್ರೀಲಂಕಾ ಮತ್ತು ಭಾರತದಲ್ಲಿ ತನ್ನ ಜಾಲವನ್ನು ವಿಸ್ತರಿಸಿತ್ತು. ಈ ಸಂಘಟನೆಯು ಸಂಪೂರ್ಣವಾಗಿ ವ್ಯಾಪಾರದಲ್ಲಿ ತೊಡಗಿಸಿಕೊಂಡಿತು. ಆದ್ದರಿಂದ ನೇರವಾಗಿ ಆದಾಯವನ್ನು

ಗಳಿಸುವುದಲ್ಲದೇ ಭೂಸ್ವಾಧೀನ, ಸುಂಕಗಳ ನಿಗದಿಪಡಿಸುವಿಕೆ ಮುಂತಾದ ಕಾರ್ಯಗಳಲ್ಲಿ ತೊಡಗಿಸಿಕೊಂಡಿತು. ಈ ಸಂಘಟನೆಯು ಸಂಯುಕ್ತ ದಾಸ್ತಾನು ಕಂಪನಿಗೆ ಹಣ ವ್ಯಯಿಸಿ ಅದರ ಮೂಲಕ ಖಾಸಗಿ ವ್ಯಾಪಾರಸ್ಥರಿಗೆ ಸಾಲ ನೀಡುತ್ತಿತ್ತು. ಹಾಗೂ ಅಂತರರಾಷ್ಟ್ರೀಯ ಬ್ಯಾಂಕ್ ವ್ಯವಸ್ಥೆಯಿಂದ ಒಂದು ಆಧುನಿಕ ಬಹುರಾಷ್ಟ್ರೀಯ ಸಂಘಟನೆಯಂತೆ ಕೆಲಸ ನಿರ್ವಹಿಸುತ್ತಿತ್ತು.

ಇಸ್ಲಾಮಿಕ್ ಜಗತ್ತಿನಲ್ಲಿ ಭಾರತದ ಸಾಗರ ವ್ಯಾಪಾರ ಮಾರ್ಗವು ಹೆಚ್ಚು ಪ್ರಾಮುಖ್ಯತೆಯನ್ನು ಗಳಿಸಿತ್ತು. ಭೂಮಾರ್ಗಕ್ಕಿಂತ ಜಲಮಾರ್ಗ ಬಹಳಷ್ಟು ಸುಭದ್ರವಾಗಿತ್ತು. ಸ್ಥಳೀಯ ವ್ಯಾಪಾರವು ನದಿಗಳಿಂದ ದೋಣಿಗಳ ಸಹಾಯದಿಂದ ನಡೆದು ಬಂದರುಗಳಿಗೆ ಸರಕುಗಳನ್ನು ಸಾಗಿಸುತ್ತಿತ್ತು. ನಂತರ ಹಡಗುಗಳಿಗೆ ತುಂಬಿ ಪರ್ಷಿಯನ್ ಕೊಲ್ಲಿ, ಕೆಂಪು ಸಮುದ್ರ, ಮೆಡಿಟರೇನಿಯನ್ ಪ್ರದೇಶ ಹಾಗೂ ಆಫ್ರಿಕಾ ಬಂದರುಗಳಿಗೆ ತೆರಳುತ್ತಿದ್ದವು. ಮತ್ತೊಂದು ವ್ಯಾಪಾರ ಜಾಲ ಭಾರತದ ದಕ್ಷಿಣ ತುದಿಯಿಂದ ಅಂದರೆ ಶ್ರೀಲಂಕಾದಿಂದ ದಕ್ಷಿಣ ಚೀನಾಕ್ಕೆ ಸಂಪರ್ಕ ಕಲ್ಪಿಸಿತ್ತು.

ಸಸ್ಯ ಮತ್ತು ಪ್ರಾಣಿ ಸ್ವರೂಪಶಾಸ್ತ್ರದ ಅರೇಬಿಯಾವು ಭೂ ವ್ಯಾಪಾರ ಮತ್ತು ಸಮುದ್ರ ವ್ಯಾಪರದ ಬೆಳವಣಿಗೆಯಲ್ಲಿ ಬಹಳ ಮಹತ್ತರವಾದ ಪಾತ್ರವನ್ನು ವಹಿಸಿತ್ತು. ಅರಬ್ ಪ್ರದೇಶವು ವಿಶ್ವದ ಪ್ರಮುಖ ವ್ಯಾಪಾರ ಮಾರ್ಗಗಳ ಕೇಂದ್ರವಾಗಿತ್ತು. ಅರೇಬಿಯಾದ ದ್ವೀಪ ಕಲ್ಪವು ಮೂರು ಖಂಡಗಳಾದ ಏಷ್ಯಾ, ಆಫ್ರಿಕಾ ಮತ್ತು ಯೂರೋಪ್‌ಗಳ ಸಮಾಗಮ ಕೇಂದ್ರವಾಗಿತ್ತು. ಪರ್ಷಿಯನ್ನರು ಜಲಸಂಚಾರ ಕಲೆಯನ್ನು ಗ್ರೀಕರಿಂದ ಮಾತ್ರವಲ್ಲದೇ ಅರಬ್ಬರಿಂದಲೂ ಕಲಿತರು ಮತ್ತು ಸಮುದ್ರವನ್ನು ಜಲಸಂಚಾರಕ್ಕಾಗಿ ಬಳಸಿಕೊಂಡರು. ಅರಬ್ಬರು ಪ್ರಾರಂಭದಿಂದಲೂ ಕ್ರಿಯಾತ್ಮಕವಾಗಿ ಸಮುದ್ರಗಳನ್ನು ಬಳಸಿಕೊಂಡರು. ಅರಬ್ಬರು ಭಾರತ ಮತ್ತು ಪಾಶ್ಚಾತ್ಯ ವ್ಯಾಪಾರಿಗಳ ಮಧ್ಯವರ್ತಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಇವರು ಕೆಂಪು ಸಮುದ್ರದ ಪ್ರಾಥಮಿಕ ನಗರವಾದ ಅದೇನ್ ಅಥವಾ ಮಾಜ ಎಂಬ ನಗರದಲ್ಲಿ ಸಂದಿಸುತ್ತಿದ್ದರು. ಅರಬ್ಬರ ದಾಖಲೆಗಳು ಅರಬ್ ನಾವಿಕರು ಮತ್ತು ವ್ಯಾಪಾರಸ್ಥರು ಪ್ರಪಂಚದ ಏಳು ಸಮುದ್ರಗಳ ಪರಿಚಯವನ್ನು ಹೊಂದಿದ್ದರು ಮತ್ತು ಆ ಸಮುದ್ರ ಮಾರ್ಗಗಳ ಪ್ರಾವೀಣ್ಯತೆಗಳಿಸಿದ್ದರೆಂದು ತಿಳಿಸುತ್ತವೆ. ಅವುಗಳೆಂದರೆ,[15]

1) ಪರ್ಷಿಯನ್ ಕೊಲ್ಲಿ ಸಮುದ್ರ
2) ಅರಬ್ಬೀ ಸಮುದ್ರ
3) ಬಂಗಾಳಕೊಲ್ಲಿ

4) ಹಿಂದೂ ಮಹಾ ಸಾಗರ

5) ಮೆಡಿಟೆರೇನಿಯನ್ ಸಮುದ್ರ

6) ಪೆಸಿಫಿಕ್ ಮಹಾಸಾಗರ

7) ಕೆಂಪು ಸಮುದ್ರ

ಮಧ್ಯಕಾಲೀನ ಅರಬ್ ನಾವಿಕರು ಜಲ ಸಂಚಾರದ ಸರಕುಗಳ ಬಗ್ಗೆ ಬಹಳಷ್ಟು ಪರಿಚಿತರಾಗಿದ್ದರು. ಅಯಸ್ಕಾಂತದ ಕೈವಾರ, ನಾವಿಕರ ಭೂಪಟ, ಸಮುದ್ರಗಳ ನಕಾಶೆ ಮುಂತಾದವುಗಳ ಬಗ್ಗೆ ಅವರಿಗೆ ತಿಳಿದಿತ್ತು. ಅಯಸ್ಕಾಂತದ ಸೂಜಿಗಳು ಚೀನಾದವರಿಂದ ಕಂಡುಹಿಡಿಯಲ್ಪಟ್ಟಿತು. ಆದರೆ ಅರಬ್ಬರು ಅವುಗಳನ್ನು ಪ್ರಾಯೋಗಿಕವಾಗಿ ಜಲಸಂಚಾರಕ್ಕೆ ಬಳಸಿ ಅವುಗಳ ಯಶಸ್ಸನ್ನು ಪಡೆದರು. ಈ ರೀತಿಯ ಪರಿಕರಗಳು ಹನ್ನೊಂದನೇ ಶತಮಾನದ ನಂತರ ಹೆಚ್ಚು ಪ್ರಾಮುಖ್ಯತೆಗಳಿಸಿದ್ದವು. ಮುಂಚೆ ಇವುಗಳನ್ನು ವಾಣಿಜ್ಯ ಕಾರಣಗಳಿಗಾಗಿ ಗೌಪ್ಯವಾಗಿಡಲಾಗಿತ್ತು. ಕೈವಾರವು ಅರಬ್ಬೀ ಸಮುದ್ರ ಮತ್ತು ಪರ್ಷಿಯನ್ ಕೊಲ್ಲಿ ನಾವಿಕರಲ್ಲಿ ರನಮ ಎಂದು ಕರೆಯಲ್ಪಡುತ್ತಿತ್ತು.

ಭಾರತಕ್ಕೆ ಇಸ್ಲಾಂ ಆಗಮನದ ನಂತರ ಅರಬ್ಬರ ವ್ಯಾಪಾರ ಏಕೀಕರಣಗೊಂಡಿತ್ತು ಮತ್ತು ಬಲಪಡಿಸಲ್ಪಟ್ಟಿತ್ತು. ಇಸ್ಲಾಂ ಧರ್ಮವು ಅರಬ್ ವ್ಯಾಪಾರಕ್ಕೆ ಉತ್ತೇಜನ ನೀಡಿತು. ಮುಸ್ಲಿಮರ ಪೂಜ್ಯ ಪ್ರವಾದಿಯೂ ಕೂಡ ವ್ಯಾಪಾರಸ್ಥನಾಗಿದ್ದನು. ಕುರಾನ್ ಗ್ರಂಥವು ಅರಬ್ಬರ ವ್ಯಾಪಾರದ ಬಗ್ಗೆ ಉಪಯುಕ್ತವಾದ ಮಾತನ್ನಾಡುತ್ತದೆ. ಮುಸ್ಲಿಂ ಧರ್ಮ ಸ್ಥಾಪನೆಯಾದ ಮೊದಲ ನೂರನೇ ವರ್ಷದಲ್ಲಿ ಮುಸ್ಲಿಮರು ತಮ್ಮದೇ ಆದ ಸಾಮ್ರಾಜ್ಯವನ್ನು ನಿರ್ಮಿಸಲು ಪ್ರಯತ್ನಿಸಿದರು. ಇದರ ಪಲವಾಗಿ  ಸಿಂದ್‌ನಿಂದ ಸ್ಪೇನ್‌ವರೆಗೂ ಅವರು ಸಾಮ್ರಾಜ್ಯ ವಿಸ್ತರಿಸಿದರು. ಹಾಗೂ ಪ್ರಮುಖ ಮೂರು ಭೂಖಂಡಗಳಾದ ಏಷ್ಯಾ ಆಫ್ರಿಕಾ ಮತ್ತು ಯೂರೋಪ್‌ಗಳಲ್ಲಿ ಈ ಧರ್ಮ ಹರಡಿತು.

ಇಸ್ಲಾಂ ಧರ್ಮವು ವ್ಯಾಪಾರದೊಂದಿಗೆ ಸಂಪಾದನೆಗೆ ಹೆಚ್ಚು ಪ್ರಾಮುಖ್ಯತೆ ನೀಡಿತು. ಹಾಗೂ ಇದು ಅನುಪಯುಕ್ತ ಆದಾಯವನ್ನು ನಿಷೇದಿಸಿತು. ಇದರಿಂದ ಗ್ರಾಹಕರ ದಕ್ಕೆ ಮತ್ತು ಆಸಕ್ತಿಯನ್ನು ರಕ್ಷಿಸಬಹುದೆಂದು ಅದು ತಿಳಿಸಿತು. ಇಸ್ಲಾಮಿಕ್ ಕಾನೂನು 'ಷರಿಯಾ'ವು ಸಂಪತ್ತಿನ ಸಂಗ್ರಹಣೆ, ಮೋಸ, ಏಕಾಧಿಕಾರ ಮುಂತಾದ ಅನೀತಿ ಅಭ್ಯಾಸಗಳನ್ನು ಖಂಡಿಸಿತು. ಇಸ್ಲಾಂ ಧರ್ಮವು ತನ್ನ ಧಾರ್ಮಿಕ ಕರ್ತವ್ಯವಾಗಿ ಅಳತೆ ಮತ್ತು ತೂಕಗಳನ್ನು ಸರಿಯಗಿ ಮಾಡುವಂತೆ ಆಜ್ಞಾಪಿಸಿತು.

"ಅಳತೆ ಮಾಡುವಾಗ ಪೂರ್ತಿಯಾಗಿ ಅಳತೆ ಮಾಡು, ತೂಕ ಮಾಡುವಾಗ ಸಮತೂಕ ಮಾಡು ಇದು ಹೆಚ್ಚು ಉಪಯುಕ್ತ ಮತ್ತು ಅನುಕೂಲ ನೀನು ಕೊನೆಗೆ ಲೆಕ್ಕವಿಡುವಾಗ" ಎಂದು ಕುರಾನ್‌ನಲ್ಲಿ ಉಲ್ಲೇಖವಿದೆ.[16]

ಇಸ್ಲಾಂ ಧರ್ಮವು ವ್ಯಾಪಾರ ಮತ್ತು ವಾಣಿಜ್ಯದ ಅನೀತಿಗಳನ್ನು ದೂರಮಾಡಿ ಕೊಳ್ಳುವವರು ಮತ್ತು ಮಾರುವವರ ಆಸಕ್ತಿಯನ್ನು ರಕ್ಷಣೆ ಮಾಡಿತ್ತು. ವ್ಯಾಪಾರಿ ಮತ್ತು ಗ್ರಾಹಕರ ನಡುವೆ ನಂಬಿಕೆ ಮತ್ತು ಪರಸ್ಪರ ಗೌರವವನ್ನು ಪ್ರೋತ್ಸಾಹಿಸಿತು. ಕೆಲವೊಂದು ವ್ಯಾಪಾರದ ಕರಾರುಗಳನ್ನು ಈ ಕೆಳಗೆ ನೀಡಲಾಗಿದೆ.

1) ಸತ್ಯ ಮತ್ತು ನಂಬಿಕಸ್ಥ ವ್ಯಾಪಾರಿಯು ಪ್ರವಾದಿ ಮತ್ತು ಹುತಾತ್ಮನಷ್ಟೇ ಶ್ರೇಯಾಂಕವನ್ನು ಹೊಂದಿರುತ್ತಾನೆ.
2) ಮಾರುವವ ಮತ್ತು ಕೊಳ್ಳುವವ ಪರಸ್ಪರ ಒಪ್ಪಿಗೆ ಇಲ್ಲದೇ ಹೊರಡುವಂತಿಲ್ಲ.
3) ಒಂದು ವಸ್ತುವಿನ ಮೇಲೆ ಅತಿಶಯ ಮಾಡುವ ಮುಂಚೆ ಬಹಳಷ್ಟು ಎಚ್ಚರಿಕೆ ವಹಿಸಬೇಕು ಇಲ್ಲವಾದರೆ ಇದು ಮಾರುಕಟ್ಟೆಯಿಂದ ನಿಷೇದಿಸಲ್ಪಡುತ್ತದೆ.
4) ಯಾವ ವ್ಯಕ್ತಿಯು ದೊಷಪೂರಿತ ಸರಕುಗಳನ್ನು ಅವು ದೊಷಪೂರಿತವೆಂದು ಹೇಳದೇ ಮಾರಾಟ ಮಾಡುತ್ತಾನೋ ಅವನು ದೇವರ ಆಕ್ರೋಶಕ್ಕೆ ಒಳಗಾಗುತ್ತಾನೆ.
5) ಯಾವ ವ್ಯಾಪಾರಿಯೂ, ಆಹಾರ ಪದಾರ್ಥಗಳನ್ನು ನಲವತ್ತು ದಿನಗಳವರೆಗೆ ರಕ್ಷಿಸುತ್ತಾನೋ ಮತ್ತು ಅವುಗಳನ್ನು ನಂತರ ಹೆಚ್ಚು ಬೆಲೆಗೆ ಮರಾಟ ಮಾಡುತ್ತಾನೋ ಅವನನ್ನು ದೇವರು ಕ್ಷಮಿಸುವುದಿಲ್ಲ.
6) ಹುತಾತ್ಮನ ಯಾವುದೇ ಪಾಪಗಳನ್ನು ಕ್ಷಮಿಸಬಹುದು ಆದರೆ ಅವನು ಋಣ ಉಳಿಸಿಕೊಂಡಿದ್ದಲ್ಲಿ ಅದನ್ನು ಕ್ಷಮಿಸಲಾಗದು.[17]

ಹೀಗೆ ವ್ಯಾಪಾರ ವರ್ಗವನ್ನು ಇಸ್ಲಾಂ ಧರ್ಮವು ಈ ಮೇಲ್ಕಂಡ ಪದ್ಧತಿಗಳು ಮತ್ತು ಆಜ್ಞೆಗಳಿಂದ ನಿಯಂತ್ರಿಸಿತು.

ಜಾಮೂರಿನನು ಕೊಝಿಕೊಡ್‌ನ್ನು ಸ್ಥಾಪಿಸಿದ ಮೇಲೆ ಅಲ್ಲಿ ಅರಬ್ಬರು ನೆಲೆಸುವಂತೆ ಪುಸಲಾಯಿಸಿದನು ಮತ್ತು ಅವರಿಗೆ ಕೆಲವೊಂದು ರಿಯಾಯಿತಿಗಳನ್ನು ನೀಡಿದನು. ಅರಬ್ಬರು ರಫ್ತು ಮತ್ತು ಆಮದಿನ ವ್ಯಾಪಾರ ಏಕಸ್ವಾಮ್ಯ ಪಡೆದರು. ಇದರೊಂದಿಗೆ ಅರಬ್ಬರು ಸ್ಥಳೀಯ

ಭಾರತೀಯರನ್ನು ಇಸ್ಲಾಂ ಧರ್ಮಕ್ಕೆ ಮತಾಂತರಿಸುವ ಸ್ವಾತಂತ್ರ್ಯವನ್ನು ಪಡೆದರು. ಅರಬ್ಬರು ಸ್ಥಳೀಯ ದಕ್ಷಿಣ ಭಾರತದ ರಾಜರಿಂದ ತಮ್ಮ ಧರ್ಮ ಮತ್ತು ಆಸ್ತಿಯನ್ನು ರಕ್ಷಣೆ ಮಾಡುವ ಉತ್ತೇಜನವನ್ನು ಪಡೆದರು. ಇಬನ್ ಬತೂತನ ಕಾಲದಲ್ಲಿ ಮಲಬಾರ್ ತೀರದ ಪ್ರತಿಯೊಂದು ನಗರದಲ್ಲೂ ಶ್ರೀಮಂತ ಮುಸ್ಲಿಂ ವರ್ತಕರು ನೆಲೆಸಿದ್ದರು.[18]

ಮಧ್ಯಕಾಲೀನ ಅರಬ್ಬರ ವ್ಯಾಪಾರಾಭಿವೃದ್ಧಿಯ ಚಟುವಟಿಕೆಗೆ ಅವರ ಧರ್ಮ ಸಹಕಾರಿಯಾಯಿತು. ಹಲವಾರು ಮುಸ್ಲಿಂ ಧರ್ಮ ಪ್ರಚಾರಕ ಸಂಘಟನೆಗಳು ವ್ಯಾಪಾರಸ್ಥರೊಂದಿಗೆ ಭಾರತಕ್ಕೆ ಬಂದು ವ್ಯಾಪಾರ ಮತ್ತು ಧರ್ಮದ ಬೆಳಣಿಗೆಗೆ ಸಹಕರಿಸಿದರು. ಧರ್ಮ ಪ್ರಚಾರಕ ಸಂಘದ ಸೂಫಿಗಳು ಅರಬ್ ವ್ಯಾಪಾರಿಗಳ ಸಹ ಪ್ರಯಾಣಿಕರಾಗಿದ್ದರು. ಈ ಕಾಲಘಟ್ಟದಲ್ಲಿ ಅರಬ್ ವ್ಯಾಪಾರಿ ಕೇಂದ್ರಗಳು ಧರ್ಮ ಪ್ರಚಾರಕ ಕೇಂದ್ರಗಳಾಗಿಯೂ ಕಾರ್ಯ ನಿರ್ವಹಿಸುತ್ತಿದ್ದವು. ಬಹಳಷ್ಟು ಸೂಫಿ ಸಂತರು ವ್ಯಾಪಾರಿ ಸಂಘಗಳೊಂದಿಗೆ ಸಂಬಂಧವನ್ನು ಹೊಂದಿದ್ದರು. ಮಾತ್ರವಲ್ಲದೇ ಸಂಘಗಳಲ್ಲಿ ಅವರನ್ನು ಧಾರ್ಮಿಕ ಮುಖಂಡರಾಗಿ ಗೌರವಯುತವಾಗಿ ಕಾಣಲಾಗುತ್ತಿತ್ತು. ಖಜೇರೊನ್‌ನ ಸಾಹಿಕ್ ಅಬು ಇಸಾಕ್ ಎಂಬುವವನು ಭಾರತ ಮತ್ತು ಚೀನಾದ ವ್ಯಾಪಾರ ಸಂಘಗಳಲ್ಲಿ ಮತ್ತು ವ್ಯಾಪಾರಸ್ಥರಲ್ಲಿ ಅತಿ ಮುಖ್ಯವಾದ ಧಾರ್ಮಿಕ ಮುಖಂಡನಾಗಿದ್ದನು.

ಇಸ್ಲಾಂ ಧರ್ಮದ ಪ್ರಾರಂಭದಿಂದಲೂ ದಕ್ಷಿಣ ಭಾರತ ಮತ್ತು ದಕ್ಷಿಣ ಅರೇಬಿಯ ದೊಂದಿಗೆ ಉತ್ತಮವಾದ ವ್ಯಾಪಾರ ವಾಣಿಜ್ಯ ಸಂಬಂಧವಿತ್ತು. ಪ್ರವಾದಿ ಮಹಮ್ಮದನ ಕಾಲಾವದಿ ಯಲ್ಲಿಯೇ ಇಸ್ಲಾಂ ಧರ್ಮವು ದಕ್ಷಿಣ ಭಾರತದ ಕೇರಳದಲ್ಲಿ ಪಸರಿಸಿತ್ತು. ಅರಬ್ ನಾವಿಕರು ಮತ್ತು ವ್ಯಾಪಾರಸ್ಥರು ಯಾರು ಕೇರಳದೊಂದಿಗೆ ವ್ಯಾಪಾರವನ್ನು ಮಾಡುತ್ತಿದ್ದರೊ ಅವರು ಮೊದಲ ತಲೆಮಾರಿನ ಜನರು ಇಸ್ಲಾಂ ಧರ್ಮಕ್ಕೆ ಮತಾಂತರ ಹೊಂದಿದ್ದರು. ಇದು ಎಲ್ಲಾ ಅನುಮಾನಗಳನ್ನು ದೂರಮಾಡಿ ಮೊದಲು ಕರ್ನಟಕದ ಮಲಬಾರಿಗೆ ಬಂದ ಮುಸ್ಲಿಮರು ಮೂಲತಃ ಅರೇಬಿಯಾ ದ್ವೀಪಕಲ್ಪದಿಂದ ಬಂದವರೆಂದು ಹೇಳಲಾಗಿದೆ. ದಕ್ಷಿಣ ಅರೇಬಿಯಾದ ಅರಬ್ ವರ್ತಕರು ಇಸ್ಲಾಂ ಧರ್ಮ ಸ್ಥಾಪನೆಯ ಮೊದಲು ಎರಡು ಶತಮಾನಗಳಲಿ ಇಡೀ ವಿಶ್ವದಾದ್ಯಂದತ ಮತಾಂತರ ಚಟವಟಿಕೆಗಳಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡರು. ವ್ಯಾಪಾರ ಸಂಪರ್ಕಗಳಿಂದ ಎಲ್ಲೆಲ್ಲಿ ಇಸ್ಲಾಂ ಧರ್ಮ ಪ್ರಚಾರವಾಗಿತ್ತು ಅಲ್ಲೆಲ್ಲ ಹದ್ರಮಿಯ ಪ್ರಭಾವವನ್ನು ಕಾಣಬಹುದು ಹದ್ರಮಿ ಎನ್ನುವವರು ಪ್ರವಾದಿ ಕುಟುಂಬಕ್ಕೆ ಸೇರಿದ ವರ್ಗವಾಗಿತ್ತು.[19]

ಕರ್ನಾಟಕದ ಮಲಬಾರ್ ತೀರ ಪ್ರದೇಶದಲ್ಲಿ ವಿವಿಧ ತಂಗಲ್ಸ್ ಎಂಬ ಗುಂಪುಗಳು ಕಾರ್ಯನಿರ್ವಹಿಸುತ್ತಿದ್ದವು. ತಂಗಲ್ಸ್‌ಗಳೆಂದರೆ ಮಾಪಿಳ್ಳಗಳ ದೊಡ್ಡಗುಂಪಿನ ಧಾರ್ಮಿಕ ಮುಖಂಡರಾಗಿದ್ದರು. ಹದ್ರಮಿಗಳ ಪ್ರಭಾವದಿಂದ ಮಲಬಾರಿನ ಮುಸ್ಲಿಮರು ಕೂಡ ಬಹಳ ಶುದ್ಧವಾದ ಅರೇಬಿಕ್ ಶೈಲಿಯ ಭಾಷೆ ಮಾತನಾಡುತ್ತಿದ್ದರು. ಮಲಬಾರಿನ ಮುಸ್ಲಿಮರು ಅರಬರಂತೆ ನಿಖರವಾಗಿ ಅರೇಬಿಕ್ ಭಾಷೆಯನ್ನು ಉಚ್ಚರಿಸುತ್ತಿದ್ದರು. ಅತಿ ಹೆಚ್ಚು ಅರಬ್ ವರ್ತಕ ವರ್ಗವು ಬಾಸ್ರಾ, ಬಾಗ್ದಾದ್,ಸಿರಫ್, ಓಮನ್ ಮತ್ತು ದಕ್ಷಿಣ ಅರೇಬಿಯದ ಯಮನ್ ಮತ್ತು ಈಜಿಪ್ಟ್‌ನಿಂದ ಬಂದು ಪಶ್ಚಿಮ ಮತ್ತು ಪೂರ್ವ ಕರಾವಳಿ ತೀರಗಳಲ್ಲಿ ನೆಲೆನಿಂತರು ಮತ್ತು ಇವರೆಲ್ಲರೂ ಸೂಫಿಪಂಥದ ಬೆಂಬಲಿಗರಾಗಿದ್ದರು.

ದಕ್ಷಿಣ ಭಾರತದಲ್ಲಿ ಮುಸ್ಲಿಂ ಧರ್ಮ ಪರಿಚಯಿಸಿದ ಮೇಲೆ ಇದರಿಂದಾಗಿ ಅರಬ್ಬರ ವ್ಯಾಪಾರ ಹೆಚ್ಚಾಗತೊಡಗಿತು. ನಂತರ ಶ್ರೀಲಂಕಾ, ಲಕ್ಷದ್ವೀಪ, ಮಾಲ್ಡೀವ್ಸ್, ಮಲಯಾ ಮತ್ತು ಇಂಡೋನೇಷ್ಯಾದೊಂದಿಗೆ ಅರಬ್ಬರು ತಮ್ಮ ವ್ಯಾಪಾರ ಸಂಪರ್ಕವನ್ನು ಉತ್ತಮ ಪಡಿಸಿಕೊಂಡರು. ಈ ಭಾಗದ ಮುಸ್ಲಿಮರು ಮುಸ್ಲಿಂ ಧರ್ಮದ ಉತ್ತರಾಧಿಕಾರಿಗಳಾದರು. ನಂತರ ಸೂಫಿ ಪಂಥದ ಬೆಳವಣಿಗೆಗೆ ಶ್ರಮಿಸಿದರು. ಈ ಭಾಗಗಳಲ್ಲಿ ಇಂದಿಗೂ ಸಹ ಈ ಧರ್ಮವು ಪ್ರಮುಖವಾದುದಾಗಿದೆ.

### 2.3 ಅರಬ್ಬರ ಕಾಲದ ಪ್ರಮುಖ ವ್ಯಾಪಾರ ಮತ್ತು ವಾಣಿಜ್ಯ ಸಂಪರ್ಕಗಳು

ಅಬ್ಬಾಸಿದ್ ಖಲೀಫರು ತಮ್ಮ ಆಡಳಿತ ಅವಧಿಯಲ್ಲಿ ವಿಸ್ತಾರವಾದ ಹೆದ್ದಾರಿಗಳನ್ನು ಮತ್ತು ಜಲಮಾರ್ಗಗಳನ್ನು ನಿರ್ಮಾಣ ಮಾಡಿದರು. ಅವರ ರಾಜದಾನಿ ಬಾಗ್ದಾದ್‌ನಿಂದ ಉಳಿದ ಪ್ರಮುಖ ವ್ಯಾಪಾರಿ ಕೇಂದ್ರಗಳಿಗೆ ಸಂಪರ್ಕ ಕಲ್ಪಿಸಿದ್ದರು. ಕುರ್‌ಸನ್ ಹೆದ್ದಾರಿಯು ಬಾಗ್ದಾದ್‌ನಿಂದ ಜರಪ್‌ಸನ್ ಮಾರ್ಗವಾಗಿ ಚೀನಾದವರೆಗೆ ವಿಸ್ತರಿಸಿತ್ತು. ಇದು ಅತಿಹೆಚ್ಚು ಜನಭರಿತವಾದ ಹೆದ್ದಾರಿಯಾಗಿತ್ತು ಮತ್ತೊಂದು ಮುಖ್ಯರಸ್ತೆ ಬಾಗ್ದಾದ್‌ನಿಂದ ಟೈಗ್ರೀಸ್ ಮಾರ್ಗವಾಗಿ ಆಲ್‌ಬ್ರಸ್, ಅವ್ನ ಮತ್ತು ಕುಜ್‌ಸ್ಥಾನ್ ಮಾರ್ಗವಾಗಿ ಸಿರಾಜನ್ನು ತಲುಪುತ್ತಿತ್ತು. ಈ ರಸ್ತೆಗಳಲ್ಲಿ ಉತ್ತಮವಾದ ಭದ್ರತೆಯನ್ನು ನೀಡಲಾಗಿತ್ತು. ಖಲೀಫನ ಉದ್ದೇಶ ರಸ್ತೆಯನ್ನು ಸುರಕ್ಷಿತವಾಗಿಟ್ಟುಕೊಳ್ಳುವುದು ಮತ್ತು ಯಾತ್ರಿಕರು ಮತ್ತು ವ್ಯಾಪಾರಸ್ಥರಿಗೆ ನೆರವು ನೀಡುವುದಾಗಿತ್ತು. ಇಸ್ಲಾಂ ನಾಡಿನ ಎಲ್ಲಾ ಮೂಲಗಳಿಂದಲೂ ಅಂದರೆ, ಈಜಿಪ್ಟ್, ಸಿರಿಯಾ, ಮೆಸಪೊಟಮಿಯ, ಪರ್ಷಿಯಾ, ಭಾರತ, ಚೀನಾಗಳಿಂದ ಯಾತ್ರಿಕರು ಮೆಕ್ಕಾಗೆ ಹಜ್‌ಯಾತ್ರೆಯನ್ನು ಮಾಡುತ್ತಿದ್ದರು. ಬಾಗ್ದಾದ್‌ನಿಂದ ನಜಾಪ್‌ಗೆ ಸಂಪರ್ಕ ಕಲ್ಪಿಸುತ್ತಿದ್ದ

ಯಾತ್ರಿಕರ ಹೆದ್ದಾರಿಯ ದಾರ್ಬ್ ಜುಬೈದ ಎಂದು ಪ್ರಖ್ಯಾತಿಗಳಿಸಿತ್ತು. ಬಾಗ್ದಾದ್‌ನ ಖಲೀಫರು ರಸ್ತೆ ಮಾರ್ಗಗಳಲ್ಲಿ ಅಲ್ಲಲ್ಲಿ ನೀರಿನ ತೊಟ್ಟಿಗಳನ್ನು ಕೆರೆಗಳನ್ನು ನಿರ್ಮಿಸಿದರು. ಈ ಯಾತ್ರಿಕರ ಮಾರ್ಗಗಳು ವ್ಯಾಪಾರ ಮಾರ್ಗಗಳಾಗಿಯೂ ಕೂಡ ಬೆಳವಣಿಗೆ ಹೊಂದಿ ಅತಿ ಹೆಚ್ಚು ಜನಭರಿತವಾದ ಹೆದ್ದಾರಿಗಳಾಗಿದ್ದವು.[20]

ಬಾಗ್ದಾದ್‌ನ ಖಲೀಫರು ಕಟ್ಟಡಗಳನ್ನು, ಮನೆಗಳನ್ನು ಮತ್ತು ನಿಲಯಗಳನ್ನು ನಿರ್ಮಾಣ ಮಾಡಿ ಮಾರ್ಗ ಮಧ್ಯದಲ್ಲಿ ಯಾತ್ರಿಕರು ಮತ್ತು ವ್ಯಾಪಾರಿಗಳು ತಂಗಲು ವ್ಯವಸ್ಥೆ ಮಾಡಿದರು ವಿಸ್ತರವಾದ ರಸ್ತೆಗಳು, ಅಂಚೆ ವ್ಯವಸ್ಥೆಯನ್ನು ಅರಬ್ಬರು ಮತ್ತು ಟರ್ಕರು ಬಹಳ ವ್ಯವಸ್ಥಿತವಾಗಿ ಸಂರಕ್ಷಿಸಲ್ಪಟ್ಟಿದ್ದರು. ಮಾರ್ಗ ಮಧ್ಯದಲ್ಲಿ ಪ್ರತಿ ಕೆಲವು ಮೈಲಿಗಳಿಗೆ ಒಂದು ಅಂಚೆ ಕೇಂದ್ರಗಳನ್ನು ತಂಗುದಾಣಗಳನ್ನು ಕಟ್ಟಿಸಿ ಅಲ್ಲಿ ಅರಬ್ ವ್ಯಾಪಾರಸ್ಥರು ತಂಗುವಂತೆ ಮತ್ತು ಕುದುರೆಗಳನ್ನು ಬದಲಾಯಿಸಲು ಮತ್ತು ಮುಂದಿನ ದಾರಿಯ ಬಗ್ಗೆ ಮಾಹಿತಿ ಪಡೆಯಲು ವ್ಯವಸ್ಥೆ ಮಾಡಿದ್ದರು. ಈ ಎಲ್ಲಾ ಪ್ರವಾಸಿಗರು ಮತ್ತು ವ್ಯಾಪಾರಸ್ಥರು ತಮಗೆ ಅವಶ್ಯಕವಿರುವ ವಸ್ತುಗಳನ್ನು ಕೊಂಡುಕೊಳ್ಳಲು ಅಂಗಡಿಗಳನ್ನು ತೆರೆದಿದ್ದರು.

ಉಮಾಯದ್ ಖಲೀಫನಾದ ಮಾವಿಯು ಮೊದಲು ಅಂಚೆ ವ್ಯವಸ್ಥೆಯನ್ನು ಜಾರಿ ಗೊಳಿಸಿದನು. ಅಬ್ಬಾಸಿದ್ ಖಲೀಪರ ಕಾಲದಲ್ಲಿ ಅಂಚೆ ವ್ಯವಸ್ಥೆಯು ಬಹಳಷ್ಟು ಅಭಿವೃದ್ಧಿಗೊಂಡಿತು. ಇರಾಕ್ ಮತ್ತು ಸಿಂದ್ ನಡುವಿನ ಅಂಚೆಯು ಮಹತ್ವದ್ದಾಗಿದ್ದು ಬಹಳ ಮಹತ್ತರವಾದ ಪತ್ರಗಳು ಈ ಎರಡು ಪ್ರಾಂತ್ಯಗಳ ನಡುವೆ ವಿನಿಮಯಗೊಳ್ಳುತ್ತಿದ್ದವು. ಇರಾಕ್ ನಿಂದ ಕಳುಹಿಸಿದ ಪತ್ರವು ಸಿಂದ್‌ನ ಖಾಸಿಂಗೆ ಪ್ರತಿ ಮೂರನೇ ದಿನಕ್ಕೆ ಬಂದು ತಲುಪುತ್ತಿತ್ತು.

ಅರಬ್ಬರ ವ್ಯಾಪಾರ ಬೆಳವಣಿಗೆ ಹೊಂದಲು ಪ್ರಮುಖವಾದ ಅಂಶಗಳಲ್ಲಿ ಇದೂ ಕೂಡ ಒಂದು. ಪ್ರತಿವರ್ಷ ಭಾರತೀಯರು ಹಜ್‌ಯಾತ್ರೆಯನ್ನು ಕೈಗೊಳ್ಳುತ್ತಿದ್ದರು. ಮೆಕ್ಕಾಗೆ ಭೇಟಿ ಕೊಡುತ್ತಿದ್ದ ವಿವಿಧ ದೇಶಗಳ ಯಾತ್ರಿಕರಿಂದಾಗಿ ಅರಬ್ಬರಿಗೆ ವಿಶ್ವದ ಬೌಗೋಳಿಕ ಪರಿಚಯ ಉಂಟಾಯಿತು. ಇಬನ್ ಬತೂತ ಅರಬ್ಬರ ಪ್ರಮುಖ ಪ್ರವಾಸಿ ಮುಸ್ಲಿಮರು ವ್ಯಾಪಾರ ನಿರ್ವಹಿಸುತ್ತಿದ್ದ ಪ್ರಮುಖ ದೇಶಗಳಾದ ಭಾರತ, ಶ್ರೀಲಂಕಾ, ಚೀನಾ ಮತ್ತು ದೂರ ಪ್ರಾಂತ್ಯಗಳಿಗೆ ಭೇಟಿ ನೀಡಿ ಕೊನೆಗೆ ಮೆಕ್ಕಾ ಪ್ರವಾಸ ಮಾಡಿದನು. ಹಜ್ ಯಾತ್ರೆಯು ಧಾರ್ಮಿಕವಾಗಿ ಏಕತೆಯನ್ನುಂಟು ಮಾಡಿತು ಮತ್ತು ವಿವಿಧ ಪ್ರದೇಶಗಳಲ್ಲಿ ವ್ಯಾಪಾರ ಸಂಬಂಧವನ್ನು ಮುಸ್ಲಿಮರಲ್ಲಿ ವೃದ್ಧಿಗೊಳಿಸಿತು. ಇಸ್ಲಾಂ ಧರ್ಮವು ತನ್ನ ಯಾತ್ರಿಕರಿಗೆ ತೀರ್ಥಯಾತ್ರೆಯೊಂದಿಗೆ ವ್ಯಾಪಾರವನ್ನು ಕೈಗೊಳ್ಳಲು ಅವಕಾಶ ನೀಡಿತು. ಕುರಾನಿನ ಪ್ರಕಾರ "ನಿನ್ನ ದೇವರ ಮೇಲೆ ನೀನು

ಔದಾರ್ಯವನ್ನಿಟ್ಟುಕೊಂಡರೆ ನಿನ್ನ ಮೇಲೆ ಯಾವುದೇ ಪಾಪಗಳಿರುವುದಿಲ್ಲ"[21] ಎಂದು ತಿಳಿಸುತ್ತದೆ.

ಅಬ್ಬಾಸಿದ್‌ನ ಕಾಲದಲ್ಲಿ ಭಾರತದೊಂದಿಗಿನ ಅರಬ್ಬರ ಸಮುದ್ರ ವ್ಯಾಪಾರವು ಭೂಖಂಡಗಳ ನಡುವಿನ ಮುಸ್ಲಿಮರ ಆರ್ಥಿಕತೆಯ ಬೆನ್ನೆಲುಬಾಗಿತ್ತು. ಈ ಕಾಲದಲ್ಲಿ ಆಕ್ರಮಣಗಳು, ಯುದ್ಧಗಳು ನಡೆದವು. ಖಲೀಪನು ತನ್ನ ವಾಣಿಜ್ಯ ಚಟುವಟಿಕೆಗಳನ್ನು ರಕ್ಷಿಸುವ ಪ್ರಯತ್ನ ಮಾಡಿದನು. ಮೊದಲ ಮುಸ್ಲಿಂ ಮಿಲಿಟರಿ ದಾಳಿಯು ಭಾರತದ ವ್ಯಾಪಾರ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಬದಲಾವಣೆ ತಂದಿತು. ಭಾರತಕ್ಕೆ ದಾಳಿ ಮಾಡಿದ ಮೊದಲ ದಿನದಿಂದಲೂ ಅರಬ್ಬರು ತಮ್ಮ ಆಸಕ್ತಿ ಮತ್ತು ಕಾಳಜಿಯನ್ನು ವ್ಯಾಪಾರದಲ್ಲಿ ತೋರಿದರು. ಮತ್ತು ತಮ್ಮ ವ್ಯಾಪಾರಸ್ಥರಿಗೆ ಉತ್ತೇಜಕ ಮತ್ತು ಪ್ರೇರಣೆಯನ್ನು ತೋರಿ ಅವರ ವ್ಯಾಪಾರ ಬೆಳವಣಿಗೆಗೆ ಸಹಕರಿಸಿದರು. ಅರಬ್ಬರು ವಿಜಯನಗರ ಅರಸರೊಂದಿಗೆ ಉತ್ತಮವಾದ ವಾಣಿಜ್ಯ ಬಾಂದವ್ಯವನ್ನು ಹೊಂದಿದ್ದರು. ವಿಜಯನಗರ ಅರಸರು ಬಹುಮನಿ ಅರಸರೊಂದಿಗೆ ವಿರಸವನ್ನು ಹೊಂದಿದಾಗಿಯೂ ಕೂಡ ಅರಬ್ಬರು ವಿಜಯನಗರ ಸಾಮ್ರಾಜ್ಯದ ಅರಸರೊಂದಿಗೆ ಉತ್ತಮ ಬಾಂದವ್ಯ ಹೊಂದಿದ್ದರು.

ಇಸ್ಲಾಂ ವಾಣಿಜ್ಯ ಕಾನೂನು ಅರಬ್ಬರು ವ್ಯಾಪಾರ ಸಂಘಟನೆಗಳನ್ನು ರಚಿಸಿಕೊಳ್ಳಲು ಅವಕಾಶ ನೀಡಿತು ಇದರ ಫಲವಾಗಿ ಪಾಲುದಾರಿಕೆಯ ವ್ಯಾಪಾರ, ಸಾರ್ವತ್ರಿಕ ಪಾಲುದಾರಿಕೆ, ಪರಿಮಿತಿ ಬಂಡವಾಳ ಪಾಲುದಾರಿಕೆ ಎಂಬ ಸಂಘಟನೆಗಳು ಸ್ಥಾಪನೆಯಾದವು. ಈ ಸಂಘಟನೆಗಳ ಸ್ಥಾಪನೆಗೆ ಕಾರಣ ಬಂಡವಾಳ ಸಂಗ್ರಹಣೆ ಮತ್ತು ವ್ಯಾಪಾರದ ಹೊಣೆಗಾರಿಕೆಯನ್ನು ಹಂಚಿಕೊಳ್ಳುವ ಉದ್ದೇಶವಾಗಿತ್ತು. ವ್ಯಾಪಾರದ ಆದಾಯ ಮತ್ತು ಖರ್ಚು ಎಲ್ಲಾ ಸದಸ್ಯರಲ್ಲಿ ಹಂಚಿಕೆಯಾಗುತ್ತಿತ್ತು. ಪ್ರತಿಯೊಬ್ಬ ಸದಸ್ಯರೊಂದಿಗೂ ಒಡಂಬಡಿಕೆಯನ್ನು ಮಾಡಿಕೊಳ್ಳಲಾಗಿತ್ತು. ಅದರಂತೆ ಆದಾಯ ಮತ್ತು ಖರ್ಚನ್ನು ಹಂಚಿಕೊಳ್ಳುತ್ತಿದ್ದರು.

ಮಧ್ಯಕಾಲೀನ ಭಾರತದಲ್ಲಿ ಹಲವಾರು ಅರಬ್ ವಸಾಹತುಗಳು ಮಲಬಾರ್ ಮತ್ತು ಕೊಂಕಣ ತೀರಗಳಲ್ಲಿ ಸ್ಥಾಪನೆಯಾದವು. ಹತ್ತನೇ ಶತಮಾನದ ನಂತರ ಹಲವಾರು ಅರಬ್ ವ್ಯಾಪಾರಿಗಳು ಭಾರತದಲ್ಲಿ ನೆಲೆಸುವ ಮೂಲಕ ಸ್ಥಳೀಯ ಜನಾಂಗದೊಂದಿಗೆ ವೈವಾಹಿಕ ಸಂಬಂಧವನ್ನು ಏರ್ಪಡಿಸಿಕೊಂಡು ತಮ್ಮ ಸಮುದಾಯವನ್ನು ಹೆಚ್ಚಿಸಿಕೊಂಡರು. ಈ ವೈವಾಹಿಕ ಸಂಬಂಧಗಳಿಂದ ಹುಟ್ಟುವ ಮಕ್ಕಳನ್ನು 'ಭಯಾಸಿರ' ಎಂದು ಕರೆಯುತ್ತಿದ್ದರು. ಕ್ಯಾಲಿಕಟ್‌ನ ದೊರೆಯದ ಜಾಮೊರಿನ್‌ನು ಅರಬ್ಬರನ್ನು ಪ್ರೋತ್ಸಾಹಿತಿ ಅವರಿಗೆ ವ್ಯಾಪಾರದ ರಿಯಯಿತಿಗಳನ್ನು

ನೀಡಿದನು. ಈ ಕಾರಣದಿಂದಾಗಿ ಹಲವಾರು ಅರಬ್ ವ್ಯಾಪಾರಿಗಳು ಮತ್ತು ಪ್ರವಾಸಿಗರು ಕ್ಯಾಲಿಕಟ್‌ನಲ್ಲಿ ಬಂದು ನೆಲೆಸಿದರು. ಈ ಅರಬ್ ವ್ಯಾಪಾರಿಗಳು ಜಾಮೊರಿನ್‌ನನ್ನು ಈಜಿಪ್ಟ್, ಪರ್ಷಿಯಾ ಮತ್ತು ಉಳಿದ ಮುಸ್ಲಿಂ ರಾಜ್ಯಗಳೊಂದಿಗೆ ವಾಣಿಜ್ಯ ಸಂಪರ್ಕವನ್ನು ಬೆಳೆಸಿಕೊಳ್ಳಲು ಪ್ರೇರೇಪಿಸಿ ಇದರೊಂದಿಗೆ ತಮ್ಮ ವ್ಯಾಪಾರವನ್ನು ಬಲಪಡಿಸಿಕೊಂಡರು.[22]

ಹದಿಮೂರು ಮತ್ತು ಹದಿನಾಲ್ಕನೇ ಶತಮಾನಗಳಲ್ಲಿ ಅತಿಹೆಚ್ಚು ಅರಬ್ಬರು ಭಾರತದ ಕರಾವಳಿ ತೀರ ಪ್ರದೇಶಗಳಲ್ಲಿ ನೆಲೆಸಿದ್ದರು. ಇದರೊಂದಿಗೆ ಅರಬ್ಬರು ಮತ್ತು ಸ್ಥಳೀಯ ವ್ಯಾಪಾರಿಗಳೊಂದಿಗೆ ಹೊಂದಿಕೆಯಾಗುವ ವಾತಾವರಣ ನಿರ್ಮಾಣವಾಗಿ ಅರಬ್ಬರು ಸ್ಥಳೀಯರೊಂದಿಗೆ ಉತ್ತಮ ಸಂಬಂಧ ಏರ್ಪಡಿಸಿಕೊಂಡರು. ಅರಬ್ಬರು ಭೂ ಮಾರ್ಗ ಮತ್ತು ಜಲಮಾರ್ಗದ ವ್ಯಾಪಾರಗಳಲ್ಲಿ ಪ್ರಾವಿಣ್ಯತೆಯನ್ನು ಪಡೆದಿದ್ದರು. ಅವರ ಹಡಗುಗಳು ಅಪಾರ ಪ್ರಮಾಣದ ವಸ್ತುಗಳನ್ನು ತುಂಬಿಕೊಂಡು ತಮ್ಮಗೆ ಗೊತ್ತಿರುವ ಎಲ್ಲಾ ಪ್ರದೇಶಗಳಿಗೆ ಹೋಗಿ ಅಲ್ಲಿ ವ್ಯಾಪಾರ ನಿರ್ವಹಿಸುತ್ತಿದ್ದರು. ಈ ಸಂದರ್ಭ ಅವರು ಹಲವಾರು ಮರಳುಗಾಡುಗಳನ್ನು ದಾಟಬೇಕಿತ್ತು. ಮತ್ತು ಅವರು ಭೌಗೋಳಿಕ ಜ್ಞಾನವನ್ನು ಪಡೆದುಕೊಳ್ಳಲು ಅವಕಾಶವಾಯಿತು. ಇದರೊಂದಿಗೆ ಭಾರತದಲ್ಲಿ ವ್ಯಾಪಾರ ಏಕಸ್ವಾಮ್ಯವನ್ನು ಪಡೆದುಕೊಂಡರು.

### 2.4 ಮಲಬಾರ್ ತೀರ ಪ್ರದೇಶದಲ್ಲಿ ಅರಬ್ಬರ ವ್ಯಾಪಾರ ಏಕಸ್ವಾಮ್ಯ

ಮಲಬಾರ್ ಎಂಬ ಪದವು ಭಾರತ ಉಪಖಂಡದ ನೈಋತ್ಯ ಭಾಗದ ಕರಾವಳಿ ಪ್ರದೇಶವನ್ನು ನಿರ್ದೇಶಿಸುತ್ತದೆ. ಮಲಯಾಳಂ ಭಾಷೆ ಮಾತನಾಡುವ ಭಾಗದೊಂದಿಗೆ ಹೊಂದಿಕೆಯಾಗಿದೆ ಭೌಗೋಳಿಕವಾಗಿ ಪಶ್ಚಿಮ ಘಟ್ಟಗಳಿಂದ ಅರಬ್ಬೀ ಸಮುದ್ರದವರೆಗಿನ ಬಂದರುಗಳು ಮತ್ತು ಭೂಭಾಗಗಳನ್ನು ಒಳಗೊಂಡಿದೆ. ಸ್ವಲ್ಪ ಹೆಚ್ಚು ಕಡಿಮೆ ಇಂದಿನ ಕೇರಳ ರಾಜ್ಯದ ಭಾಗವಾಗಿದೆ. ದಕ್ಷಿಣ ಕನ್ನಡ ಭಾಗ ಮತ್ತು ಕರ್ನಾಟಕದ ಕರಾವಳಿ ತೀರ ಪ್ರದೇಶವೂ ಕೂಡ ಮಲಬಾರ್ ಪ್ರಾಂತ್ಯದ ಭಾಗವಾಗಿದೆ. ಇಡೀ ಮಲಬಾರ್ ಪ್ರಾಂತ್ಯವು ಚೇರ ಅಥವಾ ಪೆರುಮಾಳ್ ರಾಜರಿಂದ ಕ್ರಿ.ಶ 800–1124 ರವರೆಗೆ ಆಳ್ವಿಕೆಗೆ ಒಳಪಟ್ಟಿತು. ಹಲವಾರು ಅಧ್ಯಯನಗಳ ಪ್ರಕಾರ ಕೇಂದ್ರಿಯ ಚೇರ ಸಾಮ್ರಾಜ್ಯವು ಹಲವಾರು ಸಣ್ಣಪುಟ್ಟ ಸಾಮ್ರಾಜ್ಯಗಳನ್ನು ನಿರ್ಮಾಣಮಾಡಿತು. ಈ ಸಂದರ್ಭದಲ್ಲಿ ಭಾರತಕ್ಕೆ ಭೇಟಿ ಮಾಡಿದ ವಿದೇಶಿ ಪ್ರವಾಸಿಗರು ಚೇರ್‌ಮನ್ ಪೆರುಮಾಳ್‌ನ ಬಗ್ಗೆ ಉಲ್ಲೇಖಿಸಿದ್ದಾರೆ. ಹಲವಾರು ಉಲ್ಲೇಖಗಳ ಪ್ರಕಾರ ಮಲಬಾರ್ ಪ್ರಾಂತ್ಯದ ಸ್ಥಾಪಕ ಚೇರ್‌ಮನ್ ಪೆರುಮಾಳ್‌ನಾಗಿದ್ದಾನೆ. ಇವನು ರಾಜ್ಯವನ್ನು ಮೂರು ಭಾಗಗಳಾಗಿ ವಿಂಗಡಿಸಿ ಅದರ ಸಂಪೂರ್ಣ ಜವಾಬ್ದಾರಿಯನ್ನು ಜಾಮೊರಿನ್‌ಗೆ

ನೀಡಿದನು. ಅಂತಹ ಮೂರು  ಭಾಗಗಳೆಂದರೆ ಕಣ್ಣನೂರು, ಕ್ಯಾಲಿಕಟ್ ಮತ್ತು ವೈನಾಡು ಈ ಎಲ್ಲಾ ಮುಖ್ಯ ಕೆಂದ್ರಗಳು ವಿದೇಶಿಯರ ಆಕರ್ಷಣೆಗೆ ಒಳಗಾಗಿ ಸಾಂಬಾರ ಪದಾರ್ಥಗಳ ಪ್ರಮುಖ ವ್ಯಾಪಾರ ಕೇಂದ್ರಗಳಾಗಿದ್ದವು.

ಕಣ್ಣನೂರು ಮಲಬಾರ್ ತೀರ ಪ್ರದೇಶದ ಉತ್ತರ ಭಾಗದಲ್ಲಿ ನೆಲೆಗೊಂಡಿದೆ ಹಾಗೂ ಕಣ್ಣನೂರು ಭಾಗದ ಕೇಂದ್ರ ಸ್ಥಾನವಾಗಿದೆ. ಈ ಭಾಗವು ಕೋಲತೀರಿನ್ ಎಂಬ ಸಂತತಿಯಿಂದ ಅಂದಾಜು ಕ್ರಿ.ಶ.15ನೇ ಶತಮಾನದಿಂದ ಆಳ್ವಿಕೆಗೆ ಒಳಪಟ್ಟಿತು. ಕ್ಯಾಲಿಕಟ್ ನಗರವು ಕಣ್ಣನೂರಿನ ದಕ್ಷಿಣ ಭಾಗಕ್ಕೂ ಮತ್ತು ಕೊಚ್ಚಿನ್‌ನ ಉತ್ತರ ಭಾಗದಲ್ಲಿ ನೆಲೆಗೊಂಡಿದೆ. ಟ್ರಾವಂಕೂರು ದಕ್ಷಿಣ ಕರಾವಳಿಯ ಮೇಲ್ಭಾಗದಲ್ಲಿ ನೆಲೆಗೊಂಡಿದೆ. ಆಧುನಿಕ ಮಲಬಾರ್ ಪ್ರಾಂತ್ಯದ ರಾಜಕೀಯವನ್ನು ಸಂಪೂರ್ಣವಾಗಿ ಅರ್ಥಮಾಡಿಕೊಳ್ಳಲು ಸ್ವ–ಮಾದರಿ ಎಂಬ ಪರಿಕಲ್ಪನೆ ಸಹಾಯ ಮಾಡುತ್ತದೆ. ಸ್ವರೂಪಂ ಎಂಬ ಪದದ ಅರ್ಥ ಸ್ವ–ಮಾದರಿ ಎಂದಾಗುತ್ತದೆ. 15ನೇ ಶತಮಾನದ ಭಾಗದಲ್ಲಿ ನಾಲ್ಕು ಮುಖ್ಯ ಸ್ವಮಾದರಿ ಪರಿಕಲ್ಪನೆಗಳಿದ್ದವು. ಅವುಗಳೆಂದರೆ ಕೋಲತೀರಿ ಸಂತತಿಯ ಕಣ್ಣನೂರಿನ ಕೋಲ ಸ್ವಮಾದರಿ, ಜಾಮೋರಿನ್‌ನಿಂದ ಆಳ್ವಿಕೆಗೆ ಒಳಪಟ್ಟಿದ್ದ ಕ್ಯಾಲಿಕಟ್‌ನ ನಿದಿಹಿರುಪು ಸ್ವಮಾದರಿ, ಕೊಚ್ಚಿನ್ ಆಳ್ವಿಕೆ ಮಾಡುತ್ತಿದ್ದ ಪೆರುಮ್‌ದಡಪು ಸ್ವಮಾದರಿ ಮತ್ತು ತಿರುವಂಕೂರ್‌ನಲ್ಲಿ ಆಳ್ವಿಕೆ ಮಾಡುತ್ತಿದ್ದ ವೈನಾಡ್ ಸ್ವ–ಮಾದರಿ, ಇವು 15ನೇ ಶತಮಾನದ ಕರಾವಳಿ ಭಾಗದ ಪ್ರಮುಖ ರಾಜಕೀಯ ಮನೆತನಗಳಾಗಿದ್ದವು.[23]

ಕ್ರಿ.ಶ.14ನೇ ಶತಮಾನದ ನಂತರ ಕ್ಯಾಲಿಕಟ್ ಒಂದು ಉನ್ನತ ವ್ಯಾಪಾರ ಮತ್ತು ವಾಣಿಜ್ಯ ನಗರವಾಗಿ ಬೆಳವಣಿಗೆಯಾಯಿತು. ಇದು ಒಂದು ಸುಂದರ ವ್ಯಾಪಾರ ಮತ್ತು ವಾಣಿಜ್ಯನಗರವಾಗಿ ಬೆಳೆಯಲು ಅಲ್ಲಿನ ರಾಜಕೀಯ ವ್ಯವಸ್ಥೆಯು ಕೂಡ ಕಾರಣವಾಗಿದೆ. ಹದಿನಾಲ್ಕನೇ ಶತಮಾನಕ್ಕೆ ಮುಂಚೆ ಮಲಬಾರಿಗೆ ಭೇಟಿ ನೀಡಿದ ಪ್ರವಾಸಿಗರು ಇಲ್ಲಿ ನೌಕಾಯಾನ ಮಾಡುವುದು ಈ ಕೆಳಕಂಡ ಎರಡು ಕಾರಣಗಳಿಗಾಗಿ ಕಷ್ಟವೆಂದು ತಿಳಿಸಿದ್ದಾರೆ. ಅಪಾಯಕಾರಿಯಾದ ಮಾನ್ಸೂನ್‌ನಿಂದ ರಕ್ಷಣೆ ಪಡೆಯಲು ಅಲ್ಲಿ ಯಾವುದೇ ಉತ್ತಮ ಬಂದರುಗಳಿರಲಿಲ್ಲ ಮತ್ತು ಅಲ್ಲಿಗೆ ಬರುತ್ತಿದ್ದ ಹಡಗುಗಳಿಗೆ ಯಾವುದೇ ಭದ್ರತೆಗಳಿರಲಿಲ್ಲ. ಇಬನ್‌ಬತೂತನ ಪ್ರಕಾರ ಹದಿನಾಲ್ಕನೇ ಶತಮಾನದ ನಂತರ ಉತ್ತಮ ಬಂದರನ್ನು ನಿರ್ಮಾಣ ಮಾಡಿದ ಮೇಲೆ ಕ್ಯಾಲಿಕಟ್‌ಗೆ ಹಲವಾರು ಅರಬ್ ಮತ್ತು ಚೀನಾದ ವ್ಯಾಪಾರಿಗಳು ಬಂದರು. ಇದರಿಂದಾಗಿ ವ್ಯಾಪಾರ ಹಾಗೂ ವಾಣಿಜ್ಯ ಅಭಿವೃದ್ಧಿ ಮತ್ತು ರಾಜಕೀಯ ಅಭಿವೃದ್ಧಿ ಬೆಳವಣಿಗೆ ಹೊಂದಿತ್ತು.

ಭಾರತೀಯ ದಾಖಲೆಗಳು ಹೇಳುವ ಪ್ರಕಾರ ಕ್ಯಾಲಿಕಟ್ ಬೆಳವಣಿಗೆ ಹೊಂದಲು ದೇವಾಲಯಗಳೂ ಮತ್ತು ವ್ಯವಸಾಯದಿಂದ ಬಂದ ಲಾಭವೇ ಕಾರಣವಾಯಿತು. ಜಾಮೊರಿನ್‌ನು ಅಲ್ಲಿನ ದೇವಾಲಯಗಳ ಮೇಲೆ ನಿಯಂತ್ರಣ ಹೊಂದಿದ್ದನು. ಕ್ಯಾಲಿಕಟ್‌ನ ಪ್ರಮುಖ ದೇವಾಲಯವಾದ ಟಾಲಿ ದೇವಾಲಯವು ಎಲ್ಲಾ ಪ್ರಮುಖ ಸಂತರ ಮತ್ತು ವಿದ್ವಾಂಸರ ಕೇಂದ್ರವಾಗಿತ್ತು. ಜಾಮೊರಿನ್‌ನು ಈ ದೇವಾಲಯದಲ್ಲಿ ವಿದ್ವಾಂಸರ ಚರ್ಚೆಗಳನ್ನು ಮತ್ತು ಧಾರ್ಮಿಕ ಆಚರಣೆಗಳನ್ನು ಪೋಷಿಸಿದನು. ಈ ಟಾಲಿ ದೇವಾಲಯದೊಂದಿಗೆ ಜಾಮೊರಿನನು ಇನ್ನು ಹಲವು ದೇವಾಲಯಗಳನ್ನು ತನ್ನ ನಿಯಂತ್ರಣಕ್ಕೆ ಒಳಪಡಿಸಿದನು. ಅವುಗಳೆಂದರೆ ತ್ರಿಕಾವು, ತಿರುನವೈಯ ಮತ್ತು ಗುರುವಾಯೂರ್, ತಿರುನವೈಯ ದೇವಾಲಯವನ್ನು ಜಾಮೊರಿನ್‌ನ್ನು ವಶಪಡಿಸಿಕೊಂಡ ಮೇಲೆ ಅಲ್ಲಿ ಹಬ್ಬ ಮತ್ತು ಉತ್ಸವಗಳನ್ನು ನಡೆಸುವ ಹಕ್ಕನ್ನು ಪಡೆದನು. ಇದರ ಫಲವಾಗಿ ಆ ಭಾಗದಲ್ಲಿ ಮಮಾನ್‌ಕಂ ಎಂಬ ಒಂದು ಮಲಬಾರ್‌ನಲ್ಲೆ ಪ್ರಮುಖವಾದ ಹಬ್ಬವನ್ನು ಆಚರಿಸುತ್ತಿದ್ದರು. ಹಲವಾರು ವಿದ್ವಾಂಸರ ಪ್ರಕಾರ ಈ ಹಕ್ಕನ್ನು ಪಡೆದ ಜಾಮೊರಿನ್‌ನಿಗೆ ಆ ಭಾಗದಲ್ಲಿ ರಾಜಕೀಯ ಹಕ್ಕನ್ನು ಬೆಳಸಿಕೊಳ್ಳಲು ಸಾಧ್ಯವಾಯಿತು. ಇದರೊಂದಿಗೆ ಜಾಮೊರಿನ್‌ನು ಹಲವಾರು ಸಾಂಬಾರ ಪದಾರ್ಥಗಳು ಮತ್ತು ಅಕ್ಕಿ ಬೆಳೆಯುವ ಪ್ರದೇಶಗಳನ್ನು ವಶಪಡಿಸಿಕೊಂಡನು. ಸಾಂಬಾರ ಮತ್ತು ಭತ್ತದ ಬೆಳೆಯು ಉತ್ತಮವಾದ ಆದಾಯವನ್ನು ರಾಜ್ಯಕ್ಕೆ ತಂದುಕೊಡುತ್ತಿತ್ತು.

ಹದಿನೈದನೇ ಶತಮಾನದ ನಂತರ ಕ್ಯಾಲಿಕಟ್ ಒಂದು ಪ್ರಮುಖ ವಾಣಿಜ್ಯ ನಗರವಾಗಿ ಬೆಳವಣಿಗೆ ಹೊಂದುವುದರೊಂದಿಗೆ ಅದು ಮಲಬಾರ್‌ನಲ್ಲಿ ಪ್ರಥಮ ಸ್ಥಾನವನ್ನು ಪಡೆದುಕೊಂಡಿತು. ಕೊಚ್ಚಿನ್‌ನ ರಾಜನು ಆರ್ಥಿಕವಾಗಿ ಮತ್ತು ಸಂಕೇತವಾಗಿ ತನ್ನನ್ನು ತಾನು ಜಾಮೊರಿನ್‌ನಿಗೆ ಶರಣಾದನು. ಕೊಚ್ಚಿನ್‌ನ ರಾಜನು ನಾಣ್ಯ ಟಂಕಿಸುವ ಮತ್ತು ತನ್ನ ಅರಮನೆಗೆ ಹಂಚನ್ನು ಬಳಸುವ ಹಕ್ಕನ್ನು ಕಳೆದುಕೊಂಡನು. ಈ ಎಲ್ಲಾ ಹಕ್ಕುಗಳು ಜಾಮೊರಿನ್‌ನಿಗೆ ಹೋದವು. 1498ರಲ್ಲಿ ಕ್ಯಾಲಿಕಟ್‌ಗೆ ಪೋರ್ಚುಗೀಸರ ನಾವಿಕ ವಾಸ್ಕೋಡಿಗಾಮನ ಆಗಮನದ ನಂತರ ಇಡೀ ಮಲಬಾರಿನಲ್ಲಿ ಬಹಳಷ್ಟು ಬದಲಾವಣೆಗಳಾದವು.

ಪೋರ್ಚುಗೀಸರು ಕ್ಯಾಲಿಕಟ್‌ನಲ್ಲಿ ಸಾಂಬಾರ ವ್ಯಾಪಾರ ಏಕಸ್ವಾಮ್ಯವನ್ನು ಪಡೆಯಲು ಪ್ರಯತ್ನಿಸಿ ವಿಫಲವಾದರು. ನಂತರ ಅವರು ತಮ್ಮ ಗಮನವನ್ನು ಕೊಚ್ಚಿನ್ ಮೇಲೆ ಹರಿಸಿದರು. ಕೊಚ್ಚಿನ್‌ನ ರಾಜ ಪೊರ್ಚುಗೀಸರ ಬೇಡಿಕೆಗಳನ್ನು ಒಪ್ಪಿಕೊಂಡು ಜಾಮೊರಿನ್‌ನ ಏಕಸ್ವಾಮ್ಯದ ವಿರುದ್ಧ ಹೋರಾಡಲು ಸಹಾಯ ಮಾಡಿದನು. ಕ್ರಿ.ಶ.1500ರ ನಂತರ ಪೋರ್ಚುಗೀಸರು

ತಮ್ಮನ್ನು ಬಲಪಡಿಸಿಕೊಂಡು ಜಾಮೊರಿನ್‌ನ ವಿರುದ್ಧ ಹಲವಾರು ಯುದ್ಧಗಳನ್ನು ಮಾಡಿದರು. ಎಲ್ಲಾ ದೇಶಗಳ ವ್ಯಾಪಾರಸ್ಥರು ಕ್ಯಾಲಿಕಟ್‌ನಲ್ಲಿ ನೆಲೆಸಿದರು. ಅರಬ್ ವ್ಯಾಪಾರಸ್ಥರು ಯಮನ್, ಅರೇಬಿಯಾ, ಈಜಿಪ್ಟ್ ಮುಂತಾದ ದೇಶಗಳಿಂದ ಬಂದು ಕ್ಯಾಲಿಕಟ್‌ನಲ್ಲಿ ಸಾಂಬಾರ ಪದಾರ್ಥಗಳ ವ್ಯಾಪಾರದ ಏಕಸ್ವಾಮ್ಯವನ್ನು ಪಡೆದಿದ್ದರು. ಭಾರತದಲ್ಲಿನ ಸ್ಥಳೀಯ ಮಾಪಿಳ್ಳೆ ಮುಸ್ಲಿಮರು ಅರಬ್ಬರಿಗೆ ಉತ್ತಮವಾದ ಸಂಪರ್ಕಗಳನ್ನು ಕಲ್ಪಿಸಿಕೊಟ್ಟರು. ಮಾರುಕಟ್ಟೆ, ಸ್ಥಳೀಯ ವ್ಯಾಪಾರಸ್ಥರೊಂದಿಗೆ ಉತ್ತಮ ಬಾಂದವ್ಯ ಇದೆಲ್ಲದರಿಂದಾಗಿ ಅರಬ್ಬರ ವ್ಯಾಪಾರ ಬೆಳೆಯಿತು. ಕ್ರಿ.ಶ.1525ರಲ್ಲಿ ಮಾರಕರ್ ಎಂಬ ಮುಸ್ಲಿಂ ವ್ಯಾಪಾರಿಗಳ ಪಂಗಡವು ಕೊಚ್ಚಿನ್ ಅನ್ನು ಬಿಟ್ಟು ಕ್ಯಾಲಿಕಟ್‌ಗೆ ವಲಷೆ ಹೋಯಿತು. ಈ ವಲಸೆಗೆ ಬಹಳ ಪ್ರಮುಖವಾದ ಕಾರಣವೇನೆಂದರೆ ಪೋರ್ಚುಗೀಸರು ಮತ್ತು ಮುಸ್ಲಿಮರ ನಡುವೆ ಯಾವಾಗಲೂ ನಡೆಯುತ್ತಿದ್ದ ಯುದ್ಧಗಳು. ಇದಾದ ನಂತರ ಈ ಮಾರಕರ್ ವ್ಯಾಪಾರಿ ಸಮುದಾಯವು ಕ್ಯಾಲಿಕಟ್‌ನಲ್ಲಿ ಉತ್ತಮವಾದ ರಾಜಕೀಯ ಶಕ್ತಿಯಾಗಿ ಬೆಳವಣಿಗೆ ಹೊಂದಿತ್ತು. ಮಾರಕರ್ ವ್ಯಾಪಾರಿ ಸಮುದಾಯದ ನಾಯಕರು ನೌಕಾಪಡೆಯ ಅಧಿಪತಿಗಳಾಗಿ ಸಂಪೂರ್ಣವಾಗಿ ಜಾಮೊರಿನ್‌ನ ನೌಕಾಪಡೆಯನ್ನು ನಿಯಂತ್ರಿಸುತ್ತಿದ್ದರು.[24]

ಮಧ್ಯಕಾಲೀನ ಭಾರತದಲ್ಲಿ ಅರಬ್ಬರು ಮಲಬಾರನ್ನು ಸಾಂಬಾರ ಪದಾರ್ಥಗಳ ವ್ಯಾಪಾರದ ಪ್ರಮುಖ ಕೇಂದ್ರವಾಗಿ ಅಭಿವೃದ್ಧಿ ಪಡಿಸಿದರು. ಮತ್ತು ಈ ಪ್ರಾಂತ್ಯಕ್ಕೆ **'ಸಾಂಬಾರನಾಡು'** ಎಂದು ಅಡ್ಡ ಹೆಸರನ್ನು ನೀಡಿದರು. ಮಲಬಾರ್ ಎಂಬ ಪದವು ಮೊದಲಿಗೆ ಅರಬ್ಬರಿಂದ ಪರಿಚಯಿಸಲ್ಪಟ್ಟಿತು. ಅಲ್ಬೆರೂನಿ ಪ್ರಕಾರ ಮಧ್ಯಕಾಲೀನ ಯುರೋಪ್ ಕೂಡ ಮಲಬಾರಿನ ಬಂದರುಗಳೊಂದಿಗೆ ಸಾಂಬಾರ ಪದಾರ್ಥಗಳ ವ್ಯಾಪಾರ ಸಂಪರ್ಕವನ್ನು ಹೊಂದಿತ್ತು. ಈ ಕಾಲದಲ್ಲಿ ಮಲಬಾರಿನ ಭೌಗೋಳಿಕ ಅನುಕೂಲತೆಯು ಜಲಸಂಚಾರ ಮತ್ತು ವಾಣಿಜ್ಯ ಬೆಳವಣಿಗೆಗೆ ಸಹಾಯ ಮಾಡಿತು. ಪಶ್ಚಿಮ ಘಟ್ಟಗಳ ಎತ್ತರವಾದ ಗುಡ್ಡಗಳು ನಾವಿಕರಿಗೆ ದಾರಿದೀಪವಾಗಿ ಪರಿಣಮಿಸಿದವು. ಮಲಬಾರಿನ ಹಲವಾರು ಬಂದರುಗಳು ನದಿಮುಖದಲ್ಲಿ ರಚನೆಯಾಗಿದ್ದವು. ಹಡುಗುಗಳು ಮಾನ್ಸೂನ್ ಸಂದರ್ಭದಲ್ಲಿ ಭೋರ್ಗರೆಯುವ ನದಿಮುಖದಲ್ಲಿ ಬಂದು ಆಶ್ರಯ ಪಡೆಯುತ್ತಿದ್ದವು. ಮಣ್ಣಿನ ಸ್ವಾಭಾವಿಕ ಬಂದರುಗಳು ಪಶ್ಚಿಮ ಘಟ್ಟಗಳಲ್ಲಿ ನಿರ್ಮಾಣವಾಗಿದ್ದವು. ದೊಡ್ಡ ಹಡಗು ಹೋಗಬಹುದಾದ ಹಿನ್ನೀರಿನ ಪ್ರದೇಶಗಳನ್ನು **'ಕಾಯಲ್'** ಎಂದು ಕರೆಯುತ್ತಿದ್ದರು. ಇದು ಸುಮಾರು ನೂರ ಇಪತ್ತು ಕಿಲೋಮೀಟರ್

ಉದ್ದವನ್ನು ಹೊಂದಿತ್ತು. ಈ ಕರಾವಳಿ ಭಾಗವು ಮಲಬಾರ್ ತೀರದಲ್ಲಿ ಉತ್ತಮ ವರ್ಗದ ಸಾಂಬಾರ ಪದಾರ್ಥಗಳನ್ನು ಬೆಳೆಯುವ ಪ್ರದೇಶಗಳಿಗೆ ಸಂಪರ್ಕ ಕಲ್ಪಿಸಿತ್ತು.

ಸ್ಥಳೀಯ ಮಲಬಾರ್ ರಾಜರು ಅರಬ್ಬರಿಗೆ ವಿಶೇಷ ರಿಯಯಿತಿಗಳನ್ನು ನೀಡಿದರು ಮತ್ತು ಅರಬ್ಬರನ್ನು ವ್ಯಾಪಾರ ಕೈಗೊಳ್ಳುವಂತೆ ಪ್ರೇರೇಪಿಸಿದರು. ಶಾಯಕ್ ಜೈನುದ್ದೀನ್ ತನ್ನ ಗ್ರಂಥವಾದ ತುಪಲ್–ಆಲ್–ಮುಜಹೀದ್ದೀನ್‌ನಲ್ಲಿ ಉಲ್ಲೇಖಿಸಿರುವಂತೆ ಮಲಬಾರಿನ ರಾಜರು ಮುಸ್ಲಿಮರಿಗೆ ಸಕರಾತ್ಮಕವಾದ ವಾತಾವರಣವನ್ನು ನಿರ್ಮಿಸಿದರು. ಈದ್ ಹಬ್ಬವನ್ನು ಆಚರಿಸಲು, ಶುಕ್ರವಾರದ ಪ್ರಾರ್ಥನೆಯನ್ನು ಮಾಡಲು ಅವರಿಗೆ ವ್ಯವಸ್ಥೆ ಕಲ್ಪಸಿಕೊಟ್ಟರು. ನಷ್ಟ ಮಾಡಿದ ಮುಸ್ಲಿಮರಿಗೆ ಮರಣದಂಡನೆಯನ್ನು ವಿದಿಸುವ ಮೊದಲು ಆ ಧರ್ಮದ ಮುಖಂಡರ ಅಭಿಪ್ರಾಯವನ್ನು ಕೇಳಲಾಗುತ್ತಿತ್ತು ಮತ್ತು ಮತಾಂತರ ಮಾಡುತ್ತಿದ್ದ ಮುಸ್ಲಿಂ ಧರ್ಮಾಧಿಕಾರಿಗಳಿಗೆ ಯಾವುದೇ ಶಿಕ್ಷೆ ಅಥವಾ ಕಿರುಕುಳ ನೀಡುತ್ತಿರಲಿಲ್ಲ. ಕ್ಯಾಲಿಕಟ್‌ನ ದೊರೆಯಾಗಿದ್ದ ಜಾಮೊರಿನ್‌ನು ವಿದೇಶಿ ಮುಸ್ಲಿಮರನು ಬಹಳ ಗೌರವಪೂರ್ವಕವಾಗಿ ಮತ್ತು ಆತ್ಮೀಯವಾಗಿ ಕಾಣುತ್ತಿದ್ದನು. ಅರಬ್ ವ್ಯಾಪಾರಿಗಳು ಹೆಚ್ಚಿನ ಸಂಖ್ಯೆಯಲ್ಲಿ ಈ ಬಂದರಿನಲ್ಲಿ ನೆಲೆಸಲು ಪ್ರಾರಂಭಿಸಿದರು. ಅರಬ್ಬರು ಸ್ಥಳೀಯರೊಂದಿಗೆ ವೈವಾಹಿಕ ಸಂಬಂಧವನ್ನು ಏರ್ಪಡಿಸಿಕೊಂಡು ಇದರಿಂದ ಬಂದ ಸಂತಾನವನ್ನು ಮಾಪಿಳ್ಳೆಗಳೆಂದು ಕರೆಯುತ್ತಿದ್ದರು. ಈ ಮಾಪಿಳ್ಳೆಗಳು ವ್ಯಾಪಾರದಲ್ಲಿ ನೌಕೆ ಚಲಾಯಿಸುವ ಕಾರ್ಯಗಳಲ್ಲಿ ತೊಡಗಿದ್ದರು. ಲುಡೋವಿಕೊ ಡಿ ವರ್ತಿಮ (1503–1508) ಎಂಬ ಇಟಲಿಯ ಪ್ರವಾಸಿಗನ ಪ್ರಕಾರ ಕ್ಯಾಲಿಕಟ್‌ನ ಸಾಗರ ವ್ಯಾಪಾರವು ಮತ್ತು ನೌಕಾಯಾನವು ಸ್ಥಳೀಯ ಮುಸ್ಲಿಮರ ಕೈಯಲ್ಲಿತ್ತು ಎಂದು ತಿಳಿಸಿದ್ದಾನೆ. ಇನ್ನು ಮುಂದುವರಿದು ಪೋರ್ಚುಗೀಸರೇನಾದರೂ ಮಲಬಾರಿಗೆ ಬರದಿದ್ದರೆ ಮಲಬಾರ್ ಸಂಪೂರ್ಣವಾಗಿ ಮೂರಿಸ್ ರಾಜರ ಕೈವಶವಾಗುತ್ತಿತ್ತು ಎಂದು ತಿಳಿಸಿದ್ದಾನೆ.[25]

ಅರಬ್ಬರ ಸಂಖ್ಯೆ ದಿನಕಳೆದಂತೆ ಹೆಚ್ಚಾಗತೊಡಗಿತು. ನಂತರ ಮಲಬಾರಿನ ರಾಜರು ವಿದೇಶೀ ವ್ಯಾಪಾರಿಗಳಿಗೆ ನ್ಯಾಯವನ್ನು ಒದಗಿಸಲು ಪ್ರಯತ್ನಿಸಿದರು. ಅರಬ್ ಯಾತ್ರಿಕರು ಭಾರತೀಯ ರಾಜರು ಅರಬ್ ವ್ಯಾಪಾರಿಗಳಿಗೆ ನೀಡಿದ ಭದ್ರತೆ ಮತ್ತು ದಯಾಪರತೆಯನ್ನು ಪ್ರಶಂಸಿಸಿದ್ದಾರೆ. ಹಿಂದೂಗಳು ಮತ್ತು ಮುಸ್ಲಿಮರು ಸ್ಥಳೀಯ ರಾಜರ ಸಹಾಯದಿಂದ ಶ್ರೀಮಂತ ಸಾಮಾಜಿಕ ಜೀವನವನ್ನು ನಡೆಸುತ್ತಿದ್ದರು. ಅರಬ್ ವ್ಯಾಪಾರಸ್ಥರು ಮಲಬಾರಿಗೆ ಕುದುರೆಗಳು, ಕರ್ಜೂರ ಮತ್ತು ಸುಗಂಧ ದ್ರವ್ಯಗಳನ್ನು ಅರೇಬಿಯಾದಿಂದ ಬುಕಾರದಿಂದ ರತ್ನಗಂಬಳಿ ಕೂಪದಿಂದ ರೇಷ್ಮೆ ಕರವಸ್ತ್ರಗಳನ್ನು, ಈಜಿಪ್ಟ್‌ನಿಂದ ನಾರುಬಟ್ಟೆ ಮತ್ತು ಶಿರಾಜ್‌ನಿಂದ

ರೇಷ್ಮೆಯನ್ನು ತರುತ್ತಿದ್ದರು. ಅರಬ್ಬರು ತಮ್ಮ ದೇಶಗಳಿಗೆ ಸಾಂಬಾರ ಪದಾರ್ಥಗಳಾದ, ಶುಂಠಿ, ಏಲಕ್ಕಿ ಮತ್ತು ಕರ್ಪೂರಗಳನ್ನು ಮಾತ್ರವಲ್ಲದೆ ತೆಂಗಿನಕಾಯಿ, ಹುರಿ, ತೇಗದ ಮರ, ಬಿದಿರು, ಹಲಸಿನಹಣ್ಣು, ನಿಂಬೆಹಣ್ಣು, ಮಾವಿನಹಣ್ಣುಗಳನ್ನು ರಫ್ತು ಮಾಡುತ್ತಿದ್ದರು.

ಹಲವಾರು ಅರಬ್ ಪ್ರವಾಸಿಗರು ಪ್ರಾರಂಭದ ಅರಬ್ ವ್ಯಾಪಾರಸ್ಥರು ವಿದೇಶೀ ವ್ಯಾಪಾರದ ಬಗ್ಗೆ ಉಲ್ಲೇಖಿಸಿದ್ದಾರೆ. ಅರಬ್ ಬಂದರಿನಿಂದ ಮಲಬಾರ್ ಬಂದರಿಗೆ ಪ್ರಯಾಣದ ಅವಧಿ ಸುಮಾರು ಒಂದು ತಿಂಗಳೆಂಧು ನೈರುತ್ಯ ಮನ್ಸೂನ್ ಮಾರುತಗಳ ಕಾಲದಲ್ಲಿ ಅಂದರೆ ನವೆಂಬರ್ ಮತ್ತು ಡಿಸೆಂಬರ್ ತಿಂಗಳಿನಲ್ಲಿ ಈ ಪ್ರಯಾಣ ನಡೆಯುತ್ತಿದೆಂದು ಹೇಳಲಾಗಿದೆ. ಜಲಪರ್ಯಟನೆ ಮಾಡುವ ಸಂದರ್ಭದಲ್ಲಿ ಅರಬ್ಬರು ಅರಬ್ ಬಂದರಿನ ಮಾರ್ಗವಾಗಿ ಖ್ಯಾಯ್ಸ್, ಓರ್ಮುಜ್, ಮಕ್ರಾನ್, ದ್ಯಾಬಲ್, ಆಲ್ ಮಾನ್‌ಸೂರ್ ನಂತರ ಸಿಂದ್ ಪ್ರಾಂತ್ಯ ಕೊಂಕಣ, ಬ್ರೂಚ್, ಸಿಂದನ್, ಸಿಂದಬುರ್, ಸೈಮೂರು ಮಾರ್ಗವಾಗಿ ಮಲಬಾರಿಗೆ ತಲುಪುತ್ತಿದ್ದರು.

### 2.5 ಕರ್ನಾಟಕದ ಬಂದರುಗಳಲ್ಲಿ ಅರಬ್ಬರು:

ಶ್ರೀ ಪೃಥ್ವೀಕಾಂತೆಗೆ ಮಂಗಲಾಭರಣವೆನಿಸಿದ ಮಂಗಳೂರು ಎಂದೇ ಪ್ರಖ್ಯಾತವಾದ ಮಂಗಳೂರಿನ ಇತಿಹಾಸದಲ್ಲಿ ಮುಸ್ಲಿಮರ ಪಾತ್ರವು ಗಣನೀಯವಾಗಿದೆ. ಮಂಗಳೂರು ಒಂದು ಐತಿಹಾಸಿಕ ವ್ಯವಹಾರಿಕ ನಗರವಾಗಿ ಬೆಳೆಯಲು ಮುಸ್ಲಿಮರು ದೊಡ್ಡ ಕಾಣಿಕೆಯನ್ನು ನೀಡಿದ್ದಾರೆ.[26] ಮಂಗಳೂರಿನಲ್ಲಿ ನೇತ್ರಾವತಿ ಮತ್ತು ಪಾಲ್ಗುಣಿ ನದಿಗಳು ಅರಬ್ಬೀ ಸಮುದ್ರವನ್ನು ಸೇರಿಕೊಳ್ಳುವ ಸ್ಥಳವನ್ನು 'ಕೊಡಿ' ಅಥವಾ 'ಅಳಿವೆ' ಎನ್ನುತ್ತಾರೆ. ಮಂಗಳೂರನ್ನು ಸ್ಥಳೀಯರು ಗುರುತಿಸಿಕೊಂಡಂತೆ 'ಕೊಡಿಯಾಲ' ಎಂಬುದು ಈ ನದಿ ಸಂಧಿಯ ಸೂಚಕವೆಂದು ಅಭಿಪ್ರಾಯಪಟ್ಟಿದ್ದಾರೆ. ಅದೇ ತುಳು ಭಾಷಿಕರ 'ಕುಡಲ' ಆಗಿದೆ ಎಂದು ಸಮರ್ಥನೆ ಇದೆ. ನಾಥ ಪಂಥದ ಭಕ್ತೆಯಾದ ಮಂಗಳೆ ಎಂಬುವವಳು ಕೇರಳದಿಂದ ಬಂದು ಇಲ್ಲಿ ನೆಲೆಸಿದ ಕಾರಣ ಮಂಗಳೆಯ ಊರು 'ಮಂಗಳೂರು' ಆಯಿತೆಂಬ ವಾದವೂ ಇದೆ. ಮಲೆಯಾಳಿಗಳು 'ಮಂಗಲಾಪುರ' ಎಂದೇ ಕರೆಯುತ್ತಾರೆ. ಇಲ್ಲಿಯ ಮುಸ್ಲಿಮರಲ್ಲಿ ಬಹು ಸಂಖ್ಯೆಯಲ್ಲಿರುವ ಬ್ಯಾರಿಗಳು 'ಮೈಕಾಲ'ಎನ್ನುತ್ತಾರೆ. 'ಮೈಕಾಲ' ಎಂಬುದು ಕೂಡ ನಾಥ ಪಂಥದ ಇನ್ನೊಂದು ಕೇಂದ್ರವಾಗಿದ್ದ ಕದ್ರಿಯಲ್ಲಿರುವ ಗೋರಕ್ಷನಾಥ ಕ್ಷೇತ್ರಕ್ಕೆ 'ಮಾಯಾಕಾನ' ಎಂಬ ಹೆಸರಿತ್ತೆಂದೂ 'ಮಾಯಾಕಾಪನ' ಮೈಕಾಲವಾಯಿತೆಂದು ಅಭಿಪ್ರಾಯವಿದೆ. "ಮಾಯಾ ಎಂಬುದು ಮಂಗಳೆಯ

ಮತ್ತೊಂದು ಹೆಸರಾಗಿತ್ತೆಂಬ ಅಭಿಪ್ರಾಯವು ಇದೆ. ಒಟ್ಟಿನಲ್ಲಿ ಮಂಗಳೂರಿನ ಬ್ಯಾರಿಗಳು ಮಂಗಳೂರನ್ನು 'ಮೈಕಾಲ'ವೆಂದೇ ಗುರತಿಸಿಕೊಂಡಿದ್ದರು.

ಮಂಗಳೂರಿಗೆ ಮುಸ್ಲಿಮರ ಪ್ರವೇಶ ಎಂದಿನಿಂದಾಯಿತೆಂಬ ಬಗ್ಗೆ ಸ್ಪಷ್ಟ ಆಧಾರಗಳಿಲ್ಲ. ಪ್ರಾಚೀನ ಕಾಲದಿಂದಲೂ ವಿದೇಶಿಯರಿಗೆ ಮಂಗಳೂರಿನ ಪರಿಚಯವಿತ್ತು. ಕ್ರಿ.ಶ. ಒಂದನೇ ಶತಮಾನದ ರೋಮನ್ ಲೇಖಕ ಪ್ಲಿನಿ ಮಂಗಳೂರನ್ನು 'ನಿಟ್ರೆಯಾಸ್' ಎಂದಿದ್ದಾನೆ. ಪ್ರಾಯಶಃ ಇದು ನೇತ್ರಾವತಿ ನದಿಮುಖಜವೆಂಬರ್ಥದಲ್ಲಿ ಬರೆದಿರಬಹುದು. ರೋಮನ್ ಲೇಖಕ ಆರಿಯನ್ ಮತ್ತು ಅಲೆಕ್ಸಾಂಡ್ರಿಯಾದ ಪೆರಿಪ್ಲಸ್ ಕೂಡ ಮಂಗಳೂರಿನ ಕುರಿತು ಉಲ್ಲೆಖಿಸಿದ್ದಾರೆ. ಇವರು ಎರಡನೇ ಶತಮಾನದ ಲೇಖಕರು 'ಕೊಸ್ಮೈಸ್ ಇಂಡಿಕೋ ಪ್ಲಸ್ಟ್' ಪುಸ್ತಕದಲ್ಲಿ 'ಮಂಗರೋಕ್' ಎಂದು ಕರೆದಿರುವುದು ಮಂಗಳೂರನ್ನೇ. ಏಳನೆಯ ಶತಮಾನದ ಅರಬ್ ಲೇಖಕರು ಕೂಡಾ ಮಂಗಳೂರನ್ನು ಕುರಿತು ಬರೆದಿದ್ದಾರೆ.

ಮಂಗಳೂರು ಅಥವಾ ಕೊಡಿಯಾಲ ಬಂದರು ಅತ್ಯಂತ ಪ್ರಮುಖ ಬಂದರಾಗಿತ್ತು. ತುಳುನಾಡಿನ ರಾಜಕೀಯ ರಾಜಧಾನಿಯಾಗಿತ್ತು. ಪ್ರಾಚೀನ ಕಾಲದಿಂದಲೂ ಇದೊಂದು ವಾಣಿಜ್ಯ ನಗರವೆಂಬ ಹೆಸರು ಪಡೆದಿತ್ತು. ಕ್ರಿ.ಶ.1542ರಲ್ಲಿ ಇಲ್ಲಿಗೆ ಭೇಟಿ ನೀಡಿದ ವಿದೇಶೀ ಪ್ರವಾಸಿಗರಾದ ಬತೂತ, ಬಾರ್ಬೋಸಾ ಮೊದಲಾದವರು ಇದೊಂದು ಪ್ರಮುಖ ಪಟ್ಟಣವಾಗಿತ್ತು ಎಂದು ಬರೆದಿದ್ದಾರೆ. ಅವರ ಬರಹಗಳಲ್ಲಿ ಇಲ್ಲಿನ ವ್ಯಾಪಾರವು ಬ್ಯಾರಿ ಅಥವಾ ಮೂರ್‌ಗಳಿಂದ ನಡೆಯುವುದನ್ನು ಸೂಚಿಸಿದ್ದಾರೆ. ಈ ಪ್ರದೇಶ ಜೈನ ಮನೆತನದ ಒಂದು ಪ್ರಮುಖ ಕೇಂದ್ರವಾಗಿದ್ದು ಉಳ್ಳಾಲದ ರಾಣಿ ಅಬ್ಬಕ್ಕ ದೇವಿಯ ಅಳ್ವಿಕೆಗೆ ಒಳಪಟ್ಟಿತ್ತು. ಅವಳ ಸೈನ್ಯದಲ್ಲಿ ಬಹಳಷ್ಟು ಮಂದಿ ಮುಸ್ಲಿಮರಿದ್ದರು. ಪೋರ್ಚುಗೀಸರನ್ನು ಸದೆ ಬಡಿಯುವಲ್ಲಿ ಅವರು ಪ್ರಮುಖ ಪಾತ್ರವಹಿಸಿದ್ದರು.[27]

ಮಂಗಳೂರಿನ ಮುಸ್ಲಿಮರನ್ನು ಗಮನಕ್ಕೆ ತೆಗೆದುಕೊಂಡಾಗ ವಿಭಿನ್ನ ವರ್ಗದವರನು ಕಾಣಬಹುದು. 1.ಬ್ಯಾರಿಗಳು 2.ಮೆಮನರು 3.ನವಾಯತರು, 4.ಢಖನ್ನರು ಅಥವಾ ತುರುಕರು 5.ಶಿಯಗಳು 6.ಪುಸಲಾರರು ಮುಖ್ಯವಾದವುಗಳು. ಪ್ರಾಚೀನ ಕಾಲದಿಂದಲೂ ಮಂಗಳೂರಲ್ಲಿ ಸ್ಥಿರವಾದ ವ್ಯವಹಾರ ಮತ್ತು ಸಾಮಾಜಿಕ ಬಾಂಧವ್ಯವನ್ನು ಬೆಳಸಿದವರು ಬ್ಯಾರಿಗಳು. ಉಳಿದವರು ಕಾಲಾನುಕಾಲಕ್ಕೆ ಬಂದು ನೆಲೆಸಿದವರು.

ಪ್ರಾಚೀನ ಕಾಲದಿಂದಲೂ ಅರಬ್ ವ್ಯಾಪಾರ ಕೇಂದ್ರವಾಗಿದ್ದ ಮಂಗಳೂರಿಗೆ ಇಸ್ಲಾಂ ಧರ್ಮ ಅರೇಬಿಯಾದಲ್ಲಿ ಪ್ರಚಾರವಾಗುವುದರೊಂದಿಗೆ ಭಾರತದ ಕರಾವಳಿಗೂ ಪ್ರವೇಶವಿತ್ತು. ಕರಾವಳಿಯಲ್ಲಿ ಮುಖ್ಯವಾಗಿ ಮಲಬಾರ್ ಮತ್ತು ತುಳುನಾಡಿನಲ್ಲಿ ಮುಸ್ಲಿಂ ಧರ್ಮ ಪ್ರಚಾರಕ್ಕೆ ಅನುಕೂಲಕರವಾದ ಪರಿಸ್ಥಿತಿ ಇತ್ತು. ಮುಖ್ಯವಾದವುಗಳೆಂದರೆ,

1) ಮಂಗಳೂರಿನೊಡನೆ ಅರಬ್ಬರಿಗೆ ನೇರ ವ್ಯವಹಾರ ಸಂಪರ್ಕವಿತ್ತು. ರೋಲ್ಯಾಂಡ್ ತಿಳಿಸಿದಂತೆ ಕ್ರಿ.ಶ 7ನೇ ಶತಮಾನದಲ್ಲಿ ಮುಸ್ಲಿಮರು ಕರಾವಳಿಯಲ್ಲಿದ್ದರು. ಸ್ಟರ್ರಕ್ ಕೂಡ ಇದನ್ನೇ ಸಮರ್ಥಿಸಿದ್ದಾನೆ. ವ್ಯಾಪಾರಿಗಳಾಗಿ ಬಂದ ಅರಬ್ಬರು ಮಂಗಳೂರಲ್ಲೇ ನೆಲೆನಿಂತು ಸ್ಥಳೀಯ ಸ್ತ್ರೀಯರನ್ನು ಮದುವೆಯಾಗುತ್ತಿದ್ದರು. ಅವರ ಸಂತಾನಗಳು ಮುಸ್ಲಿಮರಾಗಿ ಬೆಳೆದುಬರುತ್ತಿದ್ದರು. ಆ ಕಾಲದಲ್ಲಿ ಧರ್ಮ ಪ್ರಚಾರವೆಂಬುದೊಂದು ಮಹತ್ವದ ಸಂಗತಿಯೇ ಆಗಿರಲಿಲ್ಲ.
2) ತುಳುನಾಡನ್ನು ಕಾಡುತ್ತಿದ್ದ ಜಾತೀಯತೆ ಮುಖ್ಯವಾಗಿ ಮೇಲ್ವರ್ಗ – ಕೆಳವರ್ಗವೆಂಬ ಪ್ರಬೇದ ಮುಸ್ಲಿಮರು ವೃದ್ಧಿಯಾಗಲು ಅನುಕೂಲವಾಗಿತ್ತು. ಇಸ್ಲಾಮಿನಲ್ಲಿ ಜಾತೀಯತೆ ಇಲ್ಲ. ಅಸ್ಪೃಶ್ಯತೆಯೂ ಇಲ್ಲ. ಇಸ್ಲಾಮಿನ ಸಮಾನತೆಯ ಆದರ್ಶ ಕೆಳವರ್ಗದ ಜನರನ್ನು ಮುಸ್ಲಿಮರಾಗಲು ಪ್ರೇರೇಪಿಸಿತು. ಕೆಳವರ್ಗದ ಜನರು ಕರಾವಳಿಯಲ್ಲಿ ಪ್ರಭುತ್ವ ಸಾಧಿಸಿದ ಜೈನ, ಬ್ರಾಹ್ಮಣ, ಅರಸರುಗಳಿಂದ ದೂರ ಉಳಿಯಬೇಕಾಗಿತ್ತು. ಮುಸ್ಲಿಂ ವರ್ತಕರಲ್ಲಿ ಅವರಿಗೆ ಅನುಕೂಲಕರವಾದ ಸ್ಥಾನಮಾನಗಳಿತ್ತು. ಇದು ಸಹಜವಾಗಿಯೇ ಮುಸ್ಲಿಮರ ಸಂಖ್ಯೆ ವೃದ್ಧಿಯಾಗಲು ಕಾರಣವಾಯಿತು. ಅಲ್ಲದೇ ಕ್ಷುಲ್ಲಕ ಕಾರಣಗಳಿಂದಾಗಿ ಬಹಿಷ್ಕಾರದಂತಹ ಶಿಕ್ಷೆಗೊಳಗಾಗುವ ಸ್ಥಿತಿಗತಿಗಳು ಮುಸ್ಲಿಮರಾಗಲು ಪ್ರೇರೇಪಿಸಿತು.
3) ತುಳುನಾಡಿನ ಅರೆಸೊತ್ತಿಗೆಯ ಪ್ರೋತ್ಸಾಹವು ಮುಸ್ಲಿಮರಿಗೆ ಅನುಕೂಲವಾಗಿತ್ತು. ತುಳುನಾಡಿನ ಅರಸು ಮನೆತನಗಳಾದ ಚೌಟರು, ಬಂಗರು ಮುಂತಾದ ಜೈನ ಕುಟುಂಬಗಳು ಮತಾಂತರ ಕಾರ್ಯಕ್ಕೆ ವಿರೋಧವಾಗಿರಲಿಲ್ಲ. ಕೆಳವರ್ಗದ ಜನರು ದೇಹದಾಢ್ಯವುಳ್ಳವರು  ಬಲಿಷ್ಠರೂ ಆಗಿದ್ದರು. ಅವರು ಮತಾಂತರಗೊಂಡು ಮುಸ್ಲಿಮರಾದಾಗ ತಮ್ಮ ಸೇನೆಯಲ್ಲಿ ಮತ್ತಿತರ ಹೊಣೆಗಾರಿಕೆಯ ಕೆಲಸಗಳಲ್ಲಿ ತೊಡಗಿಸಿಕೊಳ್ಳಲು ಸಾಧ್ಯವಾಗುತ್ತಿತ್ತು. ಇದೊಂದು ರೀತಿಯಲ್ಲಿ ಕೆಳವರ್ಗದ ಜನರಿಗೆ

ಸೇವಾವಕಾಶ ನೀಡುವ ತಂತ್ರವಾಗಿತ್ತು. ಬದಲಾಗಿ ಆಡಳಿತಕ್ಕನುಕೂಲಕ್ಕೆ ಬೇಕಾಗುವ ವ್ಯವಸ್ಥೆಯಾಗಿ ಪರಿಗಣಿಸಲಾಗಿತ್ತು.

4) ಮಲಬಾರಿನಿಂದ ಬಂದ ದೀನಾರ್ ಮಿಷನರಿಗಳೆಂಬ ಧರ್ಮ ಪ್ರಚಾರದ ಒಂದು ಗುಂಪು ಮಂಗಳೂರಿನವರೆಗೂ ತಲುಪಿತು. ಆಗ ಕೆನರಾದ ಭಾಗವಾಗಿದ್ದ ಬಾರ್ಕೂರು, ಮಂಗಳೂರು ಮತ್ತು ಕಾಸರಗೋಡುಗಳಲ್ಲಿ ದೀನಾರ್ ಮಿಷನರಿ ಮಸೀದಿಗಳನ್ನು ನಿರ್ಮಿಸಿ ಧರ್ಮ ಪ್ರಚಾರ ಮಾಡಿದ ಬಗ್ಗೆ ಲೋಗನ್ ವರದಿ ಮಾತ್ರವಲ್ಲ **'ತುಹಫಕ್'** ಎಂಬ ಗ್ರಂಥಗಳಲ್ಲಿ ಉಲ್ಲೇಖಗಳಿವೆ. ಮಂಗಳೂರು ಇವರ ಒಂದು ಪ್ರಮುಖ ಪ್ರಚಾರ ಕೇಂದ್ರವಾಗಿತ್ತು. ಮಂಗಳೂರಿನ ಮೋನಾಕ್ ಬುಕ್ ಮಸೀದಿ ಇವರಿಂದಲೇ ನಿರ್ಮಾಣವಾಯಿತು. ಕ್ರಿ.ಶ. 7ನೇ ಶತಮಾನದಲ್ಲಿ ಇದೊಂದು ಧಾರ್ಮಿಕ ಕೇಂದ್ರವಾಗಿತ್ತು.

5) ಮಂಗಳೂರಿಗೆ ಭೇಟಿ ನೀಡಿದ ಸೂಫಿ ಸಂತರಲ್ಲಿ ಪೆನುಕೊಂಡದ ಬಾಬಾ ಪ್ರಕೃದೀನ್ ಒಬ್ಬರು. ಇವರು ತಿರುಚನಾಪಳ್ಳಿಯಿಂದ ಕರಾವಳಿಯಲ್ಲಿ ಸಂಚರಿಸುತ್ತಾ ಮಂಗಳೂರಿಗೆ ಭೇಟಿ ನೀಡಿದರು. ನಂತರ ಆಂದ್ರದ ಪೆನುಕೊಂಡ ವರೆಗೂ ಹೋಗಿದ್ದರು. ಇನ್ನೊಮ್ಮೆ ಪ್ರಮುಖ ಸೂಫಿ ಸಂತ ಶೇಖ್ ಫರೀದ್ ಮಸೂಜ್ ಗಂಜ್ ಸರ್ಕಾರ್ ಮಂಗಳೂರಿನ ಕದ್ರಿಗೆ 12ನೇ ಶತಮಾನದಲ್ಲಿ ಭೇಟಿ ನೀಡಿದನು. ಕದ್ರಿ ಹಿಲ್ಸ್‌ನಲ್ಲಿ ಈ ಸಂತರು ತಂಗಿದ್ದ ಪೀಠವು ಈಗಲೂ ದೇವಸ್ಥಾನದ ಪರಿಸರದಲ್ಲಿದೆ. ಮಂಗಳೂರಿನ ಅಡ್ಡಾರಿನಲ್ಲಿ ಶೇಖ್ ಸಿದ್ದೀಕ್ ಯಾಸ್‌ಫ್ ವಲಿಯವರು ಧರ್ಮ ಪ್ರಚಾರ ಮಾಡಿದ್ದರು.

ಮಂಗಳೂರಿನ ಬ್ಯಾರಿಗಳು ತುಳುನಾಡಿನ ಮುಸ್ಲಿಮರಲ್ಲಿ ಬಹುಸಂಖ್ಯಾತರು ಸ್ವಾತಂತ್ರ ಸಾಂಸ್ಕೃತಿಕ ಮತ್ತು ಭಾಷೆಯನ್ನು ಹೊಂದಿರುವ ಒಂದು ಜನಾಂಗ ಅರಬ್ ವ್ಯಾಪಾರ ಸಂಪರ್ಕ ಪ್ರಾಚೀನ ಕಾಲದಿಂದಲೂ ಇದ್ದುದ್ದರಿಂದ ನೇರ ಅರಬ್ಬರ ಪ್ರಭಾವಕ್ಕೊಳಗಾಗಿ ಮುಸ್ಲಿಮರ ಜನಾಂಗ ಇದು. ಆರಂಭ ಕಾಲದಿಂದಲೂ ಇಲ್ಲಿಯ ಕೆಳಜಾತಿಯಿಂದ ಮತಾಂತರಗೊಂಡಿತು. ಸ್ಥಳೀಯ ಭಾಷೆ ಮತ್ತು ಸಂಸ್ಕೃತಿಯ ಪ್ರಭಾವವನ್ನುಳಿಸಿಕೊಂಡು ಸ್ವತಂತ್ರವಾಗಿ ಬೆಳೆದು ಬಂದವರು ಇವರು. ಹಲವಾರು ಬ್ಯಾರಿಗಳ ಕುರಿತು  ಪಾಡ್ದನಗಳಲ್ಲಿ ಉಲ್ಲೇಖವಿದೆ. ಅರಬ್ ವ್ಯಾಪಾರಿಗಳು ತಮ್ಮ ವ್ಯವಹಾರವಿರುವವರೆಗೆ ಇಲ್ಲೇ ಉಳಿದು ಸ್ಥಳೀಯ ಮಹಿಳೆಯರನ್ನು ಮದುವೆಯಾಗಿ ಹಿಂದಿರುಗುವಾಗ ಅವರನ್ನು ಇಲ್ಲೇ ಬಿಟ್ಟು ಹೋಗುತ್ತಿದ್ದರು. ಬ್ಯಾರಿಗಳಲ್ಲೂ

ವರ್ಗಗಳಿದ್ದವೆಂಬುದನ್ನು ಪಾಡ್ದವಗಳು ನಿರೂಪಿಸುತ್ತವೆ. ಪ್ರಾಯಶಃ ಇದು ಮೂಲ ಜಾತಿಯ ಪ್ರಭಾವದಿಂದಲೂ ಆಗಿರಬಹುದು.

ಬ್ಯಾರಿ ಎಂಬ ಪದವೇ ಸ್ಥಳೀಯ ಭಾಷೆಯಾಗಿದ್ದು, ತುಳುವಿನಿಂದ ಬಂದಿದೆ ಎಂಬುದು ಸಾಮಾನ್ಯ ಅಭಿಮತ. ಅರಬ್ಬರು ವ್ಯಾಪಾರಿಗಳಾಗಿದ್ದರು. ಅಲ್ಲದೇ ಮಂಗಳೂರಿನಲ್ಲಿ ಬ್ಯಾರಿಗಳೇ ವ್ಯಾಪಾರಿಗಳಾಗಿ ಗುರುತಿಸಲ್ಪಟ್ಟರು. 95 ಶತಾಂಶದಷ್ಟು ವ್ಯಾಪಾರಿಗಳು ಬ್ಯಾರಿಗಳೇ ಆಗಿದ್ದರು. ಜಿಲ್ಲೆಯ ಆರಂಭಿಕ ಅಡಂಗಲ್ಲುಗಳ (ಸರ್ವೆ ದಾಖಲೆಗಳು)ನ್ನು ನೋಡಿದರೆ ಮಂಗಳೂರಿನಲ್ಲಿರುವ ಬ್ಯಾರಿಗಳ ಹೆಸರನ್ನು ಗುರುತಿಸಬಹುದಾಗಿದೆ.[28] ಅವರ ಕಸುಬನ್ನು ಕೂಡಾ ಅರಬ್ ಸಂಪರ್ಕ ದಿಂದುಂಟಾದ ಹೊಸ ಜನಾಂಗದವರಿಂದ 'ಬಹಾರಿ' ಎಂಬ ಅರಬ್ ಪದದಿಂದ ಉತ್ಪತ್ತಿ ಆಗಿರಬಹುದಾದ ಸಾಧ್ಯತೆ ಇದೆ. 'ಬಹಾರಿ' ಎಂದರೆ 'ಸಮುದ್ರ ವ್ಯಾಪಾರಿ' ಅಥವಾ ಸಮುದ್ರ ದಾಟಿ ಬಂದವರೆಂದು ಅರ್ಥೈಸಬಹುದಾಗಿದೆ. ಒಟ್ಟಿನಲ್ಲಿ ಬ್ಯಾರಿಗಳು ಅರಬ್ ಸಂಪರ್ಕ ದಿಂದುಂಟಾದ ಹೊಸ ಜನಾಂಗವೆಂಬುದು ಸ್ಪಷ್ಟವಾಗಿದೆ.

ಬ್ಯಾರಿಗಳು ಸಾಮಾನ್ಯ ದಾಖಲೆಗಳಲ್ಲಿ 'ಮಾಪಿಳ್ಳೆ' ಅಥವಾ ಮಾಪ್ಲಾಗಳೆಂದು ಗುರುತಿಸುವುದನ್ನು ಕಾಣಬಹುದು. ಇದೇ ರೀತಿ ಮಲಬಾರ್ ಕರಾವಳಿಯಲ್ಲಿ ಅರಬ್ ಸಂಪರ್ಕದಿಂದ ಮತಾಂತರಗೊಂಡು ಉಂಟಾದ ಹೊಸ ಸಮುದಾಯವನ್ನು 'ಮಾಪ್ಲಾ' ಗಳೆಂದೇ ಗುರುತಿಸಲಾಗಿದೆ. 'ಮಾಪ್ಲಾ'ಗಳು ಮಲಬಾರಿನ ಸಂಸ್ಕೃತಿ ಮತ್ತು ಭಾಷೆ ಎರಡರಲ್ಲೂ ಭಿನ್ನ ಡಾ. ಸುಶೀಲಾ ಉಪಾಧ್ಯಾಯರು ಮಾಪ್ಲಾ ಮಲಯಾಳ ಎಂಬ ಶೀರ್ಷಿಕೆಯಲ್ಲಿ ನಡೆಸಿದ ಸಂಶೋಧನೆಯಿಂದ ಬ್ಯಾರಿಗಳ ಭಾಷೆ ಭಿನ್ನವಾಗಿದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಬ್ಯಾರಿಗಳು ಧಾರ್ಮಿಕ ಶಿಕ್ಷಣಕ್ಕಾಗಿ ಮಲಬಾರಿನ ಮಾಪ್ಲಾಗಳನ್ನೇ ಆಶ್ರಯಿಸಬೇಕಾಗಿ ಬಂದುದರಿಂದ ಮಲಯಾಳ ಭಾಷೆಯ ಪ್ರಭಾವ ಉಂಟಾಗಿದೆ. ಆದರೆ ಮಂಗಳೂರಿನ ಬ್ಯಾರಿಗಳ ಮೇಲೆ ಈ ಪ್ರಭಾವ ಕಡಿಮೆಯಿದ್ದು ಸ್ವತಂತ್ರ ಭಾಷೆಯಾಗಿಯೇ ಉಳಿದುಕೊಂಡಿದೆ.

ಮಲಬಾರಿನ ಮಾಪ್ಲಾಗಳಿಗಿಂತ ಭಿನ್ನವಾದ ಹಲವಾರು ವಿಚಾರಗಳು ಬ್ಯಾರಿಗಳಲ್ಲಿವೆ. ಬ್ಯಾರಿ ಭಾಷೆಗೆ ಲಿಪಿಯಿಲ್ಲ ಆದರೆ ಬ್ಯಾರಿಗಳು ಬಹುತೇಕ ತುಳು ಲಿಪಿಯನ್ನೇ ಹೋಲುವ ಭಾಷೆಯನ್ನು ಬಳಸುತ್ತಿದ್ದ ಬಗ್ಗೆ ದಾಖಲೆಗಳಿವೆ. ಬ್ಯಾರಿಗಳ ಹೆಸರುಗಳಲ್ಲಿ ತುಳುವರ ಪ್ರಭಾವ ಕಾಣಬಹುದು. ಮಾಯಬ್ಬ ಸಾಯಿರಿ, ಕುಂಪು, ಬಪ್ಪ, ಉಮ್ಮಾತು, ಬೀಪಮ್ಮ, ಕುಂಮ್ಮ ಇತ್ಯಾದಿಗಳು ಸ್ಥಳೀಯ ಪ್ರಭಾವವನ್ನು ತೋರಿಸುವ ಹೆಸರಗಳು.[29]

ಬಂಟರ ಬಳಿ ಪದ್ದತಿಯನ್ನೇ ಹೋಲುವ  ಇಲ್ಲಂ ಪದ್ದತಿ ಬ್ಯಾರಿಗಳಲ್ಲಿತ್ತು. ಇಲ್ಲಂ ಪದ್ಧತಿ ಮಾತೃಮೂಲ ಕುಟುಂಬ ವ್ಯವಸ್ಥೆಯಾಗಿತ್ತು. ಹಲವಾರು ಇಲ್ಲಂಗಳಿದ್ದು ಒಂದೇ ಇಲ್ಲಂನಲ್ಲಿ ಮದುವೆಯಾಗುವಂತಿರಲಿಲ್ಲ. ಇಲ್ಲಂಗಳಲ್ಲಿ ಸ್ಥಾನಮಾನಗಳಲ್ಲಿ ಏರುಪೇರುಗಳಿದ್ದವು. ಕೆಲವು ಉನ್ನತ ಮಟ್ಟದ್ದಾಗಿದ್ದರೆ, ಕೆಲವು ಕೆಳಮಟ್ಟದ್ದಾಗಿತ್ತು. ಮಹರ್ ನಿರ್ಧಾರದಲ್ಲಿ ಈ ಸ್ಥಾನಮಾನ ಸೂಚಿತವಾಗುತ್ತಿದ್ದವು. ಇದು ಇಸ್ಲಾಂ ಧರ್ಮದಲ್ಲಿಲ್ಲದ ಆಚಾರವಾಗಿತ್ತು. ಅಲ್ಲದೆ ಮಾಪಿಳ್ಳೆಗಳಲ್ಲೂ ಈ ಪದ್ಧತಿ ಇರಲಿಲ್ಲ. ಇವು ಬ್ಯಾರಿಗಳ ಮೇಲಿರುವ ಸ್ಥಳೀಯ ಪ್ರಭಾವವನ್ನು ತೋರಿಸುತ್ತಿದ್ದವು.

ಮಂಗಳೂರಿನ 'ಪದಿನಾರಗ' ಎಂಬ ಪರಿಕಲ್ಪನೆಯ ಉಳಿಗಮಾನ್ಯ ಪದ್ಧತಿಯ ಪಳೆಯುಳಿಕೆಯಾಗಿತ್ತು. ಮಂಗಳೂರಿನ ಹದಿನಾರು ಮನೆತನಗಳು ತಮ್ಮನ್ನು ಪ್ರತ್ಯೇಕವಾಗಿ ಗುರುತಿಸಿಕೊಂಡು ತಮ್ಮ ಪ್ರಭುತ್ವ ಮತ್ತು ವ್ಯಾವಹಾರಿಕ ಅಂತಸ್ತಿಗನುಸಾರವಾಗಿ ಪ್ರತಿಷ್ಠಿತ ಮನೆತನಗಳಾಗಿ ಗುರುತಿಸಲ್ಪಟ್ಟಿದ್ದವು. ಪದಿನಾರಗ ಪದ್ಧತಿ ಬಹುತೇಕ ಜೈನ ಬೀಡುಗಳ ಪ್ರಭಾವಕ್ಕೊಳಗಾಗಿತ್ತು. ಜೈನ ಮನೆತನಗಳೊಡನೆ ಸಂಪರ್ಕ ಮಾತ್ರವಲ್ಲ ಜೈನ ಬೀಡುಗಳಲ್ಲಿದ್ದ ಉಳಿಗಮಾನ್ಯ ಪದ್ಧತಿಯು ಇವರಲ್ಲೂ ಇತ್ತು. ಕೆಳವರ್ಗದ ಜನರನ್ನು ಇವರು ಸೇರಿಸಿಕೊಳ್ಳುತ್ತಿರಲಿಲ್ಲ. ಇಂತಹ ಪದ್ಧತಿ ಮಾಪ್ಲಾಗಳಲ್ಲಿರಲಿಲ್ಲ.

ಮಂಗಳೂರಿನ ಬ್ಯಾರಿಗಳಲ್ಲಿ ಉಂಟಾದ ಇಂತಹ ವರ್ಗೀಯ ಗುಂಪುಗಳ ಪರಿಣಾಮವಾಗಿ ಕಸುಬು ಆಧರಿಸಿ ಕೆಲವು ವರ್ಗಗಳು ಉಂಟಾದವು. "ತಾಳಿ ಇಲ್ಲ ತವರು" ಎಂದರೆ 'ಆಗ' ವರ್ತಕದವರು ಸ್ಥಾನಮಾನ ನೀಡದಾದರು. ಎಂಬರ್ಥದಲ್ಲಿ ಪ್ರತ್ಯೇಕ ಗುಂಪುಗಳಾಗಿದ್ದರು. ಸಂಗೀತಗಾರರು, ಮುಂಜಿ ಮಾಡುವವರು, ಗುಲಾಮರು ಕೆಲವು ವರ್ಗದ ಕಾರ್ಮಿಕರು ಈ ಗುಂಪಿಗೆ ಸೇರಿಸಲ್ಪಟ್ಟಿದ್ದರು. ಇವರಿಗೆ ಸಹಜೀವನ ಮಾಡುವ ಅವರೊಡನೆ ಕುಳಿತುಕೊಳ್ಳುವ ಅವಕಾಶವು ಇರಲಿಲ್ಲ. ಆ ವರ್ಗದವರೊಡನೆ ವ್ಯವಹರಿಸಲು ಕೂಡಾ ಅರ್ಹರಾಗಿರಲಿಲ್ಲ. ಇದು ಇಸ್ಲಾಮಿ ಆಚರಣೆಯಲ್ಲಿ ಮಾಪ್ಲಾಗಳಲ್ಲಿ ಇರಲಿಲ್ಲ.

**ಮೆಮನ್‌ರು:** ಮಂಗಳೂರಿನ ಇತಿಹಾಸದಲ್ಲಿ ಪದಿನಾರಗ ವರ್ಗವೂ ಇತರ ಬ್ಯಾರಿ ವರ್ತಕರು ಸಾಮಾನ್ಯರೂ ಪ್ರಭಾವ ಬೀರಿದ್ದರು. ಮಹಮ್ಮದ್ ಬಿನ್ ಖಾಸಿಂ ಕ್ರಿ.ಶ. 712ರಲ್ಲಿ ಭಾರತದ ಸಿಂದ್ ಪ್ರಾಂತ್ಯದ ಮೇಲೆ ದಾಳಿ ಇಟ್ಟ ನಂತರ ಮುಸ್ಲಿಂ ಅಧಿಪತ್ಯ ಉಂಟಾಗಿ ಸಿಂಧ್ ಅರಬ್ಬರ ವಶವಾಗಿತ್ತು. ಸಂತ  ಯೂಸುಪುದ್ದೀನ್‌ರ ಪ್ರಭಾವದಿಂದ ಮತಾಂತರಗೊಂಡ ಮುಸ್ಲಿಮರನ್ನು 'ಮೂಮಿನ್'ಗಳೆಂದು ಹೆಸರಿಸಿದ್ದರು. ಇದೇ ಹೆಸರು 'ಮೆಮನ್' ಎಂಬ ಹೆಸರಿನಿಂದ ವ್ಯಾಪಾರ ಸಮುದಾಯವಾಗಿ ಹಂಚಿಕೆಯಾಯಿತು. ಬಹುಪಾಲು ಕ್ರಿ.ಶ.1200 ರ

ವೇಳೆಗೆ ಅವರು ಗುಜರಾತಿನ ಕಡೆಗೆ ವಲಸೆ ಬಂದು ಪ್ರಮುಖ ವ್ಯಾಪಾರ ವರ್ಗವಾಗಿ ಬೆಳೆದಿದ್ದರು. ಮುಂಬೈ, ಕಲ್ಕತ್ತಾ, ಮದ್ರಾಸಿನವರೆಗೂ ಅವರ ವ್ಯಾಪಾರದ ಪ್ರಭಾವವಿತ್ತು. ಹೀಗಾಗಿ ಅವರು **'ಕಚಿಮೇಮನ್'** ಎನಿಸಿದರು.

**ನವಾಯಿತರು** : ಮಂಗಳೂರಿನ ವ್ಯಾಪಾರಾಭಿವೃದ್ಧಿಯಲ್ಲಿ ಶ್ರಮವಹಿಸಿದ ಮೂರನೇಯ ದೊಡ್ಡ ಮುಸ್ಲಿಂ ಸಮುದಾಯ ನವಾಯುತರು. ಉತ್ತರ ಕನ್ನಡದ ಭಟ್ಕಳ ಇವರ ಮೂಲ ಸ್ಥಾನಮಾನವಾಗಿದ್ದು, ಇವರನ್ನು 'ಭಟ್ಕಳ' ಗಳೆಂದೂ ಕರರೆಯಲಾಗುತ್ತಿತ್ತು. ಇವರು ಮುಖ್ಯವಾಗಿ ಜವಳಿ ವ್ಯಾಪಾರ ಮತ್ತು ಹೋಟಲು ಉದ್ಯಮದಲ್ಲಿ ಹೆಸರುವಾಸಿಗಳು. ಮಂಗಳೂರಿನಲ್ಲಿ ಇವರು ಪ್ರತಿಷ್ಠಿತ ವರ್ಗವಾಗಿ ನೆಲೆಯೂರಿದ್ದರು. ಬ್ಯಾರಿಗಳ ಹಾಗೆಯೇ ಇವರೂ ಕೂಡ ಕೊಂಕಣ ಕರಾವಳಿಯಲ್ಲಿ ಅರಬ್ ಸಂಪರ್ಕದಿಂದ ಉಂಟಾದ ಹೊಸ ಪೀಳಿಗೆಯೆಂದು ಗುರುತಿಸಲಾಗಿದೆ. ನವಾಯತ ಪದವು ಅರಬೀ ಪದ 'ನುವ್ಯತಿ' (ಎಂದರೆ ನಾವಿಕರು) ಎಂಬುದರಿಂದ ಬಂದಿದೆ. ಎಂದು ಸೈಯದ್ ಸುಲೈಮಾನ್ ಸದ್ರಿಯವರ ಬರಹದಲ್ಲಿ ಇಂಪೀರಿಯಲ್ ಗೆಜೆಟಿಯರ್ ಆಫ್ ಇಂಡಿಯಾದಲ್ಲಿ ಉಲ್ಲೇಖಿಸಲಾಗಿದೆ.

**ಹನಫೀ ವರ್ಗ ಅಥವಾ ದಖನಿಗಳು** : ಮಂಗಳೂರಿನ ಇತಿಹಾಸದಲ್ಲಿ ಕಂಡು ಬರುವ ಮತ್ತೊಂದು ಮುಸ್ಲಿಂ ಸಮುದಾಯ ದಖನಿಗಳು ಅಥವಾ ಹನಫೀಗಳು. ಇವರ ಮೂಲ ತುರ್ಕಿ ದೇಶ ಎಂಬರ್ಥದಲ್ಲಿ ತುರುಕರೆಂದು ಕರೆಯಲಾಗುತ್ತದೆ. ಉತ್ತರ ಭಾರತದಲ್ಲಿ ಸ್ಥಾಪಿತವಾದ ಆಫ್ರಾನ್ ರಾಜಮನೆತನಗಳ ಪ್ರಭಾವದಿಂದ ಬೆಳೆದು ಬಂದ ಈ ಸಮುದಾಯ ದಖನ್‌ದಲ್ಲೂ ರಾಜಮನೆತನಗಳನ್ನು ಸ್ಥಾಪಿಸಿದರು. ಬಹನಿ ಅರಸರು ಉರ್ದು ಭಾಷೆಗೆ ಪ್ರೋತ್ಸಾಹ ನೀಡಿದ್ದಲ್ಲದೆ ದಖನಿಗಳನ್ನು ನೆಲೆಸುವಂತೆ ಪ್ರೋತ್ಸಾಹಿಸಿದರು. ಅಧಿಕಾರಿಗಳಾಗಿಯೂ, ವ್ಯಾಪಾರಿಗಳಾಗಿಯೂ ರಾಜ್ಯದಾದ್ಯಂತ ವಿಸ್ತರಿಸಲು ಪ್ರೋತ್ಸಾಹಿಸಿದರು.

**ಪುಸಲಾರರು:** ಪುಸಲಾರರು ಅಥವಾ ಮುಸ್ಲಿಂ ಬೆಸ್ತರು ಒಂದು ಚಿಕ್ಕ ಗುಂಪಾಗಿದ್ದರು. ಮಂಗಳೂರಲಿ ಅವರದೇ ಆದ ಒಂದು ಕೇರಿಯನ್ನು ನಿರ್ಮಿಸಿದ್ದರು. ಅವರದೇ ಆದ ಪ್ರತ್ಯೇಕ ಮಸೀದಿ ಇತ್ತೆಂದು ಹೇಳಲಾಗುತ್ತಿದೆ. ಉಳ್ಳಾಲ, ಕೋಟೆಕಾರುಗಳಲ್ಲೂ ಪುಸಲಾರರು ಇದ್ದರು. ಇವರು ಬ್ಯಾರಿ ಭಾಷಿಕರಾಗಿದ್ದು, ಶಾಫೀ ಪಂಗಡದವರಾಗಿದ್ದರು. ಕ್ರಮೇಣ ಬ್ಯಾರಿ ವರ್ಗದ ಪ್ರಭಾವದಿಂದಾಗಿ ಪುಸಲಾರರು ಬ್ಯಾರಿಗಳಾಗಿ ಪರಿವರ್ತಿತರಾದರು, ವರ್ತಕ ವರ್ಗವಾಗಿ ಮಾರ್ಪಟ್ಟರು.[30]

ಮಂಗಳೂರಿನಲ್ಲಿ ಮುಸ್ಲಿಮರು ಎಂದಿನಿಂದ ನೆಲೆ ನಿಂತರೆಂದು ಹೇಳಲು ನಿಖರವಾದ ದಾಖಲೆಗಳಿಲ್ಲ. ಮೊತ್ತ ಮೊದಲನೆಯ ಮುಸ್ಲಿಂ ಸಮುದಾಯ ಬ್ಯಾರಿಗಳೆಂಬುದನ್ನು ಇಲ್ಲಿನ ಸಮಾಜ ವ್ಯವಸ್ಥೆಯೇ ನಿರೂಪಿಸುತ್ತದೆ. ತುಳುನಾಡಿನಲ್ಲಿದ್ದ ವಸಾಹತುಷಾಹಿ ಜಾತೀಯತೆ ಅರಬ್ಬರ ವ್ಯಾಪಾರ ಸಂಬಂಧ ಗುಲಾಮಗಿರಿ ಪದ್ಧತಿ ಮತ್ತು ಸ್ಥಳೀಯ ಸ್ವತಂತ್ರ್ಯ ಸಂಪ್ರದಾಯ ಗಳೊಡನಿರುವ ಸಮನ್ವಯ ಸಂಸ್ಕೃತಿಯೂ ಬ್ಯಾರಿ ಜನಾಂಗವೆಂಬ ಹೊಸ ಸಮುದಾಯವನ್ನು ಹುಟ್ಟು ಹಾಕಿತು. ಬ್ಯಾರಿಗಳೇ ಮೊತ್ತ ಮೊದಲನೆಯ ಮುಸ್ಲಿಂ ಸಮುದಾಯ ಮತ್ತು ಕ್ರಿ.ಶ 7ನೇ ಶತಮಾನದಿಂದಲೇ ಇಲ್ಲಿಯ ಸಂಸ್ಕೃತಿಯೊಡನೆ ಸೇರಿ ಬೆಳೆದು ಬಂದಿದ್ದರು. ಮಲಬಾರಿನಿಂದ ಬಂದ ಮಾಪ್ಲಾ ಧಾರ್ಮಿಕ ಮುಖಂಡರು ದೀನರ್ ಮಿಷನರಿಗಳು ಮಂಗಳೂರಿನ ಮುಸ್ಲಿಮರ ಬೆಳವಣಿಗೆಗೆ ಪ್ರೋತ್ಸಾಹ ನೀಡಿದರು ಮಂಗಳೂರಿನ ಬ್ಯಾರಿ ಮುಸ್ಲಿಮರು ತಮ್ಮದೇ ಆದ ಸ್ಥಾನಮಾನಗಳನ್ನು ಹೊಂದಿದ್ದರಲ್ಲದೆ ಇಲ್ಲಿನ ವ್ಯವಹಾರಿಕ ಸಂಸ್ಥೆಯಲ್ಲಿ ಪ್ರದಾನ ಪಾತ್ರ ವಹಿಸಿದ್ದರು.

**ಹಂಜಮಾನಗಳು** : ಜೈನ ವರ್ತಕರ ಒಕ್ಕೂಟಕ್ಕೆ 'ಸೆಟ್ಟಿಕಾರಸಂಘ' ಎಂಬ ಹೆಸರಿತ್ತು. ಅದಕ್ಕೆ ಸಮಾನವೆಂಬಂತೆ ಬ್ಯಾರಿಗಳು 'ಹಂಜಮಾನಗಳಾಗಿದ್ದವು. 'ಹಂಜಮಾನಗಳು ಮಂಗಳೂರಿನ ವ್ಯಾಪಾರಿಗಳ ಮೇಲೆ ನಿಯಂತ್ರಣ ಹೊಂದಿದ್ದವು. ಹಂಜಮಾನವು ಸಮಾಜದ ಒಂದು ಪ್ರಮುಖ ಘಟಕವಾಗಿತ್ತು. ಮತ್ತು ಸಮಾಜದ ಮೇಲೂ ಹಿಡಿತ ಸಾಧಿಸಿತ್ತು. ಹಂಜಮಾನ ಎಂದರೆ ಅಂಜುಮಾನ್ ಕನ್ನಡ ಪದ 'ಸಂಘ' ಅಥವಾ 'ಗಿಲ್ಡ್' ಎಂದರ್ಥ. ಕ್ರಿ.ಶ.1412ರಲ್ಲಿ ಮಂಗಳೂರು ಶಿಲಾಶಾಸನವು ಹಂಜಮಾನ್‌ಗಳಿಗೆ ಸೇರಿದ ಐದು ಮಸೀದಿಗಳನ್ನು ಅಂದಿನ ಮಂಗಳೂರು ರಾಜ್ಯಪಾಲ ದ್ವಂಸಗೊಳಿಸಿದ್ದನ್ನು ತಿಳಿಸುತ್ತದೆ. ಈ ಕಾಲದಲ್ಲಿ ಆಳ್ವಿಕೆ ನಡೆಸುತ್ತಿದ್ದ ಒಂದನೇ ದೇವರಾಯನು ತನಿಖೆ ನಡೆಸಿ ಮಸೀದಿಗಳನ್ನು ಮತ್ತೆ ನಿರ್ಮಿಸಿಕೊಟ್ಟನು. ಈ ಕಾರ್ಯಕ್ಕೆ ನೇಮಿಸಲ್ಪಟ್ಟ ಅಧಿಕಾರಿ ಬೆಚ್ಚಪ್ಪನಾಯಕನು ಜಮಾ ಆಲ್ ಮಸೀದಿಗೆ ಜಮೀನನ್ನು ದಾನ ಮಾಡಿದ ಕುರಿತು ಕೂಡಾ ಉಲ್ಲೇಖಿಸಿದೆ.[31] ವಿಜಯನಗರದ ಆಡಳಿತದಿಂದ ಕರಾವಳಿಯ ಪಾಳೆಯಗಾರರ ಆಡಳಿತದವರೆಗೂ ಹಂಜಮಾನಗಳು ಕ್ರಿಯಾಶೀಲವಾಗಿದ್ದು ಆಡಳಿತ ವ್ಯವಸ್ಥೆಯಲ್ಲಿ ಪರಿಣಾಮ ಬೀರಿದ್ದವು. ಹಂಜಮಾನಗಳಿಂದ ರಾಜ್ಯ ಬೊಕ್ಕಸಕ್ಕೂ ಒಳ್ಳೆಯ ಕೊಡುಗೆ ಇತ್ತು. ಮಂಗಳೂರಿನ ಹಂಜಮಾನದ ಸದಸ್ಯರು ಜೈನ ಸಂಪ್ರದಾಯಗಳನ್ನು ಅಳವಡಿಸಿಕೊಂಡಿದ್ದಲ್ಲದೆ ಜರ್ಗೀದಾರಿ ವ್ಯವಸ್ಥೆಯಾಗಿ ಮಾರ್ಪಟ್ಟರು.

**ಪೂರ್ವದೊಂದಿಗೆ ಅರಬ್ಬರ ವ್ಯಾಪಾರ :**

ಅಬ್ಬಾಸಿದ್‌ರ ಕಾಲದಲ್ಲಿ ಅರಬ್ಬರ ರಾಜಧಾನಿ ಡಮಾಸ್ಕಸ್‌ನಿಂದ ಬಾಗ್ದಾದ್‌ಗೆ ವರ್ಗಾಯಿಸಲ್ಪಟ್ಟ ಮೇಲೆ ಈ ದೊಡ್ಡ ರಾಜಧಾನಿ ಮೊದಲಬಾರಿಗೆ ಟೈಗ್ರೀಸ್ ಮತು ಯುಪರೇಟ್ಸ್ ಮೂಲಕವಾಗಿ ಪೂರ್ವ ದೇಶಗಳೊಂದಿಗೆ ಸಂಪರ್ಕ ಕಲ್ಪಿಸಿಕೊಂಡಿತು. ಪರ್ಷಿಯನ್ ಕೊಲ್ಲಿಯ ಮದ್ಯಕಾಲೀನ ವ್ಯಾಪಾರವು ಭಾರತೀಯ ಸಮದ್ರಗಳೊಂದಿಗೆ ವೃದ್ಧಿಗೊಂಡಿತ್ತು.[32] ಎಂಟನೇ ಮತ್ತು ಒಂಭತ್ತನೇ ಶತಮಾನಗಳಿಂದ ಭಾರತೀಯ ಸಮುದ್ರ ವ್ಯಾಪಾರವು ಅರಬ್ ದೇಶಗಳಾದ ಪಶ್ಚಿಮದ ಸುಡಾನ್ ಮತ್ತು ಇಥಿಯೋಪಿಯಾ, ಉತ್ತರದ ಯಮನ್, ಓಮನ್, ಇರಾಕ್ ಮತ್ತು ಇರಾನ್‌ಗಳೊಂದಿಗೆ, ಪೂರ್ವಪಶ್ಚಿಮಾರ್ಧ ಗುಜರಾತ್, ಸಿಂದ್ ಮತ್ತು ಮಲಬಾರ್ ತೀರಗಳೊಂದಿಗೆ ಹರಡಿಕೊಂಡಿತ್ತು. ಈ ಎಲ್ಲಾ ಪ್ರಾಂತ್ಯಗಳು ಅರಬ್ಬರ ವ್ಯಾಪಾರ ಏಕಸ್ವಾಮ್ಯಕ್ಕೆ ಒಳಗೊಂಡಿದ್ದವು.

ಮೆಡಿಟೇರಿನಿಯನ್‌ನ ಎಲ್ಲಾ ಬಂದರುಗಳು ಮುಸ್ಲಿಮರು ಅಥವಾ ಅರಬ್ಬರ ವಸಾಹತುಗಳಾಗಿದ್ದವು. ಈ ಕಾಲದಲ್ಲಿ ಭಾರತದೊಂದಿಗಿನ ಸಾಗರೋತ್ತರ ಸಂಬಂಧವು ಮುಸ್ಲಿಂ ಆರ್ಥಿಕತೆಯ ಬೆನ್ನೆಲುಬಾಗಿತ್ತು. ಭಾರತ, ಇಂಡೋನೇಷ್ಯಾ, ಮಲಯಾ ಮತ್ತು ಚೀನಾದೊಂದಿಗೆ ಪರ್ಷಿಯನ್ ಕೊಲ್ಲಿಯ ವ್ಯಾಪಾರ ವಿಸ್ತಾರಗೊಂಡ ನಂತರ ಬಾಗ್ದಾದ್ ಒಂದು ದೊಡ್ಡ ಬಂದರಾಗಿ ಬೆಳವಣಿಗೆ ಹೊಂದಿತ್ತು. ಬಾಗ್ದಾದ್ ವ್ಯಾಪಾರಿಗಳು ಭಾರತ ಮತ್ತು ಚೀನಾದ ಬಟ್ಟೆಗಳನ್ನು, ಸುಗಂಧ ದ್ರವ್ಯಗಳನ್ನು ಮತ್ತು ಕಂಬಳಿಗಳನ್ನು ರಫ್ತು ಆಮದು ಪ್ರಕ್ರಿಯೆಗಳಲ್ಲಿ ತೊಡಗಿಸಿಕೊಂಡಿದ್ದರು. ಸಾಂಬಾರ ಪದಾರ್ಥಗಳು, ಸುಗಂಧ ದ್ರವ್ಯಗಳು ಭಾರತ ಮತ್ತು ಇಂಡೋನೇಷ್ಯದಿಂದ ಯೂರೋಪಿಗೆ ರಫ್ತಾಗುತ್ತಿದ್ದವು. ಈ ವ್ಯಾಪಾರ ಮಲಬಾರ್ ಮತ್ತು ಶ್ರೀಲಂಕಾ ಬಂದರುಗಳನ್ನು ಸಹ ಒಳಗೊಂಡಿತ್ತು.

**ಸಿಂಧ್ ಪ್ರಾಂತ್ಯದೊಂದಿಗೆ ಅರಬ್ಬರ ವ್ಯಾಪಾರ :**

ಅರಬ್ಬರು ಭಾರತದ ಭೂಮಾರ್ಗವನ್ನು ವಿಂಗಡಣೆ ಮಾಡಿ ಅದನ್ನು ಸಿಂದ್ ಮತ್ತು ಹಿಂದ್‌ಗಳೆಂದು ಕರೆದರು. ಕ್ರಿ.ಶ.711ರಲ್ಲಿ ಸಿಂದ್ ಪ್ರಾಂತ್ಯ ಅರಬ್ಬರಿಂದ ಆಳ್ವಿಕೆಗೆ ಒಳಪಟ್ಟ ಮೇಲೆ ಹೆಚ್ಚು ಅರಬ್ ವ್ಯಾಪಾರಿಗಳು, ಮಿಷನರಿಗಳು ಮತ್ತು ಪ್ರವಾಸಿಗರು ಸಿಂದ್ ಪ್ರಾಂತ್ಯಕ್ಕೆ ವಲಸೆ ಬಂದರು ಮತ್ತು ಸಿಂದ್ ಪ್ರಾಂತ್ಯವನ್ನು ತಮ್ಮ ಶಾಶ್ವತ ನೆಲೆಯಾಗಿ ಗುರ್ತಿಸಿಕೊಂಡರು. ಅರಬ್ಬರು ಸಿಂದ್ ಪ್ರಾಂತ್ಯದಲ್ಲಿ ಸಾಗರೋತ್ತರ ವ್ಯಾಪಾರ ಮತ್ತು ಸ್ಥಳೀಯ ವ್ಯಾಪಾರವನ್ನು

ನಿಯಂತ್ರಿಸುತ್ತಿದ್ದರು.[33] ಇಲ್ಲಿ ಭೂ ಮಾರ್ಗ ಮತ್ತು ಸಾಗರ ಮಾರ್ಗ ಎರಡೂ ಕೂಡ ಸಿಂದ್ ಬಂದರಿನ ಮಾರ್ಗವಾಗಿಯೇ ಹೋಗುತ್ತಿತ್ತು. ಸಿಂದ್‌ನ ಅಲ್ ಮಾನ್ಸೂರ್ ಮತ್ತು ಮುಲ್ತಾನ್ ಅರಬ್ಬರ ಪ್ರಮುಖ ಸಾಂಸ್ಕøತಿಕ ಕೇಂದ್ರಗಳಾಗಿದ್ದವು.

ದ್ಯಾಬಲ್ ಸಿಂದ್ ಪ್ರಾಂತ್ಯದ ಪ್ರಮುಖ ಬಂದರಾಗಿದ್ದು, ಚೀನಾ, ಓಮನ್ ಮತ್ತು ಮಲಬಾರ್‌ನಿಂದ ಬರುತ್ತಿದ್ದ ಬಂದರುಗಳು ಇಲ್ಲಿ ಲಂಗರು ಹಾಕುತ್ತಿದ್ದವು. ಕ್ಯಾಂಬೆ ಒಂದು ಪ್ರಮುಖ ನಗರವಾಗಿದ್ದು ಇದು ಹಡಗುಗಳ ಕೇಂದ್ರ ಸ್ಥಾನವಾಗಿತ್ತು ಹಾಗೂ ಎಲ್ಲಾ ದೇಶಗಳ ಸರಕುಗಳು ಇಲ್ಲಿ ದೊರಕುತ್ತಿದ್ದವು ಮತ್ತು ಇಲ್ಲಿಂದ ಬೇರೆ ಕಡೆಗೆ ಅವುಗಳನ್ನು ಕಳುಹಿಸಲಾಗುತ್ತಿತ್ತು. ಇಬನ್ ಬತೂತನ ಹೇಳಿಕೆಗಳ ಪ್ರಕಾರ ಕ್ಯಾಂಬೆಯಲ್ಲಿದ್ದ ಸ್ಥಳೀಯ ಜನರು ಹೆಚ್ಚು ವಿದೇಶಿಯರಾಗಿದ್ದರು ಮತ್ತು ಅವರು ಭದ್ರವಾದ ಮಹಲುಗಳನ್ನು ಮತ್ತು ಮಸೀದಿಗಳನ್ನು ನಿರ್ಮಿಸಿದ್ದರು. ಈ ನಗರವು ಹೆಚ್ಚು ಶ್ರೀಮಂತರಿಂದ ಕೂಡಿತ್ತು ಮತ್ತು ಸಂಪದ್ಭರಿತವಾಗಿತ್ತು. ಸಿಂದ್‌ನಿಂದ ಪ್ರಮುಖ ಪದಾರ್ಥಗಳಾದ ಅಕ್ಕಿ, ಬಾಳೆಹಣ್ಣು, ಮಾವಿನಹಣ್ಣು, ದ್ರಾಕ್ಷಿ ಮತ್ತು ದಾಳಿಂಬೆ ರಫ್ತಾಗುತ್ತಿದ್ದವು. ಮಕ್ರಾನ್ ಬಿಳಿಯ ಸಕ್ಕರೆಗೆ ಹೆಸರುವಾಸಿಯಾಗಿತ್ತು. ಮರ, ಸಾಂಬಾರ, ಬಟ್ಟೆಗಳು, ರೇಷ್ಮೆ, ಉಣ್ಣೆಬಟ್ಟೆಗಳು, ತಂಬಾಕು ಮತ್ತು ಚರ್ಮದ ಪದಾರ್ಥಗಳು ಮುಲ್ತಾನ್ ಕ್ಯಾಂಬೆ ಲೂದಿಯಾನ, ಲಾಹೋರ್, ಜೀಲಂ, ಉಚ್ಛ್ ಮುಂತಾದ ಬಂದರುಗಳಿಂದ ಅರೇಬಿಯಾಗೆ ರಫ್ತಾಗುತ್ತಿದ್ದವು.

ದಕ್ಷಿಣ ಭಾರತದ ಹಿಂದೂ ಮತ್ತು ಮುಸ್ಲಿಂ ರಾಜರುಗಳು ಅರಬ್ಬರನ್ನು ಆತ್ಮೀಯವಾಗಿ ಸ್ವಾಗತಿಸಿದರು. ದಕ್ಷಿಣ ಭಾರತದ ರಾಜರು ಪಶ್ಚಿಮ ಏಷ್ಯಾ ರಾಷ್ಟ್ರಗಳೊಂದಿಗೆ ಕುದುರೆ ವ್ಯಾಪಾರವನ್ನು ಹೊಂದಿದ್ದರು. ಈ ಕುದುರೆಗಳು ಯುದ್ಧದ ಸಂದರ್ಭದಲ್ಲಿ ಭಾರತೀಯರಿಗೆ ಸಹಯಕವಾಗಿದ್ದವು. ಮಧ್ಯಕಾಲೀನ ಭಾರತೀಯ ರಾಜರು ಸಂಪೂರ್ಣವಾಗಿ ಅರಬ್ಬರಲ್ಲಿ ಅವಲಂಬಿತರಾಗಿದ್ದರು. ಈ ರಾಜರು ಅರಬ್ ಕುದುರೆ ವ್ಯಾಪಾರಿಗಳನ್ನು ತಮ್ಮ ರಾಜಧಾನಿಯ ಕಡೆ ಆಕರ್ಷಿಸಲು ಬಹಳಷ್ಟು ಪ್ರಯತ್ನ ಮಾಡಿದರು. ಈ ಅವಕಾಶವನ್ನು ಸದುಪಯೋಗ ಪಡಿಸಿಕೊಂಡ ಅರಬ್ಬರು ಭಾರತದಾದ್ಯಂತ ತಮ್ಮ ವ್ಯಾಪಾರವನ್ನು ವಿಸ್ತರಿಸಿದರು. ಸಂಪೂರ್ಣ ದಕ್ಷಿಣ ಭಾರತ, ಬಂಗಾಳದ ಚಿತ್ತಗಾಂಗ್ ಮತ್ತು ಉತ್ತರ ಭಾರತದ ಭಾಗಗಳಲ್ಲಿಯೂ ತಮ್ಮ ವ್ಯಾಪಾರವನ್ನು ಅಭಿವೃದ್ಧಿಗೊಳಿಸಿ ಭಾರತೀಯ ರಾಜರಿಗೆ ತಮ್ಮ ದೇಶದ ಕುದುರೆಗಳನ್ನು ರಫ್ತು ಮಾಡುತ್ತಿದ್ದರು.34

**ಬಂಗಾಳ ಮತ್ತು ಭಾರತದ ದ್ವೀಪಗಳೊಂದಿಗೆ ಅರಬ್ಬರ ವ್ಯಾಪಾರ:**

ಬಂಗಾಳಕೊಲ್ಲಿಯ ಸ್ಥಳೀಯ ಭಾಗಗಳಲ್ಲಿ ಅರಬ್ಬರು ಶಾಶ್ವತವಾದ ವ್ಯಾಪಾರದ ಕೇಂದ್ರಗಳನ್ನು ಸ್ಥಾಪಿಸಿದರು. ಅರಬ್ಬರು ಕವಡೆಗಳನ್ನು ಲಕ್ಷದ್ವೀಪ ಮತ್ತು ಮಾಲ್ಡೀವ್ಸ್‌ಗಳಿಂದ ತಂದರು. ಇವು ಬಂಗಾಳದಲ್ಲಿ ಜನಪ್ರಿಯವಾಗಿದ್ದವು. ಈ ಸಮುದ್ರದ ಕವಡೆಗಳು ಸ್ಥಳೀಯ ವ್ಯಾಪಾರದ ಮಾಧ್ಯಮವಾಗಿದ್ದವು. ಇವುಗಳನ್ನು ಬಳಸಿ ಜನರು ಸಕ್ಕರೆ, ಅಕ್ಕಿ ಮತ್ತು ಬಟ್ಟೆಗಳನ್ನು ಕೊಳ್ಳುತ್ತಿದ್ದರು.35

ಸಮುದ್ರದ ಕವಡೆಗಳು ಬಂಗಾಳದಲ್ಲಿ ಸಾಕಷ್ಟು ಬೇಡಿಕೆ ಹೊಂದಿದ್ದವು. ಚೀನಾದ ಪ್ರವಾಸಿಗರಾದ ವಾಂಗ್-ತಾ-ಯೂನ್‌ನ ಪ್ರಕಾರ 'ಪ್ರತಿಯೊಬ್ಬ ವ್ಯಾಪಾರಿಯು ಒಂದೊಂದು ಹಡಗಿನಷ್ಟು ಸಮುದ್ರದ ಕವಡೆಗಳನ್ನು ಒರಿಸ್ಸಾ ಮತ್ತು ಬಂಗಾಳಕ್ಕೆ ತರುತ್ತಿದ್ದರು. ಈ ಕವಡೆಗಳನ್ನು ಬಳಸಿ ಅಕ್ಕಿ ಮತ್ತು ಇತರ ಪದಾರ್ಥಗಳನ್ನು ಕೊಳ್ಳುತ್ತಿದ್ದರು. ಈ ಕವಡೆಗಳನ್ನು ಸ್ಥಳೀಯ ಜನರು ವ್ಯಾಪಾರದ ಮಾಧ್ಯಮವಾಗಿ ಬಳಸುತ್ತಿದ್ದರು. ಸಕ್ಕರೆಯು ಬಂಗಾಳದಿಂದ ಶ್ರೀಲಂಕಾ ಮತ್ತು ಅರೇಬಿಯ ದೇಶಗಳಿಗೆ ರಫ್ತಾಗುತ್ತಿದ್ದವು. ಮತ್ತೊಂದು ಪ್ರಮುಖವಾದ ಸರಕು ಖಾದ್ಯಗಳು ಅಧಿಕ ಪ್ರಮಾಣದಲ್ಲಿ ಬಂಗಾಳದಿಂದ ರಫ್ತಾಗುತ್ತಿದ್ದವು.

ಅರಬ್ ವ್ಯಾಪಾರಿಗಳು ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳ ಬಗ್ಗೆ ಹೆಚ್ಚು ಪರಿಚಿತರಾಗಿದ್ದರು. ಆದರೆ ಈ ದ್ವೀಪಗಳಲ್ಲಿ ಯಾವುದೇ ಅರಬ್ ವಸಾಹತುಗಳಿರಲಿಲ್ಲ. ಈ ದ್ವೀಪಗಳ ಸ್ಥಳೀಯ ಜನರೊಂದಿಗೆ ಸಂಪರ್ಕವನ್ನು ಹೊಂದಿದ್ದರು. ಅರಬ್ ಪ್ರವಾಸಿಗರ ಪ್ರಕಾರ ಸ್ಥಳೀಯ ಜನರು ಕೆಲವೊಂದು ಬಟ್ಟೆಯ ಸರಕುಗಳನ್ನು ಮಾರಾಟ ಮಾಡುತ್ತಿದ್ದರು. ಸ್ಥಳೀಯ ಜನರು ಅರಬ್ಬರ ಭಾಷೆಯನ್ನು ಅರ್ಥಮಾಡಿಕೊಳ್ಳುತ್ತಿರಲಿಲ್ಲ. ಇಬನ್ ಬತೂತನು ಸುಮಾರು ನಾಲ್ಕು ವರ್ಷಗಳ ಕಾಲ ಅಲ್ಲಿ ಉಳಿದುಕೊಂಡಿದ್ದನು. ಅವನ ಪ್ರಕಾರ ಸ್ಥಳೀಯರು ತೆಂಗಿನಮರಗಳನ್ನು ಮತ್ತು ಹುರಿಗಳನ್ನು ಬಳಸಿಕೊಂಡು ಹಡಗುಗಳನ್ನು ನಿರ್ಮಾಣ ಮಾಡುತ್ತಿದ್ದರು. ಹುರಿಗಳನ್ನು ಬಳಸಿ ಹಡಗುಗಳನ್ನು ಮತ್ತು ಹಡಗಿನ ಪಟಗಳನ್ನು ಹೊಲಿಯುತ್ತಿದ್ದರು. ಈ ಎಲ್ಲಾ ಹಡಗುಗಳನ್ನು ಸ್ವಾಭಾವಿಕವಾಗಿ ಸಿಗುವ ವಸ್ತುಗಳಿಂದ ತಯಾರು ಮಾಡುತ್ತಿದ್ದರು. ತೆಂಗಿನಮರದ ನಾರು ಓಮನ್, ಯಮನ್ ಮತ್ತು ಉಳಿದ ಅರಬ್ ದೇಶಗಳಿಗೆ ರಫ್ತಾಗುತ್ತಿದ್ದವು.[36]

ಇಸ್ಲಾಂ ಧರ್ಮವು ಲಕ್ಷದ್ವೀಪದಲ್ಲಿ ಅರಬ್ ವ್ಯಾಪಾರಿಗಳಿಂದ ಪರಿಚಯಿಸಲ್ಪಟ್ಟಿತು. ದಕ್ಷಿಣ ಅರೇಬಿಯ ಮತ್ತು ಮಲಬಾರ್ ತೀರದ ಜನರು ಶಾಹಿ ಮದಬ್‌ನ ಅನುಯಾಯಿಗಳಾಗಿದ್ದರು. ಇಲ್ಲಿನ ಜನರು ಇಸ್ಲಾಂಗೆ ಮತಾಂತರವಾಗುವ ಮುನ್ನ ಹಿಂದೂ ಧರ್ಮದವರಾಗಿದ್ದರು. ಈ ದ್ವೀಪಗಳಲ್ಲಿ ಯಾವುದೇ ರೀತಿಯ ವ್ಯವಸಾಯ ಆಧಾರಿತ ಕಸುಬುಗಳಿರಲಿಲ್ಲ. ಅವರಿಗೆ ಅವಶ್ಯಕವಾದಂತಹ ದಿನ ಬಳಕೆಯ ವಸ್ತುಗಳನ್ನು ಅವರು ಬಂಗಾಳ ಮತ್ತು ಮಲಬಾರ್ ಬಂದರುಗಳಿಂದ ಆಮದು ಮಾಡಿಕೊಳ್ಳುತ್ತಿದ್ದರು.

**2.6 ಅರಬ್ಬರ ಕಾಲದ ಪ್ರಮುಖ ಬಂದರುಗಳು:**

ಇಬನ್ ಬತೂತ ವಿವರಿಸಿರುವಂತೆ ಮಲಬಾರ್ ತೀರ ಪ್ರದೇಶದಲ್ಲಿ ಅರಬ್ಬರು ಹಲವಾರು ಬಂದರುಗಳಲ್ಲಿ ತಮ್ಮ ವ್ಯಾಪಾರವನ್ನು ಹೊಂದಿದ್ದರು. ಗೋವಾದಿಂದ ಕೊಲ್ಲಂ ವರೆಗಿನ ಬಂದರು ಪ್ರದೇಶವನ್ನು 'ಸಾಂಬಾರ ದೇಶ' ಎಂದು ಕರೆಯುತ್ತಿದ್ದರು. ಈ ಮಲಬಾರಿನಲ್ಲಿ ಅರಬ್ಬರ ಪ್ರಮುಖವಾದ ಬಂದರುಗಳೆಂದರೆ, ಬಾರ್ಕೂರು, ಮಂಗಳೂರು, ಕಣ್ಣೂರು, ಹಿಲಿ ಅಥವಾ ಹಿಜ್ಜೆಮಾಲ, ವಲ್ಲಪಟ್ಟಣಂ, ಧರ್ಮಪಟ್ಟಣಂ, ಪಂಥಲಾಯಿಸಿ ಕೊಲ್ಲಂ, ಕ್ಯಾಲಿಕಟ್, ಬೈಪೂರ್ ಕಡಲುಂಡಿ, ಕೊಡುನ್‌ಗಲ್ಲುರ್ ಮತ್ತು ಕೊಲ್ಲಂ ಪ್ರಮುಖವಾದವುಗಳು.[37] ಈ ಬಂದರುಗಳ ವಿವರಣೆ ಈ ಕೆಳಕಂಡಂತಿವೆ.

**ಬಾರ್ಕೂರು** : ಬಾರ್ಕೂರು ಅಥವಾ ಫಕಮಾರ್ ಎಂದು ಹೆಸರುವಾಸಿಯಾಗಿರುವ ಈ ಬಂದರು ಮಲಬಾರಿನ ಪ್ರಮುಖ ಬಂದರು ಯಾಕುತ್ ಮತ್ತು ಡಿಮಿಸಿ ಅರಬ್ ಯಾತ್ರಿಕರು ಈ ಬಂದರಿನ ಬಗ್ಗೆ ಮಾಹಿತಿ ನೀಡಿದ್ದಾರೆ. ಇದು ತುಳು ಜನರ ಒಂದು ಸಾಂಸ್ಕೃತಿಕ ರಾಜಧಾನಿಯೂ ಕೂಡ ಹೌದು.[38] ಈ ಬಂದರಿನಲ್ಲಿದ್ದ ಮುಸ್ಲಿಂ ಸಮುದಾಯವನ್ನು ಬಸದವ್ ಎಂಬ ಹೆಸರಿನಿಂದ ಕರೆಯುತ್ತಿದ್ದರು.

**ಮಂಗಳೂರು** : ಮಂಜರೂರ್ ಅಥವಾ ಮಂಗಳೂರು ಮತ್ತೊಂದು ಮಲಬಾರಿನ ಪ್ರಮುಖ ಬಂದರಾಗಿದೆ. ಡಿಮಿಸ್ಸಿ ಮತ್ತು ಅಬ್ದುಲ್ ಪಿದಾ ರವರು ಈ ಬಂದರಿನ ಬಗ್ಗೆ ಹಲವಾರು ಉಪಯುಕ್ತವಾದ ಮಾಹಿತಿಗಳನ್ನು ನೀಡಿದ್ದಾರೆ. ಅಬ್ದುಲ್ ಪಿದ್‌ನ ಪ್ರಕಾರ ಮಂಗಳೂರು ಒಂದು ದೊಡ್ಡ ಬಂದರಾಗಿತ್ತು. ಇಬನ್ ಬತೂತ್‌ನ ಪ್ರಕಾರ ಮಂಗಳೂರು ನಗರಕ್ಕೆ ಅತಿ ಹೆಚ್ಚು ಯಮನ್ ವ್ಯಾಪಾರಿಗಳು ಬಂದು ಇಲ್ಲಿ ನೆಲೆಸಿದ್ದರು. ಈ ಬಂದರಿನಿಂದ ಸಾಂಬಾರ ಪದಾರ್ಥಗಳು ಮತ್ತು ಶುಂಠಿ ಅತಿ ಹೆಚ್ಚಾಗಿ ರಫ್ತಾಗುತ್ತಿದ್ದವು.[39] ಇಬನ್ ಬತೂತ್ ಈ

ನಗರಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಮುಸ್ಲಿಮರು ತಮ್ಮದೇ ಆದ ಕಾಲೋನಿಯನ್ನು ನಿರ್ಮಿಸಿದ್ದರು. ಸುಮಾರು ಅಂದಾಜಿನ ಪ್ರಕಾರ ನಾಲ್ಕು ಸಾವಿರ ಸ್ಥಳೀಯ ಮುಸ್ಲಿಮರು ಒಂದು ಉಪನಗರವನ್ನು ನಿರ್ಮಿಸಿದ್ದರೆಂದು ತಿಳಿಸಿದ್ದಾನೆ.

**ಕಣ್ಣೂರು** : ಮಲಬಾರಿನ ಮತ್ತೊಂದು ಪ್ರಮುಖ ಬಂದರು ಕಣ್ಣೂರು ಅಥವಾ ಶ್ರೀಕಂದಪುರಂ ಆಗಿದೆ. ಅರಬ್ ಪ್ರವಾಸಿಗರ ಪ್ರಕಾರ ಇದೊಂದು ಪ್ರಮುಖ ಬಂದರಾಗಿದೆ. ಇದೊಂದು ಜನಭರಿತ ಬಂದರು. ಅತಿ ಹೆಚ್ಚು ಪ್ರಮಾಣದ ಆಹಾರ ಪದಾರ್ಥಗಳು ಮತ್ತು ಸಾಂಬಾರ ಪದಾರ್ಥಗಳು ಈ ಬಂದರಿನಿಂದ ಶ್ರೀಲಂಕಾಗೆ ರಫ್ತಾಗುತ್ತಿದ್ದವು.[40]

**ಈಲಿ:** ಈಲಿ ಅಥವಾ ಇಜ್ಯೈಮಾಲ ಬಂದರು ಮಲಬಾರಿನ ಮತ್ತೊಂದು ಪ್ರಮುಖ ಬಂದರು. ಇಬನ್ ಬತೂತ ವಿವರಿಸಿರುವಂತೆ ಈ ಬಂದರಿನಲ್ಲಿ ಚೀನಾದವರು ಪ್ರಮುಖ ವ್ಯಾಪಾರ ವಹಿವಾಟುಗಳನ್ನು ನಡೆಸುತ್ತಿದ್ದರು. ಈಲಿ ಒಂದು ಪ್ರಮುಖವಾದ ಬಂದರಾಗಿದ್ದು, ಪರ್ಷಿಯನ್ ಕೊಲ್ಲಿಯಿಂದ ನೇರವಾಗಿ ಹಡಗುಗಳು ಇಲ್ಲಿಗೆ ಬಂದು ತಂಗುತ್ತಿದ್ದವು. ಶೇಕ್ ಜೈನುದ್ದೀನ್ ಪ್ರಕಾರ ಮೂರನೇ ಪ್ರಮುಖ ಮಸೀದಿ ಈ ಬಂದರಿನಲ್ಲಿ ನಿರ್ಮಿಸಲಾಯಿತು. ಕೇರಳಕ್ಕೆ ಮುಸ್ಲಿಂ ಧರ್ಮ ಬಂದಾಗಿನಿಂದಲೂ ಅಲ್ಲಿ ಮುಸ್ಲಿಮರು ತಮ್ಮ ವಸಾಹತುಗಳನ್ನು ಸ್ಥಾಪಿಸಿಕೊಂಡರು. ಇಬನ್ ಬತೂತನ ಪ್ರಕಾರ ಈಲಿ ಬಂದರಿನಲ್ಲಿ ಮುಸ್ಲಿಮರು ಮತ್ತು ಹಿಂದೂಗಳಿಬ್ಬರು ಒಟ್ಟಾಗಿ ಪೂಜೆ ಸಲ್ಲಿಸುತ್ತಿದ್ದರು.[41]

**ಒಲಿಪಟ್ನಂ** : ಒಲಿಪಟ್ನಂ ಅಥವಾ ಪ್ರಸ್ತುತ ವಲ್ಲರ್‌ಪಟ್ನಂ ಮಲಬಾರಿನ ಪ್ರಮುಖ ಬಂದರು. ಇದು ಕೇರಳದಲ್ಲಿ ಕಂಡು ಬರುತ್ತದೆ. ಈ ಬಂದರು ಕಣ್ಣಾನೂರಿನಿಂದ ಕೇವಲ ಐದು ಮೈಲಿಗಳಲ್ಲಿದೆ. ಇದು ಒಂದು ನಗರ ಮತ್ತು ಬಂದರಾಗಿ ಮಧ್ಯಕಾಲಿನ ಭಾರತದಲ್ಲಿ ಅರಬ್ಬರ ವ್ಯಾಪಾರದಲ್ಲಿ ಪ್ರಮುಖವಾದ ಪಾತ್ರವನ್ನು ನಿರ್ವಹಿಸಿದೆ.

**ಧರ್ಮಾಧಂ** : ಧರ್ಮಾಧಂ ಅಥವಾ ಧರ್ಮ ಪಟ್ಟಣಂ ಎಂದು ಕರೆಯಲ್ಪಡುವ ಮತ್ತೊಂದು ಮಲಬಾರಿನ ಪ್ರಮುಖ ಬಂದರಾಗಿದೆ. ಮಧ್ಯಕಾಲೀನ ಭಾರತದಲ್ಲಿ ಇದೊಂದು ಕಾರ್ಯನಿರತ ಬಂದರಾಗಿತ್ತು. ಪಾರಂಪರಿಕ ಕಥೆಗಳ ಪ್ರಕಾರ ಚೇರ್ಮನ್ ಪೆರುಮಾಲ್‌ನು ಮಲಬಾರಿನಿಂದ ಮೆಕ್ಕಾಗೆ ತೆರಳುವ ವರ್ತಕರಿಗೆ ಈ ಬಂದರಿನಲ್ಲಿ ವಿದಾಯ ಹೇಳುತ್ತಿದ್ದನು. ಶೇಕ್ ಜೈನುದ್ದೀನ್ ಹೇಳಿರುವ ಪ್ರಕಾರ ಮಲ್ಲಿಕ್–ಬಿನ್–ಹಬೀಬ್ ಧರ್ಮಾಥಂನಲ್ಲಿ ಮೊದಲ ಪ್ರಮುಖ ಮಲಬಾರಿನ ಮಸೀದಿಯನ್ನು ಕಟ್ಟಿಸಿದ್ದನು.

**ಪಂದಾಲಿನ್** : ಪಂಥಾಲಾಯಿನಿ ಕೊಲ್ಲಂ ಅಥವಾ ಪಂದಾಲಿನ್ ಎಂದು ಕರೆಯಲ್ಪಡುವ ಈ ಬಂದರು ಕ್ಯಾಲಿಕಟ್‌ನ ಉತ್ತರ ಭಾಗದಲ್ಲಿ ನೆಲೆಸಿರುವ ಐತಿಹಾಸಿಕವಾದ ಮಲಬಾರಿನ ಬಂದರಾಗಿದೆ. ಈ ಬಂಧರು ಕೇರಳದಲ್ಲಿ ಕಂಡು ಬರುತ್ತದೆ. ಮುಖ್ಯವಾಗಿ ಈ ಬಂದರಿನ ಬಗ್ಗೆ ಅರಬ್ಬರು ಮತ್ತು ಖಗೋಳಶಾಸ್ತ್ರಜ್ಞರು ಮಾಹಿತಿ ನೀಡಿದ್ದಾರೆ. ಕೊಲ್ಲಂ ರಾಜ ಪಯನಾಡಿನ ರಾಜಧಾನಿಯಾಗಿಯೂ ಸಹ ಆಗಿತ್ತು. ಇಬನ್ ಬತೂತನ ಪ್ರಕಾರ ಈ ಬಂದರು ದೊಡ್ಡ ಮಾರುಕಟ್ಟೆಯನ್ನು ಹೊಂದಿದ ನಗರವಾಗಿತ್ತು. ಇದು ಪ್ರಮುಖವಾದ ಮಾರುಕಟ್ಟೆ ಕೇಂದ್ರವಲ್ಲದೆ ಕ್ಯಾಲಿಕಟ್‌ಗೂ ಮುನ್ನ ಅತಿ ಹೆಚ್ಚು ಪ್ರಾಮುಖ್ಯತೆ ಪಡೆದಿದ್ದ ಮಲಬಾರಿನ ಬಂದರು. ಅಲ್ ಇದ್ರಿಸಿ ಪ್ರಕಾರ "ಸ್ಥಳೀಯ ಜನರು ಶ್ರೀಮಂತರು, ಉತ್ತಮ ಮಾರುಕಟ್ಟೆ ಹೊಂದಿದ್ದರು ಮತ್ತು ವ್ಯಾಪಾರ ಉಚ್ಛ್ರಾಯ ಸ್ಥಿತಿಯಲ್ಲಿತ್ತು." ಏಲಕ್ಕಿ ಮತ್ತು ಸಾಂಬಾರ ಪದಾರ್ಥಗಳು ಪ್ರಮುಖ ಪದಾರ್ಥಗಳು ಇಲ್ಲಿಂದ ರಫ್ತಾಗುತ್ತಿದ್ದವು. ಎಸ್.ಎಂ.ಎಚ್ ನಾಯರ್ ವರದಿಗಳ ಪ್ರಕಾರ ಏಲಕ್ಕಿಯನ್ನು ಅಲ್ಲಿಯ ಸ್ಥಳೀಯ ಜನರು ಬೆಟ್ಟಗುಡ್ಡಗಳ ಇಳಿಜಾರಿನ ಪ್ರದೇಶದಲ್ಲಿ ಬೆಳೆದು ರಫ್ತು ಮಾಡುತ್ತಿದ್ದರು.

**ಕ್ಯಾಲಿಕಟ್** : ಕ್ಯಾಲಿಕಟ್ ಹನ್ನೊಂದನೇ ಶತಮಾನದ ನಂತರ ಬೆಳವಣಿಗೆ ಹೊಂದಿದ್ದ ಪ್ರಮುಖ ವಾಣಿಜ್ಯ ಕೇಂದ್ರವಾಗಿತ್ತು. ಹದಿಮೂರನೇ ಶತಮಾನದ ನಂತರ ಜಾಮೋರಿನ್‌ನು ಮುಸ್ಲಿಮರನ್ನು ಪೋಷಿಸಿ ಈ ನಗರದ ಬೆಳವಣಿಗೆಗೆ ಸಹಕಾರಿಯಾದನು. ಚೀನಾದ ಬರಹಗಾರನಾದ ವಾಂಗ್–ತಾ–ಯೂಹಾನ್ ರ ಪ್ರಕಾರ "ಕ್ಯಾಲಿಕಟ್ ಬಂದರು ಎಲ್ಲಾ ಸಮುದ್ರ ಸಂಬಂಧ ವ್ಯಾಪಾರಗಳಲ್ಲಿ ಒಂದು ಪ್ರಮುಖವಾದ ವ್ಯಾಪಾರ ಕೇಂದ್ರವಾಗಿತ್ತು."[42]

**ಚಲಿಯಂ** : ಶಲಿಯತ್, ಚಲಿಯಂ ಅಥವಾ ಬೈಪೂರ್ ಎಂದು ಕರೆಯುವ ಈ ಬಂದರು ಕೇರಳದ ಕೋಜಿಕೋಡಿನ ಉಪಬಂದರು. ಇಬನ್ ಬತೂತನ ಪ್ರಕಾರ 'ಬೈಪೂರ್ ಒಂದು ಸುಂದರವಾದ ಬಂದರು ನಗರ ಮತ್ತು ಈ ನಗರವು ವಸ್ತ್ರ ವಿನ್ಯಾಸಕ್ಕೆ ಹೆಸರುವಾಸಿಯಾಗಿದೆ. ಅಬ್ದುಲ್ ಫಿದಾ ಹೇಳಿರುವ ಪ್ರಕಾರ ಇದೊಂದು ಮಲಬಾರಿನ ಪ್ರಮುಖ ಬಂದರು. ಈ ಭಾಗದ ಪ್ರಮುಖ ನದಿಯಾದ ಬೈಪೂರ್ ತೇಗದ ಮರದ ಕಾಡುಗಳಿಂದ ಹರಿದು ಬರುತ್ತಿತ್ತು. ಈ ಬಂದರಿನಲ್ಲಿ ಪ್ರಮುಖವಾಗಿ ತೇಗದ ಮರಗಳ ವ್ಯಾಪಾರ ನಡೆಯುತ್ತಿತ್ತು. ಬೇರೆ ದೇಶಗಳಿಗೆ ರಫ್ತಾಗುತ್ತಿದ್ದವು. ಮತ್ತು ಸ್ಥಳೀಯವಾಗಿ ಹಡಗುಗಳನ್ನು ಕಟ್ಟಲು ಬಳಸುತ್ತಿದ್ದರು. ಮಲಬಾರಿನ ಈ ಬಂದರು ಹಡಗುಗಳ ನಿರ್ಮಾಣದಲ್ಲಿ ಬಹಳಷ್ಟು ಶ್ರೇಷ್ಠತೆ ಹೊಂದಿತ್ತು.

**ಕಡಲುಂಡಿ** : ತಂಡಿಯಾರ್ ಅಥವಾ ಕಡಲುಂಡಿ ಮತ್ತೊಂದು ಮಲಬಾರಿನ ಪ್ರಮುಖ ಬಂದರಾಗಿದೆ. ಇದು ಕೇರಳದ ಕೋಝಿಕೋಡ್‌ನಲ್ಲಿ ಕಂಡು ಬರುತ್ತದೆ. ಇದೊಂದು

ಮೀನುಗಾರರ ಚಿಕ್ಕ ಹಳ್ಳಿ ಮತ್ತು ಸಣ್ಣ ಬಂದರಾಗಿದೆ. ಅಬ್ದುಲ್ ಫಿದಾ ರವರ ಪ್ರಕಾರ ಈ ಬಂದರು ಅತ್ಯಂತ ಪರಮಾವದಿ ಬಂದರಾಗಿತ್ತು.

**ಕೊಡುನ್‌ಗಲ್ಲೂರ್** : ಸಂಜೀಲಿ ಅಥವಾ ಕೂಡನ್‌ಗಲ್ಲೂರ್ ಬಂದರು ಅರಬ್ಬೀ ಸಮುದ್ರದಲ್ಲಿ ಕಂಡು ಬರುವ ಮತ್ತೊಂದು ಪ್ರಮುಖ ಬಂದರಾಗಿದೆ. ಅರಬ್ಬರು, ಅರಬೇತರರು ಮತ್ತು ಖಗೋಳಶಾಸ್ತ್ರಜ್ಞರು ಈ ಬಂದರಿನ ಬಗ್ಗೆ ವಿವರಣೆ ನೀಡಿದ್ದಾರೆ. ಇದೊಂದು ಪ್ರಮುಖ ವ್ಯಾಪಾರಿ ಕೇಂದ್ರವಾಗಿತ್ತು. ಮಲ್ಲಿಕ್ ಇಬನ್ ದೀನಾರ್ ಎಂಬುವವನು ಇವನ ಮೊದಲ ಮಸೀದಿಯನ್ನು ಇಲ್ಲಿ ನಿರ್ಮಿಸಿದನು. ಕೊಡನ್‌ಗಲ್ಲೂರ್ ಬಂದರು ಯಹೂದಿಗಳು, ಅರಬ್ಬರು ಮತ್ತು ಕ್ರಿಶ್ಚಿಯನ್ನರ ಭೇಟಿ ಸ್ಥಳವಾಗಿತ್ತು. ಕ್ರಿ.ಶ.1341ರವರೆಗೆ ಈ ನಗರವು ಸ್ಥಳೀಯ ರಾಜನಾದ ಸೆರಮಾನ್ ಪೆರುಮಾಳ್‌ನ ರಾಜಧಾನಿಯಾಗಿತ್ತು. ಪೆರಿಯಾರ್ ನದಿಯ ಪ್ರವಾಹ ಉಂಟಾಗಿ ಸಂಪೂರ್ಣವಾಗಿ ಈ ಬಂದರು ಮಣ್ಣಿನಿಂದ ಮುಚ್ಚಿ ಹೋಯಿತು. ನಂತರ ಈ ಬಂದರಿನ ವ್ಯಾಪಾರವು ಇಲ್ಲಿಂದ ಕೊಚ್ಚಿನ್‌ಗೆ ವರ್ಗಾಯಿಸಲ್ಪಟ್ಟಿತು.[43]

**ಕೊಲ್ಲಂ** : ಕೊಲ್ಲಂ ಬಂದರು ಮಲಬಾರ್‌ನ ಮತ್ತೊಂದು ಪ್ರಮುಖ ಬಂದರಾಗಿದೆ. ಇದು ಮಧ್ಯಕಾಲೀನ ಕೇರಳದ ಬಹಳ ಪ್ರಮುಖವಾದ ವ್ಯಾಪಾರಿ ಕೇಂದ್ರವಾಗಿತ್ತು. ಇದು ಅರಬ್ಬೀ ಸಮುದ್ರ ಮತ್ತು ಅಸ್ತಮಟಿ ಕಾಯಲ್‌ನ ಮಧ್ಯದಲ್ಲಿ ಕಂಡು ಬರುತ್ತದೆ. ಅಸ್ತಾಮಟಿ ಕಾಯಲ್‌ನ ಹಲವಾರು ಉಪಶಾಖೆಗಳು ಇದರೊಂದಿಗೆ ವ್ಯಾಪಾರ ಸಂಪರ್ಕವನ್ನಿಟ್ಟಿದ್ದವು. ಸುಮಾರು ಎಂಟು ಅರಬ್ ಪ್ರವಾಸಿಗರು ಈ ಬಂದರಿನ ಬಗ್ಗೆ ಮಾಹಿತಿ ನೀಡಿದ್ದಾರೆ. ಈ ಬಂದರು ಉತ್ತಮವಾದ ಮಾರುಕಟ್ಟೆಯನ್ನು ಹೊಂದಿತ್ತು. ಅಲ್ಲಿನ ವ್ಯಾಪಾರಸ್ಥರು ಶ್ರೀಮಂತರಾಗಿದ್ದರು.[44]

## 2.7 ವ್ಯಾಪಾರ ವಹಿವಾಟು ಆಮದು ಮತ್ತು ರಫ್ತು

ವಿಜಯನಗರದ ಅರಸರ ಕಾಲಾವಧಿಯಲ್ಲಿ ಹಲವಾರು ವಸ್ತುಗಳು ಆಮದು ಮತ್ತು ರಫ್ತಿಗೆ ಒಳಗೊಂಡಿದ್ದವು. ಯಾವ ಯಾವ ವಸ್ತುಗಳು ಅವರಿಬ್ಬರ ಬಳಿ ವಿನಿಮಯ ಗೊಳ್ಳುತ್ತಿದ್ದವೆಂದು ನಿಖರವಾಗಿ ಹೇಳಲಾಗುವುದಿಲ್ಲವಾದರೂ, ಅವುಗಳ ಪೂರೈಕೆ ಮತ್ತು ಬೇಡಿಕೆಯ ಆಧಾರದ ಮೇಲೆ ವಿಂಗಡಿಸಲಾಗಿದೆ. ಈ ವಸ್ತುಗಳನ್ನು ಎರಡು ಬಗೆಗಳಾಗಿ ವಿಂಗಡಿಸಲಾಗಿದ್ದು ಅವು ಐಷರಾಮಿ ವಸ್ತುಗಳು ಮತ್ತು ಸಾಮಾನ್ಯ ವಸ್ತುಗಳಾಗಿವೆ. ಅರಬ್ ಖಗೋಳಶಾಸ್ತ್ರಜ್ಞರು, ಅರಬ್ ಪ್ರವಾಸಿಗರು ಮತ್ತು ಪರ್ಷಿಯದ ದಾಖಲೆಗಳ ಪ್ರಕಾರ ಕುದುರೆಗಳು, ತುಪ್ಪಳ, ಬೆಲೆಬಾಳುವ ಹರಳುಗಳು, ರೇಷ್ಮೆ ಮತ್ತು ರೇಷ್ಮೆಯ ವಸ್ತುಗಳು ಹಾಗೂ

ಗುಲಾಮರು. ಈ ಎಲ್ಲಾ ಐಷರಾಮಿ ವಸ್ತುಗಳು ಮಧ್ಯ ಏಷ್ಯಾ ಮತ್ತು ಪರ್ಷಿಯಾದಿಂದ ಭಾರತಕ್ಕೆ ಆಮದಾಗುತ್ತಿದ್ದವು. ಇವುಗಳೊಂದಿಗೆ ವಿವಿಧ ಬಗೆಯ ಬಟ್ಟೆಗಳು, ಹಣ್ಣುಗಳು, ಗಿಡಮೂಲಿಕೆಗಳು, ಚಿನ್ನ, ಬೆಳ್ಳಿ, ಆಲಿವ್‌ಎಣ್ಣೆ, ಪನ್ನೀರು ಮತ್ತು ಗಾಜು ಅಥವಾ ಕನ್ನಡಿಗಳು ಕೂಡ ಅರೇಬಿಯದಿಂದ ಆಮದಾಗುತ್ತಿದ್ದವು.

ಸರಕುಗಳ ವಿನಿಮಯದಲ್ಲಿ ಭಾರತ ಕೂಡ ಹಲವಾರು ವಸ್ತುಗಳನ್ನು ವಿದೇಶಿಗಳಿಗೆ ರಫ್ತು ಮಾಡಲಾಗುತ್ತಿತ್ತು. ಈ ವಸ್ತುಗಳಿಗೆ ಮಧ್ಯ ಏಷ್ಯಾ ಮತ್ತು ಪರ್ಷಿಯಾದಲ್ಲಿ ಬೇಡಿಕೆ ಮಾತ್ರವಲ್ಲದೇ ಯೂರೋಪಿನ ದೇಶಗಳಲ್ಲಿ ಆಫ್ರಿಕಾ ಮತ್ತು ಏಷ್ಯಾ ಇತರ ದೇಶಗಳಲ್ಲಿಯೂ ಅಪಾರವಾದ ಬೇಡಿಕೆಗಳಿದ್ದವು. ಐಷರಾಮಿ ವಸ್ತುಗಳಾದ ಬಟ್ಟೆಗಳು, ಮುತ್ತು ರತ್ನಗಳು, ಆನೆದಂತ ಘೇಂಡಾಮೃಗದ ಕೊಂಬು ಮತ್ತು ನವಿಲುಗಳು ರಫ್ತಾಗುತ್ತಿದ್ದವು. ಸಾಮಾನ್ಯ ವಸ್ತುಗಳಾದ ಸಾಂಬಾರ ಪದಾರ್ಥಗಳು, ಕಷಾಯದ ಬೇರುಗಳು, ಹತ್ತಿ, ಇಂಡಿಗೋ, ಖಡ್ಗ, ಕಸ್ತೂರಿ, ವಿವಿಧ ಬಗೆಯ ಮರಗಳು, ಕಲ್ಲು ಸಕ್ಕರೆ, ಆಹಾರ ಪದಾರ್ಥಗಳು, ಹಣ್ಣುಗಳು, ಒಣಹಣ್ಣುಗಳು ಮತ್ತು ಬಣ್ಣದ ಉತ್ಪನ್ನಗಳು ಮುಖ್ಯವಾಗಿ ರಫ್ತಾಗುತ್ತಿದ್ದವು.

**ಆಮದು** :

ವಿಜಯನಗರ ಸಾಮ್ರಾಜ್ಯ ತನ್ನ ಆಡಳಿತಾವಧಿಯಲ್ಲಿ ಈ ಕೆಳಕಂಡ ಪ್ರಮುಖ ಸರಕುಗಳನ್ನು ಅರೇಬಿಯದಿಂದ ಆಮದು ಮಾಡಿಕೊಳ್ಳುತ್ತಿತ್ತು.

**ಕುದುರೆಗಳು** : ಕುದುರೆಗಳು ಅರೇಬಿಯದ ಪರ್ಷಿಯಾ ಮತ್ತು ಮಧ್ಯ ಏಷ್ಯಾದಿಂದ ಆಮದಾಗುತ್ತಿದ್ದ ಪ್ರಮುಖ ಸರಕುಗಳಾಗಿದ್ದವು. ಈ ವ್ಯಾಪಾರವು ಹೆಚ್ಚು ಲಾಭದಾಯಕವಾಗಿತ್ತು ಮತ್ತು ಭಾರತದ ಮಾರುಕಟ್ಟೆಗಳು ಸಹ ಕುದುರೆಗಳಿಗಾಗಿ ಕಾಯುತ್ತಿದ್ದವು. ಮಾರ್ಕೊ ಪೋಲೋನ ಪ್ರಕಾರ 'ಪರ್ಷಿಯಾದಿಂದ ಉತ್ತಮ ತಳಿಯ ಕುದುರೆಗಳು ಭಾರತಕ್ಕೆ ರಫ್ತಾಗುತ್ತಿದ್ದವು. ಮತ್ತು ಅವುಗಳು ಉತ್ತಮವಾದ ಬೆಲೆಗಳನ್ನು ಹೊಂದಿದ್ದವು.' ಸಾಮಾನ್ಯವಾಗಿ ಕುದುರೆಗಳನ್ನು ಹಡಗುಗಳ ಮೂಲಕ ಭಾರತಕ್ಕೆ ಸಾಗಿಸಲಾಗುತ್ತಿತ್ತು. ಮತ್ತು ಅವುಗಳನ್ನು ಭಾರತದ ಬಂದರುಗಳಲ್ಲಿ ಇಳಿಸಿ ಅಲ್ಲಿಂದ ಭೂ ಮಾರ್ಗದ ಮೂಲಕ ಬೇಡಿಕೆ ಸಲ್ಲಿಸಿದ ರಾಜನಿಗೆ ನೀಡಲಾಗುತ್ತಿತ್ತು.

ಇಬನ್ ಬತೂತ ಹೇಳುವ ಪ್ರಕಾರ 'ಉತ್ತಮ ತಳಿಯ ಕುದುರೆಗಳನ್ನು ಯಮನ್‌ನ ಮಾರ್ಗವಾಗಿ ಭಾರತಕ್ಕೆ ಹಡಗುಗಳ ಮೂಲಕ ಸಾಗಿಸಲಾಗುತ್ತಿತ್ತು. ಈ ಹಡಗುಗಳು ಗಾಳಿಯ

ನೆರವಿನಿಂದ ಒಂದು ತಿಂಗಳ ಕಾಲ ಸಮುದ್ರದ ಮಾರ್ಗವಾಗಿ ಭಾರತಕ್ಕೆ ಬರುತ್ತಿದ್ದವು. ಈ ಸಂದರ್ಭದಲ್ಲಿ ವ್ಯಾಪಾರಿಗಳು ಕುದುರೆಗಳು ಮತ್ತು ಸಮುದ್ರಯಾನದ ಬಗ್ಗೆ ಬಹಳಷ್ಟು ಕಾಳಜಿ ವಹಿಸುತ್ತಿದ್ದರು. ಮುಂದುವರೆದಂತೆ 'ಭಾರತಕ್ಕೆ ಕುದುರೆಗಳು ಗುಂಪಾಗಿ ಬರುತ್ತಿದ್ದವು. ಒಂದು ಗುಂಪಿನಲ್ಲಿ ಕನಿಷ್ಠ ಆರು ಸಾವಿರ ಕುದುರೆಗಳು ಇರುತ್ತಿದ್ದವು. ಪ್ರತಿಯೊಬ್ಬ ವ್ಯಾಪಾರಿಯು ನೂರು ಅಥವಾ ಇನ್ನೂರು ಕುದುರೆಗಳನ್ನು ತರುತ್ತಿದ್ದರು. ಪ್ರತಿ ಇನ್ನೂರು ಕುದುರೆಗಳಲ್ಲಿ ಹತ್ತು ಕುದುರೆಗಳನ್ನು, ಹುಲ್ಲನ್ನು ಸರಬರಾಜು ಮಾಡುತ್ತಿದ್ದವನಿಗೆ ಕೂಲಿಯಾಗಿ ನೀಡಲಾಗುತ್ತಿತ್ತು. ಇವನನ್ನು ಅವರು ಆಲ್ಕ್ವಾಂಸಿ ಎಂದು ಕರೆಯುತ್ತಿದ್ದರು. ಭಾರತಕ್ಕೆ ಬರುತ್ತಿದ್ದ ಕುದುರೆಗಳ ಮೇಲೆ ತೆರಿಗೆಯನ್ನು ಹಾಕಲಾಗುತ್ತಿತ್ತು.[45]

ಅರಬ್ಬರ ದಾಖಲೆಗಳ ಪ್ರಕಾರ ಹದಿನಾಲ್ಕನೇ ಶತಮಾನದಲ್ಲಿ ಎರಡು ರೀತಿಯ ಕುದುರೆಗಳಿದ್ದವು. ಅವುಗಳೆಂದರೆ ಅರೇಬಿಯದ ಕುದುರೆಗಳು ಮತ್ತು ಅರಬೇತರ ಕುದುರೆಗಳು, ಈ ಕುದುರೆಗಳಲ್ಲಿ ಹೆಚ್ಚಿನವು ವಿಶ್ವಾಸಕ್ಕೆ ಯೋಗ್ಯವಾಗಿರಲಿಲ್ಲ. ಕಾರಣ ಹೆಚ್ಚು ಕುದುರೆಗಳು ಟರ್ಕರ ನೆರೆಯ ದೇಶಗಳಿಂದ ಭಾರತಕ್ಕೆ ಆಮದಾಗುತ್ತಿದ್ದವು. ಉತ್ತಮ ತಳಿಯ ಕುದುರೆಗಳು ಅರೇಬಿಯಾದ ಬಹರಿನ್, ಯಮನ್ ಮತ್ತು ಇರಾಕ್‌ನಿಂದ ಆಮದಾಗುತ್ತಿದ್ದವು. ಅರೇಬಿಯದ ಕುದುರೆಗಳಿಗೆ ಅತಿ ಹೆಚ್ಚು ಬೇಡಿಕೆ ಇತ್ತು. ಆದರೆ ಅವುಗಳಲ್ಲಿ ಕೆಲವೊಂದು ಕುದುರೆಗಳು ಭಾರತದಲ್ಲಿ ಹೆಚ್ಚು ಕಾಲ ಉಳಿದಾಗ ಅವುಗಳಿಗೆ ಕಾಲುಗಳ ಶಕ್ತಿ ಕ್ಷೀಣಿಸುತ್ತಿತ್ತು.

**ರೇಷ್ಮೆ ವಸ್ತುಗಳು ಮತ್ತು ಬಟ್ಟೆಗಳು:** ರೇಷ್ಮೆ ವಸ್ತುಗಳು ಮತ್ತು ಇತರೆ ಬಟ್ಟೆಗಳಿಗೆ ಭಾರತದಲ್ಲಿ ಅಪಾರವಾದ ಬೇಡಿಕೆ ಇತ್ತು. ಹದಿನಾಲ್ಕನೇ ಶತಮಾನದ ಅರಬ್ ಖಗೋಳಶಾಸ್ತ್ರಜ್ಞರ ಪ್ರಕಾರ ರಷ್ಯಾ ಮತ್ತು ಅಲೆಗ್ಸಾಂಡ್ರಿಯದಿಂದ ಉತ್ತಮ ಬಟ್ಟೆಗಳನ್ನು ಅಮದು ಮಾಡಿಕೊಳ್ಳಲಾಗುತ್ತಿತ್ತು. ಉತ್ತಮವಾದ ರೇಷ್ಮೆ ವಸ್ತುಗಳು ಚೀನಾದಿಂದ ಭಾರತಕ್ಕೆ ರಫ್ತಾಗುತ್ತಿದ್ದವು. ಭಾರತೀಯ ವ್ಯಾಪಾರಿಗಳು ಅಮುಲ್‌ಗೆ ಭೇಟಿ ನೀಡಿ ಉತ್ತಮವಾದ ಬಟ್ಟೆಗಳನ್ನು ಕೊಂಡುಕೊಳ್ಳುತ್ತಿದ್ದರು. ಭಾರತದಲ್ಲಿ ಅರಬ್ಬರು ಚೀನಾದ ರೇಷ್ಮೆಯನ್ನು ಕೊಂಡುಕೊಂಡು ಮತ್ತೆ ಇಲ್ಲಿಯೇ ಅದನ್ನು ಮೊದಲು ಮಾರಾಟ ಮಾಡುತ್ತಿದ್ದರು. ರೇಷ್ಮೆಯನ್ನು ಕೊಟ್ಟು ಸಾಂಬಾರ ಪದಾರ್ಥಗಳನ್ನು ಅವರು ಪಡೆಯುತ್ತಿದ್ದರು. ಶ್ರೀಲಂಕಾ ಮತ್ತು ಮಲಬಾರ್ ತೀರಗಳಲ್ಲಿ ಈ ರೀತಿಯ ವ್ಯಾಪಾರ ನಡೆಯುತ್ತಿತ್ತು. ಕೆಲವು ಸಮಕಾಲೀನ ಚೀನಾದ ದಾಖಲೆಗಳ ಪ್ರಕಾರ ರೇಷ್ಮೆಯು ಚೀನಾವಲ್ಲದೇ ಬೇರೆ ದೇಶಗಳಲ್ಲಿಯೂ ತಯಾರಾಗಿ ವಿವಿಧ ದೇಶಗಳಿಗೆ ರಫ್ತಾಗುತ್ತಿತ್ತು. ಅದರಲ್ಲಿ ಮುಖ್ಯವಾಗಿ

ಉತ್ತಮ ದರ್ಜೆಯ ರೇಷ್ಮೆಯು ಬಾಗ್ದಾದ್‌ನಿಂದ ರಫ್ತಾದರೆ, ಬಣ್ಣದ ರೇಷ್ಮೆಯು ಮಲಬಾರಿನಿಂದ ಬೇರೆ ದೇಶಗಳಿಗೆ ರಫ್ತಾಗುತ್ತಿತ್ತು.[46]

**ಲೋಹಗಳು:** ಕಬ್ಬಿಣವನ್ನು ಹೊರತುಪಡಿಸಿ ಉಳಿದೆಲ್ಲಾ ಲೋಹಗಳು ಭಾರತಕ್ಕೆ ಆಮದಾಗುತ್ತಿದ್ದವು. ಅರೇಬಿಯಾದಿಂದ ಬರುತ್ತಿದ್ದ ಹಡಗುಗಳು ಮಲಬಾರ್ ಬಂದರುಗಳಲ್ಲಿ ಈ ಸರಕುಗಳನ್ನು ಇಳಿಸುತ್ತಿದ್ದವು. ಮುಖ್ಯವಾಗಿ ಚಿನ್ನ, ಬೆಳ್ಳಿ, ತಾಮ್ರ ಮತ್ತು ಗಂದಕಾಮ್ಲ ಲೋಹಗಳು ಆಮದಾಗುತ್ತಿದ್ದವು. ಹಲವಾರು ಭಾರತೀಯ ಗ್ರಂಥಗಳು ಭಾರತದ ವ್ಯಾಪಾರಿಗಳು ಚಿನ್ನ ಮತ್ತು ಬೆಳ್ಳಿಯ ವ್ಯಾಪಾರಕ್ಕಾಗಿ ಆಗ್ನೇಯ ಏಷ್ಯಾ ರಾಷ್ಟ್ರಗಳಿಗೆ ಭೇಟಿ ನೀಡಿದರೆಂದು ತಿಳಿಸುತ್ತವೆ. ಚಿನ್ನವು ಜನರ ಜೀವನದಲ್ಲಿ ಬಹಳಷ್ಟು ಉತ್ತಮವಾದ ಪಾತ್ರವನ್ನು ನಿರ್ವಹಿಸಿದೆ. ಚಿನ್ನ ಮತ್ತು ಬೆಳ್ಳಿಯ ಆ ಕಾಲಘಟ್ಟದಲ್ಲಿ ಹಣದ ಮಾಧ್ಯಮವಾಗಿದ್ದುದರಿಂದ ಇದು ಹೆಚ್ಚು ಪ್ರಾಮುಖ್ಯತೆ ಗಳಿಸಿತ್ತು. ಉತ್ತಮ ಚಿನ್ನ ಮತ್ತು ಬೆಳ್ಳಿಯನ್ನು ಭಾರತಕ್ಕೆ ತಂದ ಅರಬ್ಬರು ಅದನ್ನು ಸ್ಥಳೀಯ ಸರಕುಗಳೊಂದಿಗೆ ವಿನಿಮಯ ಮಾಡಿಕೊಳ್ಳುತ್ತಿದ್ದರು.

ಭಾರತ ಎಲ್ಲಾ ದಿಕ್ಕುಗಳಿಂದಲೂ ಚಿನ್ನವನ್ನು ತನ್ನ ಬಳಿ ಆಮದು ಮಾಢಿಕೊಳ್ಳುತ್ತಿತ್ತು. ತನ್ನಲ್ಲೇ ಚಿನ್ನವಿದ್ದರೂ ಕೂಡ ಆ ಚಿನ್ನದ ನಿಕ್ಷೇಪವನ್ನು ಮುಂದಿನ ಜನಾಂಗಕ್ಕೆ ತಲುಪಿಸಲು ಮತ್ತು ಚಿನ್ನದ ಮೇಲೆ ಹಿಡಿತ ಸಾಧಿಸಲು ತನ್ನಲ್ಲಿರುವ ಚಿನ್ನವನ್ನು ಸಂರಕ್ಷಿಸುವ ಕೆಲಸ ಮಾಡುತ್ತಿತ್ತು. ವ್ಯಾಪಾರಿಗಳು ಭಾರತಕ್ಕೆ ಚಿನ್ನವನ್ನು ತಂದು ಅದನ್ನು ಭಾರತೀಯ ಗಿಡಮೂಲಿಕೆಗಳಿಗೆ ವಿನಿಮಯ ಮಾಡಿಕೊಳ್ಳುತ್ತಿದ್ದರು.[47] ಪ್ರಾರಂಭದಲ್ಲೂ ಪರ್ಷಿಯಾವು ಭಾರತಕ್ಕೆ ಚಿನ್ನವನ್ನು ರಫ್ತು ಮಾಡುತ್ತಿತ್ತು. ಆದರೆ ಘಜನ್‌ಖಾನ್‌ನು ಈ ವ್ಯಾಪಾರವನ್ನು ತಡೆದನು. ಮೊಹಮ್ಮದ್ ಬಿನ್ ತುಘಲಕ್ ಕಡಿಮೆ ಮಾಡಿದನು. ಇದರ ಫಲವಾಗಿ ವ್ಯಾಪಾರಿಗಳು ತಮ್ಮ ಅಸ್ತಿತ್ವವನ್ನು ಕಳೆದುಕೊಂಡರು.

**ಅಮೂಲ್ಯವಾದ ರತ್ನಗಳು:** ಪರ್ಷಿಯನ್ ಕೊಲ್ಲಿ ಮತ್ತು ಶ್ರೀಲಂಕಾದಿಂದ ಅಮೂಲ್ಯವಾದ ಮುತ್ತು ರತ್ನಗಳು ಮತ್ತು ಹೊಳೆಯುವ ಹವಳಗಳನ್ನು ಭಾರತ ಆಮದು ಮಾಡಿಕೊಳ್ಳುತ್ತಿತ್ತು. ಅರಬ್ ಖಗೋಳಶಾಸ್ತ್ರಜ್ಞರ ಪ್ರಕಾರ ಶ್ರೀಲಂಕಾದ ಬೆಟ್ಟಗುಡ್ಡಗಳಲ್ಲಿ, ಸಮುದ್ರದ ತಳದಲ್ಲಿ ಅಮೂಲ್ಯವಾದ ಮುತ್ತು ದೊರೆಯುತ್ತಿದ್ದವು. ಅಬು ಜಹಾದ್ ಉಲ್ಲೇಖಿಸಿರುವ ಪ್ರಕಾರ "ಭಾರತವು ಈಜಿಪ್ಟ್‌ನಿಂದ ಪಚ್ಚೆ ಮತ್ತು ಹವಳಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು. ಇವುಗಳನ್ನು ಬಳಸಿಕೊಂಡು ಸ್ಥಳೀಯ ರಾಜರ ಪತ್ನಿಯರು, ಶ್ರೀಮಂತರು, ಪಾಳೇಗಾರರು ಕತ್ತಿಗೆ ಸರಗಳನ್ನು ಮಾಡಿಸಿಕೊಂಡು ಹಾಕಿಕೊಳ್ಳುತ್ತಿದ್ದರೆಂದು ಉಲ್ಲೇಖಿಸಿದ್ದಾನೆ.

**ಸಾಂಬಾರ ಮತ್ತು ಕಷಾಯ** : ಸಾಂಬರ ಮತ್ತು ಕಷಾಯ ಬಹಳ ಪ್ರಮುಖವಾದ ಮಧ್ಯಕಾಲೀನ ಸರಕುಗಳಾಗಿದ್ದವು. ಜಕಾಯಿ ಮತ್ತು ಲವಂಗ ಮೆಕ್ಕಾದಿಂದ ಬರುತ್ತಿದ್ದವು. ಜಾವದಿಂದ ಸಾಂಬಾರ, ಮಾಯದಿಂದ ಲೋಳಸರ, ಏಲಕ್ಕಿ, ಕರ್ಪೂರ, ಶುಂಠಿ ಮುಂತಾದ ಪದಾರ್ಥಗಳು ಬರುತ್ತಿದ್ದವು. ದಕ್ಷಿಣ ಭಾರತವು ಅತಿ ಹೆಚ್ಚು ಸಾಂಬಾರ ಪದಾರ್ಥಗಳನ್ನು ಉತ್ಪಾದನೆ ಮಾಡುತ್ತಿದ್ದರು, ಪೂರ್ವದಿಂದ ಕೆಲವೊಂದು ಪ್ರಮುಖ ಸಾಂಬಾರ ಸರಕುಗಳನ್ನು ಆಮದು ಮಾಡಿಕೊಳ್ಳುತ್ತಿತ್ತು. ಮಲಬಾರ್‌ನಲ್ಲಿ ಪ್ರಮುಖವಾದ ಸಾಂಬಾರ ಪದಾರ್ಥಗಳನ್ನು ಉತ್ಪಾದನೆ ಆದರೂ ಸಹ ಲವಂಗ ಮತ್ತು ವನಸ್ಪತಿಯನ್ನು ಅದು ಜಾವಾ ಮತ್ತು ಸುಮಾತ್ರ ದಿಂದ ಆಮದು ಮಾಡಿಕೊಳ್ಳುತ್ತಿತ್ತು.[48]

**ತುಪ್ಪಳ ಅಥವಾ ಪಶುರೋಮ** : ತುಪ್ಪಳ ಅಥವಾ ಪಶುರೋಮ ಎಂಬುದು ಮತ್ತೊಂದು ಪ್ರಮುಖವಾದ ಭೋಗದ ಮತ್ತು ಅತಿ ಬೆಲೆಬಾಳುವ ಸರಕು ಇದು. ಅತಿ ಹೆಚ್ಚಾಗಿ ಸೈಬೀರಿಯಾದಿಂದ ಮಧ್ಯ ಏಷ್ಯಾದ ಮಾರ್ಗವಾಗಿ ಭಾರತಕ್ಕೆ ಬರುತ್ತಿತ್ತು. ಸೈಬೀರಿಯಾದಲ್ಲಿ ಮುಂಗೂಸಿ ಜಾತಿಯ ಪ್ರಾಣಿಗಳ ಮತ್ತು ನರಿಯ ತುಪ್ಪಳಗಳಿಗೆ ಅಪಾರವಾದ ಬೇಡಿಕೆ ಇತ್ತು. ಇದು ಸೈಬೀರಿಯಾದ ಜನರಿಗೆ ಅಪಾರವಾದ ವರಮಾನ ತಂದುಕೊಡುತ್ತಿತ್ತು, ಕತ್ತಲಿನಿಂದ ಕೂಡಿದ ಸೈಬೀರಿಯಾವು ತನ್ನ ತುಪ್ಪಳ ವ್ಯಾಪಾರದಿಂದ ಕೆಲವೊಂದು ಅನುಕೂಲಗಳನ್ನು ಪಡೆದಿತ್ತು. ಇಬನ್ ಬತೂತನ ಪ್ರಕಾರ **"**ಮುಂಗುಸಿ ಜಾತಿಯ ಪ್ರಾಣಿಯ ತುಪ್ಪಳಕ್ಕೆ ಭಾರತದ ಮಾರುಕಟ್ಟೆಯಲ್ಲಿ ಸುಮಾರು ಒಂದು ಸಾವಿರ ದಿನಾರಗಳಿಗೆ ಬೆಲೆ ನಿಗದಿಪಡಿಸಲಾಗಿತ್ತು.**"**[49]

**ಗುಲಾಮರು** : ಗುಲಾಮರು ಭಾರತಕ್ಕೆ ತುರ್ಕರ ಆಗಮನಕ್ಕೆ ಮುಂಚಿನಿಂದಲೂ ಅವರು ಅರಬ್ ದೇಶಗಳಿಂದ ರಫ್ತಾಗುತ್ತಿದ್ದರು. ಪರ್ಷಿಯಾ ಮತ್ತು ಮಧ್ಯ ಏಷ್ಯಾದ ಮಾರುಕಟ್ಟೆಗಳಿಂದ ಅವರನ್ನು ಖರೀದಿಸಿ ಭಾರತಕ್ಕೆ ತಂದು ಇಲ್ಲಿ ಮಾರಾಟ ಮಾಡಲಾಗುತ್ತಿತ್ತು. ಅವರನ್ನು ಸ್ಥಳೀಯ ರಾಜರು ಮತ್ತು ಶ್ರೀಮಂತರು ಖರೀದಿಸಿ ಗುಲಾಮರನ್ನಾಗಿ ಮಾಡಿಕೊಳ್ಳುತ್ತಿದ್ದರು. ಪರ್ಷಿಯಾ ಮತ್ತು ಮಧ್ಯ ಏಷ್ಯಾದಿಂದ ನೇರವಾಗಿ ಕಿತಾಯ್ ಮತ್ತು ಟರ್ಕ್ ಹೆಣ್ಣು ಮತ್ತು ಗಂಡು ಗುಲಾಮರನ್ನು ಭಾರತಕ್ಕೆ ತರಲಾಗುತ್ತಿತ್ತು ಇವರನ್ನು ಭಾರತದಲ್ಲಿ ಮೊದಲು ರಾಜರ ಆಸ್ಥಾನಗಳಿಗೆ ಕರೆದ್ಯೊಯ್ದು ಅಲ್ಲಿ ಅವರಿಗೆ ಇಷ್ಟವಾದ ಗುಲಾಮರನ್ನು ಕೊಂಡುಕೊಂಡ ಮೇಲೆ ಉಳಿದವರನ್ನು ಸ್ಥಳೀಯ ನೊಬಲರು, ಪಾಳೆಗಾರರು, ಕೊಂಡುಕೊಳ್ಳುತ್ತಿದ್ದರು. ಈ ವ್ಯಾಪಾರವು ಅತಿ ಹೆಚ್ಚಾಗಿ ಬಹುಮನಿ ಸುಲ್ತಾನರ ಆಸ್ಥಾನದಲ್ಲಿ ದೆಹಲಿ ಸುಲ್ತಾನರ ಆಸ್ಥಾನದಲ್ಲಿ ಮತ್ತು ಮೊಘಲರ

ಆಸ್ಥಾನಗಳಲ್ಲಿ ನಡೆಯುತ್ತಿತ್ತು. ಹಿಂದೂ ರಾಜರು ಬಹಳ ಕಡಿಮೆ ಪ್ರಮಾಣದಲ್ಲಿ ಗುಲಾಮರನ್ನು ಕೊಂಡುಕೊಳ್ಳುತ್ತಿದ್ದರು.[50]

**ಹಣ್ಣುಗಳು ಮತ್ತು ಒಣ ಹಣ್ಣುಗಳು:** ಭಾರತವು ಸ್ಥಳೀಯವಾಗಿ ಹಲವಾರು ಹಣ್ಣುಗಳನ್ನು ಬೆಳೆಯುತ್ತಿದ್ದರ ಬಗ್ಗೆ ಸಮಕಾಲೀನ ದಾಖಲೆಗಳು ಮಾಹಿತಿ ನೀಡುತ್ತಿವೆ. ಕೆಲವೊಂದು ಉತ್ತಮ ಜಾತಿಯ ಹಣ್ಣುಗಳು ವಿದೇಶಗಳಲ್ಲಿ ಬೆಳೆಯುತ್ತಿದ್ದವು. ಅವುಗಳು ಬಹಳಷ್ಟು ರುಚಿಕರವಾಗಿದ್ದವು. ಪ್ರಾರಂಭದ ಅರಬ್ಬರ ದಾಖಲೆಗಳ ಪ್ರಕಾರ ಭಾರತವು ದ್ರಾಕ್ಷಿಯನ್ನು ಬೆಳೆಯುತ್ತಿರಲಿಲ್ಲ. ಒಣಹಣ್ಣುಗಳನ್ನು ಕೂಡಾ ಪರ್ಷಿಯನ್ನರಿಂದ ಭಾರತ ಅಮದು ಮಾಡಿಕೊಳ್ಳುತ್ತಿತ್ತು. ಇಬನ್‌ಬತೂತ ತಾನು ಭಾರತಕ್ಕೆ ಬಂದಾಗ ತನ್ನೊಂದಿಗೆ ಒಣದ್ರಾಕ್ಷಿ ಮತ್ತು ಬಾದಾಮಿಯನ್ನು ತೆಗೆದುಕೊಂಡು ಬಂದು ಅದನ್ನು ಮುಲ್ತಾನಿನ ರಾಜ್ಯಪಾಲರಿಗೆ ನೀಡಿದನು. ಇವನ ಪ್ರಕಾರ ಇದು ಭಾರತೀಯ ರಾಜರಿಗೆ ನೀಡಿದ ಬೆಲೆಕಟ್ಟಲಾಗದ ಕಾಣಿಕೆ ಮತ್ತು ಇಲ್ಲಿಯವರೆಗೆ ಭಾರತದಲ್ಲಿ ಇದನ್ನು ಬೆಳೆಯುತ್ತಿರಲಿಲ್ಲ. ಇದನ್ನು ವಿದೇಶದಿಂದ ಆಮದು ಮಾಡಿಕೊಳ್ಳುತ್ತಿದ್ದರೆಂದು ತಿಳಿಸಿದ್ದಾನೆ. ಇವನೇ ಹೇಳಿರುವ ಪ್ರಕಾರ ಕಲ್ಲಂಗಡಿ ಮತ್ತು ಕರ್ಬೂಜ ಕೂಡ ಭಾರತಕ್ಕೆ ವಿದೇಶಗಳಿಂದ ರಫ್ತಾಗುತ್ತಿತ್ತು.[51] ಭಾರತದಲ್ಲಿ ಈ ಹಣ್ಣುಗಳನ್ನು ಬೆಳೆಯುತ್ತಿರಲಿಲ್ಲ. ಇರಾನ್ ಮತ್ತು ತುರಾನ್ ನಿಂದ ಬಂದ ತೋಟಗಾರಿಕೆ ಅಧಿಕಾರಗಳು ಭಾರತದಲ್ಲಿ ಕಲ್ಲಂಗಡಿ, ಕರ್ಬೂಜ ಮತ್ತು ದ್ರಾಕ್ಷಿಗಿಡಗಳನ್ನು ಬೆಳೆಸುತ್ತಿದ್ದರು. ಬಾದಾಮಿ, ಸೇಬು, ಮರಸೇಬುಗಳು ಸಮರ್ ಖಂಡದಿಂದ ಭಾರತಕ್ಕೆ ಅಮದಾಗುತ್ತಿದ್ದವು ಮತ್ತು ಆ ಶತಮಾನದಲ್ಲೆಲ್ಲಾ ಅವು ಬಹಳಷ್ಟು ಬೇಡಿಕೆ ಪಡೆದಿದ್ದವು.

**ಯುದ್ಧದ ಶಶಾಸ್ತ್ರಗಳು :** ಶಶಾಸ್ತ್ರಗಳಿಲ್ಲದೇ ಸಾಮ್ರಾಜ್ಯದ ರಕ್ಷಣೆ ಅಸಾಧ್ಯವೆಂದು ತಿಳಿದಿದ್ದ ಭಾರತೀಯರು ಮಧ್ಯ ಏಷ್ಯಾ ಮತ್ತು ಪರ್ಷಿಯಾದಿಂದ ಶಶಾಸ್ತ್ರಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು. ಮಧ್ಯ ಏಷ್ಯಾ ಮತ್ತು ಪರ್ಷಿಯಾದಲ್ಲಿ ಹಲವಾರು ಶಸ್ತ್ರಾಸ್ತ್ರ ತಯಾರಿಕಾ ಕಾರ್ಖಾನೆಗಳಿಂದ ಅವು ಯುದ್ಧದ ಖಡ್ಗಗಳನ್ನು ತಯಾರು ಮಾಡುತ್ತಿದ್ದವು. ಮಂಗೋಲರು ಭಾರತದ ಮೇಲೆ ದಾಳಿ ಮಾಡುವುದರ ಜೊತೆಗೆ ಅವರು ಕೂಡ ಈ ಯುದ್ಧ ಶಸ್ತ್ರಾಸ್ತ್ರಗಳ ವ್ಯಾಪಾರವನ್ನು ಕೈಗೊಂಡರೆಂದು ಇತ್ತೀಚಿನ ವರದಿಗಳು ಉಲ್ಲೇಖಿಸಿವೆ. ಇಬನ್ ಬತೂತ ತಾನೇ ಹೇಳಿಕೊಂಡಂತೆ ಇವನು ಒಂದು ಒಂಟೆಯ ಮೇಲೆ ಏರುವಷ್ಟು ಬಾಣಗಳನು ಭಾರತಕ್ಕೆ ತಂದು ಅದನ್ನು ಮಹಮ್ಮದ್–ಬಿನ್–ತುಘಲಕ್‌ನಿಗೆ ಕಾಣಿಕೆಯಾಗಿ ನೀಡಿದ್ದನು.[52]

**ದಂತ ಮತ್ತು ಕಲಬೆರಕೆಯ ಸರಕುಗಳು:** ಭಾರತ ಮತ್ತು ಆಗ್ನೇಯ ಏಷ್ಯಾಗಳಲ್ಲಿ ಅವರದೇ ಆದ ದಂತಗಳು ಇದ್ದವು. ಆಫ್ರಿಕಾದ ದಂತಗಳಿಗೆ ಬಹಳಷ್ಟು ಬೇಡಿಕೆ ಇತ್ತು. ಅವುಗಳ ಬಣ್ಣ

ಮತ್ತು ತೂಕದ ಆದಾರದ ಮೇಲೆ ಹೆಚ್ಚು ಮೌಲ್ಯವನ್ನು ಹೊಂದಿದ್ದವು. ಅರಬ್ಬರು ಭಾರತೀಯ ಮಲಬಾರ್ ತೀರ ಪ್ರದೇಶಗಳಿಗೆ ಆಫ್ರಿಕಾದ ದಂತಗಳನ್ನು ತರುವ ವ್ಯಾಪಾರದ ಏಕಸ್ವಾಮ್ಯವನ್ನು ಪಡೆದಿದ್ದಾರೆ. ಓರ್ಮುಜ್‌ನಿಂದ ತಂದ ದಂತಗಳನ್ನು ಭಾರತ ಮತ್ತು ಚೀನಾಕ್ಕೆ ರಫ್ತು ಮಾಡಲಾಗುತ್ತಿತ್ತು. ಖರ್ಜೂರ ಮತ್ತು ಪನ್ನೀರು ಪರ್ಷಿಯಾದಿಂದ ರಫ್ತಾಗುತ್ತಿದ್ದವು. ಇಬನ್‌ಬತೂತ ನ ಪ್ರಕಾರ ಜಮಕಾನ ಮತ್ತು ಮೇಕೆಯ ಉಣ್ಣೆ ಭಾರತ ಮತ್ತು ಚೀನಾಕ್ಕೆ ಪರ್ಷಿಯಾ ಮತ್ತು ಮಧ್ಯ ಏಷ್ಯಾದಿಂದ ರಫ್ತಾಗುತ್ತಿದ್ದವು.[53]

**ರಫ್ತು:**

ಈ ಕೆಳಕಂಡ ಪ್ರಮುಖ ಸರಕುಗಳು ಭಾರತದ ಮಲಬಾರ್ ಬಂದರುಗಳಿಂದ ವಿದೇಶಗಳಿಗೆ ಮುಖ್ಯವಾಗಿ ಅರೇಬಿಯಾ ಮತ್ತು ಯೂರೋಪಿನ ದೇಶಗಳಿಗೆ ರಫ್ತಾಗುತ್ತಿದ್ದವು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಬಟ್ಟೆಗಳು, ಉತ್ಪಾದಿತ ವಸ್ತುಗಳು, ಲೋಹಗಳು, ಸಕ್ಕರೆ, ಮರ, ಬಣ್ಣ, ಸಾಂಬಾರ ಪದಾರ್ಥಗಳು, ಅಮೂಲ್ಯವಾದ ರತ್ನಗಳು ಮತ್ತು ಕಷಾಯ ಮುಂತಾದ ಸರಕುಗಳು ಬಹಳಷ್ಟು ಪ್ರಾಮುಖ್ಯತೆ ಗಳಿಸಿದ್ದವು.

ಅರಬ್ ವ್ಯಾಪಾರಸ್ಥರು ಹಲವು ಉತ್ಪನ್ನಗಳನ್ನು ಭಾರತದಿಂದ ತಮ್ಮ ದೇಶಕ್ಕೆ ಕೊಂಡೊಯ್ಯುತ್ತಿದ್ದರು. ಈ ಎಲ್ಲಾ ಭಾರತದ ವಸ್ತುಗಳಿಗೆ ಮಧ್ಯ ಏಷ್ಯಾ, ಪರ್ಷಿಯಾ ಮತ್ತು ಯೂರೋಪಿನ ದೇಶಗಳಲ್ಲಿ ಅತಿ ಹೆಚ್ಚು ಬೇಡಿಕೆ ಹೊಂದಿದ್ದವು. ಕಿತ್ತಾಳೆಯ ಗಿಡ, ಅಂಬರು ಬಿದಿರು, ಕರ್ಪೂರ, ಬಟ್ಟೆಗಳು, ಲವಂಗ, ತೆಂಗಿನಕಾಯಿ, ಹತ್ತಿಬಟ್ಟೆ, ಕಿತ್ತಳೆ ಹಣ್ಣು, ಮುತ್ತುಗಳು, ಅಕ್ಕಿ, ನಿಂಬೆಹಣ್ಣು, ಆಭರಣಗಳು ಹೀಗೆ ಹಲವಾರು ವಸ್ತುಗಳು ವಿದೇಶಗಳಿಗೆ ಭಾರತದಿಂದ ರಫ್ತಾಗುತ್ತಿದ್ದವು. ಅವುಗಳ ವಿವರಣೆ ಈ ಕೆಳಕಂಡಂತಿವೆ.

**ಕಬ್ಬಿಣ ಮತ್ತು ಕಬ್ಬಿಣದ ಖಡ್ಗಗಳು:** ಭಾರತ ಪ್ರಾರಂಭದಿಂದಲೂ ಉತ್ತಮವಾದ ಕಬ್ಬಿಣದ ಉದ್ದಿಮೆಗಳನ್ನು ಸ್ಥಾಪಿಸಿತು. ಮೊದಲ ಗ್ರೀಕರು ಮತ್ತು ಹೆಲನಿಸ್ಟಿಕ್ ರಾಜಮನೆತನದವರು ಉತ್ತಮವಾದ ಖಡ್ಗಗಳನ್ನು ತಯಾರಿಸಿದ್ದರು. ಇದನ್ನು ತಿಳಿದ ಭಾರತೀಯರು ಈ ನಿಟ್ಟಿನಲ್ಲಿ ತಮ್ಮ ಕಾರ್ಯ ಕೈಗೊಂಡರು. ಭಾರತದ ಈ ಖಡ್ಗಗಳ ಬಗ್ಗೆ ಅರಬ್ ಸಾಹಿತ್ಯದಲ್ಲಿ ಉಲ್ಲೇಖಗಳೂ ಕೂಡ ಇವೆ. ಆಲ್-ಇದ್ರಸಿಯ ಪ್ರಕಾರ "ಭಾರತೀಯರು ಉತ್ತಮ ಗುಣಮಟ್ಟದ ಖಡ್ಗಗಳನ್ನು ತಯಾರು ಮಾಡುತ್ತಿದ್ದರು. ಖಡ್ಗಗಳನ್ನು ತಯಾರಿಸಲು ಮೆದುವಾದ ಕಬ್ಬಿಣವನ್ನು ಬಳಸುತ್ತಿದ್ದರು. ಇದರಿಂದಾಗಿ ಅವುಗಳನ್ನು ಮೊಣಚು ಮಾಡುವಲ್ಲಿ ಸಹಾಯಕವಾಗಿತ್ತು."[54] ಎಂದು ಹೇಳಿದ್ದಾನೆ.

ಭಾರತದ ಉಕ್ಕು ಸಹ ಪರ್ಷಿಯಾಕ್ಕೆ ರಫ್ತಾಗುತ್ತಿತ್ತು. ಅರಬ್ ಖಗೋಳಶಾಸ್ತ್ರಜ್ಞರು ಭಾರತೀಯ ಶಿಲ್ಪಿಗಳ ಬಗ್ಗೆ ವಿಶೇಷವಾಗಿ ವರ್ಣಿಸಿದ್ದಾರೆ, ಅವರು ಖಡ್ಗಗಳನ್ನು ಬಿಲ್ಲುಗಳು, ಬಾಣಗಳು ಮತ್ತು ವಿವಿಧ ಬಗೆಯ ಯುದ್ಧದ ಶಶಾಸ್ತ್ರಗಳನ್ನು ಹೇಗೆ ತಯಾರಿಸುತ್ತಿದ್ದರು ಮತ್ತು ಅವರು ಹೇಗೆ ಆ ಕಾರ್ಯದಲ್ಲಿ ಪ್ರಾವೀಣ್ಯತೆ ಪಡೆದಿದ್ದರೆಂಬ ಬಗ್ಗೆ ವಿವರಸಿದ್ದಾರೆ.

**ಹತ್ತಿ ಮತ್ತು ಹತ್ತಿಯ ಬಟ್ಟೆಗಳು:** ಹತ್ತಿಯ ಬಟ್ಟೆಗಳ ತಯಾರಿಕೆಯು ಭಾರತದ ಹಳೆಯ ಪದ್ಧತಿಯಾಗಿತ್ತು. ಪ್ರಾಚೀನ ಕಾಲದಿಂದಲೂ ಈ ಉದ್ದಿಮೆ ಪ್ರಖ್ಯಾತಿಯನ್ನು ಗಳಿಸಿತ್ತು. ಇದೊಂದು ಪ್ರಮುಖವಾದ ವಾಣಿಜ್ಯೋಧ್ಯಮ ಕೂಡ ಆಗಿತ್ತು. ವಿದೇಶಿ ಮಾರುಕಟ್ಟೆಗಳಲ್ಲಿ ಮುಸ್ಲಿಮರು ಭಾರತದ ಈ ಹತ್ತಿ ಉತ್ಪನ್ನಗಳಿಗೆ ಅಪಾರವಾದ ಬೇಡಿಕೆಯನ್ನು ಸ್ಥಾಪಿಸಿದ್ದರು. ಕೇವಲ ಸಿದ್ದ ಹತ್ತಿ ಉಡುಪುಗಳಲ್ಲದೇ ಕಚ್ಚಾ ಹತ್ತಿಯನ್ನು ಕೂಡ ಭಾರತದ ಬಂದರುಗಳಿಂದ ವಿದೇಶಿಗಳಿಗೆ ರಫ್ತು ಮಾಡಲಾಗುತ್ತಿತ್ತು. ಆಧುನಿಕ ಇತಿಹಾಸಗಾರರ ಪ್ರಕಾರ ಹದಿಮೂರು ಮತ್ತು ಹದಿನಾಲ್ಕನೇ ಶತಮಾನಗಳಲ್ಲಿ ಹತ್ತಿ ಬಟ್ಟೆ ಹೆಚ್ಚು ಪ್ರಾಮುಖ್ಯತೆ ಪಡೆಯಲು ಅವರು ಬಳಸುತ್ತಿದ್ದ ನೂಲುವ ರಾಟೆ ಯಂತ್ರಗಳು ಕಾರಣವಾದವು. ಕಚ್ಚಾ ಹತ್ತಿಯನ್ನು ಸಣ್ಣದಾದ ಕಡ್ಡಿಗಳಿಂದ ಚೆನ್ನಾಗಿ ಬಡಿದು ಹದಮಾಡಿ ನಂತರ ನೂಲುವ ರಾಟೆಗೆ ಹಾಕಿ ಬಟ್ಟೆಗಳನ್ನು ತಯಾರಿಸಲಾಗುತ್ತಿತ್ತು.

ಅರಬ್ ಖಗೋಳಶಾಸ್ತ್ರಜ್ಞರ ಪ್ರಕಾರ ಭಾರತದಲ್ಲಿ ವಿವಿಧ ಬಗೆಯ ಬಟ್ಟೆಗಳಿದ್ದವೆಂದು ಹೇಳಿದ್ದಾರೆ. ಕಮೀನಾ–ಬಡವರು ಧರಿಸುತ್ತಿದ್ದ ಬಟ್ಟೆ, ಹೌದಾ–ಟರ್ಕರು ಮತ್ತು ಸೈನಿಕರು ಧರಿಸುತ್ತಿದ್ದ ಬಟ್ಟೆ, ಬಾರಿಕ್–ಇದು ಬಹಳಷ್ಟು ಬೆಲೆಬಾಳುವ ಬಟ್ಟೆಯಾಗಿತ್ತು, ಇದನ್ನು ಶ್ರೀಮಂತರು ಧರಿಸುತ್ತಿದ್ದರು. ಇಬನ್ ಬತೂತ ಹೇಳುವ ಪ್ರಕಾರ, ಜಪಾರಿ ಎಂಬ ವ್ಯಾಪಾರಿ ವರ್ಗವು ಭಾರತೀಯ ಹತ್ತಿಯಿಂದ ತಯಾರಾಗಿದ್ದ ಬಟ್ಟೆಗಳನ್ನು ಹಾಕಿಕೊಳ್ಳುತ್ತಿದ್ದರು. ಇವರು ಮುಖ್ಯವಾಗಿ ಮುಸ್ಲಿಂ ವ್ಯಾಪಾರಸ್ಥರಾಗಿದ್ದರು. ಪರ್ಷಿಯಾದಲ್ಲಿ ಹತ್ತಿ ದೊರೆಯುತ್ತಿತ್ತು. ಆದರೆ ಅದು ಭಾರತೀಯ ಹತ್ತಿಗಿಂತ ಕೆಳಮಟ್ಟದಲ್ಲಿತ್ತು.[55]

**ಇಂಡಿಗೋ ಅಥವಾ ನೀಲಿ** : ಭಾರತವು ಇಂಡಿಗೋ ಅಥವಾ ನೀಲಿ ಉತ್ಪಾದನೆಯಲ್ಲಿ ಅಗ್ರಸ್ಥಾನದಲ್ಲಿತ್ತು. ಭಾರತದ ನೀಲಿಗೆ ವಿದೇಶಗಳಲ್ಲಿ ಅಪಾರವಾದ ಬೇಡಿಕೆ ಇತ್ತು. ಕಾಬೂಲ್ ದೇಶವು ಭಾರತದೊಂದಿಗೆ ನೀಲಿ ವ್ಯಾಪಾರದಲ್ಲಿ ಲಕ್ಷ ದೀನಾರಗಳಷ್ಟು ವ್ಯಾಪಾರ ವಹಿವಾಟು ಹೊಂದಿತ್ತು. ಭಾರತದ ನೀಲಿ ಯಹೂದಿಗಳಿಂದ ಸಿಸಿಲಿಗೆ ಪರಿಚಯಿಸಲ್ಪಟ್ಟಿತು. ಇದು ಬಾಗ್ದಾದ್‌ನ ಮಾರ್ಗವಾಗಿ ಅಲ್ಲಿಗೆ ತಲುಪಿತ್ತು. ಈ ಕಾಲದಲ್ಲೇ ಪರ್ಷಿಯಾದಲ್ಲಿ ಇಂಡಿಗೋ ಬೆಳೆ ಬೆಳೆಯುವ ಕಾರ್ಯ ನಿಂತು ಹೋಯಿತು. ನಿಕೆಟಿನನ ಪ್ರಕಾರ ಇಂಡಿಗೋ ಬೆಳೆಯ ಅತಿ ಹೆಚ್ಚಾಗಿ

ಗುಜರಾತ್ ಮತ್ತು ಕ್ಯಾಂಬೆಗಳಲ್ಲಿ ಬೆಳೆಯುತ್ತಿದ್ದರು. ಲಾಹೋರ್ ಕೂಡ ನೀಲಿಯ ವ್ಯಾಪಾರ ಮತ್ತು ವಾಣಿಜ್ಯದ ಪ್ರಮುಖ ಕೇಂದ್ರವಾಗಿತ್ತು.[56] ಇಲ್ಲಿಂದ ನೇರವಾಗಿ ಕಾಂದಾಹಾರ ಮೂಲಕ ನೀಲಿಯು ಯೂರೋಪಿಯನ ದೇಶಗಳಿಗೆ ರಫ್ತಾಗುತ್ತಿತ್ತು. ವಾಸಪ್ ವಿವರಿಸಿರುವ ಪ್ರಕಾರ ಹಣ, ಅಮೂಲವ್ಯಾದ ರತ್ನಗಳು, ಗಿಡಗಳಿಗಿಂತ ಅತಿ ಹೆಚ್ಚಾಗಿ ನೀಲಿಯು ಪ್ರಾಮಖ್ಯತೆಗಳಿಸಿತ್ತು.

**ಆಹಾರ ಪದಾರ್ಥಗಳು** : ಭಾರತ ಮೂಲಭೂತವಾಗಿ ಕೃಷಿ ಪ್ರದಾನ ದೇಶ. ವಿವಿಧ ಬಗೆಯ ಆಹಾರ ಪದಾರ್ಥಗಳನ್ನು ಭಾರತದಲ್ಲಿ ಬೆಳೆಯಲಾಗುತ್ತಿತ್ತು. ಗಂಗಾನದಿ ಬಹುಪಾಲು ಪ್ರದೇಶ, ಕಾವೇರಿ, ತುಂಗಭದ್ರ ತೀರ ಪ್ರದೇಶಗಳಲ್ಲಿ ಬೆಳೆಗಳನ್ನು ಬೆಳೆಯುತ್ತಿದ್ದು. ಇವುಗಳನ್ನು ಉಗ್ರಾಣಗಳಲ್ಲಿ ಶೇಖರಿಸಿಟ್ಟುಕೊಂಡಿದ್ದರು. ಈ ಉಗ್ರಾಣಗಳು ಸ್ಥಳೀಯ ರಾಜರ ಮತ್ತು ವ್ಯಾಪಾರಿಗಳ ನಿಯಂತ್ರಣದಲ್ಲಿದ್ದವು. ಇವುಗಳನ್ನು ಮುಂದೆ ಉಂಟಾಗಬಹುದಾದ ನೈಸರ್ಗಿಕ ವಿಕೋಪಗಳ ಸಂದರ್ಭದಲ್ಲಿ ಬಳಸಲು ಇಟ್ಟುಕೊಂಡಿದ್ದರು. ಅತಿ ಹೆಚ್ಚಾಗಿ ಬೆಳೆದ ಪದಾರ್ಥಗಳನ್ನು ಪರ್ಷಿಯನ್ ಕೊಲ್ಲಿ ರಾಷ್ಟ್ರಗಳಿಗೆ ಅರೇಬಿಯಕ್ಕೆ, ಶ್ರೀಲಂಕಾಕ್ಕೆ ರಫ್ತು ಮಾಡಲಾಗುತ್ತಿತ್ತು. ಅಲ್–ಉಮಾರಿ ಹೇಳುವ ಪ್ರಕಾರ ಅಕ್ಕಿ, ಗೋದಿ, ಬಾರ್ಲಿ, ಅವರೆಕಾಳು ಮುಂತಾದ ಬೆಳೆಗಳು ರಫ್ತಾಗುತ್ತಿದ್ದವು. ಸುಮಾರು ಇಪ್ಪತ್ತೊಂದು ಬಗೆಯ ಅಕ್ಕಿ ಬೆಳೆಗಳು ಆಸ್ತಿತ್ವದಲ್ಲಿದ್ದವು. ತಾರಿಖ್–ಇ–ರಸೀದಿಯ ಪ್ರಕಾರ ಚಂಪ ಎಂಬ ವರ್ತಕರು ಭಾರತಕ್ಕೆ ಚಳಿಗಾಲದಲ್ಲಿ ಬಂದು ಅವರಿಗೆ ಅವಶ್ಯಕವಾದಂತಹ ಪದಾರ್ಥಗಳನ್ನು ಕೊಂಡುಕೊಂಡು ಅರೇಬಿಯಾಗೆ ವಾಪಸ್ಸು ಹೋಗುತ್ತಿದ್ದರು.

**ಹಣ್ಣುಗಳು:** ಇಡೀ ಭಾರತದಾದ್ಯಂತ ವಿವಿಧ ಬಗೆಯ ಹಣ್ಣುಗಳನ್ನು ಬೆಳೆಯಲಾಗುತ್ತಿತ್ತು. ಅಲ್–ಮಸೂದಿಯ ಪ್ರಕಾರ, ಕಿತ್ತಳೆಹಣ್ಣು ಮತ್ತು ನಿಂಬೆಹಣ್ಣು ಅತಿಹೆಚ್ಚು ಪ್ರಮಾಣದಲ್ಲಿ ಅರೇಬಿಯಾಕ್ಕೆ ರಫ್ತಾಗುತ್ತಿದ್ದವು. ಓಮನ್, ಇರಾಕ್ ಸಿರಿಯಾ ಮತ್ತು ಈಜಿಫ್ಟ್‌ಗಳ ಪ್ರತಿ ಮನೆಯಲ್ಲಿ ಇವುಗಳನ್ನು ಬೆಳೆಯಲಾಗುತ್ತಿತ್ತು. ಆದರೂ ಕೂಡ ರುಚಿಯಲ್ಲಿ ಭಾರತೀಯ ಹಣ್ಣುಗಳು ತುಂಬಾ ಚೆನ್ನಾಗಿದ್ದವು. ಅರಬ್ ಖಗೋಳಶಾಸ್ತ್ರಜ್ಞರು ಮತ್ತು ಪರ್ಷಿಯಾದ ದಾಖಲೆಗಳು ಹೇಳುವ ಪ್ರಕಾರ ವಿವಿಧ ಬಗೆಯ ಮಾವಿನ ಹಣ್ಣುಗಳನ್ನು ಭಾರತದಲ್ಲಿ ಬೆಳೆಯಲಾಗುತ್ತಿತ್ತು. ಆದರೆ ಬೇರೆ ದೇಶಗಳಿಗೆ ಇವು ರಫ್ತಾಗುತ್ತಿದ್ದುದರ ಬಗ್ಗೆ ಎಲ್ಲೂ ಕೂಡ ಅವರು ಉಲ್ಲೇಖಿಸಿಲ್ಲ. ಇವರ ಪ್ರಕಾರ ಭಾರತದಲ್ಲಿ ಕರ್ಬೂಜ ಹಣ್ಣನ್ನು ಹೊರತುಪಡಿಸಿ ಉಳಿದೆಲ್ಲ ಹಣ್ಣುಗಳಿಗೆ ಪ್ರಾಮುಖ್ಯತೆ ಕೊಡಲಾಗುತ್ತಿತ್ತು ಎಂದು ಹೇಳಿದ್ದಾನೆ.[57]

**ಸಕ್ಕರೆ:** ಕಬ್ಬನ್ನು ಭಾರತದ ಹಲವಾರು ಭಾಗಗಳಲ್ಲಿ ಬೆಳೆಯಲಾಗುತ್ತಿತ್ತು. ಈ ಕಬ್ಬನ್ನು ಬಳಸಿ ಸಕ್ಕರೆ ಮತ್ತು ಕಲ್ಲು ಸಕ್ಕರೆಯನ್ನು ಮಾಡುತ್ತಿದ್ದರು. ಮತ್ತು ಅವುಗಳನ್ನು ಅರೇಬಿಯಾಕ್ಕೆ ರಫ್ತು ಮಾಡುತ್ತಿದ್ದರು. ಹಲವಾರು ಚೀನಾದ ಸಮಕಾಲೀನ ದಾಖಲೆಗಳು ಹೇಳುವ ಪ್ರಕಾರ ಭಾರತದಲ್ಲಿ ಅತಿ ಹೆಚ್ಚಾಗಿ ಕಬ್ಬು ಬೆಳೆಯುತ್ತಿದ್ದರು. ಆದ್ದರಿಂದ ಕೇವಲ ಸಕ್ಕರೆ ಮಾತ್ರವಲ್ಲದೆ ಅದರ ರಸವನ್ನು ಶರಾಯಿ ತಯಾರಿಸಲು ಬಳಸುತ್ತಿದ್ದರು. ಮಸಲಿಕ್–ಉಲ್–ಅಬ್ಬರ್ ಪಿ.ಮುಮಲಿಕ್–ಉಲ್–ಅಮ್ಸರ್ ಹೇಳುವ ಪ್ರಕಾರ "ದೇಶದಾದ್ಯಂತ ಕಬ್ಬು ಬೆಳೆಯಲಾಗುತ್ತಿತ್ತು. ಬಹಳಷ್ಟು ವಿಧಗಳಿದ್ದವು ಅವುಗಳಲ್ಲಿ ಕಪ್ಪುಬಣ್ಣದ ಮತ್ತು ಗಟ್ಟಿಯಾದ ಹೊದಿಕೆ ಇರುವ ಕಬ್ಬು ಹೆಚ್ಚು ರುಚಿಯಾಗಿತ್ತು."

ಸಕ್ಕರೆ ಮತ್ತು ಕಲ್ಲು ಸಕ್ಕರೆಯನ್ನು ಭಾರತದಿಂದ ಹಲವಾರು ದೇಶಗಳಿಗೆ ರಫ್ತು ಮಾಡಲಾಗುತ್ತಿತ್ತು. ಮುಖ್ಯವಾಗಿ ಮುಲ್ತಾನ ಬಂದರು ಅತಿ ಹೆಚ್ಚು ವ್ಯಾಪಾರ ಕೈಗೊಂಡಿತ್ತು. ಅಬ್ದುಲ್ ಫಜಲ್ ನ ಪ್ರಕಾರ ವಿವಿಧ ಬಗೆಯ ಕಬ್ಬುಗಳನ್ನು ಬೆಳೆದು ಅವುಗಳಿಂದ ಕೇವಲ ಸಕ್ಕರೆ ಮತ್ತು ಕಲ್ಲು ಸಕ್ಕರೆಯನ್ನು ಮಾತ್ರ ತಯಾರಿಸದೇ ಸಾಮಾನ್ಯ ಸಕ್ಕರೆ, ಬಿಳಿ ಕಲ್ಲುಸಕ್ಕರೆ, ಶುದ್ಧವಾದ ಸಕ್ಕರೆ ಅಥವಾ ಸಂಸ್ಕರಿಸಿದ ಸಕ್ಕರೆ, ಮದ್ಯಗಳನ್ನು ತಯಾರು ಮಾಡಿ ಅವುಗಳನ್ನು ಬೇರೆ ದೇಶಗಳಿಗೆ ರಫ್ತು ಮಾಡಲಾಗುತ್ತಿತ್ತು.

**ಗಿಡಮೂಲಿಕೆ ಮತ್ತು ಕಷಾಯ :** ಭಾರತದಾದ್ಯಂತ ಉತ್ತಮವಾದ ಗಿಡಮೂಲಿಕೆಗಳು ಕಷಾಯದ ಬೇರುಗಳು ಮತ್ತು ಔಷಧಿಗಳು ದೊರೆಯುತ್ತಿದ್ದವು. ಅರಬ್ಬರು ತಮ್ಮ ದಾಖಲೆಗಳಲ್ಲಿ ಈ ಎಲ್ಲಾ ವಸ್ತುಗಳ ಬಗೆಗೆ ಉಲ್ಲೇಖ ಮಾಡಿದ್ದಾರೆ ಮತ್ತು ಅವುಗಳ ಮೇಲಿನ ಅತಿ ಪ್ರೀತಿಯನ್ನು ವ್ಯಕ್ತಪಡಿಸಿದ್ದಾರೆ. ಅಲ್–ಉಮರಿ ಹೇಳಿರುವ ಪ್ರಕಾರ 'ಅರಬ್ಬರು ಭಾರತಕ್ಕೆ ಚಿನ್ನವನ್ನು ತಂದು ಅದನ್ನು ಗಿಡ ಮೂಲಿಕೆಗಳೊಂದಿಗೆ ಮತ್ತು ಕಷಾಯದೊಂದಿಗೆ ವಿನಿಮಯ ಮಾಡಿ ಕೊಳ್ಳುತ್ತಿದ್ದರೆಂದು ತಿಳಿಸಿದ್ದಾನೆ. ರಷೀದುದ್ದೀನ್ ಫಜಿಲುಲ್ಲಾ ಖ್ಯಾತ ಫಜಲ್‌ಖಾನ್‌ನ ವಜೀರ್ ಅಥವಾ ಮಂತ್ರಿ ತನ್ನ ಪತ್ರದಲ್ಲಿ ಉಲ್ಲೇಖಿಸಿರುವ ಅವನು ಭಾರತಕ್ಕೆ ಭೇಟಿ ನೀಡಿದ್ದು, ಭಾರತದಲ್ಲಿರುವ ಗಿಡಮೂಲಿಕೆಗಳು ಮತ್ತು ಕಷಾಯದ ಬೇರುಗಳ ಬಗ್ಗೆ ತಿಳಿಯಲು ಮತ್ತು ಅವುಗಳನ್ನು ತೆಗೆದುಕೊಂಡು ಹೋಗಿ ತನ್ನ ದೇಶಗಳಲ್ಲಿ ಬೆಳೆಸಲು ಮತ್ತು ಅವುಗಳ ಪ್ರಯೋಜನವನ್ನು ಪಡೆಯುವುದಾಗಿತ್ತು.[58]

**ಪ್ರಾಣಿಗಳು ಮತ್ತು ಪ್ರಾಣಿಗಳ ಉತ್ಪನ್ನಗಳು :** ಕೆಲವೊಂದು ಭಾರತೀಯ ಪ್ರಾಣಿಗಳು ಅರಬ್ಬರಲ್ಲಿ ಅಥವಾ ವಿದೇಶಿ ವ್ಯಾಪಾರಸ್ಥರಲ್ಲಿ ಕುತೂಹಲವನ್ನು ಉಂಟುಮಾಡುತ್ತಿದ್ದವು.

ಮುಖ್ಯವಾಗಿ ಆನೆ ಮತ್ತು ಘೇಂಡಾಮೃಗ. ಅರಬ್ ವ್ಯಾಪಾರಿಗಳು ಘೇಂಡಾಮೃಗದ ಕೊಂಬುಗಳನ್ನು ಭಾರತದಿಂದ ಚೀನಾಗೆ ತೆಗೆದುಕೊಂಡು ಹೋಗಿ ಅವುಗಳ ಚಿತ್ರಗಳನ್ನು ಕೆತ್ತಿಸುತ್ತಿದ್ದರು. ಅರಬ್ ದಾಖಲೆಗಳ ಪ್ರಕಾರ, ಭಾರತದಲ್ಲಿ ಆನೆಗಳು ಅತಿ ಹೆಚ್ಚಾಗಿ ದೊರೆಯುತ್ತಿದ್ದವು. ಈ ಆನೆಗಳು ಭಾರತದ ರಾಜರ ಸೈನ್ಯಕ್ಕೆ ಬೆನ್ನು ಮೂಳೆಯಂತಿದ್ದವು. ಭಾರತೀಯ ರಾಜರಲ್ಲಿ ಆನೆಗಳು ಹೆಚ್ಚು ಜನಪ್ರಿಯವಾಗಿದ್ದವು. ಇವರು ತಮ್ಮ ಅತಿಥಿಗಳಿಗೆ ಆನೆಗಳನ್ನು ಕಾಣಿಕೆಗಳಾಗಿ ನೀಡುತ್ತಿದ್ದರು. ಸಾಮಾನ್ಯ ಜನರು ಆನೆಗಳನ್ನು ಇಟ್ಟುಕೊಳ್ಳುತ್ತಿರಲಿಲ್ಲ. ಆನೆಗಳ ದಂತಗಳಿಗೆ ಮತ್ತು ಆನೆಗಳಿಗೆ ಅರೇಬಿಯದಲ್ಲಿ ಹೆಚ್ಚು ಬೇಡಿಕೆ ಇತ್ತು. ಮುಲ್ತಾನ್ ಮಲಬಾರ್ ಬಂದರುಗಳಲ್ಲಿ ಆನೆಗಳ ದಂತಗಳನ್ನು ಕೊಂಡುಕೊಳ್ಳಲು ಹಲವಾರು ವಿದೇಶಿ ವ್ಯಾಪಾರಿಗಳು ಪಾಲ್ಗೊಳ್ಳುತ್ತಿದ್ದರು. ಉಕ್ಕತ್ತಿ ಖಾನ್ ಎಂಬ ಪರ್ಷಿಯಾದ ದೊರೆ ಇವನು ಭಾರತದಿಂದ ಆನೆಯ ದಂತಗಳನ್ನು ತಂದ ವ್ಯಾಪಾರಿಗಳನ್ನು ಬಹಳ ಆತ್ಮೀಯವಾಗಿ ತನ್ನ ಆಸ್ಥಾನದಲ್ಲಿ ಗೌರವಿಸುತ್ತಿದ್ದನು. ತಾರೀಬ್–ಇ–ಗಜಾನ್‌ಖಾನ್ ಹೇಳುವ ಪ್ರಕಾರ "ಭಾರತೀಯ ವ್ಯಾಪಾರಿಗಳು ಮಂಗೋಲರ ರಾಜ್ಯಕ್ಕೆ ಆಗಮಿಸಿ ಅವರಿಂದ ಆನೆಗಳನ್ನು ಪಡೆಯುತ್ತಿದ್ದರೆಂದು ಹೇಳಿದ್ದಾನೆ."[59]

**ಪಕ್ಷಿಗಳು:** ಪಕ್ಷಿಗಳಲ್ಲಿಯೇ ನವಿಲು ಅತಿ ಹೆಚ್ಚು ಪ್ರಾಮುಖ್ಯತೆ ಪಡೆದಿದ್ದ ಪಕ್ಷಿಯಾಗಿತ್ತು. ಅರಬ್ ಖಗೋಳಶಾಸ್ತ್ರಜ್ಞರ ಪ್ರಕಾರ ನವಿಲುಗಳನ್ನು ಅರೇಬಿಯಾ ದೇಶಕ್ಕೆ ಭಾರತ ರಫ್ತು ಮಾಡುತ್ತಿತ್ತು. ಆ ನವಿಲುಗಳ ತಳಿಯನ್ನು ಅಲ್ಲಿ ಅಭಿವೃದ್ಧಿ ಪಡಿಸಲಾಯಿತು. ಇರಾಕ್ ಮತ್ತು ಉಳಿದ ಅರಬ್ ದೇಶಗಳಲ್ಲಿ ನವಿಲುಗಳ ಸಂತಾನೋತ್ಪತ್ತಿ ಕಾರ್ಯವು ಮಾಡಲಾಯಿತೆಂದು ಹೇಳಲಾಗಿದೆ.

**ಮರಗಳು:** ಮರಗಳು ಮತ್ತೊಂದು ಪ್ರಮುಖ ಸರಕು. ಭಾರತದ ಬಂದರುಗಳಿಂದ ವಿದೇಶಿಗಳಿಗೆ ರಫ್ತಾಗುತ್ತಿತ್ತು. ಇವುಗಳನ್ನು ಹಡಗು ಕಟ್ಟಲು, ಮನೆಕಟ್ಟಲು ಬಳಸುತ್ತಿತ್ತು., ಯಮನ್‌ನಲ್ಲಿ ಮನೆಗಳನ್ನು ಕಟ್ಟಲು ಓರ್ಮುಜ್‌ನಲ್ಲಿ ಹಡುಗುಕಟ್ಟಲು ಮರಗಳನ್ನು ಬಳಸಲಾಗುತ್ತಿತ್ತು. ತೇಗದ ಮರ ಅತಿಹೆಚ್ಚಾಗಿ ಭಾರತದಿಂದ ರಫ್ತಾಗುತ್ತಿತ್ತು, ಸಿಂದ್ ಪ್ರಾಂತ್ಯವು ಮಲಬಾರ್ ಬಂದರುಗಳಿಂದ ತೇಗದ ಮರವನ್ನು ಆಮದು ಮಾಡಿಕೊಂಡು ಮತ್ತೆ ಅಲ್ಲಿಂದ ಅರಬ್ ದೇಶಗಳಿಗೆ ಅದನ್ನು ರಫ್ತು ಮಾಡುತ್ತಿತ್ತು.

**ಹವಳ ಮತ್ತು ಮುತ್ತುಗಳು:** ಹವಳಗಳು ಮತ್ತು ಮುತ್ತುಗಳ ಭಾರತದಿಂದ ವಿದೇಶಿಗಳಿಗೆ ರಫ್ತಾಗುತ್ತಿದ್ದವು. ಭಾರತದಲ್ಲಿ ಮುಖ್ಯವಾಗಿ ತಮಿಳುನಾಡು, ಆಂದ್ರಪ್ರದೇಶದ ಭಾಗಗಳಲ್ಲಿ ವಜ್ರದ

ಗಣಿಗಳು ದೊರಕಿದವು. ಈ ವಜ್ರದ ಹರಳುಗಳನ್ನು ಭಾರತದ ಬಂದರುಗಳಿಂದ ಅರೇಬಿಯ, ಶ್ರೀಲಂಕಾ, ದಕ್ಷಿಣ ಆಫ್ರಿಕಾ ದೇಶಗಳಿಗೆ ರಫ್ತು ಮಾಡಲಾಗುತ್ತಿತ್ತು. ಇದರೊಂದಿಗೆ ಸಮುದ್ರದಲ್ಲಿ ದೊರಕುತ್ತಿದ್ದ ಹವಳಗಳು ಮುತ್ತುಗಳಿಗೂ ವಿದೇಶದಲ್ಲಿ ಬಹಳಷ್ಟು ಬೇಡಿಕೆ ಇತ್ತು.[87]

**2.8 ಅಬ್ಬರ ವ್ಯಾಪಾರದ ಪರಿಣಾಮಗಳು:**

ಭಾರತ ಮತ್ತು ಅರಬ್ ದೇಶಗಳೊಂದಿಗೆ ನಡೆದ ವ್ಯಾಪಾರ, ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಗಳಿಂದ ಭಾರತದಲ್ಲಿ ಹಲವಾರು ಪರಿಣಾಮಗಳುಂಟಾದವು. ಮದ್ಯಕಾಲೀನ ಭಾರತದಲ್ಲಿ ವ್ಯಾಪಾರಿ ವರ್ಗಗಳು ಮಾತ್ರವೇ ಸಂವಹನ ಮಾದ್ಯಮಗಳಾಗಿದ್ದವು. ಮಧ್ಯಕಾಲೀನ ಭಾರತದಲ್ಲಿ ಬದುಕಿದ್ದ ಜನರು ಅರಬ್ ವ್ಯಾಪಾರಿಗಳಿಂದ ಬಹಳಷ್ಟು ಪ್ರಭಾವಕ್ಕೊಳಗಾಗಿದ್ದರು. ಏಳನೇ ಶತಮಾನಕ್ಕೆ ಮುನ್ನ ಭಾರತ ಆಫ್ರಿಕಾ, ಯೂರೋಪ್ ಪರಸ್ಪರ ಏಕಾಂಗಿಯಾಗಿದ್ದವು. ಏಳನೇ ಶತಮಾನದ ನಂತರ ಭಾರತ ಮತ್ತು ಅರಬ್ ದೇಶಗಳ ನಡುವೆ ಉಂಟಾದ ವ್ಯಾಪಾರ ಸಂಬಂಧಗಳು ಪರಸ್ಪರ ಈ ಖಂಡಗಳು ಹತ್ತಿರವಾಗಲು ಕಾರಣವಾದವು. ಭಾರತ ಮತ್ತು ಅರಬ್ ದೇಶಗಳ ನಡುವಿನ ವ್ಯಾಪಾರ ವಾಣಿಜ್ಯದಿಂದಾಗಿ ಉಂಟಾದ ಪರಿಣಾಮಗಳನ್ನು ಈ ಕೆಳಕಂಡಂತೆ ತಿಳಿಯಬಹುದಾಗಿದೆ.

**ಅರಬ್ಬರ ವ್ಯಾಪಾರದಿಂದ ಉಂಟಾದ ಸಾಮಾಜಿಕ ಪರಿಣಾಮ :**

ಮಧ್ಯಕಾಲೀನ ಭಾರತದಲ್ಲಿ ಉಂಟಾದ ಪ್ರಮುಖ ಸಾಮಾಜಿಕ ಬದಲಾವಣೆ ಎಂದರೆ ಶಾಂತಿಯುತವಾಗಿ ಇಸ್ಲಾಂ ಧರ್ಮದ ಪ್ರಚಾರ. ಅರಬ್ಬರ ಯಶಸ್ಸು ಅವರ ವ್ಯಾಪಾರ ಮತ್ತು ಧರ್ಮದೊಂದಿಗೆ ಸಂಯೋಜನೆಗೊಂಡಿತ್ತು. ಭಾರತದಲ್ಲಿ ಇಸ್ಲಾಂ ಪ್ರಚಾರವಾದ ಸ್ಥಳಗಳಲ್ಲೆಲ್ಲ ಅಲ್ಲಿಯ ಸ್ಥಳೀಯ ಸಂಸ್ಕೃತಿ ತೀವ್ರವಾಗಿ ಬದಲಾಗಲಿಲ್ಲ. ಅದರ ಬದಲಾಗಿ ಹೊಸದಾದ ಒಂದು ಸಂಸ್ಕೃತಿ ಉದಯವಾಯಿತು. ಕೆನರಾ ಕರಾವಳಿಯ ನವಾಯತರು, ಮಲಬಾರ್ ಕರಾವಳಿಯ ಮಾಪಿಳ್ಳೆಗಳು ಮತ್ತು ಕೋರಮಂಡಲದ ಮಾರಿಕ್ಕೈಯರ್ ಪಂಥಗಳು ಬೆಳವಣಿಗೆ ಹೊಂದಿದವು. ಸ್ಥಳೀಯ ಜನರು ಮುಸ್ಲಿಂ ಧರ್ಮಕ್ಕೆ ಮತಾಂತರಿಸಿದ ನಂತರವೂ ಸ್ಥಳೀಯ ಜನರ ಸಂಸ್ಕೃತಿ ಬದಲಾಗಲಿಲ್ಲ.

ಅತಿ ಹೆಚ್ಚು ಸಂಖ್ಯೆಯ ಅರಬ್ಬರ ಭಾರತದ ಕರಾವಳಿ ನಗರಗಳಲ್ಲಿ ಬಂದು ನೆಲೆಸಿದರು. ಇದು ಭಾರತದಲ್ಲಿ ಅರಬ್ ವಸಾಹತುಗಳಿಗೆ ಕಾರಣವಾಯಿತು. ಸ್ಥಳೀಯರೊಂದಿಗೆ ಅರಬ್ಬರು ವೈವಾಹಿಕ ಸಂಬಂಧವನ್ನು ಏರ್ಪಡಿಸಿಕೊಂಡು ಮಿಶ್ರಣ ಸಾಮಾಜಿಕ ವ್ಯವಸ್ಥೆಗೆ ಕಾರಣವಾದರು.

ಭಾರತದ ಹಲವಾರು ಕಡೆ ತಮ್ಮನ್ನು ತಾವು ನೆಲೆಗೊಳಿಸಿ ತಮ್ಮ ಧಾರ್ಮಿಕ ಅವಶ್ಯಕತೆಗಳಿಗನುಗುಣವಾಗಿ ಸಂಸ್ಕೃತಿಯನ್ನು ಬದಲಿಸ ತೊಡಗಿದರು. ಸ್ಥಳೀಯರಿಗೆ ಹಲವಾರು ಆಮಿಷಗಳನ್ನು ಒಡ್ಡುವ ಮೂಲಕ ಅವರನ್ನು ತಮ್ಮ ಧರ್ಮದ ಕಡೆಗೆ ಆಕರ್ಷಿಸಿದರು. ಅರಬ್ಬರು ಅತಿ ವೇಗವಾಗಿ ತಮ್ಮ ಯಶಸ್ಸನ್ನು ಕಾಣಲು ಮತ್ತೊಂದು ಪ್ರಮುಖ ಕಾರಣ. ಭಾರತದ ಹಿಂದೂ ಸಮಾಜದಲ್ಲಿದ್ದ ನ್ಯೂನತೆಗಳು ಹಿಂದೂ ಧರ್ಮದಲ್ಲಿದ್ದ ಜಾತಿ ಪದ್ಧತಿ ಮೇಲುಕೀಳೆಂಬ ಭಾವನೆಗಳು ಭಾರತೀಯರು ಮುಸ್ಲಿಂ ಸಮಾಜಕ್ಕೆ ಮತಾಂತರ ಹೊಂದಲು ಕಾರಣವಾಯಿತು. ಮತಾಂತರ ಹೊಂದಿದ ಮೇಲೆ ಮುಸ್ಲಿಂ ಸಮಾಜದಲ್ಲಿ ಯಾವುದೇ ಬೇದಭಾವಗಳಿಲ್ಲದೇ ಜೀವನ ಸಾಗಿಸತೊಡಗಿದರು. ಸಾಮಾಜಿಕವಾಗಿ ಅವರು ಉನ್ನತರಾಗತೊಡಗಿದರು. ಇದು ಹಿಂದೂ ಸಮಾಜದ ಮೇಲೆ ವೆತಿರಿಕ್ತವಾದ ಪರಿಣಾಮವನ್ನುಂಟು ಮಾಡಿತು.[61]

ಭಾರತಕ್ಕೆ ಯೂರೋಪಿಯನ್ನರ ಆಗಮನದ ನಂತರ ಅರಬ್ಬರು ಮುಸ್ಲಿಂಮೇತರರ ಮೇಲೆ ಜಿಹಾದ್ ಹೂಡಿದರು. ಭಾರತಕ್ಕೆ ಪೋರ್ಚುಗೀಸರು ವ್ಯಾಪಾರ ವಿಸ್ತಾರವಾದ ಮೇಲೆ ಅರಬ್ಬರು ಮತ್ತು ಪೋರ್ಚುಗೀಸರ ನಡುವೆ ಅಪಾರವಾದ ಭಿನ್ನಾಭಿಪ್ರಾಯಗಳು ಉಂಟಾಗಿ ಅರಬ್ಬರ ವ್ಯಾಪಾರ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುವಂತಾಯಿತು.

**ಅರಬ್ಬರ ವ್ಯಾಪಾರದಿಂದ ಉಂಟಾದ ಸಾಂಸ್ಕೃತಿಕ ಪರಿಣಾಮ:**

ಅರಬ್ಬರು ವಿಶ್ವದ ವ್ಯಾಪಾರದ ಮೇಲೆ ಪ್ರಭುತ್ವ ಸ್ಥಾಪಿಸಿದ ಮೇಲೆ ಮೆಡಿಟೆರೇನಿಯನ್ ಸಮುದ್ರ ಮತ್ತು ಭಾರತದ ಸಮುದ್ರಗಳಲ್ಲಿ ಅವರು ತಮ್ಮ ಏಕಸ್ವಾಮ್ಯವನ್ನು ಸ್ಥಾಪಿಸಿದರು. ಇಲ್ಲವೇ ತಮ್ಮ ವ್ಯಾಪಾರಗಳನ್ನು ಸ್ಥಾಪಿಸಿದರು. ಇವರು ಸಾಮ್ರಾಜ್ಯ ಸ್ಥಾಪಿಸಲಿಲ್ಲ ಬದಲಾಗಿ ಸಂಸ್ಕೃತಿ ಬೆಳೆಸಿದರು. ಅರಬ್ಬರು ತಮ್ಮ ವಸಾಹತುಗಳನ್ನು ಸ್ಥಾಪಿಸಿ ಮಿಶ್ರಿತ ಸಮಾಜವನ್ನು ಸ್ಥಾಪಿಸಿದ ಮೇಲೆ ಸಂಸ್ಕೃತಿಯ ಪರಸ್ಪರ ವಿನಿಮಯವಾಯಿತು. ಅರಬ್ಬರ ಸಾಂಸ್ಕೃತಿಕ ಪರಮಾವದಿ ಏಳು ಮತ್ತು ಎಂಟನೇ ಶತಮಾನದಲ್ಲಿ ಪ್ರಾರಂಭವಾಗಿ ಹದಿನೈದನೇ ಶತಮಾನದವರೆಗೆ ಮುಂದುವರೆಯಿತು, ಅರಬ್ಬರ ಸಾಂಸ್ಕೃತಿಕ ಪರಮಾವದಿ ಬಗ್ಗೆ ಮಾತನಾಡುವಾಗಿ ಪಿ.ಕೆ.ಹಿಟ್ಟಿ ಯವರ ಪ್ರಕಾರ "ಒಂಭತ್ತನೇ ಶತಮಾನವು ಅರಬ್ಬರ ಸಾಂಸ್ಕೃತಿಕ ಇತಿಹಾಸದ ಎರಡು ಹೆಸರುಗಳಿಂದ ಪ್ರಾರಂಭವಾಯಿತು. ಪಶ್ಚಿಮದಲ್ಲಿ ಚಾರ್ಲಿಮಗ್ನೆ ಎಂಬ ಮತ್ತು ಪೂರ್ವದಲ್ಲಿ ಹರುನ್–ಆಲ್–ರಶೀದ್ ಎಂದು. ಇವೆರಡರಲ್ಲೂ ಹರುನ್–ಆಲ್–ರಶೀದ್ ಎಂಬ ಸಂಸ್ಕ್ರತಿ ಹೆಚ್ಚು ಪ್ರಾಮುಖ್ಯತೆ ಗಳಿಸಿತ್ತು. ಅರಬ್ಬರ ವ್ಯಾಪಾರದ ಕಾಲಘಟ್ಟದಲ್ಲಿ ಉತ್ತಮ ದರ್ಜೆಯ, ವಿಜ್ಞಾನಿಗಳು, ವೈದ್ಯರು, ತತ್ವಜ್ಞಾನಿಗಳು, ಖಗೋಳಶಾಸ್ತ್ರಜ್ಞರು ಮತ್ತು ಇತಿಹಾಸಗಾರರಿದ್ದರು. ಈ ಕಾಲದಲ್ಲಿ

ಅರೇಬಿಯಾದಲ್ಲಿ ಉತ್ತಮ ಜ್ಞಾನಾರ್ಜನೆಯ ಮತ್ತು ಕಲಿಕೆಯ ಕೇಂದ್ರಗಳಿದ್ದವು. ಹನ್ನೊಂದನೇ ಶತಮಾನದ ನಂತರ ಹಲವಾರು ಅರೇಬಿಕ್ ಗ್ರಂಥಗಳು ಯೂರೋಪಿಯನ್ ಭಾಷೆಗಳಿಗೆ ತರ್ಜುಮೆಗೊಂಡವು.

ಕಾಗದವನ್ನು ಚೀನಾದವರು ಕಂಡುಹಿಡಿದರು. ಅದನ್ನು ಪಾಶ್ಚಿಮಾತ್ಯ ದೇಶಗಳಿಗೆ ಅರಬ್ಬರು ಪರಿಚಯಿಸಿದರು. ಕಾಗದದ ಕೈಗಾರಿಕೆಗಳನ್ನು ಸ್ಥಾಪಿಸಿ ಮಧ್ಯಏಷ್ಯಾ ಮತ್ತು ಮುಸ್ಲಿಂ ದೇಶಗಳಿಗೆ ಕೊನೆಯದಾಗಿ ಯೂರೋಪಿಗೂ ಅದನ್ನು ಪರಿಚಯಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಅರಬ್ ವ್ಯಾಪಾರದ ಚಟುವಟಿಕೆಗಳು ಮುಸ್ಲಿಂ ಧರ್ಮವನ್ನು ಪ್ರಚಾರಮಾಡುವಲ್ಲಿ ಪ್ರಮುಖ ಪಾತ್ರ ವಹಿಸಿದವು. ಶಾಂತಿಯುತವಾಗಿ ಸೌಹಾರ್ದವಾಗಿ ಭಾರತದ ಕರಾವಳಿ ಭಾಗಗಳಲ್ಲಿ ಅವರು ತಮ್ಮ ಧರ್ಮ ಪ್ರಚಾರ ಮಾಡಿದರು. ಅವರಲ್ಲಿದ್ದ ತಾಳ್ಮೆ, ಸಹಕಾರ, ಸ್ಥಳೀಯರೊಂದಿಗೆ ಸಂಸ್ಕೃತಿಯ ವಿನಿಮಕ್ಕೆ ಸಾಧ್ಯವಾಯಿತು. ಅರಬ್ಬರು ಸ್ಥಳೀಯರೊಂದಿಗೆ ಏರ್ಪಡಿಸಿಕೊಂಡ ವೈವಾಹಿಕ ಸಂಬಂಧಗಳು ಕೂಡ ಸಾಂಸ್ಕ್ರತಿಕ ವಿನಿಮಯಕ್ಕೆ ಕಾರಣವಾಯಿತು. ಗುಜರಾತಿ ಭಾಷೆಯ ಇಸ್ಮಾಯಿಲ್ ಸಮುದಾಯ, ಅರಬ್–ತಮಿಳು, ಅರಬ್–ಮಲಯಾಳಂ ಭಾಷೆಗಳು ದಕ್ಷಿಣ ಭಾರತದಲ್ಲಿ ಬೆಳವಣಿಗೆ ಹೊಂದಿದ್ದವು. ಇದು ಮಿಶ್ರ ಭಾಷೆಗೆ ಉದಾಹರಣೆಯಾಗಿದೆ.

ವ್ಯಾಪಾರಿ ಸಂಘಗಳನ್ನು ಸ್ಥಾಪಿಸಿದುದು ಕೂಡ ನೇರವಾಗಿ ಸಾಂಸ್ಕೃತಿಕ ವಿನಿಮಯಕ್ಕೆ ಪ್ರಭಾವ ಬೀರಿತು. ಅರಬ್ ವ್ಯಾಪಾರಿ ಸಂಘಗಳು ಸಾಂಸ್ಕೃತಿಕ, ಧಾರ್ಮಿಕ ಮತ್ತು ಸಾಮಾಜಿಕ ಚಟುವಟಿಕೆಗಳಿಗೆ ಆರ್ಥಿಕ ಸಹಾಯವನ್ನು ಮಾಡುತ್ತಿದ್ದವು. ಮುಸ್ಲಿಂ ವ್ಯಾಪಾರಿಗಳು ಹೆಚ್ಚು ಜನರನ್ನು ಮುಸ್ಲಿಂ ಧರ್ಮಕ್ಕೆ ಆಕರ್ಷಿಸಲು ಹಣ ಸಂಗ್ರಹಣದಲ್ಲಿ ತೊಡಗಿದ್ದರು. ಯಾರು ಇಸ್ಲಾಂ ಧರ್ಮಕ್ಕೆ ಮತಾಂತರ ಹೊಂದುವರು ಅವರಿಗೆ ಎಲ್ಲಾ ರೀತಿಯ ನೆರವು ನೀಡಲಾಯಿತು.

**ಅರಬ್ಬರ ವ್ಯಾಪಾರದಿಂದ ಉಂಟಾದ ಆರ್ಥಿಕ ಪರಿಣಾಮ:**

ಬಹಳ ಪ್ರಮುಖವಾದ ಆರ್ಥಿಕ ಬೆಳವಣಿಗೆ ಅಥವಾ ಪರಿಣಾಮ ಎಂದರೆ ವಿಶ್ವದ ಆರ್ಥಿಕತೆಯ ಬೆಳವಣಿಗೆಗೆ ಮತ್ತು ಭಾರತೀಯ ಸಮುದ್ರ ವ್ಯಾಪಾರದ ಬೆಳವಣಿಗೆ, ಅರಬ್ಬರ ಸಾಗರೋತ್ತರ ವ್ಯಾಪಾರ ನಗರ ಮತ್ತು ಕರಾವಳಿ ಭಾಗಗಳಲಿ ಉತ್ತಮವಾದ ಆರ್ಥಿಕ ಪರಿಸ್ಥಿತಿಯನ್ನು ಸ್ಥಾಪಿಸಿತು. ಈ ಕಾಲದಲ್ಲಿ ಆರ್ಥಿಕ ಶಕ್ತಿಯು ರಾಜರ ಆಸ್ಥಾನರಿಂದ ವ್ಯಾಪಾರಿಗಳು ಮತ್ತು ಮಾರುಕಟ್ಟೆಗಳಿಗೆ ವರ್ಗಾವಣೆಯಾಯಿತು. ಹಲವಾರು ಕೃಷಿ ಆಧಾರಿತ ಆರ್ಥಿಕತೆಯು ಹಂತ ಹಂತವಾಗಿ ವ್ಯಾಪಾರಿ ಆದಾರಿತ ಆರ್ಥಿಕತೆಯಾಗಿ ಬೆಳವಣಿಗೆ ಹೊಂದಿತು.

ಭಾರತದ ಸ್ಥಳೀಯ ರಾಜರು ಅರಬ್ಬರ ವ್ಯಾಪಾರವನ್ನು ಪ್ರೋತ್ಸಾಹಿಸಿದರು. ಆರ್ಥಿಕ ಬೆಳವಣಿಗೆ ಎಂದರೆ ನಗರಗಳ ನಿರ್ಮಾಣ, ವ್ಯಾಪಾರಿ ಕೇಂದ್ರಗಳ ಬೆಳವಣಿಗೆಗೆ, ಬಂದರುಗಳ ಬೆಳವಣಿಗೆ ಮತ್ತು ಜನರ ಜೀವನಮಟ್ಟದಲ್ಲಿನ ಸುಧಾರಣೆಯಾಗಿತ್ತು.

ಭಾರತದ ಹಿಂದೂ ರಾಜರು ಮುಖ್ಯವಾಗಿ ಮಲಬಾರ್ ತೀರಗಳಲ್ಲಿ ಮುಸ್ಲಿಂರನ್ನು ಅಪಾರವಾಗಿ ಗೌರವಿಸುತ್ತಿದ್ದರು. ಕಾರಣ ಮುಸ್ಲಿಮರ ವ್ಯಾಪಾರದಿಂದ ಆ ಭಾಗದಲ್ಲಿ ಕೆಲವೊಂದು ನಗರಗಳ ನಿರ್ಮಾಣವಾಯಿತು. ಭಾರತಕ್ಕೆ ಪೋರ್ಚುಗೀಸರು ಬಂದ ನಂತರ ವಾಸ್ಕೋಡಿಗಾಮ ಜಾಮೋರಿನ್‌ನ ಬಳಿ ಬಂದು ಮುಸ್ಲಿಮರನ್ನು ಹೊರಹಾಕುವಂತೆ ಕೇಳಿಕೊಂಡನು. ಆಗ ಜಾಮೊರಿನ್‌ನು ಸಾಧ್ಯವಿಲ್ಲವೆಂದು ಹೇಳಿ ಅವರು ವಿದೇಶಿಯರಂತೆ ಇಲ್ಲಿ ಇಲ್ಲ ಸ್ಥಳೀಯರಂತೆ ನಮ್ಮಲ್ಲಿಯೇ ಒಬ್ಬರಾಗಿದ್ದಾರೆ. ಅವರ ವ್ಯಾಪಾರದಿಂದ ನಮ್ಮ ರಾಜ್ಯಕ್ಕೆ ಅಪಾರವಾದ ಆದಾಯವಿದೆಯೆಂದು ಹೇಳಿದನು.

**ಅರಬ್ಬರ ವ್ಯಾಪಾರದಿಂದುಂಟಾದ ರಾಜಕೀಯ ಪರಿಣಾಮ:**

ಅರಬ್ಬರ ವ್ಯಾಪಾರವು ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲೂ ಬದಲಾವಣೆ ಗಳನ್ನು ತಂದಂತೆ ರಾಜಕೀಯ ಕ್ಷೇತ್ರದಲ್ಲಿಯೂ ಕೂಡ ಹಲವಾರು ಪರಿಣಾಮಗಳನ್ನು ಬೀರಿತು. ಅರಬ್ಬರು ವಿದೇಶಗಳಲ್ಲಿ ನೆಲೆಸಿ ಅಲ್ಲಿನ ಸ್ಥಳೀಯ ರಾಜರೊಂದಿಗೆ ರಾಜಕೀಯ ಸಂಬಂಧವನ್ನು ಉತ್ತಮಪಡಿಸಿಕೊಂಡರು. ಮಲಬಾರಿನ ಮಾಪಿಳ್ಳೆಗಳು ಮತ್ತು ಅವರ ಅಧಿಕಾರಿ ವರ್ಗ ಸಮುದ್ರ ವ್ಯಾಪಾರದಲ್ಲಿ ಬೆಳೆವಣಿಗೆ ಪಡೆಯಿತು. ಅಲ್ಲಿದ್ದ ಹಿಂದೂ ಧರ್ಮದ ಉನ್ನತ ಜಾತಿಯವರಿಗೆ ಸಮುದ್ರಯಾನದ ಮೇಲೆ ಏರಿದ ನಿರ್ಬಂಧದಿಂದಾಗಿ ಇದು ಬಹಳ ಸುಲಭವಾಗಿ ಸಾಧ್ಯವಾಯಿತು. ಅರಬ್ಬರ ವ್ಯಾಪಾರ ಏಕಸ್ವಾಮ್ಯದ ಹೊತ್ತಿನಲ್ಲಿ ಅರಬ್ಬರು ಭಾರತೀಯ ಬಂದರುಗಳಲ್ಲಿ ಉನ್ನತ ಮಟ್ಟದ ಸ್ವಾತಂತ್ರ್ಯವನ್ನು ಪಡೆದಿದ್ದರು. ಪ್ರವಾಸಿಗರು ಮತ್ತು ವ್ಯಾಪಾರಿಗಳು ಮುಕ್ತವಾಗಿ ಬಂದು ಹೋಗಬಹುದಿತ್ತು. ಅವರು ವಸಾಹತುಗಳನ್ನು ಸ್ಥಾಪಿಸಬಹುದಿತ್ತು, ಅದರ ಆಡಳಿತವನ್ನು ರಾಜನ ಚಕ್ರಾಧಿಪತ್ಯದೊಂದಿಗೆ ಅವರೇ ನೋಡಿಕೊಳ್ಳಬಹುದಿತ್ತು. ಯಾವುದೇ ಬಂದರಿನಲ್ಲಿ ಮತ್ತು ಯಾವುದೇ ಸರಕುಗಳನ್ನು ಮಾರಾಟ ಮಾಡುವ ಕೊಂಡುಕೊಳ್ಳುವ ಸ್ವಾತಂತ್ರ್ಯವಿತ್ತು.

ಅರಬ್ ವ್ಯಾಪಾರಿಗಳ ವರ್ಗ ಭಾರತದಲ್ಲಿ ಅರಬ್ ಸಾಮ್ರಾಜ್ಯವನ್ನು ವಿಸ್ತರಿಸುವಲ್ಲಿ ಸಕ್ರೀಯವಾದ ಪಾತ್ರವನ್ನು ನಿರ್ವಹಿಸಿತು. ಅರಬ್ಬರಿಂದ ಸಿಂದ್ ವಶಪಡಿಸಿಕೊಂಡ ಮೇಲೆ

ಇನ್ನಿತರ ಪ್ರದೇಶಗಳ ಮೇಲೆ ಗಮನ ಹರಿಸಿದರು. ಸಿಂದ್ ಪ್ರಾಂತ್ಯವನ್ನು ವಶಪಡಿಸಿಕೊಂಡ ಮೇಲೆ ಗುರ್ಜರ ಪ್ರತಿಹಾರರ ಮತ್ತು ಅರಬ್ಬರ ನಡುವೆ ಸಂಘರ್ಷಗಳು ಉಂಟಾದವು. ದಕ್ಷಿಣ ಭಾರತವು ಹಲವಾರು ವಸಾಹತು ಕೇಂದ್ರಗಳಿಗೆ ಅವಕಾಶ ಕಲ್ಪಿಸಿತು. ಇಲ್ಲಿ ವಸಾಹತುಗಳನ್ನು ಸ್ಥಾಪಿಸಿದವರು ಮಿಷನರಿಗಳು ಮತ್ತು ವ್ಯಾಪಾರಿ ಸಂಘಟನೆಗೊಳಗಾಗಿದ್ದವು. ಇವರು ಸ್ಥಳೀಯ ರಾಜರೊಂದಿಗೆ ಉತ್ತಮ ಸಂಬಂಧವನ್ನು ಏರ್ಪಡಿಸಿಕೊಂಡಿದ್ದಾರೆ.

ಅತಿಹೆಚ್ಚು ಪ್ರಮಾಣದ ಅರಬ್ಬರು ಭಾರತ ಮತ್ತು ಪೂರ್ವ ಆಫ್ರಿಕಾಕ್ಕೆ ವಲಸೆ ಬಂದರು. ಇಲ್ಲಿ ತಮ್ಮ ಮಿಶ್ರಜನಾಂಗದ ಮೂಲಕ ಈ ಭಾಗಗಳಲ್ಲಿ ಅಧಿಪತ್ಯವನ್ನು ಸ್ಥಾಪಿಸಿದರು. ಬಹಳ ಮುಖ್ಯವಾದ ರಾಜಕೀಯ ಬೆಳವಣಿಗೆಗೆ ಎಂದರೆ ಗುಲಾಮ ಸೈನ್ಯಗಳು, ಗುಲಾಮ ಸಾಮ್ರಾಜ್ಯಗಳು ಭಾರತದಲ್ಲಿ ಸ್ಥಾಪನೆಯಾಯಿಗಿದ್ದು, ಅರಬ್ ರಾಜ್ಯಗಳಲ್ಲಿ ಗುಲಾಮರಿಗೆ ಉನ್ನತ ಮಟ್ಟದ ಸ್ಥಾನಗಳನ್ನು ನೀಡಲಾಯಿತು. ಸೈನ್ಯದ ಮುಖ್ಯಸ್ಥರಾಗಿ ಸುಲ್ತಾನರಾಗಿ ಅಳ್ವಿಕೆ ಮಾಡುತ್ತಿದ್ದರು.

ಹೀಗೆ ಪ್ರತಿ ಹಂತದಲ್ಲಿಯೂ ಭಾರತ ಮತ್ತು ಅರೇಬಿಯ ದೇಶಗಳ ನಡುವಿನ ಸಂಬಂಧ ಹಲವಾರು ವಿನಿಮಯಗಳ ಕೇಂದ್ರವಾಯಿತು. ಮಾತ್ರವಲ್ಲದೇ ಸಾಂಸ್ಕೃತಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ರಾಜಕೀಯವಾಗಿ ಬಹಳಷ್ಟು ಬದಲಾವಣೆಗೆ ಕಾರಣೀಭೂತ ವಾಯಿತೆಂದು ಹೇಳಬಹುದು.

**2.9 ಅರಬ್ಬರ ವ್ಯಾಪಾರ ಅವನತಿಗೆ ಕಾರಣಗಳು:**

ಅರಬ್ಬರು, ಅರಬ್ ಮುಸಲ್ಮಾನರು ಮತ್ತು ಪೋರ್ಚುಗೀಸರು ಭಾರತದ ಮಲಬಾರ್ ಮತ್ತು ಕೋರಮಂಡಲ ತೀರ ಪ್ರದೇಶಗಳಲ್ಲಿ ತಮ್ಮ ಸಾರ್ವಭೌಮವನ್ನು ಸ್ಥಾಪಿಸಿದರು. ಪೋರ್ಚುಗೀಸರು ಭಾರತದಲ್ಲಿ ತಮ್ಮ ಸಾರ್ವಭೌಮವನ್ನು ಸ್ಥಾಪಿಸುವುದರೊಳಗೆ ಕಣ್ಣನೂರು, ಕ್ಯಾಲಿಕಟ್ ಮತ್ತು ಕೊಚ್ಚಿನ್ ರಾಜರು ಪಾರುಪತ್ಯವನ್ನು ಸ್ಥಾಪಿಸಿದರು. ಪೋರ್ಚುಗೀಸರು ಭಾರತಕ್ಕೆ ಬಂದ ಮೇಲೆ ಕಣ್ಣನೂರು, ಕ್ಯಾಲಿಕಟ್ ಮತ್ತು ಕೊಚ್ಚಿನ್ ರಾಜರ ಮೇಲೆ ತಮ್ಮ ಆಧಿಪತ್ಯವನ್ನು ಸ್ಥಾಪಿಸಿದರು. ಅರಬ್ಬರು ಮತ್ತು ನಂತರದ ಅರಬ್ ಮುಸ್ಲಿಮರು ಸಾಗರ ವ್ಯಾಪಾರದ ಮೇಲೆ ಪಾರುಪತ್ಯಗಳಿಸಿದ್ದರು. ಇವರು ಭಾರತದ ರಾಜಕೀಯದ ಮೇಲೆ ತಮ್ಮ ನಿಯಂತ್ರಣ ಹೊಂದುವ ಯಾವುದೇ ಗುರಿಗಳನ್ನು ಹೊಂದಿರಲಿಲ್ಲ. ಅದಕ್ಕೆ ಮಿಗಿಲಾಗಿ ಅವರು ವ್ಯಾಪಾರ ಮತ್ತು ಶ್ರೀಮಂತಿಕೆಯನ್ನು ಗಳಿಸುವುದಾಗಿತ್ತು. ಆದರೆ ಪೋರ್ಚುಗೀಸರು ಅರಬ್ಬರನ್ನು ದೂರ್ತತನದಲ್ಲಿ ಮೀರಿಸಿ ಸಂಪೂರ್ಣವಾಗಿ ಅರಬ್ಬರ ಅಧಿಕಾರವನ್ನು ಮೊಟಕುಗೊಳಿಸಿದರು.[62]

ಮಧ್ಯಕಾಲೀನ ಭಾರತದಲ್ಲಿ ಅರಬ್ ಮುಸ್ಲಿಮರು ಮಧ್ಯ ಏಷ್ಯಾದ ಪ್ರಮುಖ ವ್ಯಾಪಾರಸ್ಥರಾಗಿ ನೆಲೆಗೊಂಡರು. ಕ್ರಿ.ಶ. 7ನೇಶತಮಾನದಿಂದ 15ನೇ ಶತಮಾನದವರೆಗೆ ಅರಬ್ಬರು ಏಕಾಂಗಿಯಾಗಿ ಮುತ್ತು ರತ್ನಗಳನ್ನು ಮತ್ತು ಸಾಂಬಾರವನ್ನು ಪಾಶ್ಚಿಮಾತ್ಯ ದೇಶಗಳಿಗೆ ಸರಬರಾಜು ಮಾಡುತ್ತಿದ್ದರು. ವಿಶ್ವದ ವ್ಯಾಪಾರವನ್ನು ತಮ್ಮ ಸುಪರ್ಧಿಗೆ ಪಡೆದುಕೊಳ್ಳಲು ಹಲವಾರು ಯೂರೋಪಿನ ರಾಷ್ಟ್ರಗಳು ಪೈಪೋಟಿ ನಡೆಸಿದವು. ಅರಬ್ಬರು ಪರ್ಷಿಯನ್ ಕೊಲ್ಲಿ, ಈಜಿಪ್ಟ್, ಅರೇಬಿಯಾ, ಆಫ್ರಿಕಾ, ಚೀನಾ ಮುಂತಾದ ದೇಶಗಳೊಂದಿಗೆ ವ್ಯಾಪಾರ ಸಂಪರ್ಕ ಹೊಂದಿದ್ದರು. ಆದರೆ ಭಾರತಕ್ಕೆ ಯೂರೋಪಿನ ಆಗಮನದ ನಂತರ ಅರಬ್ಬರ ವ್ಯಾಪಾರವು ಭಾರತದಲ್ಲಿ ಕ್ಷೀಣಿಸಿತ್ತು. ಪೋರ್ಚುಗೀಸರು ಸಂಪೂರ್ಣವಾಗಿ ಅರಬ್ಬರನ್ನು ಭಾರತದಿಂದ ಕಿತ್ತು ಹಾಕುವ ಪ್ರಯತ್ನವನ್ನು ಮಾಡಿದ್ದರು. ಇದರ ಫಲವಾಗಿ ಅರಬ್ಬರ ಏಕಸ್ವಾಮ್ಯ ಭಾರತದ ಸಮುದ್ರದಲ್ಲಿ ಕೊನೆಯಾಯಿತು. ಮುಖ್ಯವಾಗಿ ದಕ್ಷಿಣ ಭಾರತದ ಪ್ರತಿಯೊಂದು ಬಂದರುಗಳಲ್ಲಿಯೂ ಅರಬ್ಬರ ಹಿಡಿತ ಕೈತಪ್ಪಿತು.

ಈಜಿಫ್ಟ್, ಟರ್ಕಿ ಸುಲ್ತಾನರು ಭಾರತದ ಸಮುದ್ರಗಳಲ್ಲಿ ಪೊರ್ಚುಗೀಸರ ವಿರುದ್ಧ ಹೋರಾಡಲು ತಮ್ಮ ಸೈನ್ಯಗಳನ್ನು ಯುದ್ಧ ಹಡಗುಗಳ ಮೂಲಕ ಪರ್ಷಿಯನ್ ಕೊಲ್ಲಿಯಿಂದ ಕಳುಹಿಸಿದರು. ಭಾರತಕ್ಕೆ ಬಂದ ಅರಬ್ ಸೈನಿಕರು ಸ್ಥಳೀಯ ಗುಜರಾತ್, ಬಿಜಾಪುರ ಜಾಮೊರಿನ್ ಮತ್ತು ಮಲಬಾರ್ ರಾಜರೊಂದಿಗೆ ಸೇರಿಕೊಂಡು ಪೋರ್ಚುಗೀಸರನ್ನು ಸೋಲಿಸುವ ಪ್ರಯತ್ನ ಮಾಡಿದರು. ಇದರೊಂದಿಗೆ ಅವರು ಒಕ್ಕೂಟವನ್ನು ರಚಿಸಿಕೊಂಡು ಪೋರ್ಚುಗೀಸರ ವಿರುದ್ಧ ಸೆಣಸಿದರು. ಆದರೆ ಆ ಒಕ್ಕೂಟವನ್ನು ಪೋರ್ಚುಗೀಸರು ಮುರಿದರು. ಕ್ರಿ.ಶ.1507ರಲ್ಲಿ ಈಜಿಪ್ಟ್‌ನ ರಾಜನಾದ ಮಲ್ಲಿಕ್ ಆಶ್ರಪ್ ಖ್ವಾನೊ ಪೊರ್ಚುಗೀಸ ರೊಂದಿಗೆ ಸೆಣಸಿದನು. ಕ್ರಿ.ಶ.1538ರಲ್ಲಿ ಕಾನ್‌ಸ್ಟಾಂಟಿನೋಪಲಿನ ಸುಲ್ತಾನ ಸುಲೈಮಾನ್ ಗುಜರಾತಿನ ಕಡಲ ತೀರಗಳಲ್ಲಿ ಪೊರ್ಚುಗೀಸರ ವಿರುದ್ಧ ವ್ಯರ್ಥವಾದ ಒಂದು ಯುದ್ಧವನ್ನು ಮಾಡಿದ್ದನು. ಈ ಘಟನೆಗಳು ಭಾರತದಲ್ಲಿ ಅರಬ್ಬರ ಜಲಸಂಚಾರ ಅವನತಿಗೆ ಕಾರಣವಾಯಿತು.

ಯೂರೋಪಿಯನ್ನರು ತಾವು ಬಳಸಿದ ಬಂದೂಕುಗಳು ಭಾರತದಲ್ಲಿ ಅರಬ್ಬರನ್ನು ಹತ್ತಿಕ್ಕಲು ಸಹಾಯಕವಾಯಿತು. ಜಾಮೊರಿನನ್ನು ಉತ್ತಮವಾದ ನೌಕಾಬಲ ಹೊಂದಿದ್ದನು. ಕ್ಯಾಲಿಕಟ್‌ನ ವಿದೇಶಿ ವ್ಯಾಪಾರವು ದೇಶದಲ್ಲಿ ಹಲವಾರು ಬದಲಾವಣೆಗಳನ್ನು ತಂದಿತು. ಅರಬ್ಬರ ಕೈಯಲ್ಲಿದ್ದ ಈ ವ್ಯಾಪಾರವು ಬಹಳಷ್ಟು ಸಮೃದ್ಧಿ ಪಡೆಯಿತು. ಪೋರ್ಚುಗೀಸರು ಅವರನ್ನು ಮೋರ್ಸ್ ಎಂದು ಕರೆದರು. ಮೋರ್ಸ್ ಎಂದರೆ ಮಲಬಾರಿನಲ್ಲಿದ್ದ ಅರಬ್ಬರು, ಈ ಅರಬ್ಬರು

ಕೇವಲ ವ್ಯಾಪಾರ ವಾಣಿಜ್ಯದಲ್ಲಿ ತೊಡಗಿಸಿಕೊಂಡರಲ್ಲದೆ ಜಾಮೊರಿನನ ಹೆಸರನ್ನು ಪಸರಿಸುವ ಪ್ರಯತ್ನವನ್ನು ಸಹ ಮಾಡಿದ್ದರು. ಪೋರ್ಚುಗೀಸರು ಭಾರತಕ್ಕೆ ಬಂದಾಗ ಭಾರತದ ರೇಷ್ಮೆ, ಮುತ್ತು ರತ್ನಗಳು ಮತ್ತು ಸಾಂಬಾರ ಪದಾರ್ಥಗಳ ಮೇಲೆ ಅರಬ್ಬರು ಸಂಪೂರ್ಣ ನಿಯಂತ್ರಣ ಹೊಂದಿದ್ದರು. ಅರಬ್ಬರು ಭಾರತಕ್ಕೆ ಕುದುರೆಗಳನ್ನು ಸರಬರಾಜು ಮಾಡುತ್ತಿದ್ದರು. ದಕ್ಷಿಣ ಭಾರತದ ಪ್ರಮುಖ ಸಾಮ್ರಾಜ್ಯಗಳಾದ ಬಹುಮನಿ, ವಿಜಯನಗರ ಸಾಮ್ರಾಜ್ಯ ಅರಬ್ಬರಿಂದ ಕುದುರೆಗಳನ್ನು ಪಡೆಯುತ್ತಿತ್ತು. ಈ ಎರಡು ಸಾಮ್ರಾಜ್ಯಗಳು ಯಾವಾಗಲೂ ಕಚ್ಚಾಟಗಳಲ್ಲಿ ತೊಡಗಿದ್ದವು. ಆದರೂ ಅರಬ್ಬರು ಇಬ್ಬರೊಂದಿಗೆ ಉತ್ತಮ ಸಂಬಂಧ ಏರ್ಪಡಿಸಿಕೊಂಡು ವ್ಯಾಪಾರದ ಮೇಲೆ ನಿಯಂತ್ರಣ ಹೊಂದಿದ್ದರು.[63]

ಪೋರ್ಚುಗೀಸರು ಭಾರತಕ್ಕೆ ಬರಲು ಎರಡು ಕಾರಣಗಳಿದ್ದವು. ವ್ಯಾಪಾರದ ಏಕಸ್ವಾಮ್ಯ ಸ್ಥಾಪಿಸಲು ಮತ್ತು ರೋಮನ್ ಕ್ಯಾಥೋಲಿಕ್ ಧರ್ಮವನ್ನು ಪ್ರಚಾರ ಮಾಡಲು, ಕ್ಯಾಲಿಕಟ್‌ನ ದೊರೆ ಜಾಮೋರಿನ್‌ನು ಪೋರ್ಚುಗೀಸರು ಕ್ಯಾಲಿಕಟ್‌ನಲ್ಲಿ ನೆಲೆಸಲು ಅವಕಾಶ ನೀಡಲಿಲ್ಲ. ಆದರೆ ಕೊಚ್ಚಿನ್ ರಾಜ ಜಾಮೊರಿನ್‌ನ ಶತ್ರುವಾಗಿದ್ದು ಅವನು ಪೋರ್ಚುಗೀಸರು ಕೊಚ್ಚಿನ್‌ನಲ್ಲಿ ನೆಲೆಸಲು ಅವಕಾಶ ಮಾಡಿಕೊಟ್ಟನು ಮತ್ತು ಕೊಚ್ಚಿನ್ ಪೋರ್ಚುಗೀಸರ ಮುಖ್ಯ ಕೇಂದ್ರವಾಯಿತು. ಇಲ್ಲಿ ಕೋಟೆಗಳನ್ನು ಕಟ್ಟಿ ಜಾಮೊರಿನ್ ಮತ್ತು ಮುಸ್ಲಿಂ ಹಡಗುಗಳ ಮೇಲೆ ದಾಳಿ ಮಾಡಲು ಅವಕಾಶ ನೀಡಿದನು. ಕೊಚ್ಚಿನ್‌ನ ಸಾಂಪ್ರದಾಯಿಕ ಬಂದರು ಅವರಿಗೆ ಒಂದು ಉತ್ತಮವಾದ ನೆಲೆಯನ್ನು ನಿರ್ಮಿಸಿತು.

ಪೋರ್ಚುಗೀಸರು ಮತ್ತು ಅರಬ್ಬರು ಮಲಬಾರಿನಲ್ಲಿ ಯಾವಾಗಲೂ ಪರಸ್ಪರ ಕಿತ್ತಾಟದಲ್ಲಿ ತೊಡಗಿದ್ದರು. ವಿಜಯನಗರದ ಅರಸರು ಪೊರ್ಚುಗೀಸರ ವ್ಯಾಪಾರ ಏಕಸ್ವಾಮ್ಯದ ಬಗ್ಗೆ ವಿರೋದ ವ್ಯಕ್ತಪಡಿಸಲಿಲ್ಲ. ಬಹುಮನಿ ಸುಲ್ತಾನರು ಮತ್ತು ವಿಜಯನಗರ ಅರಸರ ನಡುವಿನ ವಿರಸವನ್ನು ಸಮರ್ಪಕವಾಗಿ ಬಳಸಿಕೊಂಡ ಪೋರ್ಚುಗೀಸರು ವಿಜಯನಗರ ಅರಸರ ಪರ ನಿಂತರು. ಅರಬ್ಬರ ಧರ್ಮದ ಆಧಾರದ ಮೇಲೆ ವಿಜಯನಗರ ಸಾಮ್ರಾಜ್ಯದ ಬದಲಾಗಿ ಬಹುಮನಿ ಸುಲ್ತಾನರಿಗೆ ಹೆಚ್ಚು ಕುದುರೆಗಳನ್ನು ಸರಬರಾಜು ಮಾಡುತ್ತಿದ್ದರು. ಇದರಿಂದಾಗಿ ವಿಜಯನಗರದ ಅರಸರು ಅರಬ್ಬರ ಬಗ್ಗೆ ಅಸಮಾಧಾನವನ್ನು ವ್ಯಕ್ತಪಡಿಸಿದರು. ಈ ಸಂದರ್ಭದಲ್ಲಿ ಪೋರ್ಚುಗೀಸರು ವಿಜಯನಗರದ ಅರಸರೊಂದಿಗೆ ಉತ್ತಮ ಸಂಬಂಧವನ್ನು ಏರ್ಪಡಿಸಿಕೊಂಡು, ಪೋರ್ಚುಗೀಸರು ಸಾಗರ ವ್ಯಾಪಾರದಲ್ಲಿ ಅಪಾರವಾದ ಪ್ರಾವಿಣ್ಯತೆ ಗಳಿಸಿದ್ದರು, ಪೋರ್ಚುಗೀಸರು ಭಾರತದಲ್ಲಿ ವ್ಯಾಪಾರದೊಂದಿಗೆ ರಾಜಕೀಯ ಕ್ಷೇತ್ರದಲ್ಲೂ

ಅಪಾರವಾದ ಪ್ರಗತಿಯನ್ನು ಸಾಧಿಸಿದರು, ಗೋವಾದಲ್ಲಿ ಪೋರ್ಚುಗೀಸರು ಬಹುಮನಿ ಸುಲ್ತಾನರನ್ನು ಸೋಲಿಸಿದ ಮೇಲೆ ಅರಬ್ಬರ ಅವನತಿಯು ಮಲಬಾರಿನ ಭಾಗಗಳಲ್ಲಿ ಸಂಪೂರ್ಣವಾಗಿ ಕೊನೆಯಾಯಿತು.

ಹೀಗೆ ಅರಬ್ಬರು ಭಾರತಕ್ಕೆ ವ್ಯಾಪಾರದ ದೃಷ್ಟಿಯಿಂದ ಬಂದರು. ಸುಮಾರು ಕ್ರಿ.ಶ.7ನೇ ಶತಮಾನದಿಂದ 15ನೇ ಶತಮಾನದವರೆಗೆ ತಮ್ಮ ವ್ಯಾಪಾರದ ಮೂಲಕ ಭಾರತ ಮತ್ತು ಅರೇಬಿಯಾ ದೇಶಗಳೊಂದಿಗೆ ಸಂಪರ್ಕ ಕಲ್ಪಿಸಿ ಭಾರತದಲ್ಲಿ ಹಲವಾರು ಬದಲಾವಣೆಗೆ ಕಾರಣಕರ್ತರಾದ ಅರಬ್ಬರು ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ, ವೈಜ್ಞಾನಿಕವಾಗಿ, ರಾಜಕೀಯವಾಗಿ ಅರೇಬಿಯಾ ಮತ್ತು ಭಾರತದೊಂದಿಗೆ ಸಂಬಂಧವನ್ನು ಬೆಸೆದರು. ಒಂದು ದೊಡ್ಡ ವ್ಯಾಪಾರದ ಪಂಥವಾಗಿ ಸುಮಾರು 8 ಶತಮಾನಗಳು ಏಕಾಂಗಿಯಾಗಿ ಅರೇಬಿಯಾ ಮತ್ತು ಯೂರೋಪಿಯನ್ ದೇಶಗಳಿಗೆ ತಮ್ಮ ವ್ಯಾಪಾರ ಸಂಪರ್ಕದಿಂದಾಗಿ ಅಗತ್ಯವಾದ ವಸ್ತುಗಳನ್ನು ಮಾರಾಟ ಮಾಡಿ ಮತ್ತು ಭಾರತಕ್ಕೆ ಅವಶ್ಯಕವಾಗಿರುವ ಸರಕುಗಳನ್ನು ಇಲ್ಲಿಗೆ ತಂದು ಮಾರಾಟ ಮಾಡುವ ಮೂಲಕ ಮನುಕುಲದ ಅವಿಸ್ಮರಣೆಗೆ ಇವರು ಕಾರಣಭೂತರೆಂದು ಹೇಳಬಹುದು.

**ಗ್ರಂಥಸೂಚಿ**


1. V.K. Jain, Trade and Traders in westerm India P.80
2. ರಾಬರ್ಟ್ ಸಿವೆಲ್, ಅನುವಾದ ಸದಾನಂದ ಕನವಳ್ಳಿ,. ಮರೆತು ಹೋದ ಮಹಾಸಾಮ್ರಾಜ್ಯ, ವಿಜಯನಗರ, P-7.
3. ಅದೇ –P -158
4. Kenneth Me Pherson, the Indian ocean, P - 78 – 80
5. V.K. Jain, Trade and Traders in western India P - 72.
6. ಅದೇ – P – 73
7. ಅದೇ – P – 74
8. ಅದೇ – P – 74
9. Kenneth Me Pherson, The Indian Ocean, P-85
10. V.K. Jain, Trade and Treadrs in Western India, P-76.
11. Neela Kanta sastri K.A. Foreign Notices & South India. P-134
12. H.B. Sarkar, Trade and commercial activities of Southern India, P-299
13. H.C. Verma, Medieval Routes to India,P-1-3
14. Ahmad Maqbul Indo-Arab Relations, P-95-96
15. ಅದೇ – P – 96–97
16. Quaran, 17;35
17. Usman,K.K. This is islam, P-112-113
18. Appa Durai, Economic conditions & South India P-593
19. K.N.Chaudhuri Trade and civilization in the Indian ocean, P-51
20. Mahalingam T.V. Econamic life in the vijayangara Empire, P-60
21. Quaran, 16:11
22. Abramham L.Udovitch, commercial Techniques in Islam and Trade in Asia, P-48
23. Krishna Iyyer K.V. A History of kerala, P-1-2

24. Joginder K,. Chawla, India's overland Trade with central Asia and Persia, P-130.
25. ರಾಬರ್ಟ್ ಸಿವೆಲ್, ಅನುವಾದ ಸದಾನಂದ ಕನವಳ್ಳಿ, ಮರೆತು ಹೋದ ಮಹಾ ಸಾಮ್ರಾಜ್ಯ ವಿಜಯನಗರ,P-30
26. ಮಂಗಳೂರು ದರ್ಶನ ಸಂಪುಟ– I, P-234.
27. ಅದೇ – P – 235
28. ಅದೇ – P – 237
29. ಅದೇ – P – 237
30. Chaudhuri, K.N. Trade and civilization in the Indian ocean, P-44.
31. ಮಂಗಳೂರು ದರ್ಶನ, ಸಂಪುಟ – 1, P – 240
32. Kennethe Me Pherson, the Indian ocean, P-96
33. Hourani, Arab Seafaring, P-61
34. ರಾಬರ್ಟ್ ಸಿವಿಲ್, ಅನುವಾದ: ಸದಾನಂದ ಕನವಳ್ಳಿ, ಮರೆತು ಹೋದ ಮಹಾಸಾಮ್ರಾಜ್ಯ ವಿಜಯನಗರ P – 35.
35. Appa Dorai, Economic conditions of South India, P-607
36. Ibn Bathuta, Travels is Asia and Africa, P-267-68
37. ಅದೇ, P–233
38. ವಸಂತ ಶೆಟ್ಟಿ. ಬಿ. ಇತಿಹಾಸದಲ್ಲಿ ಬಾರ್ಕೂರು P – 2
39. ರಮೇಶ್ ಕೆ.ವಿ. ಶರ್ಮಾ ಎಮ್. ಜಿ. ತುಳುನಾಡಿನ ಇತಿಹಾಸ P – 27
40. Nainar S.M.H. Arab Geographers Knowledge of Southern India, P-27
41. Ibn Bathuta, Travels is Asia and Africa, P-234
42. Neelakanta sastri K.A Foreign noties of southern India, P-294
43. Padmanabha menon, History of kerala, P-313
44. ಅದೇ, P – 314
45. V.K. Jain trade and Traders in western India P – 95

46. ಅದೇ – P – 92
47. Jogindar K. Chowla, India's overland Trade with central Asia and Persia, P-91
48. V.K. Jain Trade and Traders in western India, P-94
49. Jogindar.K chawla India's overland Trade with central Asia and Persia P-86
50. ಅದೇ, P – 88
51. ಅದೇ, P – 89
52. ಅದೇ, P – 92
53. V.K. Jain, Trade and Traders in western India, P-98
54. ಅದೇ, P – 99
55. Jogindar.K chawla, India's overland Trade with central Asia and Persia P – 95.
56. ಅದೇ, P – 97
57. ಅದೇ, P – 98
58. V.K. Jain, Trade and Traders in western India, P – 103
59. Jogindar K. chawla, India's Overland Trade with central Asia and Persia, P- 99- 100
60. V.K. Jain, Trade and Traders in western India, P – 99 – 104.
61. Ibrahim Kunju AP Mappllila muslims of Kerala, P-60
62. Jogindar K. chawla, India's Overland Trade with central Asia and Persia, P- 250
63. ಅದೇ, P – 350

# ಅಧ್ಯಾಯ – 3

# ವಿಜಯನಗರ ಸಾಮ್ರಾಜ್ಯ ಮತ್ತು ಪೋರ್ಚುಗೀಸರ ಸಂಬಂಧಗಳು

## 3.1 ಪೋರ್ಚುಗೀಸರ ಇತಿಹಾಸ

ಪೋರ್ಚುಗೀಸರು ಯೂರೋಪಿನ ಒಂದು ಪ್ರಾಚೀನ ದೇಶವಾದ ಪೋರ್ಚುಗಲ್‌ನಿಂದ ಭಾರತಕ್ಕೆ ಬಂದ ಒಂದು ವ್ಯಾಪಾರಿ ವರ್ಗವಾಗಿತ್ತು. ಪೋರ್ಚುಗಲ್ ಇಬ್ರಾಯನ್ ದ್ವೀಪಕಲ್ಪದಲ್ಲಿ ಕಂಡು ಬರುವ ಒಂದು ಪ್ರಾಚೀನ ರಾಜ್ಯವಾಗಿದೆ. ರೋಮನ್ನರು ಪ್ರಾಚೀನ ಕಾಲದಿಂದಲೂ ಈ ರಾಜ್ಯದ ಮೇಲೆ ದಾಳಿಮಾಡಿ ಅದನ್ನು ವಶಪಡಿಸಿಕೊಂಡಿದ್ದರು. ಕ್ರಿ.ಶ 711ರಲ್ಲಿ ಮೂರ್ಸ್ ವಿರುದ್ಧ ಹೋರಾಡಿ ಈ ರಾಜ್ಯವನ್ನು ನಿರ್ಮಿಸಲಾಯಿತು. ಕ್ರಿಶ.868ರಲ್ಲಿ ಒಂದು ಸ್ವತಂತ್ರ ರಾಜ್ಯವಾಗಿ ಸ್ಥಾಪನೆಯಾಗಲು ಹಲವಾರು ಯುದ್ಧಗಳು ಸಂಭವಿಸಿದವು. ಕ್ರಿ.ಶ.1128ರಲ್ಲಿ ಪೋರ್ಚುಗಲ್‌ನ ಪ್ರಮುಖ ನಾಯಕನಾದ ಅಪೆನೊ ಹೆನ್ರಿಕ್ಯೂಸ್ ವಿದೇಶಿಯರನ್ನು ಪೋರ್ಚುಗಲ್‌ನಿಂದ ಹೊರದೂಡಿದ ಮೇಲೆ ಪೋರ್ಚುಗಲ್‌ನ ರಾಜನಾದನು.

ಪೋರ್ಚುಗಲ್ ದೇಶವು ಕ್ರಿ.ಶ.30,000 ವರ್ಷಗಳಷ್ಟು ಹಳೆಯದಾಗಿದ್ದು, ಅಂದಿನಿಂದಲೂ ಜನರು ಅಲ್ಲಿ ವಾಸ ಮಾಡುತ್ತಿದ್ದುದರ ಬಗ್ಗೆ ಉಲ್ಲೇಖಗಳಿವೆ. ಮೊದಲ ಪೋರ್ಚುಗೀಸ್ ಜನರು ಬೇಟೆಗಾರರು ಮತ್ತು ಮೀನುಗಾರರಾಗಿದ್ದರು. ಆಹಾರ ಬೆಳೆಗಳನ್ನು ಬೆಳೆಯಲು ಭೂಮಿಗಳನ್ನು ರಚಿಸಿದರು. ಮತ್ತು ಚರ್ಮದ ಬಟ್ಟೆಗಳನ್ನು ತೊಡುತ್ತಿದ್ದರು. ಕಲ್ಲಿನ ಆಯುಧಗಳನ್ನು ಬಳಸುತ್ತಿದ್ದರು. ಕ್ರಿ.ಪೂ.5000 ವರ್ಷಗಳ ಈ ಹಿಂದೆ ವ್ಯವಸಾಯ ಸಮರ್ಪಕವಾಗಿ ಪರಿಚಯಿಸಲ್ಪಟ್ಟಿತು. ರೈತರು ಕಲ್ಲಿನ ಆಯುಧಗಳನ್ನು ಬಳಸುತ್ತಿದ್ದರು. ಆದರೆ ಕ್ರಿ.ಶ.2000 ವರ್ಷಗಳ ಹಿಂದೆ ಪೋರ್ಚುಗಲ್‌ನಲ್ಲಿ ಕಂಚು ಪರಚಯಿಸಲ್ಪಟ್ಟಿತು. ಕ್ರಿ.ಪೂ.7ನೇ ಶತಮಾನದಲ್ಲಿ ಪೋರ್ಚುಗಲ್‌ನಲ್ಲಿ ಸೆಲ್‌ಟಿಕ್ ಬುಡಕಟ್ಟು ಜನಾಂಗ ಕಬ್ಬಿಣವನ್ನು ಪರಿಚಯಿಸಿತ್ತು. ಈ ಕಾಲಘಟ್ಟದಲ್ಲಿ ಪೋರ್ಚುಗಲ್ ಇಂದಿನ ಲೆಬನಾನ್ ವ್ಯಾಪಾರ ಸಂಪರ್ಕವನ್ನು ಹೊಂದಿತ್ತು. ಕ್ರಿ.ಪೂ.6ನೇ ಶತಮಾನದಲ್ಲಿ ಗ್ರೀಕರು ಪೋರ್ಚುಗಲ್‌ನೊಂದಿಗೆ ವ್ಯಾಪಾರ ವಹಿವಾಟು ಪ್ರಾರಂಭಿಸಿದರು. ಕ್ರಿ.ಪೂ.210ರಲ್ಲಿ ರೋಮನ್ನರು ಪೋರ್ಚುಗಲ್ ಮೇಲೆ ದಾಳಿ ಮಾಡಿ ದಕ್ಷಿಣ ಭಾಗವನ್ನು ವಶಪಡಿಸಿಕೊಂಡರು. ರೋಮನ್ನರು ಪೋರ್ಚುಗಲ್‌ನಿಂದ ಗೋದಿ, ಆಲಿವ್ ವೃಕ್ಷ ಮತ್ತು ದ್ರಾಕ್ಷಾರಸವನ್ನು ರಫ್ತು ಮಾಡುತ್ತಿದ್ದರು.

ಪೋರ್ಚುಗಲ್ ದೇಶವು ಮಧ್ಯಕಾಲೀನ ಯುಗದಲ್ಲಿ ಉತ್ತರ ಆಫ್ರಿಕಾದ ಮೂರ್ ಜನಾಂಗದ ದಾಳಿಗೆ ತುತ್ತಾಯಿತು. ಹಾಗೂ ಕ್ರಿ.ಶ 3ನೇ ಶತಮಾನದಲ್ಲಿ ರೋಮನ್ ಸಾಮ್ರಾಜ್ಯ ಅವನತಿ ಹೊಂದಿದ ಮೇಲೆ ಕ್ರಿ.ಶ 5ನೇ ಶತಮಾನದಲ್ಲಿ ರೋಮನ್‌ರ ಆಳ್ವಿಕೆ ಪೋರ್ಚುಗಲ್‌ನಲ್ಲಿ ಕೊನೆಯಾಯಿತು. ನಂತರ ಕ್ರಿ.ಶ 711ರಲ್ಲಿ ಮೂರ್‌ರು ಪೋರ್ಚುಗಲ್ ಮೇಲೆ ದಾಳಿ ಮಾಡಿದರು ಮತ್ತು ಸಂಪೂರ್ಣವಾಗಿ ದಕ್ಷಿಣ ಪೋರ್ಚುಗಲ್ ಅನ್ನು ವಶಪಡಿಸಿಕೊಂಡು ನಗರಗಳ ನಿರ್ಮಾಣ ಮಾಡಿ ಶತಮಾನಗಳಷ್ಟು ಕಾಲ ಆಳ್ವಿಕೆ ಮಾಡಿದರು. ಉತ್ತರದಿಂದ ಹಂತ ಹಂತವಾಗಿ ಪೋರ್ಚುಗಲ್ ರಾಜ್ಯ ಬೆಳವಣಿಗೆ ಹೊಂದತೊಡಗಿತು. ಪೋರ್ಚುಗಲ್ ಕ್ರಿ.ಶ.11ನೇ ಶತಮಾನದಲ್ಲಿ ಲಿಯಾನ್ ರಾಜನ ಸಾಮಂತಕ್ಕೆ ಒಳಪಟ್ಟಿತ್ತು. ಆದರೂ ಕೂಡ ಪೋರ್ಚುಗಲ್ ಲಿಯಾನ್‌ಗಿಂತ ಸಾಂಸ್ಕೃತಿಕವಾಗಿ ಬಿನ್ನವಾಗಿತ್ತು. ಕ್ರಿ.ಶ.1095ರಲ್ಲಿ ಲಿಯಾನ್‌ನ ರಾಜ ಪೋರ್ಚುಗಲ್‌ನ್ನು ಅವನ ಮಗಳಾದ ಡೋನ್ ತೆರೆಸಳ ಮತ್ತು ಅವಳ ಗಂಡನಿಗೆ ನೀಡಿದನು. ಡೋನ್ ತೆರೆಸ ಗಂಡ ಮರಣ ಹೊಂದಿದ ಮೇಲೆ ಅವಳು ಅವನ ಮಗನ ರಾಜಪ್ರತಿನಿಧಿಯಾಗಿ ಕಾರ್ಯನಿರ್ವಹಿಸಿದಳು. ನಂತರ ಅವಳು ಗೆಲಿಸಿಯನ್ ಸರದಾರನನ್ನು ಮದುವೆಯಾದಳು. ಈ ಘಟನೆಯಿಂದ ಪೋರ್ಚುಗೀಸ್ ಸರದಾರರು ಆಘಾತಕ್ಕೆ ಒಳಗಾದರು. ಮತ್ತು ಗೆಲ್ಸಿಯನ್ ಸರದಾರನ ಮೇಲೆ ತೋರಿದ ಪ್ರೀತಿಯಿಂದ ಕೋಪಗೊಂಡು ಡಾಮ್ ಅಲ್ಫೆನೊ ಹೆನ್ರಿಕ್ಯೂಸ್‌ನ ನೇತೃತ್ವದಲ್ಲಿ ಡೋನ ತೆರೆಸಳ ಮೇಲೆ ಯುದ್ಧ ಮಾಡಿ ಅವಳನ್ನು ಸೋಲಿಸಿದರು. ನಂತರ ಆಲ್ಫೆನೊ ಹೆನ್ರಿಕ್ಯೂಸ್ ಪೋರ್ಚುಗಲ್‌ನ ರಾಜನಾದನು.

ಪೋರ್ಚುಗಲ್ ಲಿಯಾನ್‌ನಿಂದ ಹಂತ ಹಂತವಾಗಿ ಸ್ವಾತಂತ್ರವಾಗತೊಡಗಿತು. ಆಲ್‌ಪೆನೊ ಹೆನ್ರಿಕ್ಯೂಸ್ ತನ್ನನ್ನು ತಾನು ಪೋರ್ಚುಗಲ್‌ನ ರಾಜನೆಂದು ಕರೆದುಕೊಂಡನು. ಕ್ರಿ.ಶ.1139ರಲ್ಲಿ ಮೂರ್ಸ್‌ಗಳನ್ನು ಸೋಲಿಸಿ ಮತ್ತೆ ತನ್ನ ಪ್ರದೇಶಗಳನ್ನು ವಶಪಡಿಸಿಕೊಂಡನು. ಕ್ರಿ.ಶ.1211ರಲ್ಲಿ ಪೋರ್ಚುಗಲ್‌ನಲ್ಲಿ ಮೊಟ್ಟ ಮೊದಲ ಸಂಸತ್ತು ಸ್ಥಾಪನೆಯಾಯಿತು. ಪಾದ್ರಿಗಳು ಮತ್ತು ನೊಬಲರು ಮಾತ್ರ ಇದರ ಪ್ರತಿನಿಧಿಗಳಾಗಿದ್ದರು. ಕ್ರಿ.ಶ.13ನೇ ಶತಮಾನದ ಮಧ್ಯಭಾಗದಲ್ಲಿ ಲಿಸ್‌ಬಾನ್ ಪೋರ್ಚುಗಲ್‌ನ ರಾಜದಾನಿಯಾಯಿತು. ಕ್ರಿ.ಶ.1290ರಲ್ಲಿ ಪೋರ್ಚುಗಲ್‌ನ ಲಿಸ್‌ಬನ್‌ನಲ್ಲಿ ಮೊದಲ ವಿಶ್ವವಿದ್ಯಾನಿಲಯ ಪ್ರಾರಂಭವಾಯಿತು. ರಾಜ ಡೈನಿಸನು ವ್ಯಾಪಾರಿ ವರ್ಗವನ್ನು ತಯಾರು ಮಾಡಿ ವಿಶ್ವದ ಬೇರೆ ಬೇರೆ ಭಾಗಗಳಲ್ಲಿ ವ್ಯಾಪಾರ ಮಾಡುವಂತೆ ಅಜ್ಞಾಪಿಸಿದನು. ಹಾಗೂ ಇವನ ಕಾಲದಲ್ಲಿ ನಶಿಸಿ ಹೋಗುತ್ತಿದ್ದ ಕಾಡುಗಳನ್ನು ಮತ್ತೆ ಗಿಡನೆಡುವ ಮೂಲಕ ಉನ್ನತೀಕರಿಸಿದನು. ಮತ್ತು ತಗ್ಗು ಪ್ರದೇಶದ ಭೂಮಿಯನ್ನು ಕೃಷಿಗೆ

ಉನ್ನತೀಕರಿಸಿದನು. ಕ್ರಿ.ಶ.1348–49ರ ಅವಧಿಯಲ್ಲಿ ಪೋರ್ಚುಗಲ್‌ನಲ್ಲಿ ಬ್ಲಾಕ್‌ಡೆತ್‌ನ ವಿನಾಶದಿಂದ ಸುಮಾರು 1/3ರಷ್ಟು ಜನರು ಸಾವನ್ನು ಅನುಭವಿಸಿದರು.

ಕ್ರಿ.ಶ 14ನೇ ಶತಮಾನದ ನಂತರ ಪೋರ್ಚುಗಲ್ ಮತ್ತೆ ಯುದ್ಧಗಳಲ್ಲಿ ತೊಡಗಿತು. ಪೋರ್ಚುಗಲ್‌ನ ರಾಜ ಪರ್ನ್ಯಾಂಡೋ ಮರಣ ಹೊಂದಿದ ಮೇಲೆ ಅವನ ಮಗಳಾದ ಬಿಯಾಟ್ರಿಜ್ ಪೋರ್ಚುಗಲ್‌ನ ರಾಣಿಯಾದಳು. ಮತ್ತು ಅವಳು ಅನ್ಯದೇಶೀಯ ರಾಜನಾದ ಜಾನ್ ಆಫ್ ಕ್ಯಾಸ್ಟಿಲಿಯನ್ನು ವಿವಾಹವಾದಳು. ಕೆಲವು ಪೋರ್ಚುಗೀಸ್ ವ್ಯಕ್ತಿಗಳು ಇದನ್ನು ಖಂಡಿಸಿದರು. ಎಲ್ಲಿ ಪೋರ್ಚುಗಲ್ ಕ್ಯಾಸ್ಟಿಲಿಯೊಂದಿಗೆ ಒಂದಾಗುವುದೋ ಮತ್ತು ಪೋರ್ಚುಗಲ್ಲಿನ ಸ್ವತಂತ್ರಕ್ಕೆ ಧಕ್ಕೆ ಉಂಟಾಗುವುದೋ ಎಂದು ತಿಳಿದ ಅವರು ದಂಗೆ ಎದ್ದರು. ಈ ದಂಗೆಯನ್ನು ಹಡಗಿಸಲು ಕ್ಯಾಸ್ಟಿಲಿಯ ರಾಜ ದಂಡೆತ್ತಿ ಬಂದನು. ಸುಮಾರು ಎರಡು ವರ್ಷಗಳು ನಡೆದ ಈ ಯುದ್ಧದಲ್ಲಿ ಪೋರ್ಚುಗೀಸರು ಜಯಗಳಿಸಿದರು. ಮತ್ತು ಕ್ಯಾಸ್ಟಿಲಿಯನ್ನು ಬೇರು ಸಮೇತ ಕಿತ್ತು ಹಾಕಿದರು. ಈ ಯುದ್ಧವು ಅಲ್ಜುಬರೋಟ ಎಂದು ಪ್ರಸಿದ್ಧಿ ಪಡೆದಿದೆ. ಹಾಗೂ ಈ ಯುದ್ಧದಲ್ಲಿ ಪೋರ್ಚುಗೀಸರಿಗೆ ಬ್ರಿಟಿಷರು ಸಹಾಯ ಮಾಡಿದರು.

ಕ್ರಿ.ಶ.1386 ರಲ್ಲಿ ಪೋರ್ಚುಗೀಸರು ಇಂಗ್ಲೀಷ್‌ರೊಂದಿಗೆ ಒಕ್ಕೂಟವನ್ನು ರಚಿಸಿಕೊಂಡರು. ಕ್ರಿ.ಶ. 15ನೇ ಶತಮಾನದ ನಂತರ ಪೋರ್ಚುಗಲ್ ಒಂದು ಉತ್ತಮ ನೌಕಾ ದೇಶವಾಯಿತು. ಕ್ರಿ.ಶ 1415 ರಲ್ಲಿ ಪೋರ್ಚುಗೀಸರು ಮಾರಾಕೊನಾ ಸಿಯಾಟವನ್ನು ವಶಪಡಿಸಿಕೊಂಡರು. ಕ್ರಿ.ಶ 1419 ರಲ್ಲಿ ಮದೀರಿಯಾವನ್ನು ಮತ್ತು ಕ್ರಿ.ಶ.1427 ರಲ್ಲಿ ಅಜೋರ್ಸ್ ಅನ್ನು ಮತ್ತೆ ಮಾಡಿದರು. ರಾಜ ಹ್ಯಾರಿಯ ಆಡಳಿತ ಅವಧಿಯಲ್ಲಿ ಅಂದರೆ ಕ್ರಿ.ಶ 1394–1460ರ ವರೆಗೆ ಇವನು ನೌಕಾಯಾನವನ್ನು ಕೈಗೊಳ್ಳಲು ಹಣ ಮತ್ತು ನೌಕೆಗಳನ್ನು ನೌಕಧಿಕಾರಿಗಳಿಗೆ ನೀಡಿದನು. ಕ್ರಿ.ಶ 1471 ರಲ್ಲಿ ಟಂಗೀರ್ಸ್ ಅನ್ನು ವಶಪಡಿಸಿಕೊಂಡರು. ಕ್ರಿ.ಶ.1488 ರಲ್ಲಿ ಬಾರ್ತೋಲೂಮಿಯಾ ಡಯಾಸ್ ಕೇಪ್ ಆಫ್ ಗುಡ್ ಹೋಪ್ ಅನ್ನು ಕಂಡು ಹಿಡಿದನು. ಕ್ರಿ.ಶ.1492 ರಲ್ಲಿ ಕೊಲಂಬಸ್ ವೆಸ್ಟ್ ಇಂಡೀಸ್‌ನ್ನು ಪತ್ತೆ ಮಾಡಿದನು. ಕ್ರಿ.ಶ 1498 ರಲ್ಲಿ ವಾಸ್ಕೋಡಗಾಮನು ಆಫ್ರಿಕಾವನ್ನು ಬಳಸಿಕೊಂಡು ಭಾರತವನ್ನು ತಲುಪಿದನು. ಹೀಗೆ ಭಾರತಕ್ಕೆ ಬಂದ ಪೋರ್ಚುಗೀಸರು ಭಾರತ ಮತ್ತು ಯೂರೋಪಿನ ನಡುವೆ ವ್ಯಾಪಾರ ಮತ್ತು ವಾಣಿಜ್ಯವನ್ನು ಅಭಿವೃದ್ಧಿ ಪಡಿಸಿದರು. ನಂತರ ಇತರೆ ಯೂರೋಪಿಯನ್ನರು ಇದೇ ಮಾರ್ಗವಾಗಿ ಭಾರತಕ್ಕೆ ಬಂದರು.

### 3.2 ಪೋರ್ಚುಗೀಸರ ಆಗಮನ

ಪೋರ್ಚುಗಲ್‌ನ ರಾಜ ಜಾನ್ ಕ್ರಿ.ಶ 1484 ರಲ್ಲಿ ಭಾರತದ ಬಗ್ಗೆ ಸ್ವಲ್ಪ ಜ್ಞಾನವನ್ನು ಪಡೆದಿದ್ದ ಮತ್ತು ಪೂರ್ವದಲ್ಲಿರುವ ಶ್ರೀಮಂತ ಹಾಗೂ ಕುತೂಹಲಕಾರಿ ದೇಶಗಳನ್ನು ಶೋಧಿಸುವ ಸಾಧ್ಯತೆ ಕುರಿತು ವಿಚಾರಣೆಗಳನ್ನು ಮಾಡಿಸಿ ಮೂರು ಹಡಗುಗಳನ್ನು ಹೊಂದಿಸಿದನು. ಆದರೆ ಆ ಹಡಗುಗಳು ಅಲ್ಲಿಂದ ಹೊರಡುವ ಮುನ್ನವೇ ಅವನು ಮರಣ ಹೊಂದಿದ್ದ. ಇವನ ನಂತರ ಬಂದ ಇವನ ಉತ್ತರಾಧಿಕಾರಿ ಡಾಮ್ ಮ್ಯಾನುಎಲ್ ಈ ವಿಷಯದಲ್ಲಿ ಆಸಕ್ತಿ ವಹಿಸಿ ಜಲಸಂಚಾರ ಮಾಡುವಂತೆ ಆಜ್ಞೆಯಿತ್ತ. ಈ ಹಡಗುಗಳನ್ನು ವಾಸ್ಕೋಡಿಗಾಮ ಮತ್ತು ಇವನ ಸಹೋದರ ಪಾಲೊನ್ ನೇತೃತ್ವದಲ್ಲಿ ಕಳುಹಿಸಿಕೊಟ್ಟ. ವಾಸ್ಕೋಡಿಗಮನು ಜುಲೈ–8 1497 ರಲ್ಲಿ ಹೊರಟು ಆಗಸ್ಟ್ 26, 1498 ಕ್ಯಾಲಿಕಟ್‌ನ ಸಮೀಪಕ್ಕೆ ಬಂದ. ಕ್ಯಾಲಿಕಟ್‌ನ ರಾಜ ಅವನನ್ನು ಬಹಳ ಸಂತೋಷದಿಂದ ಬರಮಾಡಿಕೊಂಡನು.[1] ಆದರೆ ಪೋರ್ಚುಗೀಸರಲ್ಲಿ ಕೆಲವೊಂದು ಮನಸ್ತಾಪಗಳಿದ್ದವು. ಅವರು ವ್ಯಾಪಾರದಲ್ಲಾಗಲಿ, ಭಾರತೀಯ ರೊಂದಿಗಾಗಲಿ ಸೌಹಾರ್ದಯುತವಾದ ಸಂಬಂಧವನ್ನು ಬೆಳೆಸಲಿಲ್ಲ. ವಾಸ್ಕೋಡಿ ಗಾಮನು ಸ್ವಲ್ಪ ಕಾಲದ ನಂತರ ಪೋರ್ಚುಗಲ್‌ಗೆ ವಾಪಸ್ಸು ಮರಳಿದ. ತನ್ನ ಪ್ರಯಾಣ ವೆಚ್ಚದ ಸುಮಾರು ಅರವತ್ತು ಪಟ್ಟು ಅಧಿಕ ಸಂಪತ್ತನ್ನು ತೆಗೆದುಕೊಂಡು ಹೋದನು.

ಭಾರತಕ್ಕೆ ಹೊಸ ಜಲಮಾರ್ಗವನ್ನು ಕಂಡು ಹಿಡಿಯಲು ಪ್ರಮುಖ ಕಾರಣ ಭಾರತ ಪ್ರಾಚೀನ ಕಾಲದಿಂದಲೂ ವಿದೇಶಿಯರೊಂದಿಗೆ ವ್ಯಾಪಾರ ಸಂಪರ್ಕ ಹೊಂದಿತ್ತು. ಯೂರೋಪಿಯನ್ನರ ಆಗಮನಕ್ಕೆ ಮೊದಲು ಭಾರತದ ಸಮುದ್ರ ವ್ಯಾಪಾರ ಅರಬ್ಬರ ಕೈಯಲ್ಲಿತ್ತು. ಅರಬ್ಬರು ಟರ್ಕಿಯ ರಾಜಧಾನಿ ಕಾನ್‌ಸ್ಟಾಂಟಿನೋಪಲ್ ನಗರವನ್ನು ವ್ಯಾಪಾರದ ಕೇಂದ್ರವಾಗಿಸಿಕೊಂಡು ಅಲ್ಲಿಂದ ಯೂರೋಪಿನ ದೇಶಗಳಿಗೆ ಸರಕುಗಳನ್ನು ಸಾಗಿಸುತ್ತಿದ್ದರು. ಕ್ರಿ.ಶ 1453 ರಲ್ಲಿ ಆಟೋಮನ್ ಟರ್ಕರು ಕಾನ್‌ಸ್ಟಾಂಟಿನೋಪಲ್ ನಗರವನ್ನು ವಶಪಡಿಸಿಕೊಂಡ ನಂತರ ಅಲ್ಲಿಯ ಭೂಮಾರ್ಗ ಸಂಪೂರ್ಣವಾಗಿ ಮುಚ್ಚಲಾಯಿತು. ನಂತರ ಯೂರೋಪಿ ಯನ್ನರಿಗೆ ಅಗತ್ಯವಾಗಿದ್ದ ಸರಕುಗಳ ಬೆಲೆ ಏರಿಕೆಯಾಯಿತು. ಇದರಿಂದಾಗಿ ಯೂರೋಪಿಯನ್ನರು ಬಹಳಷ್ಟು ಕಷ್ಟ ಅನುಭವಿಸಿದರು. ಈ ಕಾರಣವು ಪ್ರಮುಖವಾಗಿ ಭಾರತದೊಂದಿಗೆ ಯೂರೋಪಿಯನ್ನರು ಹೊಸ ಜಲಮಾರ್ಗವನ್ನು ಕಂಡು ಹಿಡಿಯಲು ಮತ್ತು ಭಾರತದೊಂದಿಗೆ ನೇರ ವ್ಯಾಪಾರವನ್ನು ಹೊಂದಲು ಸಹಾಯಕವಾಯಿತು. ಯೂರೋಪಿಯನ್ನರ ಆಗಮನದೊಂದಿಗೆ ಭಾರತದ ಇತಿಹಾಸದಲ್ಲಿ ಆಧುನಿಕ ಯುಗ ಆರಂಭವಾಯಿತು.

ಕ್ರಿ.ಶ 1500 ರಲ್ಲಿ ಕೆಬ್ರಾಲ್ ಇನ್ನೊಂದು ದೊಡ್ಡ ಹಡಗು ಪಡೆ ತೆಗೆದುಕೊಂಡು ಸೆಪ್ಟಂಬರ್ 13 ರಂದು ಕ್ಯಾಲಿಕಟ್‌ಗೆ ತಲುಪಿದನು. ಕ್ಯಾಲಿಕಟ್‌ಗೆ ಬಂದ ಕೆಬ್ರಾಲನು ಸ್ಥಳೀಯ ರಾಜನಾದ ಜಾಮೊರಿನ್‌ನೊಂದಿಗೆ ಜಗಳ ಕಾಯ್ದುಕೊಂಡು ಶಾಂತಿಯುತ ವ್ಯಾಪಾರದ ಬದಲು ವಿಶ್ವಾಸ ಕಳೆದುಕೊಳ್ಳುವ ರೀತಿಯಲ್ಲಿ ಅವನು ಆಕ್ರಮಣಗಳನ್ನು ಮಾಡಿದನು. ಈ ಆಕ್ರಮಣಗಳ ಹೊರತಾಗಿಯೂ ಕೆಲವೊಂದು ಐರೋಪ್ಯರು ಅಲ್ಲೇ ಉಳಿದುಕೊಂಡರು. ಅದರಲ್ಲಿ ಪ್ರಮುಖವಾದ ಆ ಕಾಲದ ದಿನಚರಿಗಾರನಾದ ಬಾರ್ಬೊಸಾ ಕೂಡ ಒಬ್ಬನಾಗಿದ್ದನು. ಕ್ರಿ.ಶ.1504 ರಲ್ಲಿ ವಾಸ್ಕೋಡಿಗಾಮನು ಮತ್ತೆ ಭಾರತಕ್ಕೆ ಬಂದನು. ತನ್ನೊಂದಿಗೆ ಸುಮಾರು ಇಪ್ಪತ್ತು ನೌಕೆಗಳನ್ನು ತಂದನು. ಈಗ ಅವನು ಕ್ರೂರಿ, ದುರಾಸೆಯ ದುಷ್ಟನಾಗಿದ್ದು ವ್ಯಾಪಾರದಲ್ಲಿ ತನ್ನ ಪ್ರತಿಸ್ಪರ್ಧಿಗಳಾದ ಅರಬ್ಬರನ್ನು ಕ್ರೂರವಾಗಿ ದಂಡಿಸಿದನು. ಅವರ ಅನೇಕ ಯಾತ್ರಾರ್ಥ ಹಡಗುಗಳನ್ನು ಮುಳುಗಿಸಿದನು. ಅವರು ವ್ಯಾಪಾರ ಮಾಡುವಂತೆ ಬೆದರಿಸಿದನು. ಜಾಮೊರಿನ್‌ನನ್ನು ಅರಬ್ಬರಿಗೆ ಆಶ್ರಯ ಕೊಡದಂತೆ ಹೆದರಿಸಿದನು. ಕೊಚ್ಚಿನ್‌ನಲ್ಲಿ ಒಂದು ವ್ಯಾಪಾರ ಕೋಠಿಯನ್ನು ಕಟ್ಟಿ ಅದರ ರಕ್ಷಣೆಗೆ ಒಂದು ನೌಕಾಪಡೆಯನ್ನು ಇಟ್ಟು ಹಿಂತಿರುಗಿದನು. ಈಗ ಜಾಮೋರಿನ್‌ನು ಅರಬ್‌ರಿಂದ ಪ್ರೇರಿತವಾಗಿ ಕೊಚ್ಚಿಯ ಮೇಲೆ ದಾಳಿ ಮಾಡಿದ. ಆದರೆ ಆತನು ದಾಳಿಯಲ್ಲಿ ಯಶಸ್ವಿಯಾಗಲಿಲ್ಲ.[2]

ಕ್ರಿ.ಶ 1504 ರಲ್ಲಿ ಭಾರತಕ್ಕೆ ಬಂದ ವಾಸ್ಕೋಡಿಗಾಮನು ಭಾರತದ ಕರಾವಳಿಯ ಸಮೀಪವಿದ್ದ ಹಲವು ನೂರು ಪ್ರಯಾಣಿಕರಿದ್ದ ದೊಡ್ಡ ನೌಕಾಪಡೆಯನ್ನು ಅದರ ಎಲ್ಲಾ ನಾವಿಕರನ್ನು ಸಂಪೂರ್ಣವಾಗಿ ನಾಶಪಡಿಸಿದ. ಅಕ್ಟೋಬರ್ 26, 1504 ರಲ್ಲಿ ಕ್ಯಾಲಿಕಟ್ ತಲುಪಿದ ಕೂಡಲೆ ನಗರದ ಮೇಲೆ ಗುಂಡಿನ ಮಳೆಗರೆದು ಬಂದರಿನಲ್ಲಿದ್ದ ನಿರಾಪೇಕ್ಷ ಮೀನುಗಾರರನ್ನು ಸದೆಬಡಿದು ಅವರಲ್ಲಿ ಎಂಟುನೂರು ಜನರನ್ನು ಪಾಶವೀ ಕ್ರೂರತೆಯಿಂದ ಉದ್ದೇಶಪೂರ್ವಕವಾಗಿ ಕೊಂದ. ಕೊಚ್ಚಿನ್‌ನಲ್ಲಿ ಒಂದು ಕಾರ್ಖಾನೆ ಸ್ಥಾಪಿಸಿ ಕ್ರಿ.ಶ 1503 ರಲ್ಲಿ ಪುನಃ ಪೋರ್ಚುಗಲ್‌ಗೆ ವಾಪಸ್ಸಾದ.[3]

ಕ್ರಿ.ಶ 1505ರಲ್ಲಿ ಅಲ್ಮೆಡಾನನ್ನು ಭಾರತದ ಕರಾವಳಿಯಲ್ಲಿ ಪೋರ್ಚುಗೀಸರ ರಾಜಪ್ರತಿನಿಧಿಯಾಗಿ ನೇಮಿಸಲಾಯಿತು. ಅವನು ತನ್ನೊಂದಿಗೆ ದೊಡ್ಡ ಹಡಗು ಪಡೆಯನ್ನು ಮತ್ತು 1500 ಸೈನಿಕರನ್ನು ತೆಗೆದುಕೊಂಡು ಬಂದ. ಹೊನ್ನಾವರದಲ್ಲಿ ಆರಂಭಸಿದ ಕಾದಾಟದ ನಂತರ ಪೋರ್ಚುಗೀಸರ ನಿಜವಾದ ಹಿತಾಸಕ್ತಿಯು ಸ್ಥಳೀಯರ ಮೇಲೆ ರಕ್ತಪಾತದ ಮತ್ತು ದುಬಾರಿಯ ಆಕ್ರಮಣಗಳಲ್ಲಿ ಅಡಗಿರದೆ ಶಾಂತಿಯುತ ವ್ಯಾಪಾರದಲ್ಲಿ ಅಡಗಿದೆಯೆಂಬುದನ್ನು

ಅಲ್ಮೇಡಾ ಮೊದಲು ಕಂಡುಕೊಂಡ. ಒಬ್ಬ ಪ್ರಭಾವಿ ಸ್ಥಳೀಯನಿಂದ ವಿಜಯನಗರದ ಸರ್ವೋತ್ತಮ ರಾಜ್ಯದ ಅಸ್ತಿತ್ವ ಹಾಗೂ ಅದರ ರಾಜ ನರಸಿಂಹನ ಬಗ್ಗೆ ತಿಳಿದುಕೊಂಡ ಅಲ್ಮೇಡಾನು ಭಟ್ಕಳದಲ್ಲಿ ಒಂದು ಕೋಟೆ ಕಟ್ಟಿಕೊಳ್ಳಲು ವಿಜಯನಗರ ರಾಜನಾದ ನರಸಿಂಹನ ಅನುಮತಿ ಕೋರಿದ.[4]

### 3.3 ಪೋರ್ಚುಗೀಸರ ದಬ್ಬಾಳಿಕೆಗಳು

ಭಾರತಕ್ಕೆ ವ್ಯಾಪಾರದ ಉದ್ದೇಶದಿಂದ ಬಂದ ಪೋರ್ಚುಗೀಸರು ಭಾರತದಲ್ಲಿ ತನ್ನ ಸಾರ್ವಭೌಮವನ್ನು ಸ್ಥಾಪಿಸುವ ಉದ್ದೇಶದಿಂದ ಸ್ಥಳೀಯರೊಂದಿಗೆ ಮತ್ತು ಸ್ಥಳೀಯ ವ್ಯಾಪಾರಿಗಳಾದ ಅರಬ್ಬರೊಂದಿಗೆ ಯಾವಾಗಲೂ ಕಲಹಗಳಲ್ಲಿ ತೊಡಗಿದ್ದರು. ಅರಬ್ಬರು ಈಗಾಗಲೇ ಭಾರತದಲ್ಲಿ ತಮ್ಮ ವ್ಯಾಪಾರ ಏಕಸ್ವಾಮ್ಯವನ್ನು ಹೊಂದಿದ್ದರು. ಅರಬ್ಬರ ವ್ಯಾಪಾರ ಏಕಸ್ವಾಮ್ಯವನ್ನು ಮುರಿಯುವುದು ಪೋರ್ಚುಗೀಸರ ಗುರಿಯಾಗಿತ್ತು. ಈ ಉದ್ದೇಶದಿಂದ ಅರಬ್ಬರು ಮತ್ತು ಪೋರ್ಚುಗೀಸರು ಸಂಘರ್ಷದಲ್ಲಿ ತೊಡಗಿದ್ದರು. ಪೋರ್ಚುಗೀಸರ ಯುದ್ಧಗಳಿಂದಾಗಿ ಕ್ಯಾಲಿಕಟ್ ನಾಶವಾಯಿತೆಂದು ನಿಕೆಟಿನ್ ತನ್ನ ಬರವಣಿಗೆಯಲ್ಲಿ ತಿಳಿಸಿದ್ದಾನೆ. ಮುಸ್ಲಿಮರಿಂದ ಸುಮಾರು ನಲವತ್ತೇಳು ಪೋರ್ಚುಗೀಸರು ಕೊಲೆಯಾದರೆಂದು ವಾರ್ಥಿಮಾ ತಿಳಿಸುತ್ತಾನೆ.[5]

ಮಾರ್ಚ 1506ರಲ್ಲಿ ಪೋರ್ಚುಗೀಸರ ಹಡಗುಪಡೆ ಕ್ಯಾಲಿಕಟ್‌ನ ರಾಜನಿಗೆ ಸೇರಿದ ಚಿಕ್ಕ ದೋಣಿಗಳ ತಂಡವನ್ನು ವಿಪುಲ ಪ್ರಾಣಹಾನಿಯೊಂದಿಗೆ ನಾಶಪಡಿಸಿತು. ಕ್ರಿ.ಶ.1507 ರಲ್ಲಿ ಪೋರ್ಚುಗೀಸರು ಎಸಗಿದ ಅತ್ಯಾಚಾರ ಕಣ್ಣನೂರಿನಲ್ಲಿರುವ ಅವರ ಕಾರ್ಖಾನೆಗೆ ಸ್ಥಳೀಯರು ಮುತ್ತಿಗೆ ಹಾಕಿದರು. ಅದರೆ ಪೋರ್ಚುಗಲ್‌ನಿಂದ ಬಂದ ಮತ್ತೊಂದು ಪಡೆ ಆ ಮುತ್ತಿಗೆಯನ್ನು ಹತ್ತಿಕ್ಕಿ ಅವರ ಕಾರ್ಖಾನೆಯನ್ನು ಮರಳಿ ಪಡೆಯಿತು. ಕ್ರಿ.ಶ 1507ರ ಕೊನೆಯಲ್ಲಿ ಅಲ್ಮೇಡಾ ಮತ್ತು ದ ಕುನ್ಹಾ ತಮ್ಮ ಬರಹಗಳನ್ನು ಬಹಳಷ್ಟು ಒಟ್ಟುಗೂಡಿಸಿ ಪುನಃ ಕ್ಯಾಲಿಕಟ್‌ನ ಮೇಲೆ ಕೊಂಚ ಯಶಸ್ವಿಯಾಗಿ ದಾಳಿ ಮಾಡಿದರು.[6]

ಪೋರ್ಚುಗೀಸರು ಕರವಳಿಯಲ್ಲಿನ ವಿವಿಧ ಸ್ಥಳಗಳಲ್ಲಿ ನೆಲೆಯೂರುವಲ್ಲಿ ಯಶಸ್ವಿ ಯಾಗಿದ್ದರು ಮತ್ತು ಅವರು ಅಲ್ಲಿ ತಮ್ಮ ವ್ಯಾಪಾರದ ರಕ್ಷಣೆಗಾಗಿ ಹಲವಾರು ಕೋಟೆಗಳನ್ನು ನಿರ್ಮಿಸಿದರು. ಕ್ಯಾಲಿಕಟ್‌ನ ಸಾಮುರಿ ಮತ್ತು ವಿಜಯನಗರದ ಇತರ ಸಾಮಂತರೊಂದಿಗೆ ಅವರು ಯಾವಾಗಲೂ ಕದನದಲ್ಲಿ ನಿರತರಾಗಿದ್ದರು. ಆದರೆ ಕೃಷ್ಣದೇವರಾಯನೊಂದಿಗೆ ಅವರ

ಮೈತ್ರಿ ಸಂಬಂಧ ಹೊಂದಿದ್ದರು. ಮತ್ತು ಕ್ರಿ.ಶ 1540 ರಲ್ಲಿ ಬಿಜಾಪುರ ಅಹಮದ್ ನಗರಗಳ ರಾಜರೊಡನಲ್ಲದೆ ಸಾಮುರಿ ಜನತೆಗೂ ಶಾಂತಿ ಒಡಂಬಡಿಕೆಯನ್ನು ಸ್ವೀಕರಿಸಿದರು.

ಪೋರ್ಚುಗೀಸರೊಂದಿಗಿನ ವ್ಯವಹಾರಗಳುದ್ದಕ್ಕೂ ಹಿಂದೂ ರಾಜರು ವಚನ ಮುರಿದ ಒಂದು ಪ್ರಸಂಗವು ಕೂಡ ಇಲ್ಲ. ಆದರೆ ಅದೇ ಮಾತನ್ನು ಇನ್ನೊಂದು ಬದಿಯವರ ಅಂದರೆ ಪೋರ್ಚುಗೀಸರ ವಿಷಯದಲ್ಲಿ ಹೇಳಲಾಗದು. ಭಾರತೀಯರನ್ನು ಲೂಟಿ, ದರೋಡೆ, ಕೊಲೆ ಮಾಡಲು ತಮಗೆ ದೈವದತ್ತ ಹಕ್ಕು ಇತ್ತೆಂದು ಯೂರೋಪಿಯನ್ನರು ಭಾವಿಸಿದಂತೆ ತೋರುತ್ತದೆ. ಪೋರ್ಚುಗೀಸರ ಇಡೀ ದಾಖಲೆಗಳು ದುಷ್ಕೃತ್ಯಗಳ ಸರಮಾಲೆಯಾಗಿದೆ. ಡೊಮಿಂಗೋ ಪಯಾಸ್ ಕೊಟ್ಟಿರುವ ಹೇಳಿಕೆಗಳ ಪ್ರಕಾರ ಪೋರ್ಚುಗೀಸರು ಮೈತ್ರಿ ಒಪ್ಪಂದವನ್ನು ಮಾಡಿಕೊಂಡರು ಇವರೊಂದಿಗೇನೇ ಹಾಗೂ ಬಹಿರಂಗವಾಗಿ ಗೆಳೆತನ ಪ್ರಕಟಿಸುತ್ತಿದ್ದುದೂ ಇವರೊಂದಿಗೇನೆ, ಆದರೂ ಅವರ ದಬ್ಬಾಳಿಕೆಗಳನ್ನು ಹೇಳುವುದಾದರೆ, ಕ್ರಿ.ಶ 1545ರಲ್ಲಿ ಗೋವಾದ ಮಂಡಲಾಧಿಪತಿ ದೊಡ್ಡ ಹಡಗು ಪಡೆಯನ್ನು ಮತ್ತು ಮೂರು ಸಾವಿರ ಸೈನಿಕರನ್ನು ಸಿದ್ಧಗೊಳಿಸಿದ. ಕ್ರಿ.ಶ 1545ರಿಂದ 1547ರ ವರೆಗೆ ಡಾಮ್ ಜೂಹಾಟ್ ದ ಕಾಸ್ಟ್ರೋ ಗೋವಾದ ಮಂಡಲಾಧಿಪತಿಯಾಗಿದ್ದನು. ಮೂರು ಸಾವಿರ ಸೈನಿಕರನ್ನು ಒಳಗೊಂಡ ಸೈನ್ಯವನ್ನು ಕರಾವಳಿಯ ತೀರದಲ್ಲಿ ಹಡಗು ಪ್ರಯಾಣ ಬೆಳೆಸಿ ತನ್ನ ಸೈನಿಕರನ್ನು ಅಲ್ಲಿ ಇಳಿಸಿ ಒಳನಾಡಿನಲ್ಲಿ ಸಾಗಿ ಕೇವಲ ತನ್ನ ದುರಾಸೆಗಾಗಿ ತಿರುಮಲ ದೇವಾಲಯವನ್ನು ನಾಶಮಾಡುವುದು ಅವನ ಹೇಯ ಕೃತ್ಯವಾಗಿತ್ತು. ಆದರೆ ಅದೃಷ್ಟವಶಾತ್ ತೀವ್ರ ಬಿರುಗಾಳಿ ಅವನು ಸಮುದ್ರಯಾನ ಬೆಳೆಸದಂತೆ ತಡೆಗಟ್ಟಿತ್ತು. ಆದರೂ ಅವರು ಪಶ್ಚಿಮ ಕರಾವಳಿಯಲ್ಲಿನ ಕೆಲವು ಶ್ರೀಮಂತ ದೇವಾಲಯಗಳನ್ನು ನಾಶಮಾಡಿ ಕೊಳ್ಳೆ ಹೊಡೆದು ಆ ಲೂಟಿಯಿಂದ ತನ್ನನ್ನು ಶ್ರೀಮಂತನನ್ನಾಗಿಸಿಕೊಂಡ. ಈ ದೇವಾಲಯಗಳಿಗೆ ಸೇರಿದ ಶಾಂತಪ್ರಿಯ ಬ್ರಾಹ್ಮಣರು ಯಾವುದೇ ರೀತಿಯ ವಿರೋದ ತೋರುವಲ್ಲಿ ವಿಫಲರಾದರು.[7]

ಇದೇ ಸಂದರ್ಭದಲ್ಲಿ ಪೋರ್ಚುಗೀಸರು ಬಹಳ ಕಾರ್ಯಶೀಲರಾಗಿದ್ದರು. ಗೋವಾದ ಮಂಡಲಾಧಿಪತಿ ಅಪೊನ್ಸೊ ದ ಸೌಸಾನು ಭಟ್ಕಳದ ಮೇಲೆ ದಾಳಿ ಮಾಡಿದನು. ಕಾರಣ ಭಟ್ಕಳದ ರಾಣಿ ಪೋರ್ಚುಗೀಸರಿಗೆ ಸಲ್ಲಬೇಕಿದ್ದ ಕಪ್ಪ ತಡೆಹಿಡಿದಳು. ಅದರಿಂದಾಗಿ ಕೋಪಗೊಂಡ ಪೋರ್ಚುಗೀಸರ ಮಂಡಲಾಧಿಪತಿಯಾದ ಅಪೊನ್ಸೊ ದ ಸೌಸಾನು ಭಟ್ಕಳದ ರಾಣಿಯ ಪ್ರದೇಶದ ಮೇಲೆ ಆಕ್ರಮಣ ಮಾಡಿದ ಮತ್ತು ನಾಡನ್ನು ಬೆಂಕಿ ಮತ್ತು ಕತ್ತಿಯಿಂದ ನಾಶಮಾಡಿದ. ಅವಳ ನಗರವನ್ನು ಸುಡಲಾಯಿತು. ಹಿಂದೂಗಳನ್ನು ದೊಡ್ಡ ಸಂಖ್ಯೆಯಲ್ಲಿ

ಕೊಲ್ಲಲಾಯಿತು ಮತ್ತು ರಾಣಿಯನ್ನು ಶರಣಾಗತವಾಗುವ ಸ್ಥಿತಿಗೆ ಇಳಿಸಲಾಯಿತು.[8] ಕ್ರಿ.ಶ. 1558ರಲ್ಲಿ ಡಾಮ್ ಕಾನ್‌ಸ್ಟಂಟಾಯಿನ್ ಬ್ರಾಗಂಜಾ ಗೋವಾದ ರಾಜಪ್ರತಿನಿಧಿಯಾದ ಮತ್ತು ಅವನ ಆಡಳಿತಾವದಿ ಎಲ್ಲಾ ರೀತಿಯ ಹಿಂಸೆ ಮತ್ತು ಆಕ್ರಮಣಗಳಿಂದ ಕುಖ್ಯಾತವಾಗಿತ್ತು. ಕ್ರಿ.ಶ. 1559ರಲ್ಲಿ ಲೂಯಿಜ್‌ದ ಮೇಲೂ ಮಲಬಾರ್ ಕರಾವಳಿ ಮೇಲಿನ ಪಟ್ಟಣಗಳೊಳಗೆ ಬೆಂಕಿ ಮತ್ತು ಕತ್ತಿ ತೆಗೆದುಕೊಂಡು ಹೋದ. ಅವನು ಮಂಗಳೂರಿನ ಮೇಲೆ ಆಕ್ರಮಣ ಮಾಡಿ ಪಟ್ಟಣಕ್ಕೆ ಬೆಂಕಿಯಿಟ್ಟ. ಎಲ್ಲಾ ನಿವಾಸಿಗಳನ್ನು ಕೊಂದು ಆ ವರ್ಷದಲ್ಲಿ ನಂತರ ಅದೇ ರೀತಿ ನಾಶಪಡಿಸಿ ಇಡೀ ಸಮುದ್ರ ತೀರವನ್ನು ಹಾಳುಗೆಡವಿದ.

ಕ್ರಿ.ಶ 1560ರಲ್ಲಿ ಗೋವಾದ ಪೀಠವನ್ನು ಅಗ್ರ ಮಠಾಧಿಪತ್ಯಕ್ಕೆ ಏರಿಸಲಾಯಿತು ಮತ್ತು ಸ್ಪೇನಿನ ಮಠೀಯ ನ್ಯಾಯಸ್ಥಾನವನ್ನು ಭಯ ಮತ್ತು ಕಟ್ಟುಪಾಡುಗಳುಳ್ಳ ಮಠೀಯ ನ್ಯಾಯಸ್ಥಾನವನ್ನು ಸ್ಥಾಪಿಸಲಾಯಿತು. ಗೋವಾದ ಮತ್ತು ಅದರ ಆಶ್ರಿತ ರಾಜ್ಯಗಳ ನಿವಾಸಿಗಳನ್ನು ಕ್ರೈಸ್ತ ಧರ್ಮ ಸ್ವೀಕರಿಸುವಂತೆ ಒತ್ತಾಯಿಸಲಾಯಿತು. ಮತ್ತು ಒಪ್ಪದಿದ್ದರೆ ಅಥವಾ ಅವಿನಯ ತೋರಿದರೆ ಸೆರೆಯಲ್ಲಿಟ್ಟು ಚಿತ್ರಹಿಂಸೆಗೆ ಗುರಿಪಡಿಸಲಾಗುತ್ತಿತ್ತು. ಈ ವರ್ಷದಲ್ಲಿಯೂ ಮತ್ತು ಮುಂದಿನ ವರ್ಷವೂ ಪೋರ್ಚುಗೀಸರ ಕೊಳ್ಳೆಯ ದಂಡೆಯತ್ರೆಗಳು ಮುಂದುವರಿದವು.[9] ಕ್ರಿ.ಶ 1564ರಲ್ಲಿ ಗೋವಾದ ರಾಜಪ್ರತಿನಿಧಿ ಮಲಭಾರಿಗಳಿಗೆ ಸೇರಿದ ಅನೇಕ ಹಡಗುಗಳನ್ನು ನಾಶಪಡಿಸಲೋಸುಗ ಮೂರು ಹಡಗುಗಳೊಂದಿಗೆ ಮೆಸ್ಕ್ವೀಟಾವನನ್ನು ಕಳುಹಿಸದ. ಮೆಸ್ಕ್ವೀಟಾ ಇವುಗಳಲ್ಲಿ ಒಂದು ಸಲಕ್ಕೆ ಎರಡೆರಡೂ ಮೂರು ಮೂರರಂತೆ ಇಪ್ಪತ್ತನಾಲ್ಕನು ಸೆರೆಹಿಡಿದು ಅವುಗಳನ್ನು ಮುಳುಗಿಸಿ, ಅನೇಕ ಸೈನಿಕರ ತಲೆ ಹೊಡೆಸಿದ ಮತ್ತು ಇತರ ನೂರಾರು ಜನರನ್ನು ಹಾಯಿಗಳಲ್ಲಿ ಹೊಲಿದು ಸಮುದ್ರಕ್ಕೆಸೆದ. ಈ ವಿಧಗಳಲ್ಲಿ ಅವನು 2000 ಜನರನ್ನು ಕೊಂದ.

ಈ ನಾಡಿನ ನತದೃಷ್ಟ ನಿವಾಸಿಗಳು ಹತಾಶೆಗೊಳಪಟ್ಟು ತನ್ನ ನೆಲದ ಮೇಲೆ ದಾಳಿ ಮಾಡಿದವರನ್ನು ನಾಶಗೊಳಿಸಲು, ಎಷ್ಟೇ ಅಪಾಯ ಬರಲಿ ಎಂದು ನಿರ್ಧರಿಸಿದುದರಿಂದ ಮಲಬಾರಿನಲ್ಲಿ ಗಂಭೀರ ಯುದ್ಧ ಪರಿಣಮಿಸಿತು. ಕಣ್ಣಾನೂರಿನಲ್ಲಿ ಪೋರ್ಚುಗೀಸರ ಮೇಲೆ ಹಲ್ಲೆ ಮಾಡಲಾಯಿತು. ಮತ್ತು ಘೋರ ಕದನಗಳ ಸರಣಿ ಸಂಭವಿಸಿತು. ಅವುಗಳಲ್ಲಿ ಅಧಿಪತಿ ನರೊನ್ಹಾ ಸಾವಿರ ತೆಂಗಿನಮರಗಳನ್ನು ಕಡಿದು ನಾಡನ್ನು ಹಾಳುಗೆಡವಿದ ಮತ್ತು ಅನೇಕ ಜನರನ್ನು ಧ್ವಂಸ ಮಾಡಿದ. ಆದರೆ ಕೊನೆಗೆ ಶಾಂತಿ ಏರ್ಪಟ್ಟಿತು.

ವಿಜಯನಗರ ಸಾಮ್ರಾಜ್ಯವು ತಾಳಿಕೋಟೆ ಯುದ್ಧದಲ್ಲಿ ಸೋತ ಮೇಲೆ ಹಲವಾರು ಬೇರೆ ಬೇರೆ ಘಟನೆಗಳು ಸಂಭವಿಸಿದವು. ಪೋರ್ಚುಗೀಸ್ ವ್ಯಾಪಾರಿಗಳು ವಿಜಯನಗರದೊಂದಿಗೆ

ಉತ್ತಮ ವ್ಯಾಪಾರ ಸಂಬಂಧ ಹೊಂದಿದ್ದರು. ಪೋರ್ಚುಗೀಸರು ನೌಕಾಬಲದಿಂದ ಸ್ಥಳೀಯ ಹಡಗುಗಳನ್ನು ದೋಚಿದರು. ಮುಸ್ಲಿಮರೋ ಅಥವಾ ಹಿಂದೂಗಳೋ ಅವರ ಮೇಲೆ ಶುಲ್ಕವನ್ನು ವಿದಿಸಿದರು. ಹಳ್ಳಿಗಳನ್ನು ದೋಚಿದರು ಮತ್ತು ಸುಟ್ಟು ಹಾಕಿದರು. ಅವರಿಗೆ ಅನುಕೂಲವಾಗುವ ಕೋಟೆಗಳು ಮತ್ತು ಬಂದರುಗಳನ್ನು ವಶಪಡಿಸಿಕೊಂಡರು. ಕೆನಾರಾದಲ್ಲಿದ್ದ ಸ್ಥಳೀಯ ನಿವಾಸಿಗಳು ತೆರಿಗೆ ಕಟ್ಟಲು ನಿರಾಕರಿಸಿದರು. ಪೋರ್ಚುಗೀಸರು ಖಡ್ಗ ಮತ್ತು ಬೆಂಕಿಯ ನೀತಿಯಿಂದ ಇಡೀ ಮಲಬಾರಿನ ಸ್ಥಳೀಯ ಜನರನ್ನು ಹಿಂಸೆಗೆ ಗುರಿಪಡಿಸಿದರು. ಬರಕೂರಿನ ಕೋಟೆಗಳನ್ನು ನಾಶಪಡಿಸಿದರು. ನಂತರ ಹೊನ್ನಾವರದ ಮೇಲೆ ಕ್ರಿ.ಶ.1569ರಲ್ಲಿ ದಾಳಿ ಮಾಡಿ ಆ ಕೋಟೆಯನ್ನು ನಾಶಪಡಿಸಿದರು.[10]

ಗೇರುಸೊಪ್ಪದ ರಾಣಿಯು ವಿಜಯನಗರ ಸಾಮ್ರಾಜ್ಯದ ಸಾಮಂತಳಾಗಿದ್ದಳು. ಇವಳು ಪೋರ್ಚುಗೀಸರ ದಬ್ಬಾಳಿಕೆಗಳನ್ನು ಎದುರಿಸಲಾಗದೇ ಸಾಮ್ರಾಜ್ಯದಿಂದ ಓಡಿ ಹೋದಳು. ಅವಳ ಸಾಮ್ರಾಜ್ಯದ ನಗರಗಳನ್ನು ವಶಪಡಿಸಿಕೊಂಡರು. ಗೇರುಸೊಪ್ಪದ ರಾಣಿಯು ಬಿಜಾಪುರ ಮತ್ತು ಅಹಮದಾಬಾದ್ ನಗರದೊಂದಿಗಿನ ಮುಸ್ಲಿಂ ಸಾಮಂತರೊಂದಿಗೆ ಮಿಲಿಟರಿ ಕೂಟವನ್ನು ರಚಿಸಿಕೊಂಡಳು. ಇವರೆಲ್ಲರೂ ಕ್ಯಾಲಿಕಟ್‌ನ ರಾಜ ಜಾಮೊರಿನ್‌ನೊಂದಿಗೆ ಪೋರ್ಚುಗೀಸರ ವಿರುದ್ಧ ಯುದ್ಧ ಸಾರಿದರು. ಆದಿಲ್‌ಖಾನನು ಸ್ವತಃ ತಾನೇ ಗೋವಾದ ವಿರುದ್ಧ ಸೈನ್ಯವನ್ನು ಮುಂದುವರೆರಸಿದನು. ನಂತರ ಕ್ರಿ.ಶ.1570ರಲ್ಲಿ ಗೇರುಸೊಪ್ಪದ ರಾಣಿ ಈ ಕೂಟದ ಸಹಾಯದಿಂದ ಮೊದಲು ಬಾರಕೂರಿಗೆ ಮತ್ತು ಎರಡನೆಯದಾಗಿ ಹೊನ್ನಾವರದ ಮೇಲೆ ದಾಳಿ ಮಾಡಿ ಪೋರ್ಚುಗೀಸರನ್ನು ಹತ್ತಿಕ್ಕಲು ಪ್ರಯತ್ನಿಸಿದಳು. ಆದರೆ ಪೋರ್ಚುಗೀಸರು ಈ ಮಿಲಿಟರಿ ಕೂಟವನ್ನು ಮುರಿದರು. ನಂತರ ಒಂದು ತಿಂಗಳ ಕಾರ್ಯಾಚರಣೆಯ ನಂತರ ಆದಿಲ್‌ಖಾನನೂ ಸಹ ಈ ಕಾರ್ಯಚರಣೆಯಿಂದ ಹಿಂದೆ ಸರಿದನು. ಇದರಿಂದಾಗಿ ಗೇರುಸೊಪ್ಪದ ರಾಣಿಯು ಹೊನ್ನಾವರವನ್ನು ಪಡೆಯಲು ವಿಫಲವಾಗಿ ಕ್ರಿ.ಶ 1570ರ ಜುಲೈನಲ್ಲಿ ಪೋರ್ಚುಗೀಸರರೊಂದಿಗೆ ಮರು ಒಪ್ಪಂದ ಮಾಡಿಕೊಂಡಳು. [11]

### 3.4 ಸಾಗರಾದಿಕಾರಕ್ಕೆ ಸಂಘರ್ಷಗಳು:

ಭಾರತಕ್ಕೆ ಪೋರ್ಚುಗೀಸರ ಆಗಮನದ ನಂತರ, ಈ ಘಟನೆ ಭಾರತದ ಅರಬ್ಬರಲ್ಲಿ ಅಸೂಯೆಯನ್ನುಂಟು ಮಾಡಿತ್ತು. ಅರಬ್ಬರನ್ನು ಮೂರ್ಸ್ ಗಳೆಂದು ಕರೆಯುತ್ತಿದ್ದರು. ಮೂರ್ಸ್‌ಗಳು ಮತ್ತು ಮಾಪಿಳ್ಳೆಗಳು ಭಾರತದ ಸಾಗರ ವ್ಯಾಪಾರದ ಮೇಲೆ ನಿಯಂತ್ರಣ ಹೊಂದಿದ್ದರು. ಆಕಾಲದ ಅರಬ್ ಪ್ರವಾಸಿಗರ ಉಲ್ಲೇಖಗಳ ಪ್ರಕಾರ ಮಲಬಾರಿನ ಬಂಧರುಗಳು

ಸಂಪೂರ್ಣವಾಗಿ ಅರಬ್ಬರ ನಿಯಂತ್ರಣದಲ್ಲಿದ್ದವು. ಭಾರತಕ್ಕೆ ವಾಸ್ಕೋಡಿಗಾಮ ಬಂದ ಸಂದರ್ಭದಲ್ಲಿ ಅರಬ್ಬರು ಸಂಪೂರ್ಣವಾಗಿ ಮಲಬಾರಿನ ವ್ಯಾಪಾರದಲ್ಲಿ ನಿಯಂತ್ರಣವನ್ನು ಹೊಂದಿದ್ದರು. ಲುಡೋಮಿಕೋ ವಾರ್ತೆಮಾನ ಹೇಳೀಕೆಯ ಪ್ರಕಾರ "ಪೋರ್ಚುಗೀಸರಿಗಿಂತ ಮೊದಲು ಅರಬ್ಬರು ಭಾರತವನ್ನು ಪತ್ತೆ ಮಾಡಿದರು ಮತ್ತು ಅವರು ಸ್ವತಂತ್ರವಾಗಿ ಭಾರತದ ನಗರಗಳಲ್ಲಿ ವ್ಯಾಪಾರ ಮಾಡುತ್ತಿದ್ದರು.[12] ಅವರ ವ್ಯಾಪಾರಿ ಕೇಂದ್ರಗಳಿಗೆ ಯಾರೂ ಕೂಡ ಹೋಗುವ ಧೈರ್ಯ ಮಾಡುತ್ತಿರಲಿಲ್ಲ."

ಅರಬ್ಬರು ಸ್ಥಳೀಯರ ರಾಜರೊಂದಿಗೆ ಉತ್ತಮವಾದ ಸಂಪರ್ಕವನ್ನು ಇಟ್ಟುಕೊಂಡಿದ್ದರು. ಅರಬ್ಬರು ರಫ್ತು ಮತ್ತು ಆಮದಿನಲ್ಲಿ ಏಕಸ್ವಾಮ್ಯವನ್ನು ಹೊಂದಿದ್ದರು. ಭಾರತಕ್ಕೆ ಪೋರ್ಚುಗೀಸರ ಆಗಮನದ ನಂತರ ಅರಬ್ಬರು ಪೋರ್ಚುಗೀಸರ ವ್ಯಾಪಾರ ಏಕಸ್ವಾಮ್ಯವನ್ನು ವಿರೋದಿಸಿದರು. ಜಾಮೊರಿನ್‌ನು ಪೋರ್ಚುಗೀಸರ ವಿರುದ್ಧ ಅರಬ್ಬರಿಗೆ ಸಹಾಯ ಮಾಡಿದನು. ಸ್ಥಳೀಯ ಅರಬ್ಬರು ಮತ್ತು ಪೋರ್ಚುಗೀಸರ ನಡುವಿನ ಕಲಹಗಳು ಅರಬ್ಬರ ವ್ಯಾಪಾರ ಏಕಸ್ವಾಮ್ಯವನ್ನು ಮುರಿದವು. ವಿಲಿಯಂ ಲೋಜ್‌ನ ಪ್ರಕಾರ "ವಾಸ್ಕೋಡಿಗಾಮನು ನಿಕೋಲಸ್‌ಕೋಯಲ್‌ನನ್ನು ಜಾಮೊರಿನ್‌ನ ಆಸ್ಥಾನಕ್ಕೆ ವ್ಯಾಪಾರ ರಿಯಾಯಿತಿಗಳನ್ನು ಕೇಳಲು ಕಳುಹಿಸಿದನು. ಜಾಮೋರಿನ್ ಆಸ್ಥಾನಿಕರು ಇವನನ್ನು ಕಾಯುವಂತೆ ಹೇಳಿ ಅವನ ತಾಳ್ಮೆಯನ್ನು ಕೆಡಿಸಿದರು. ಇದರಿಂದಾಗಿ ಪೋರ್ಚುಗೀಸ್ ಮತ್ತು ಜಾಮೊರಿನ್‌ನ ನಡುವೆ ಸಂಬಂಧ ಮುರಿದವು". ಕೊನೆಗೆ ಜಾಮೊರಿನ್‌ನು ತಾಳೆಗರಿಯಲ್ಲಿ ಒಂದು ಪತ್ರ ಬರೆದು ವ್ಯಾಪಾರ ಕೋಠಿ ತೆರೆಯಲು ತಿಳಿಸಿದನು.

ವಾಸ್ಕೋಡಿಗಾಮನು ಭಾರತದಿಂದ ತಮ್ಮ ದೇಶಕ್ಕೆ ಹಿಂತಿರುಗುವ ಸಂದರ್ಭದಲ್ಲಿ ಸ್ಥಳೀಯ ಸಂಸ್ಥಾನದ ಸುಮಾರು ಹದಿನೆಂಟು ಮೀನುಗಾರರನ್ನು ಬಂಧಿಸಿ ಕರೆದುಕೊಂಡು ಹೋದನು. ಇದೊಂದು ಪ್ರಮುಖ ಕಾರಣ, ಪೋರ್ಚುಗೀಸರು ಕ್ಯಾಲಿಕಟ್‌ನ ರಾಜ ಮತ್ತು ಅರಬ್ಬರ ನಡುವೆ ಸಂಬಂಧವನ್ನು ಹದಗೆಡಿಸಿತು. ವಾಸ್ಕೋಡಿಗಾಮನ ಮೂಲ ಉದ್ದೇಶ ಜಾಮೊರಿನ್‌ನಿಗೆ ತೆರಿಗೆಯನ್ನು ಕಟ್ಟಬಾರದಾಗಿತ್ತು. ಕೊನೆಗೆ ವಾಸ್ಕೋಡಿಗಾಮನು ಐದು ಮಂದಿ ಮೀನುಗಾರರನ್ನು ಬಂಧಿಸಿದನು. ಇದರಿಂದಾಗಿ ಜಾಮೊರಿನ್‌ನು ವಾಸ್ಕೋಡಿಗಾಮನೊಂದಿಗೆ ಸಭೆ ನಡೆಸಿದನು. ಈ ಸಭೆಯಲ್ಲಿ ಭಾರತ ಮತ್ತು ಪೋರ್ಚುಗಲ್ ದೇಶದೊಂದಿಗೆ ಒಂದು ಒಪ್ಪಂದ ಸಂಭವಿಸಿತು. ಜಾಮೊರಿನ್‌ನು ವಾಸ್ಕೋಡಿಗಾಮನಿಗೆ ಅವಶ್ಯಕವಾಗಿದ್ದ ಎಲ್ಲಾ ಸರಕುಗಳನ್ನು ಒದಗಿಸುವ ಪ್ರಯತ್ನ ಮಾಡಿದನು.[13]

ವಾಸ್ಕೋಡಿಗಾಮನು ಅರಬ್ಬರ ಏಕಸ್ವಾಮ್ಯವನ್ನು ಮುರಿಯಲು ಜಾಮೊರಿನ್‌ನೊಂದಿಗೆ ಉತ್ತಮ ಸಂಬಂಧ ಬೆಳೆಸುವ ಪ್ರಯತ್ನ ಮಾಡಿದನು. ಆದರೆ ಅದಕ್ಕಿಂತ ಮಿಗಿಲಾಗಿ ಜಾಮೊರಿನ್ ಮತ್ತು ಕೊಚ್ಚಿನ್ ರಾಜರ ನಡುವೆ ಯಾವಾಗಲೂ ಕಲಹಗಳು ಸಂಭವಿಸುತ್ತಿದ್ದವು. ಇದನ್ನು ತಿಳಿದ ವಾಸ್ಕೋಡಿಗಾಮನು ಕೊಚ್ಚಿನ್ ರಾಜರೊಂದಿಗೆ ಉತ್ತಮ ಸಂಬಂಧ ಏರ್ಪಡಿಸಿದನು. ಅರಬ್ಬರು ಪೋರ್ಚುಗೀಸರಿಗೆ ವ್ಯಾಪಾರದಲ್ಲಿ ಸಹಕಾರ ನೀಡಿರಲಿಲ್ಲ. ಅರಬ್ಬರು ಪೋರ್ಚುಗೀಸರ ವ್ಯಾಪಾರವನ್ನು ಕ್ಯಾಲಿಕಟ್‌ನಲ್ಲಿ ತಡೆಯಲು ಎಲ್ಲಾ ಪ್ರಯತ್ನಗಳನ್ನು ಮಾಡಿದರು. ಅರಬ್ಬರು ವ್ಯಾಪಾರಿಗಳಿಗೆ ಅವರ ವಸ್ತುಗಳಿಗೆ ಆಧಿಕ ಬೆಲೆಯನ್ನು ನಿಗದಿ ಪಡಿಸಿದರು. ಇದನ್ನು ಪೋರ್ಚುಗೀಸರು ಖಂಡಿಸಿದರು. ನಂತರ ಈ ವಿಷಯವನ್ನು ಜಾಮೊರಿನ್‌ನಿಗೆ ತಿಳಿಸಿದರು. 17ನೇ ನವೆಂಬರ್ 1498ರಲ್ಲಿ ಕೆಬ್ರಾಲ್‌ನು ಅರಬ್ಬರ ಹಡಗುಗಳನ್ನು ಜಪ್ತಿ ಮಾಡಿದನು ಮತ್ತು ಹತ್ತು ಅರಬ್ ಹಡಗುಗಳನ್ನು ಸುಟ್ಟು ಹಾಕಿದನು. ನಂತರ ಎರಡು ದಿನಗಳ ಕಾಲ ಬಂದರುಗಳಲ್ಲಿ ಗುಂಡಿನ ಮಳೆ ಸುರಿಸಿದನು. ಸುಮಾರು 600 ಮಂದಿ ಮರಣ ಹೊಂದಿದರು. ಇದರಲ್ಲಿ ಹತ್ತುಮಂದಿ ಜಾಮೊರಿನ್‌ನ ಸಾಮಂತರಾಗಿದ್ದರು. ಕೆಬ್ರಾನು ಕಣ್ಣನೂರು, ಕೊಚ್ಚಿನ್ ಮತ್ತು ಕ್ಯಾಲಿಕಟ್‌ಗಳಲ್ಲಿ ಕೋಟೆಗಳನ್ನು ಕಟ್ಟಿ ಕಣ್ಣನೂರು ಮತ್ತು ಕೊಚ್ಚಿನ್‌ನಲ್ಲಿ ಅಧಿಕಾರಿಗಳನ್ನು ನೇಮಿಸಿದನು.

ಜಾಮೊರಿನ್‌ನು ವಾಸ್ಕೋಡಿಗಾಮನಿಗೆ ಶಾಂತಿ ಮತ್ತು ಸೌಹಾರ್ದಯುತವಾಗಿ ವ್ಯಾಪಾರ ಮಾಡುವಂತೆ ಪತ್ರ ಬರೆದರು. ವಾಸ್ಕೋಡಿಗಾಮನು. ತೆರಿಗೆಯನ್ನು ಕಟ್ಟದೇ ವ್ಯಾಪಾರ ಮಾಡುತ್ತಿದ್ದನು. ವಾಸ್ಕೋಡಿಗಾಮನು ಜಾಮೊರಿನ್‌ನು ಮಾಪಿಳ್ಳೆಗಳು ಮತ್ತು ಮೂರ್ಸ್‌ರವರನ್ನು ಕ್ಯಾಲಿಕಟ್‌ನಿಂದ ಹೊರಹಾಕುವಂತೆ ಕೇಳಿಕೊಂಡನು. ಈ ಬೇಡಿಕೆಯನ್ನು ಜಾಮೊರಿನ್‌ನು ತಿರಸ್ಕರಿಸಿದನು[14] ನಂತರ ವಾಸ್ಕೋಡಿಗಾಮನು ಕ್ಯಾಲಿಕಟ್ ನಗರದ ಮೇಲೆ ಗುಂಡಿನ ದಾಳಿ ಮಾಡಿದನು. ಮಂಗಳೂರಿನಿಂದ ಬಂದ ಇಪ್ಪತ್ತನಾಲ್ಕು ಹಡಗುಗಳನ್ನು ವಾಸ್ಕೋಡಿಗಾಮ ಲೂಟಿ ಮಾಡಿದನು. ಆ ಹಡಗುಗಳು ಅಕ್ಕಿಯನ್ನು ತುಂಬಿಕೊಂಡು ಬರುತಿದ್ದವು. ವಾಸ್ಕೋಡಿಗಾಮನು ನಾವಿಕರನ್ನು ಬಂಧಿಸಿ ಅವರ ಮೂಗನ್ನು, ಕಿವಿಯನ್ನು ಮತ್ತು ಕೈಗಳನ್ನು ಕಟ್ಟು ಮಾಡಿಸಿದನು. ಅವರ ಹಲ್ಲುಗಳನ್ನು ಮುರಿದನು. ಅವರ ಕಾಲುಗಳನ್ನು ಕಟ್ಟಿ ಪುಟ್ಟ ಪುಟ್ಟ ದೋಣಿಗಳಲ್ಲಿ ಇಟ್ಟನು. ಮೂರು ದಿನಗಳ ಕಾಲ ಕ್ಯಾಲಿಕಟ್‌ನ ಮೇಲೆ ಗುಂಡಿನ ದಾಳಿ ಮಾಡಿಸಿ ನಂತರ ಕೊಚ್ಚಿನ್‌ಗೆ ವಾಪಸ್ಸಾದನು.

ವಾಸ್ಕೋಡಿಗಾಮನು ಕೊಚ್ಚಿನ್‌ನ ರಾಜ ಆತ್ಮೀಯವಾಗಿ ಬರಮಾಡಿಕೊಂಡು ಅವನಿಗೆ ವ್ಯಾಪಾರ ರಿಯಾಯಿತಿ ನೀಡಿದನು. ಮತ್ತು ಕೋಟೆಗಳನ್ನು ಕಟ್ಟಿಕೊಳ್ಳಲು ಅನುಮತಿ ನೀಡಿದನು. ಅಲ್ಬುಕರ್ಕ್ ಭಾರತಕ್ಕೆ ಬಂದ ನಂತರ ರಾಜಕೀಯ ವಿಚಾರಗಳಲ್ಲಿ ಬದಲಾವಣೆಗಳು ಉಂಟಾದವು. ಜಾಮೊರಿನ್‌ನು ಪೋರ್ಚುಗೀಸರು ಮತ್ತು ಕೊಚ್ಚಿನ್ ಮೇಲೆ ಯುದ್ಧ ಸಾರಲು ಪ್ರಯತ್ನ ಮಾಡಿದನು. ಯುದ್ಧ ಮಾಡುವ ಮುನ್ನ ಕೊಚ್ಚಿನ್ ಮೇಲೆ ಆರ್ಥಿಕ ದಿಗ್ಭಂದನ ಏರಿದನು. ಜಾಮೊರಿನ್‌ನು ಕೊಚ್ಚಿನ್‌ನ ಮುಸ್ಲಿಂ ವ್ಯಾಪಾರಸ್ಥರಿಗೆ ಅಕ್ಕಿಯನ್ನು ಆಮದು ಮಾಡಿಕೊಳ್ಳದಂತೆ ಆಜ್ಞೆ ಹೊರಡಿಸಿದನು. ಕ್ರಿ.ಶ 1504ರಲ್ಲಿ ಜಾಮೊರಿನ್‌ನು ಕೊಚ್ಚಿನ್ ವಿರುದ್ಧ ದೊಡ್ಡ ಮಟ್ಟದ ಯುದ್ಧ ಮಾಡಲು ತೀರ್ಮಾನಿಸಿದನು. ಈ ಯುದ್ಧಕ್ಕೆ ಕಾರಣ ಪೋರ್ಚುಗೀಸರ ಕೋಟೆಗಳನ್ನು ವಶಪಡಿಸಿಕೊಳ್ಳಲು, ಪೋರ್ಚುಗೀಸರ ನಾಯಕ ಅವನ ಶಕ್ತಿ ಸಾಮರ್ಥ್ಯವನ್ನು ತೋರಿ ಕೊಚ್ಚಿನ್ ಅನ್ನು ರಕ್ಷಿಸಿಕೊಂಡನು. [15]

### 3.5 ಪೋರ್ಚುಗೀಸರು ಮತ್ತು ಗೋವಾದ ಆಕ್ರಮಣ:

ಭಾರತಕ್ಕೆ ಪೋರ್ಚುಗೀಸರ ಆಗಮನದ ನಂತರ ಮೊದಲು ಅವರು ಕೊಚ್ಚಿನ್‌ನಲ್ಲಿ ತಮ್ಮ ವ್ಯಾಪಾರ ಏಕಸ್ವಾಮ್ಯವನ್ನು ಸ್ಥಾಪಿಸಿದರು. ಗೋವಾದಲ್ಲಿ ಉತ್ತಮವಾದ ಬಂದರುಗಳಿದ್ದು, ವ್ಯಾಪಾರ ಮತ್ತು ವಹಿವಾಟಿಗೆ ಸಹಕಾರಿಯಾಗಿದ್ದವು. ಗೋವಾಕ್ಕೆ ಪೋರ್ಚುಗೀಸರ ಆಗಮನದ ಕುರಿತು ಪೆರಿಸ್ತಾ ಹೇಳಿಕೆಯ ಪ್ರಕಾರ ಮಾರ್ಚ್–1–1510ರಲ್ಲಿ ಅಲ್ಬುಕರ್ಕ್‌ನ ನೇತೃತ್ವದಲ್ಲಿ ಪೋರ್ಚುಗೀಸರು ಗೋವಾಕ್ಕೆ ಬಂದರು. 1510ರಲ್ಲಿ ಪೋರ್ಚುಗೀಸರು ಗೋವಾ ಪಟ್ಟಣದ ಮೇಲೆ ಆಕ್ರಮಣ ಮಾಡಿದರು. ಆದರೆ ವಾಸ್ಕೋಡಿಗಾಮನು ಭಾರತಕ್ಕೆ ಬಂದಾಗಲೇ ಗೋವಾಕ್ಕೆ ಭೇಟಿ ನೀಡಿದನೆಂದು ಕೆಲವು ದಾಖಲೆಗಳು ಉಲ್ಲೇಖಿಸುತ್ತವೆ.

ಪೋರ್ಚುಗೀಸರು ಕ್ರಿ.ಶ 1498ರಲ್ಲಿ ಭಾರತಕ್ಕೆ ಬಂದರು. ಪೋರ್ಚುಗಲ್ ಆಲ್ಫನ್ಸೊ–ಡಿ–ಅಲ್ಬುಕರ್ಕ್‌ನನು ಭಾರತದ ವೈಸರಾಯ್ ಆಗಿ ನೇಮಿಸಿತು.[16] ಇವನು ಕ್ರಿ.ಶ 1509–1515ರವರೆಗೆ ಕಾರ್ಯ ನಿರ್ವಹಿಸಿದನು. ಗೋವಾವು ಬಿಜಾಪುರದ ಅದಿಲ್‌ಶಾಹಿಗಳ ಆಳ್ವಿಕೆಗೆ ಒಳಪಟ್ಟಿತು. 25 ನವೆಂಬರ್ 1510ರಲ್ಲಿ ಅಲ್ಬುಕರ್ಕ್‌ನು ತನ್ನ ಎರಡನೇ ಪ್ರಯತ್ನದಲ್ಲಿ ಗೋವಾವನ್ನು ವಶಪಡಿಸಿಕೊಂಡನು. ಕ್ರಿ.ಶ 1543ರ ನಂತರ ಗೋವಾವು ಸಂಪೂರ್ಣವಾಗಿ ಪೋರ್ಚುಗೀಸರ ಏಕಸ್ವಾಮ್ಯಕ್ಕೆ ಒಳಗಾಯಿತು.

ಕೃಷ್ಣದೇವರಾಯನ ಆಳ್ವಿಕೆಯ ಆರಂಭಕ್ಕೆ ಅಲ್ಮೆಡಾ ಕರಾವಳಿಯಲ್ಲಿನ ಪೋರ್ಚುಗೀಸ್ ವಸಾಹತುಗಳ ವೈಸರಾಯ್ ಆಗಿದ್ದ, ಆದರೆ ಕ್ರಿ.ಶ 1509ನೆಯ ವರ್ಷದ ಕೊನೆಗೆ ಅಲ್ಬುಕರ್ಕ್ ಅವನ ನಂತರ ಪ್ರಾಂತಾಧಿಪತಿ ಎಂಬ ಹೆಸರಿನಲ್ಲಿ ಬಂದ ಅಲ್ಬುಕರ್ಕ್‌ನು ಕ್ಯಾಲಿಕಟ್‌ನಲ್ಲಿ ಘೋರ ಅಪಜಯ ಅನುಭವಿಸಿ ಸೇಂಟ್ ಫ್ರಾನ್ಸಿಸ್ ಸಂಘದ ಫಾದರ್ ಲೂಯಿಸ್‌ನನ್ನು ವಿಜಯನಗರಕ್ಕೆ ರಾಯಭಾರಿಯಾಗಿ ಕಳುಹಿಸಿದ. ತಾನು ಸ್ವತಃ ಅದೇ ಕಾಲಕ್ಕೆ ಸಮುದ್ರದಿಂದ ಆಕ್ರಮಣ ಮಾಡುವ ವಚನವಿತ್ತ ರಾಯನು ಭೂಮಾರ್ಗವಾಗಿ ಬಂದು ಕ್ಯಾಲಿಕಟ್‌ನ ಸಮುರಿಯನ್ನು ಅಡಗಿಸಬೇಕೆಂದು ಯೋಚಿಸಿದ. ಮುಸಲ್ಮಾನರ ವಿರುದ್ಧ ಯುದ್ಧ ಮಾಡಬೇಕಲ್ಲದೆ ಹಿಂದೂಗಳ ವಿರುದ್ಧ ಅಲ್ಲ ಎಂದು ತನಗೆ ತನ್ನ ಒಡೆಯ ಪೋರ್ಚುಗೀಸರ ರಾಜನಿಂದ ಆಜ್ಞೆಯಿದೆ ಎಂದು ಪ್ರಾಂತ್ಯಾಧಿಪತಿ ಕ್ಯಾಲಿಕಟ್‌ನು ನಾಶಪಡಿಸಿದ್ದ ಮತ್ತು ಅದರ ರಾಜ ಒಳನಾಡಿನೊಳಕ್ಕೆ ಓಡಿಹೋಗಿದ್ದ ತಾನು ಆ ಸ್ಥಳದ ವಿಜಯಕ್ಕಾಗಿ ತನ್ನ ಹಡಗು ಪಡೆಯನ್ನು ವಿಜಯನಗರದ ರಾಜನ ನೆರವಿಗೆ ನೀಡಿದನು. ಕ್ಯಾಲಿಕಟ್‌ನ್ನು ಸ್ವಾಧೀನಪಡಿಸಿಕೊಂಡ ತಕ್ಷಣ ಮುಸಲ್ಮಾನರನ್ನು ಅಲ್ಲಿಂದ ಹೊರದಬ್ಬಲಾಗುವುದು. ಮತ್ತು ಪೋರ್ಚುಗೀಸರು ವಿಜಯನಗರದ ರಾಜನಿಗೆ ಅವನ ವೈರಿಗಳಾದ ದಖ್ಖನ್ನಿನ ಮುಸಲ್ಮಾನರ ವಿರುದ್ಧ ನೆರವು ನೀಡುವವರು ಎಂದು ಘೋಷಿಸಿದ. ಅರೇಬಿಯಾ ಮತ್ತು ಪರ್ಷಿಯನ್ ಕುದುರೆಗಳನ್ನು ಇನ್ನು ಮುಂದೆ ವಿಜಯನಗರಕ್ಕೆ ಮಾತ್ರವೇ ಪೂರೈಸುವುದಾಗಿಯೂ ಬಿಜಾಪುರಕ್ಕೆ ಕಳುಹಿಸುವುದಿಲ್ಲವೆಂದೂ ವಚನವಿತ್ತ.[17]

ಆದಿಲ್‌ಷಾನ ಅಧೀನದಲ್ಲಿದ್ದ ಗೋವಾದ ಮೇಲೆ ಅಲ್ಬುಕರ್ಕ್‌ನು ಆಕ್ರಮಣ ಮಾಡಿದ. ಆ ಸ್ಥಳವನ್ನು ವಶಪಡಿಸಿಕೊಂಡು ಕ್ರಿ.ಶ.1510ರಲ್ಲಿ ವಿಜಯೋತ್ಸವದ ಪ್ರವೇಶ ಮಾಡಿದ, ಅದಾದ ಕೂಡಲೆ ಗಾಸ್ಪರ್ ಚನೋಕಾನನ್ನು ನಿಯೋಗದ ಮೇಲೆ ವಿಜಯನಗರಕ್ಕೆ ಕಳುಹಿಸಿ ಪೋರ್ಚುಗೀಸರ ವ್ಯಾಪಾರದ ಸಂರಕ್ಷಣೆಗಾಗಿ ಭಟ್ಕಳದಲ್ಲಿ ಕೋಟೆ ಕಟ್ಟಲು ಮಾಡಿಕೊಳ್ಳಲಾಗಿದ್ದ ಅಲ್ಮೈಡಾನ ಮನವಿಯನ್ನು ಪುನರ್ ಉಚ್ಚರಿಸಿದ. ವಿಜಯನಗರ ಸಾಮ್ರಾಜ್ಯವು ಪೋರ್ಚುಗೀಸರು ಗೋವಾವನ್ನು ವಶಪಡಿಸಿಕೊಂಡ ಮೇಲೆ ಅಲ್ಬುರ್ಕ್‌ನ ಅಭಿನಂದಿಸುವ ಮತ್ತು ಆದಿಲ್ ಷಾಹ ವಿರುದ್ಧ ಸಹಾಯ ಮಾಡುವ ಸಂದೇಶವನ್ನು ಕಳುಹಿಸಿತು ಅಲ್ಬುಕರ್ಕನು ಗೋವಾವನ್ನು ಎರಡನೆಯ ಸಲ ವಶಪಡಿಸಿಕೊಂಡ ನಂತರ ಬಂಕಾಪುರದ ದೊರೆ ಪೋರ್ಚುಗೀಸರಿಗೆ ಅಭಿನಂದನ ಸಂದೇಶ ಕಳುಹಿಸಿದ ಮತ್ತು ಪ್ರತಿವರ್ಷ ಮುನ್ನೂರು ಕುದುರೆಗಳನ್ನು ಆಮದು ಮಾಡಿಕೊಳ್ಳಲು ಅನುಮತಿ ಕೋರಿದ.[18] ಆ ಊರು ವಿಜಯನಗರದ ದಾರಿಯಲ್ಲಿದ್ದುದರಿಂದ ಮತ್ತು ಅದರ ದೊರೆ ಐರೋಪ್ಯದೊಂದಿಗೆ ಮೈತ್ರಿಯುತ ಸಂಬಂಧ ಹೊಂದಿರಬೇಕಾದುದು

ಮಹತ್ವದ್ದಾಗಿದ್ದುದರಿಂದ ಕೋರಿಕೆಯನ್ನು ಮನ್ನಿಸಲಾಯಿತು. ಮೇಲಾಗಿ ಬಂಕಾಪುರದಲ್ಲಿ ಅನೇಕ ಉತ್ಕೃಷ್ಟ ಜೀನುಗಾರರಿದ್ದರು.

ಪೋರ್ಚುಗೀಸರು ಗೋವಾವನ್ನು ಆಕ್ರಮಣ ಮಾಡಿಕೊಳ್ಳಲು ಪ್ರಮುಖವಾಗಿ ಮೂರು ಉದ್ದೇಶಗಳನ್ನು ಹೊಂದಿದ್ದರು. ಅವುಗಳೆಂದರೆ ಪೋರ್ಚುಗೀಸರು ಯೂರೋಪಿಗೆ ಸಾಂಬಾರ ಪದಾರ್ಥಗಳನ್ನು ಪೂರೈಕೆಮಾಡುವ ವ್ಯಾಪಾರ ಏಕಸ್ವಾಮ್ಯವನ್ನು ಹೊಂದಿದ್ದರು, ಎರಡನೆಯದು ಏಷ್ಯಾದ ಇತರ ಬಂದರುಗಳೊಂದಿಗೆ ವ್ಯಾಪಾರ ಏಕಸ್ವಾಮ್ಯವನ್ನು ಹೊಂದುವುದು, ಮೂರನೆಯದು ಭಾರತದ ಸಮುದ್ರ ವ್ಯಾಪಾರದ ನಿಯಂತ್ರಣ ಮತ್ತು ತೆರಿಗೆ ನಿಯಂತ್ರಣ ಅವರ ಬಹಳ ಮುಖ್ಯವಾದ ಉದ್ದೇಶಗಳಾಗಿದ್ದವು.

**ಗೋವಾದ ಪೋರ್ಚುಗೀಸ್ ರಾಜಪ್ರತಿನಿಧಿಗಳು ಮತ್ತು ಮಂಡಲಾಧಿಪತಿಗಳು:**

ಕ್ರಿ.ಶ.1505ರಿಂದ 1564ರವರೆಗೆ ಗೋವಾವು ಸಂಪೂರ್ಣವಾಗಿ ಪೋರ್ಚುಗೀಸರ ಅಧೀನದಲ್ಲಿತ್ತು. ಈ ಸಂದರ್ಭದಲ್ಲಿ ಸುಮಾರು ಇಪ್ಪತ್ತೊಂದು ಪೋರ್ಚುಗೀಸ್ ರಾಜಪ್ರತಿ ನಿಧಿಗಳು ಮತ್ತು ಮಂಡಲಾಧಿಪತಿಗಳು ಕಾರ್ಯ ನಿರ್ವಹಿಸಿದರು. ಇವರ ಕಾಲಾವಧಿಯಲ್ಲಿ ಇವರು ವ್ಯಾಪಾರ ಮತ್ತು ವಾಣಿಜ್ಯದ ಜೊತೆಗೆ ರಾಜ್ಯದ ವಿಸ್ತಾರ ಮತ್ತು ಕ್ರೈಸ್ತ ಧರ್ಮ ಪ್ರಚಾರದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇವರ ಕಾಲಾವಧಿಯನ್ನು ಒಳಗೊಂಡ ಸಂಕ್ಷಿಪ್ತ ಮಾಹಿತಿಯನ್ನು ಈ ಕೆಳಗೆ ನೀಡಲಾಗಿದೆ.

1) ಡಾಮ್ ಪ್ರಾನ್ಸಿಸ್ಕೋ ದ ಅಲ್ಮೆಡಾ (ರಾಜಪ್ರತಿನಿಧಿ) ಕ್ರಿ.ಶ.1505–1509)
2) ಅಪೊನ್ಸೊ ದ ಅಲ್ಬುಕರ್ಕ್ (ಮಂಡಲಾದಿಪತಿ) ಕ್ರಿ.ಶ 1509–1515
3) ಲೊಪೊ ಸೂ ಆರಿಸ್‌ದ ಅಲ್ಬರ್ಗೇರಿಯಾ (ಮಂಡಲಾದಿಪತಿ) ಕ್ರಿ.ಶ 1515–1518
4) ಡಿಯಾಗೊ ಲೂಪ್ಸ್‌ದ ನಿಕ್ಸೈರಾ (ಮಂಡಲಾಧಿಪತಿ) ಕ್ರಿ.ಶ 1518–1521
5) ಡಾಮ್‌ಡು ಆರ್ಟ್ ಮನ್‌ಜಸ್ (ಮಂಡಲಾಧಿಪತಿ) ಕ್ರಿ.ಶ 1525–1526
6) ಡಾಮ್ ವಾಸ್ಕೋಡಿಗಾಮ, ಕಾಂಡ್ ದ ವಿಡಿಗ್ಯೆರಿಯಾ (ರಾಜಪ್ರತಿನಿಧಿ) ಕ್ರಿ.ಶ 1524–1525
7) ಡಾಮ್ ಹೆನ್ರೀಕ್ ದ ಮನೆಜಿಸ್ (ಮಂಡಲಾಧಿಪತಿ) ಕ್ರಿ.ಶ 1525–1526
8) ಲೊಪೊ ವಾಜ್ ದ ಸಂಪೇಓ (ಮಂಡಲಾಧಿಪತಿ) ಕ್ರಿ.ಶ 1526–1529
9) ನುನೊ ದ ಕುನ್ಹಾ (ಮಂಡಲಾಧಿಪತಿ) ಕ್ರಿ.ಶ 1529–1538

10) ಡಾಮ್ ಗಾರ್ನಿಯಾ ದ ನರೂನ್ಹಾ (ರಾಜಪ್ರತಿನಿಧಿ) ಕ್ರಿ.ಶ 1538–1540

11) ಡಾಮ್ ಎಸ್ಟೈವಾಬ ದ ಗಾಮೊ (ಮಂಡಲಾಧಿಪತಿ) ಕ್ರಿ.ಶ 1540–1542

12) ಮಾರ್ಟಿಮ್ ಅಪೊನ್ಸೋದ ನೌಸಾ (ಮಂಡಲಾಧಿಪತಿ) ಕ್ರಿ.ಶ1542–1545

13) ಡಾಮ್ ಜೂ ಆ ದ ಕಾಸ್ಟ್ರೊ (ಮಂಡಲಾಧಿಪತಿ ಮತ್ತು ಪ್ರದಾನ ದಂಡನಾಯಕ) ಕ್ರಿ.ಶ 1545–1547

14) ಡಾಮ್ ಜೊಆಬ ದ ಕಾಸ್ಟ್ರೊ (ರಾಜಪ್ರತಿನಿಧಿ) ಕ್ರಿ.ಶ.1547–1548

15) ಗಾರ್ಸಿಯಾ ದ ಸಾ (ಮಂಡಲಾಧಿಪತಿ) ಕ್ರಿ.ಶ 1548–1549

16) ಜಾರ್ಜ್ ಕಬ್ರಾಲ್ (ಮಂಡಲಾಧಿಪತಿ) ಕ್ರಿ.ಶ 1549–1550

17) ಡಾಮ್ ಅಪೊನ್ಸೊ ದ ನರೂನ್ಹಾ (ರಾಜಪ್ರತಿನಿಧಿ) ಕ್ರಿ.ಶ 1550–1554

18) ಡಾಮ್ ಪೆದ್ರೂ ಮಸ್ಕರೆನ್ಹಸ್ (ರಾಜಪ್ರತಿನಿಧಿ) ಕ್ರಿ.ಶ 1554–1555

19) ಪ್ರಾನ್ಸಿಸ್ಕೋ ಬ್ಯಾರೆಟೊ (ಮಂಡಲಾಧಿಪತಿ) ಕ್ರಿ.ಶ. 1555–1558

20) ಡಾಮ್ ಕಾನ್‌ಸ್ಟಾಂಟೆನೋದ ಬ್ರ್ಯಾಗಂಜಾ (ರಾಜಪ್ರತಿನಿಧಿ) ಕ್ರಿ.ಶ.1558–1561

21) ಡಾಮ್ ಪ್ರಾನಿಸ್ಕೋ ಕುಟಿನ್ಹೊ, ಕಾಂಡ್ ದ ರೆಡೊಂಡೂ (ರಾಜಪ್ರತಿನಿಧಿ) ಕ್ರಿ.ಶ 1501–1564 [19]

**3.6 ಕರ್ನಾಟಕದ ಬಂದರುಗಳಲ್ಲಿ ಪೋರ್ಚುಗೀಸರು**

ಪೋರ್ಚುಗೀಸರು ಕೆನರಾ ಅಥವಾ ಕರ್ನಾಟಕದ ಕರಾವಳಿ ಪ್ರದೇಶದ ರಾಜರೊಂದಿಗೆ ನಿಕಟವಾದ ಸಂಪರ್ಕವನ್ನು ಹೊಂದಿದ್ದರು. ರಾಜಕೀಯ, ತಾಂತ್ರಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಕಾರಣಗಳಿಗಾಗಿ ಈ ಸಂಬಂಧ ಪೋರ್ಚುಗೀಸರೊಂದಿಗೆ ಬಹು ಮುಖ್ಯವಾಗಿದ್ದಿತ್ತು. ಇದೇ ರೀತಿ ವಿಜಯನಗರ, ಕೆಳದಿಯ ರಾಜರು, ಮೈಸೂರಿನ ಒಡೆಯರು, ಸುಲ್ತಾನರು ಮತ್ತು ಕೆನರಾದ ಸಣ್ಣಪುಟ್ಟ ರಾಜರು ಪೋರ್ಚುಗೀಸರೊಂದಿಗೆ ರಾಜಕೀಯ ಹೊಂದಾಣಿಕೆ ಮಾಡಿಕೊಂಡಿದ್ದರು. ಪೂರ್ವ ಕರಾವಳಿ ಮತ್ತು ಪಶ್ಚಿಮ ಕರಾವಳಿ ಎರಡು ಪ್ರದೇಶಗಳು ಸ್ವತಂತ್ರವಾಗಿದ್ದು ಸತತವಾದ ಮುಖಾಮುಖಿ ಮತ್ತು ಐತಿಹಾಸಿಕ ಅನುಭವವನ್ನು ಹೊಂದಿದ್ದವು. ಈ ಸಂಬಂಧಗಳ ಹಲವು ಆಯಾಮಗಳನ್ನು ಮಂಗಳೂರು ಮತ್ತು ಪೋರ್ಚುಗೀಸರ ಅಸ್ತಿತ್ವಕ್ಕೆ ಸಂಬಂಧಿಸಿದಂತೆ ಸಮಗ್ರವಾಗಿ ಗಮನಿಸಲಾಗಿದೆ. ಅನುಕೂಲದ ದೃಷ್ಟಿಯಿಂದ ಈ ವಿಷಯವನ್ನು ಎರಡು ಉಪ ವಿಷಯಗಳೊಂದಿಗೆ ವಿಸ್ತಾರವಾಗಿ ವಿವರಿಸಲಾಗಿದೆ. ಇವುಗಳು (1)ರಾಜಕೀಯ ಸಂಬಂಧಗಳು ಮತ್ತು (2)ಸಾಮಾಜಿಕ – ಆರ್ಥಿಕ ಸಂಬಂಧಗಳು. [20]

ವಿಜಯನಗರ ಸಾಮ್ರಾಜ್ಯ ಪೋರ್ಚುಗೀಸರೊಂದಿಗೆ ಹಲವು ರೀತಿಯ ವಿನಿಮಯ ಹೊಂದಿತ್ತು. ತುಳುವ ಸಂಸ್ಥಾನಕ್ಕೆ ಮೂಲ ಪುರುಷನಾದ ವೀರ ನರಸಿಂಹ (ಕ್ರಿ.ಶ 1503–1509) ಪೋರ್ಚುಗೀಸರೊಂದಿಗೆ ಸ್ನೇಹದ ಕೈಜೋಡಿಸಿದ್ದ ಆ ಹೊತ್ತಿಗೆ ಪೋರ್ಚುಗೀಸರು ಪೂರ್ವ ಕರಾವಳಿಯಲ್ಲಿ ತಮ್ಮ ಸೈನ್ಯಕ್ಕೆ ಕುದುರೆಗಳನ್ನು ಪಡೆಯುವ ಪ್ರಯತ್ನದಲ್ಲಿದ್ದರು. ಅಕ್ಟೋಬರ್ 1509ರಲ್ಲಿ ಆತ ತನ್ನ ಮಂತ್ರಿಗಳಲ್ಲೊಬ್ಬನಾದ ತಿಮ್ಮಯ್ಯನನ್ನು ರಾಯಭಾರಿಯಾಗಿ ಕಣ್ಣನೂರಿನ ಪ್ರಾನ್ಸಿಸ್ಕೋ ಡಿ ಆಲ್ಮೆಡಾ ಅವರಲ್ಲಿಗೆ ಕಳುಹಿಸಿ ವಾಣಿಜ್ಯ ಸೌಲಭ್ಯವನ್ನು ತನ್ನ ಆಡಳಿತ ಬಂದರುಗಳಲ್ಲಿ ನೀಡುವುದಾಗಿ ಹೇಳಿದರು.

ಮಂಗಳೂರಿನ ಮುಸ್ಲಿಮರ ವ್ಯಾಪಾರ ಪ್ರಾಬಲ್ಯವನ್ನು ಕೊನೆಗೊಳಿಸಿ ಪೋರ್ಚುಗೀಸರ ವ್ಯಾಪಾರವನ್ನು ಸ್ಥಾಪಿಸುವ ಗುರಿಯಿರಿಸಿ ಬಂದವರು ಪೋರ್ಚುಗೀಸರು. ಕ್ರಿ.ಶ 1498ರಲ್ಲಿ ಮಂಗಳೂರಿಗೆ ಬಂದ ವಾಸ್ಕೋಡಿಗಾಮ ಅರಬ್ಬರ ವ್ಯಾಪಾರದ ಏಕಸ್ವಾಮ್ಯವನ್ನು ಗುರುತಿಸಿದನು. ಯೂರೋಪಿನಲ್ಲಿ ಸಾಂಬಾರ ಪದಾರ್ಥಗಳು ಮತ್ತು ಕರಿಮೆಣಸಿನ ಬೇಡಿಕೆ ಬಹಳವಾಗಿತ್ತು. ಆದರೆ ಅರಬ್ಬರ ಏಕಸ್ವಾಮ್ಯ ಮತ್ತು ಮುಸ್ಲಿಮರ ವ್ಯಾಪಾರ ನಿಯಂತ್ರಣ ಇದಕ್ಕೆ ಆತಂಕವಾಗಿತ್ತು. ತಮ್ಮ ವ್ಯಾಪಾರ ಏಕಸಾಮ್ಯ ಸ್ಥಾಪಿಸಲು ಸ್ಥಳೀಯ ಅರಸರನ್ನು ಮತ್ತು ಅರಬ್ಬರನ್ನು ಸೋಲಿಸುವ ಅಗತ್ಯವಿತ್ತು. ಕ್ರಿ.ಶ 1498ರಲ್ಲಿ ಪೆಡ್ರೋ ಅಲ್ವಾರಿಸ್ ಗ್ಯಾಬ್ರಿಯರ್ ಒಂದು ಪ್ರಯತ್ನ ಮಾಡಿ ವಿಫಲನಾದ.

ಮಂಗಳೂರಿನಲ್ಲಿ ಪೋರ್ಚುಗೀಸರ ವ್ಯಾಪಾರ ಸ್ಥಾಪನೆ ಆಗಬೇಕಾದರೆ ಅರಬ್ಬರ ವ್ಯಾಪಾರಕ್ಕೆ ನಿರ್ಬಂಧ ಹೇರಬೇಕು. ಹಂಜಮಾನಗಳನ್ನು, ಮುಸ್ಲಿಮರನ್ನು ದೂರವಿರಿಸಿ ಕ್ರೈಸ್ತರನ್ನು ನೆಲೆಗೊಳಿಸಬೇಕು. ಸ್ಥಳೀಯ ಆಡಳಿತಗಾರರನ್ನು ಪುಸಲಾಯಿಸಿ ಸಂಬಂಧ ಬೆಳೆಸಿಕೊಳ್ಳಬೇಕು. ಪಾಶ್ಚಾತ್ಯ ಮಿಲಿಟರಿಗಳನ್ನು ಸ್ಥಳೀಯವಾಗಿ ಸ್ಥಾಪಿಸಬೇಕು. ಈ ಉದ್ದೇಶಕ್ಕಾಗಿಯೇ ಅಲ್ಬುಕರ್ಕ್‌ನು ಮಂಗಳೂರಿನ ಮೇಲೆ ದಾಳಿ ಮಾಡಿದ. ಮಂಗಳೂರು ಆಗ ವಿಜಯನಗರದ ಭಾಗವಾಗಿದ್ದು ಹಲವಾರು ಸ್ಥಳೀಯ ಸಾಮಂತರು ಆಡಳಿತ ನಡೆಸುತ್ತಿದ್ದರು. ಮಂಗಳೂರಿನಲ್ಲಿ ಉಳ್ಳಾಲದ ರಾಣಿ ಅಬ್ಬಕ್ಕ ದೇವಿಯ ಆಡಳಿತವಿತ್ತು. ಕ್ರಿ.ಶ.1562ರಲ್ಲಿ ಪ್ರಾನ್ಸಿಸ್ ಡಿ ಅಲ್ಮೆಡಾ ಮಂಗಳೂರನ್ನು ಆಕ್ರಮಿಸಿದ ಪೋರ್ಚುಗೀಸ್ ಸೇನಾಧಿಪತಿ ಡಿ ಆಲ್ಮೆರಾ ಸಾಲ್ಸೆರಾ ಮಂಗಳೂರನ್ನು ಕೊಳ್ಳೆ ಹೊಡೆಯಲು ಪ್ರಯತ್ನಿಸಿದ. ಇಡೀ ಪಟ್ಟಣವೇ ಬೆಂಕಿಗಾಹುತಿಯಾಯಿತು. ರಾಣಿ ಮತ್ತು ಮುಸ್ಲಿಮರು ಒಟ್ಟಾಗಿ ಪ್ರತಿರೋಧ ಮಾಡಿದರು. ಪೋರ್ಚುಗೀಸ್ ವೈಸರಾಯ್ ವಾಸ್ ಸಂಪಯೋ ಮತ್ತೊಂದು ಆಕ್ರಮಣ ಮಾಡಿದ ಮೇಲಿಂದ ಮೇಲೆ ಬಂದ ಆಕ್ರಮಣಗಳಿಂದ

ರಾಣಿಗೆ ಸೋಲುಂಟಾಯಿತು. ಮಂಗಳೂರು ಪೋರ್ಚುಗೀಸರ ವಶವಾಯಿತು. ಪ್ರತಿವರ್ಷ 2400 ಲೋಡ್ ಅಕ್ಕಿಯನ್ನು ಕಪ್ಪ ಕೊಡುವಂತೆ ಷರತ್ತು ಹೇರಲಾಯಿತು. ವೈಸರಾಯ್ ನೂರಾನ್ಹಾ ಮತ್ತು ಮೂರು ಸಾವಿರ ಸೈನಿಕರು ಮಂಗಳೂರಲ್ಲೇ ಠಿಕಾಣಿ ಹೂಡಿದರು. ಉಳ್ಳಾಲದ ಎರಡನೇ ಅಬ್ಬಕ್ಕ ದೇವಿಯನ್ನು ಶರಣಾಗುವಂತೆ ಮಾಡುವುದೇ ಈತನ ಉದ್ದೇಶವಾಗಿತ್ತು. ಆದರೆ ರಾಣಿಗೆ ಮೊಗವೀರರು ಮತ್ತು ಮುಸ್ಲಿಮರ ಬೆಂಬಲವಿತ್ತು.[21]

ಒಂದು ದಿನ ಮಧ್ಯರಾತ್ರಿಯಲ್ಲಿ ರಾಣಿಯ ಸೈನಿಕರು ಪೋರ್ಚುಗೀಸರ ನೆಲೆಯ ಮೇಲೆ ಪಂಜು ಮತ್ತು ಶಸ್ತ್ರಗಳೊಂದಿಗೆ ದಾಳಿ ಮಾಡಿದರು. ಅವರ ಹಡಗುಗಳಿಗೆ ಬೆಂಕಿ ಇಟ್ಟು ಸುಟ್ಟರು. ಪೋರ್ಚುಗೀಸರಿಗೆ ಅಪಾರ ಹಾನಿಯಾಯಿತು. ಜೋ ಎಕ್ಸೆಟ್ ಮರುದಿನವೇ ಉಳ್ಳಾಲದ ಮೇಲೆ ದಾಳಿ ಇಟ್ಟ. ಆದರೆ ರಾಣಿಯ ಸೈನಿಕರು ಅವರನ್ನು ಹಿಮ್ಮೆಟ್ಟಿಸಿದರು. ಆದರೂ ಪೋರ್ಚುಗೀಸರು ಛಲಬಿಡದೆ ಕ್ರಿ.ಶ 1569ರಲ್ಲಿ ಮತ್ತೆ ಆಕ್ರಮಿಸಿದರು ಮತ್ತು ಲೂಟಿ ಮಾಡಿದರು. ಪೋರ್ಚುಗೀಸರ ಆಕ್ರಮಣ ಎದುರಿಸಲು ರಾಣಿಯು ಸ್ಥಳೀಯ ಇತರ ಅರಸರ ನೆರವನ್ನು ಕೇಳಿದಳು. ಅವರ ಒಮ್ಮತದ ನಿರ್ಧಾರದಂತೆ ಜಾಮೊರಿನ್ ಅರಸನ ನೆರವು ಪಡೆಯಬೇಕೆಂದು ನಿರ್ಧರಿಸಿದಳು ಜಾಮೊರಿನ್ ನೌಕಾಪಡೆಯ ಮುಖ್ಯಸ್ಥ ಕುಂಹಿ ಪೋಕರೆ ಮರಕ್ಕಾರ ಕ್ರಿ.ಶ 1570ರಲ್ಲಿ ಮಂಗಳೂರಿಗೆ ಬಂದನು ಮತ್ತು ಪೋರ್ಚುಗೀಸರ ಸೈನ್ಯವನ್ನು ಹಿಮ್ಮೆಟ್ಟಿಸಿದನು. ಅಬ್ಬಕ್ಕ ದೇವಿಯ ನಂತರ ಪುತ್ರಿ ತಿರುಮಲಾದೇವಿ ಪೋರ್ಚುಗೀಸರೊಡನೆ ಶಾಂತಿ ಒಪ್ಪಂದಕ್ಕೆ ಸಹಿ ಹಾಕಿದಳು. ಇದರಿಂದಾಗಿ ಮುಸ್ಲಿಮರ ವ್ಯಾಪಾರ ಏಕಸ್ವಾಮ್ಯ ಕೂಡ ಅಂತ್ಯಗೊಂಡಿತು. ಪೋರ್ಚುಗೀಸರು ಇಷ್ಟಕ್ಕೆ ತೃಪ್ತರಾಗದೇ ತಮ್ಮ ಬಲ ವೃದ್ಧಿಗಾಗಿ ಪ್ರಯತ್ನಿಸಿದರು. ಇದೇ ಸಮಯದಲ್ಲಿ ಬಿದನೂರಿನ ಕ್ಷತ್ರೀಯ ಅರಸನಾದ ಬಸಪ್ಪನಾಯಕ ಮತ್ತು ಎರಡನೇ ಸೋಮಶೇಖರ ನಾಯಕರು ಕರಾವಳಿಯಲ್ಲಿ ಅಧಿಕಾರ ವಿಸ್ತರಿಸಲು ಯತ್ನಿಸಿದರು. ಪೋರ್ಚುಗೀಸರಿಗೆ ಇದೊಂದು ಸವಾಲಾಗಿತ್ತು. ಉಳ್ಳಾಲದ ರಾಣಿಯ ಮನೆಯೊಳಗೆ ಅಂತಃಕಲಹ ಮತ್ತೆ ಮೇಲೇಳದಂತೆ ಮಾಡಿತ್ತು. ಹೀಗಾಗಿ ಕ್ರಿ.ಶ 1750ರ ವರೆಗೂ ಕ್ಷತ್ರೀಯ ಅರಸರೊಡನೆ ಮೈತ್ರಿ ಮಾಡುತ್ತಾ, ಪೋರ್ಚುಗೀಸರು ಮಂಗಳೂರನ್ನು ವಶವಿರಿಸಿಕೊಂಡಿದ್ದರು.[22]

ಕ್ರಿ.ಶ 1508ರಲ್ಲಿ ಅಲ್ಮೆಡಾ ತನ್ನ ರಾಯಭಾರಿಯನ್ನು ವಿಜಯನಗರಕ್ಕೆ ಕಳುಹಿಸಿ ಸ್ನೇಹದ ಒಪ್ಪಂದವನ್ನು ತನ್ನ ಸಾರ್ವಭೌಮ ಕೋರಿಕಂಡಂತೆ ಮಾಡಲು ಹೇಳಿದ ಮತ್ತು ಭಟ್ಕಳದಲ್ಲಿ ಒಂದು ಕೋಟೆಯನ್ನು ನಿರ್ಮಾಣ ಮಾಡಲು ಅನುಮತಿಯನ್ನು ಕೋರಿದ. ಆದರೆ ಅವನ ಇಬ್ಬರು ರಾಯಭಾರಿಗಳು ಬರಿಗೈಯಲ್ಲಿ ಹಿಂದಿರುಗಿದರು. ಹೀಗಾದರೂ ಇದು ಅಲ್ಮೆಡಾನ

ವೈಸರಾಯ್ ನೇತೃತ್ವದಲ್ಲಿ ನಡೆದು ವಿಜಯನಗರದೊಂದಿಗೆ ಒಂದು ಖಚಿತವಾದ ನಿಲುವನ್ನು ಪಡೆಯಲು ಸಹಕಾರಿಯಾಯಿತು. ಅವರು ವಿಜಯನಗರದೊಂದಿಗೆ ಒಳ್ಳೆಯ ಸಂಬಂಧಗಳನ್ನು ಇಟ್ಟುಕೊಳ್ಳಲು ಅವಕಾಶವಾಯಿತಲ್ಲದೆ ಇಬ್ಬರ ಸಮಾನ ಶತ್ರುಗಳಾದ ದಖ್ಖನ್ನಿನ ಸುಲ್ತಾನರ ವಿರುದ್ಧವಾಗಿ ಅವರ ಸ್ಥಾನವನ್ನು ಗಟ್ಟಿಗೊಳಿಸಿತು.

ಕ್ರಿ.ಶ 1509ರಲ್ಲಿ ಕೃಷ್ಣದೇವರಾಯ ಪಟ್ಟವನೇರಿದ ಪೋರ್ಚುಗೀಸರು ಅವನು ಪಟ್ಟವೇರಿದ ಕೂಡಲೇ ಸ್ನೇಹ ಸಂಬಂಧವನ್ನು ಬಯಸಿದರು. ಫ್ರಾನ್ಸಿಸ್ಕೋ ಡಿ ಅಲ್ಮೆಡಾನ ಕೋರಿಕೆಯಾದ ಭಟ್ಕಳದಲ್ಲಿ ಕೋಟೆ ಕಟ್ಟುವ ಸಂಗತಿಗಾಗಿ ಎರಡನೆಯ ಬಾರಿ ರಾಯಬಾರಿಯೊಬ್ಬನನ್ನು ಕಳುಹಿಸಿದ. ಇದೇ ಕ್ರಿ.ಶ.1510ರ ಕೊನೆಯಲ್ಲಿ ನಡೆಯಿತು. ಈ ಮೂಲಕ ಕೆನರಾದ ಕರಾವಳಿಯಲ್ಲಿ ತಮ್ಮ ಹಿಡಿತವನ್ನು ಸ್ಥಾಪಿಸಲು ಪೋರ್ಚುಗೀಸರಿಗೆ ಅವಕಾಶ ಒದಗಿದಂತಾಗುತ್ತಿತ್ತು. ಕ್ರಿ.ಶ 1511 ಮತ್ತು 1514ರಲ್ಲಿ ಕೃಷ್ಣದೇವರಾಯ ತನ್ನ ರಾಯಭಾರಿಗಳನ್ನು ಗೋವೆಯಲ್ಲಿದ್ದ ಪೋರ್ಚುಗೀಸರ ಬಳಿಗೆ ಕಳುಹಿಸಿ ಅರೇಬಿಯಾ ಮತ್ತು ಓರ್ಮಜ್‌ನ ಕುದುರೆಗಳನ್ನು ಬಿಜಾಪುರಕ್ಕೆ ನೀಡದೇ ತನಗೇ ನೀಡಬೇಕೆಂಬ ಹೊಂದಾಣಿಕೆಯನ್ನು ಮಾಡಲು ಕಳುಹಿಸಿದ. ಅಲ್ಬುಕರ್ಕ್ ಈ ಬಗ್ಗೆ ಆಸಕ್ತಿ ತೋರಿಸಿದನಲ್ಲದೆ ಇದಕ್ಕೆ ಪ್ರತಿಯಾಗಿ ವಿಜಯನಗರದ ಆಡಳಿತದಲ್ಲಿದ್ದ ಭಟ್ಕಳ ಅಥವಾ ಬಸರೂರನ್ನು ಬಿಟ್ಟುಕೊಡಲು ಕೇಳಿದ. ಆದರೆ ಈ ಒಪ್ಪಂದಗಳಿಗೆ ಯವುದೇ ಸಹಿ ಹಾಕಲಿಲ್ಲ. ಇದಾದ ಕೂಡಲೇ ಆದಿಲ್‌ಷಾ ಕುದುರೆಗಳಿಗಾಗಿ ಪೋರ್ಚುಗೀಸರಿಗೆ ಬೇಡಿಕೆ ಸಲ್ಲಿಸಿದ. ಯಾವುದೇ ಒಪ್ಪಂದವಾಗದಿದ್ದರೂ ಅಲ್ಬುಕರ್ಕ್ ಆದಿಲ್ ಷಾನಿಗೆ ಬಿಜಾಪುರಕ್ಕೆ ವಿರುದ್ಧವಾಗಿ ವಿಜಯನಗರಕ್ಕೆ ಯವುದೇ ಸಹಾಯ ನೀಡುವುದಿಲ್ಲ ಎಂಬ ಭರವಸೆ ಇತ್ತ ಇದರಿಂದ ಬಿಜಾಪುರ ಮತ್ತು ವಿಜಯನಗರಗಳ ನಡುವೆ ಇದ್ದ ವೈರತ್ವವನ್ನು ಪೋರ್ಚುಗೀಸರು ತಮ್ಮ ಲಾಭಕ್ಕೆ ಬಳಸಿಕೊಂಡದ್ದು ಸ್ಪಷ್ಟವಾಗುತ್ತದೆ.[23]

ವಿಜಯನಗರದ ಪತನದ ನಂತರ ಪೋರ್ಚುಗೀಸರು ಕೆನರಾದ ಕರಾವಳಿಯೂ ಸೇರಿದಂತೆ ವಿಜಯನಗರದ ಕೆಲವು ಪಾಳೆಯ ಪಟ್ಟಣಗಳ ಆಕ್ರಮಣ ನಡೆಸಿ ಮುಖ್ಯವಾದ ಸ್ಥಳಗಳಲ್ಲಿ ಕೋಟೆಗಳನ್ನು ಕಟ್ಟಿದರು. ಕ್ರಿ.ಶ 1559ರಲ್ಲಿ ಗೇರುಸೊಪ್ಪೆಯ ರಾಣಿಯ ಮೇಲೆ ಆಕ್ರಮಣ ನಡೆಸಿ ಆಕೆಯನ್ನು ಸೋಲಿಸಿ ಹೊನ್ನಾವರದಲ್ಲಿ ಕೋಟೆಯನ್ನು ಕಟ್ಟಿದರು. ಇದಲ್ಲದೆ ಗಂಗೋಳಿಯ ಪ್ರಮುಖನಾದ ತೋಳಹಾರನ ಮೇಲೆ ಆಕ್ರಮಣ ಮಾಡಿ ಕುಂದಾಪುರವನ್ನು ಬಳಸಿಕೊಂಡು ಅಲ್ಲಿಯೂ ಕೋಟೆಯನ್ನು ಕಟ್ಟಿದರು. ಕ್ರಿ.ಶ 1568ರಲ್ಲಿ ಬಂಗಾಡಿಯ ಅರಸು ನೀಡಿದ ಅವಕಾಶವನ್ನು ಬಳಸಿಕೊಂಡು ಮಂಗಳೂರಿನ ಬಂದರಿನಲ್ಲಿ ಪೋರ್ಚುಗೀಸರು ಒಂದು

ಸ್ಥಳವನ್ನು ಪಡೆದುಕೊಂಡರು. ಬಂಗನಿಗೆ ಉಳ್ಳಾಲದ ಚೌಟರು ಮತ್ತು ಮಂಗಳೂರಿನ ಮುಸ್ಲಿಮರೊಂದಿಗೆ ಕೆಲವು ಸಮಸ್ಯೆಗಳಿದ್ದವು. ತನ್ನ ವೈರಿಗಳನ್ನು ಹತ್ತಿಕ್ಕಲು ಅವನು ಪೋರ್ಚುಗೀಸರನ್ನು ಬಳಿಸಿಕೊಂಡನು.

**ಪೋರ್ಚುಗೀಸರು ಮತ್ತು ಕರ್ನಾಟಕದ ಇತರ ಸಂಸ್ಥಾನಗಳ ನಡುವಿನ ಸಂಬಂಧ:**

ಪೋರ್ಚುಗೀಸರು ದೊಡ್ಡ ವಿಜಯನಗರ ಸಾಮ್ರಾಜ್ಯವಲ್ಲದೇ ಸ್ಥಳೀಯ ವಿಜಯನಗರ ಸಾಮಂತರು, ಅವರ ವಿರೋಧಿ ಸಂಸ್ಥಾನಗಳ ನಡುವೆ ಉತ್ತಮವಾದ ಸಂಬಂಧವನ್ನು ಏರ್ಪಡಿಸಿಕೊಂಡಿದ್ದರು. ಪೋರ್ಚುಗೀಸರು ಮತ್ತು ಕರ್ನಾಟಕದ ಇತರೆ ಸಂಸ್ಥಾನಗಳ ನಡುವಿನ ಸಂಬಂಧಗಳ್ನು ಈ ಕೆಳಕಂಡಂತೆ ನೋಡೋಣ.

**ಪೋರ್ಚುಗೀಸರು ಮತ್ತು ಆದಿಲ್ ಶಾಹಿಗಳು**

ಪೋರ್ಚುಗೀಸರು ಯೂಸಪ್ ಆದಿಲ್ ಷಾನಿಂದ ಗೋವಾದ ದ್ವೀಪವನ್ನು ವಶಪಡಿಸಿಕೊಂಡರು. ಕ್ರಿ.ಶ 1510ರಲ್ಲಿ ಬಿಜಾಪುರದ ಸುಲ್ತಾನ ಆದಿಲ್ ಷಾ ಮತ್ತು ಅಲ್ಬುಕರ್ಕ್‌ನ ನಡುವೆ ನಡೆದ ಯುದ್ಧದಲ್ಲಿ ಸುಲ್ತಾನ ಸೋತು ಗೋವಾವನ್ನು ಕಳೆದುಕೊಂಡನು. ಆದರೆ ಮತ್ತೆ ಕ್ರಿ.ಶ.1510ರ ಮೇ ತಿಂಗಳಲ್ಲಿ ಆದಿಲ್‌ಷಾ ಮತ್ತು ಪೋರ್ಚುಗೀಸರ ನಡುವೆ ಯುದ್ಧ ಸಂಭವಿಸಿ ಈ ಯುದ್ಧದಲ್ಲಿ ಆದಿಲ್‌ಷಾನು ಪೋರ್ಚುಗೀಸರನ್ನು ಗೋವಾದಿಂದ ಹೊರ ಹಾಕಿದನು. ಆದಿಲ್ ಷಾ ನಂತರ ಅವರ ಮಗ ಇಸ್ಮಾಯಿಲ್ ಆದಿಲ್ ಷಾ ನಿಂದ ಪೋರ್ಚುಗೀಸರು ಕೆಲವು ದ್ವೀಪಗಳನ್ನು ವಶಪಡಿಸಿಕೊಂಡರು. ವಿಜಯನಗರದ ಮಂತ್ರಿ ತಿಮ್ಮಯ್ಯ ಕರಾವಳಿಯ ಮೂಲಕ ಪೋರ್ಚುಗೀಸರು ಗೋವಾವನ್ನು ವಶಪಡಿಸಿಕೊಳ್ಳಲು ಸಹಕರಿಸಿದ. ತಿಮ್ಮಯ್ಯನು ಮೂಲತಃ ಗೋವಾದ ವ್ಯಕ್ತಿ ಇವನು ಕ್ರಿ.ಶ 1510ರಲ್ಲಿ ಹೊನ್ನಾವರದ ಗೇರುಸೊಪ್ಪೆಯ ರಾಣಿಯನ್ನು ವಿವಾಹವಾಗಿದ್ದನು.[24]

ಪೋರ್ಚುಗೀಸರು ಮತ್ತು ಆದಿಲ್ ಷಾಹಿಗಳ ನಡುವಿನ ಸಂಬಂಧ ಇಷ್ಟಕ್ಕೆ ಮುಗಿಯುವುದಿಲ್ಲ ಪೋರ್ಚುಗೀಸರು ವಿಜಯನಗರ ಮತ್ತು ಆದಿಲ್ ಷಾಹಿಗಳ ನಡುವಿನ ವೈರತ್ವವನ್ನು ಸಕಾರಾತ್ಮಕವಾಗಿ ಬಳಸಿಕೊಂಡರು ಇದರ ಫಲವಾಗಿ ಎರಡು ಸಾಮ್ರಾಜ್ಯಗೊಂದಿಗೆ ಇವರು ಉತ್ತಮವಾದ ಸಂಬಂಧವನ್ನು ಏರ್ಪಡಿಸಿಕೊಂಡರು. ವಿಜಯನಗರಕ್ಕೆ ತಿಳಿಯದಂತೆ ಆದಿಲ್‌ಷಾಹಿಗಳಿಗೆ ಮತ್ತು ಆದಿಲ್ ಷಾಹಿಗಳಿಗೆ ತಿಳಿಯದಂತೆ ವಿಜಯನಗರಕ್ಕೆ ಯುದ್ಧದ ಅಶ್ವಗಳನ್ನು ಇವರು ಸರಬರಾಜು ಮಾಡುತ್ತಿದ್ದರು. ಕೊನೆಗೆ ಈ ವಿಚಾರ ಕೃಷ್ಣದೇವರಾಯನಿಗೆ

ತಿಳಿದು ಇವನು ಪೋರ್ಚುಗೀಸರ ವಿರುದ್ಧ ಕೆಂಡಮಂಡಲವಾದನು. ಕೊನೆಗೆ ಆದಿಷಾಹಿಗಳೊಂದಿಗಿನ ಸಂಬಂಧವನ್ನು ಕಳೆದುಕೊಂಡ ಪೋರ್ಚುಗೀಸರು ವಿಜಯನಗರ ಸಾಮ್ರಾಜ್ಯಕ್ಕೆ ತಮ್ಮ ನಿಷ್ಠೆಯನ್ನು ತೋರಿಸುವ ಪ್ರಯತ್ನ ಮಾಡಿದರು.

**ಪೋರ್ಚುಗೀಸರು ಮತ್ತು ಕೆಳದಿಯ ನಾಯಕರು:**

ವಿಜಯನಗರದ ಅರಸರ ಕಾಲದಲ್ಲಿ ಹುಟ್ಟಿ ಬೆಳೆದ ಪ್ರಮುಖ ಸ್ವತಂತ್ರ ಸಂಸ್ಥಾನವೆಂದರೆ ಕೆಳದಿ ಸಂಸ್ಥಾನ. ಇದು ಕ್ರಿ.ಶ1499–1763ರ ವರೆಗೆ ಆಳ್ವಿಕೆ ನಡೆಸಿತು. ಪೋರ್ಚುಗೀಸರು ಮತ್ತು ಕೆಳದಿಯ ನಾಯಕರ ನಡುವೆ ಇರಬಹುದಾದ ರಾಜಕೀಯ ಸಂಬಂಧಗಳ ಬಗ್ಗೆ 16ನೇ ಶತಮಾನದ ಕೊನೆಯ ಭಾಗದವರೆಗೆ ಯಾವುದೇ ದಾಖಲೆಗಳು ದೊರೆಯುವುದಿಲ್ಲ. ಒಂದನೇ ವೆಂಕಟಪ್ಪನಾಯಕನ ಕಾಲದಲ್ಲಿ ಗೇರುಸೊಪ್ಪೆಯ ರಾಣಿ ಭೈರಾದೇವಿ 21ನೇ ನವೆಂಬರ್ 1598ರಲ್ಲಿ ಪೋರ್ಚುಗೀಸ್ ವೈಸರಾಯ್ ಫ್ರಾನ್ಸಿಸ್ಕೋ ಡ ಗಾಮ ಎಂಬುವವನಿಗೆ ಪತ್ರ ಬರೆದಿದ್ದಳು. ಪೋರ್ಚುಗಲ್‌ನ ರಾಜ ಆಕೆಗೆ ಪ್ರತ್ಯುತ್ತರ ಬರೆದು ವೆಂಕಟಪ್ಪನ ಕುತಂತ್ರಗಳ ಬಗ್ಗೆ ಗಮನ ಹರಿಸಬೇಕೆಂದು ಅವನ ಕುತಂತ್ರಗಳಿಗೆ ಪ್ರತಿತಂತ್ರ ಒಡ್ಡಬೇಕೆಂದೂ ತಿಳಿಸಿದ್ದ. ಆದರೆ ಫ್ರಾನ್ಸಿಸ್ ಡ ಗಾಮ ಆಗಲಿ ಅವನ ನಂತರ ಬಂದ ವೈಸರಾಯ್‌ಗಳಾಗಲಿ ವೆಂಕಟಪ್ಪನ ಸಮಗ್ರ ಕೆನರಾವನ್ನು ಮತ್ತು ಅದರ ಸಣ್ಣ ರಾಜ್ಯಗಳನ್ನು ವಶಪಡಿಸಿಕೊಂಡಾಗ ಏನೂ ಮಾಡಲು ಸಮರ್ಥರಾಗಿರಲಿಲ್ಲ.[25] ಕ್ರಿ.ಶ.1606 ರಲ್ಲಿ ವೆಂಕಟಪ್ಪನು ಗೇರುಸೊಪ್ಪೆಯನ್ನು ವಶಪಡಿಸಿಕೊಂಡಾಗ ಬಸರೂರಿನಲ್ಲಿದ್ದ ಕ್ಯಾಪ್ಟನ್ ಲೂಯಿಸ್ ಡೆ ಮಂಡೋನ್ಸ್ ವೆಂಕಟಪ್ಪನನ್ನು ಭೇಟಿ ಮಾಡಿ ಅವನ ಸಹಾಯಹಸ್ತ ಕೋರಿದ. ವೆಂಕಟಪ್ಪ ಅದಕ್ಕೆ ಒಪ್ಪಿ ಪೋರ್ಚುಗೀಸರೊಂದಿಗೆ ಒಳ್ಳೆಯ ಸಂಬಂಧಗಳನ್ನು ಇಟ್ಟುಕೊಂಡಿದ್ದ.

ಪೋರ್ಚುಗೀಸರು ಕೆನರಾದಲ್ಲಿದ್ದ ಕಾಳು ಮೆಣಸನ್ನು ಕಡಿಮೆ ಹಣಕ್ಕೆ ಕೊಳ್ಳುವುದರಲ್ಲಿ ಆಸಕ್ತಿ ಹೊಂದಿದ್ದರು. ಬೈರಾದೇವಿ ಆದಿಲ್‌ಷಾಹನ ಜೊತೆಯಲ್ಲಿ ಹೊಂದಾಣಿಕೆ ಮಾಡಿಕೊಂಡಿದ್ದಳು. ಅವಳನ್ನು ವೆಂಕಟಪ್ಪ ಸೋಲಿಸಿದ್ದು ಆದಿಲ್‌ಷಾಗೆ ಸರಿಕಾಣಲಿಲ್ಲ. ಪೋರ್ಚುಗೀಸರು ವೆಂಕಟಪ್ಪನನ್ನು ಬಿಜಾಪುರದ ಮೇಲೆ ಎತ್ತಿಕಟ್ಟಿದರು. ಇದರ ಮೂಲಕ ಕೆನರಾದಲ್ಲಿ ತಮ್ಮ ಬೇಳೆ ಬೇಯಿಸಿಕೊಳ್ಳುವುದು ಅವರ ಉದ್ದೇಶವಾಗಿತ್ತು. ವೆಂಕಟಪ್ಪನು ಬಂಗವಾಡಿಯ ರಾಜರ ಮೇಲೆ ದಂಡೆತ್ತಿ ಕೊಡಿಯಾಲ ಬೈಲಿನ ಕೋಟೆಯನ್ನು ಆಕ್ರಮಿಸಿಕೊಳ್ಳಲು ಸನ್ನಾಹ ನಡೆಸಿದ್ದ. ಬಂಗವಾಡಿಯಾದ ರಾಜ ಬಂಗದೊರೆ ಈ ಬಗ್ಗೆ ಪೋರ್ಚುಗೀಸರಿಗೆ ದೂರು ನೀಡಿದ. ಆಗ ಪೋರ್ಚುಗೀಸರು ವೆಂಕಟಪ್ಪನಿಗೆ ಕುಮ್ಮಕ್ಕು ಕೊಡದೆ ಬಂಗನಿಗೆ ಸಹಾಯ

ಮಾಡಿದರು. ಕ್ರಿ.ಶ.1618ರಲ್ಲಿ ಮತ್ತು 1619ರಲ್ಲಿ ಎರಡು ಬಾರಿ ಅವರು ವೆಂಕಟಪ್ಪನೊಂದಿಗೆ ಕಾದಾಡಿ ಸೋತರು. ಈ ಸೋಲಿನ ನಂತರ ಮಂಗಳೂರಿನಲ್ಲಿ ಪೋರ್ಚುಗೀಸರ ಸ್ಥಾನ ಅಭದ್ರವಾಯಿತು.[26] ಪೋರ್ಚುಗೀಸರು ವೆಂಕಟಪ್ಪನೊಂದಿಗೆ ಗೆಳೆತನ ಬಯಸಿದರು. ಕೊನೆಗೆ ಕ್ರಿ.ಶ.1620ರ ಜನವರಿಯಲ್ಲಿ ಬಂಗಾದೊರೆ ವೆಂಕಟಪ್ಪ ಮತ್ತು ಪೋರ್ಚುಗೀಸರ ನಡುವೆ ಒಂದು ಒಪ್ಪಂದವಾಯಿತು. ಆದರೆ ವೆಂಕಟಪ್ಪ ಒಪ್ಪಂದದ ಮೇರೆಗೆ ನಡೆದುಕೊಳ್ಳಲಿಲ್ಲ. ಇದರಿಂದ ಬಂಗ ಪೋರ್ಚುಗೀಸರಿಗೆ ದೂರು ನೀಡಿದ ಇದರ ಪರಿಣಾಮವಾಗಿ ಅಕ್ಟೋಬರ್ 1623ರಲ್ಲಿ ಪೋರ್ಚುಗೀಸರು ಇಕ್ಕೇರಿಗೆ ರಾಯಭಾರಿಯನ್ನು ಕಳುಹಿಸಿದರು. ಈ ರಾಯಬಾರಿಯೊಂದಿಗೆ ಇಟಲಿಯ ಪ್ರವಾಸಿ ಪಿತ್ರೊ ಡೆಲ್ಲಾ ವೆಲ್ಲೆ ಕೂಡ ಇಕ್ಕೇರಿಗೆ ಭೇಟಿ ನೀಡಿದ. ವೆಂಕಟಪ್ಪ ತನಗೆ ಅನುಕೂಲವಾಗುವ ಅಂಶಗಳಿಗೆ ಕಟ್ಟುಬಿದ್ದ. ಇದರಿಂದ ಪೋರ್ಚುಗೀಸರು ಬಂಗನಿಗೆ ಸಹಾಯ ಮಾಡಲು ಆಗಲಿಲ್ಲ. ಇದರ ಬದಲಾಗಿ ವೆಂಕಟಪ್ಪನೊಂದಿಗೆ ಮತ್ತೊಂದು ಒಪ್ಪಂದ ಮಾಡಿಕೊಂಡು ತಮ್ಮ ಮೆಣಸಿನ ವ್ಯಾಪಾರದ ಆಸ್ಕತಿಯನ್ನು ಕಾಯ್ದುಕೊಂಡರು.

ವೀರಭದ್ರನಾಯಕನ ಆಡಳಿತದಲ್ಲಿ (1629–45) ಪೋರ್ಚುಗೀಸರು ತನ್ನ ಕೋಟೆಯನ್ನು ಬಿಜಾಪುರದಿಂದ ಗಂಗೊಳ್ಳಿಗೆ ವರ್ಗಾಯಿಸಲು ಬಯಸಿದರು. 3ನೇ ಜನವರಿ 1620ರಲ್ಲಿ ವೀರಭದ್ರ ಪೋರ್ಚುಗೀಸರು ತಮ್ಮ ಶತ್ರು ಎಂದು ಘೋಷಿಸಿದ ಮತ್ತು ಅವರು ಬಯಸಿದಂತೆ ಬಸರೂರಿನಿಂದ ಅಕ್ಕಿಯ ರವಾನೆಯನ್ನು ಪ್ರತಿಬಂಧಿಸಿದ. ಆದರೆ ಫೆಬ್ರವರಿ 1630ರಲ್ಲಿ ಕೆನರಾದ ಭೂ ಮತ್ತು ನೌಕಾದಳದ ಕ್ಯಾಪ್ಟನ್ ಜನರಲ್ ಆಗಿದ್ದ ಡಿಯಾಗೋ–ಡಿ–ಸೋಜಾ ಮನೆಜಸ್ ಗಂಗೊಳ್ಳಿಯನ್ನು ವಶಪಡಿಸಿಕೊಳ್ಳುವಲ್ಲಿ ಯಶಸ್ವಿಯಾದ. ವೀರಭದ್ರ ಗಂಗೊಳ್ಳಿಯಲ್ಲಿ ಪೋರ್ಚುಗೀಸರ ಮೇಲೆ ಆಕ್ರಮಣ ಮಾಡಲು ಪ್ರಯತ್ನಿಸಿದ, ಆದರೆ ಅವನ ಮಾವ ಇದನ್ನು ವಿರೋಧಿಸಿದ. ಅಲ್ಲದೆ ಈ ವೀರಪ್ಪನಾಯಕ ಇಕ್ಕೇರಿಯ ರಾಜ ಎಂಬುದಾಗಿ ತಮ್ಮನ್ನು ಕರೆದುಕೊಂಡ.[27]

ಪೋರ್ಚುಗೀಸರು ವೀರಪ್ಪನನ್ನು ಬೆಂಬಲಿಸಲು ಮನಸ್ಸು ಮಾಡಿದರು. ಕ್ರಿ.ಶ.1631ರ ಮಾರ್ಚ್‌ನಲ್ಲಿ ಪೋರ್ಚುಗೀಸರು ಮತ್ತು ವೀರಪ್ಪನಾಯಕನ ನಡುವಣ ಶಾಂತಿ ಮತ್ತು ಸ್ನೇಹದ ಒಪ್ಪಂದ ಸಹಿ ಮಾಡಲ್ಪಟ್ಟಿತ್ತು. ಈ ಒಪ್ಪಂದದಲ್ಲಿ ಹಲವು ಸೌಲಭ್ಯಗಳನ್ನು ಇದರಲ್ಲಿ ರಾಜಕೀಯ ಸ್ನೇಹ ಮತ್ತು ವಾಣಿಜ್ಯ ಕೊಡು ಕೊಳ್ಳುವಿಕೆಯ ಮಾತಿತ್ತು. ಇಕ್ಕೇರಿಯ ಅರಸರು ಗಂಗೋಳ್ಳಿಯನ್ನು ಪೋರ್ಚುಗೀಸರಿಗೆ ಬಿಟ್ಟುಕೊಡಬೇಕು, ಕಾಣಿಕೆಯಾಗಿ ಐದುನೂರು ಲೋಡ್

ಅಕ್ಕಿಯನ್ನು ಕಳುಹಿಸಬೇಕು, ಹಿಂದಿನ ಬಾಕಿಯನ್ನು ಚುಕ್ತಾ ಮಾಡಬೇಕು. ಪೋರ್ಚುಗೀಸರು ಮೇ 1631ರಲ್ಲಿ ಗಂಗೋಳಿಯ ಅಧಿಕಾರ ವಹಿಸಿಕೊಂಡರು.[28]

ಈ ಒಪ್ಪಂದಕ್ಕೆ ಸಹಿ ಮಾಡಿದ ಕೆಲವು ತಿಂಗಳುಗಳಲ್ಲಿ ವೀರಪ್ಪ ಮರಣ ಹೊಂದಿದ, ನಂತರ ವೀರಭದ್ರಪ್ಪ ತನ್ನನ್ನು ಇಕ್ಕೆರಿಯ ಅಜಾತರಾಜ ಎಂದು ಕರೆದುಕೊಂಡ. ಕ್ರಿ.ಶ.1631ರ ಸುಮಾರಿನಲ್ಲೇ ಪೋರ್ಚುಗೀಸರೊಂದಿಗಿದ್ದ ಒಪ್ಪಂದವನ್ನು ನವೀಕರಿಸಿದ. ಕೊನೆಗೆ 5ನೇ ಏಪ್ರಿಲ್ 1633ರಲ್ಲಿ ಪೋರ್ಚುಗೀಸರು ಮತ್ತು ವೀರಭದ್ರನ ನಡುವೆ ಗೋವಾದಲ್ಲಿ ಒಂದು ಒಪ್ಪಂದವಾಯಿತು. ಈ ಒಪ್ಪಂದದಲ್ಲಿ ರಾಜಕೀಯ ಮತ್ತು ಆರ್ಥಿಕ ಅಂಶಗಳಿದ್ದವು. ಬಸರೂರಿನ ಕೋಟೆಯನ್ನು ಒಡೆದು ಹಾಕುವ ವಿಷಯವಿತ್ತು. ಕ್ರಿ.ಶ.1636ರ ಜನವರಿಯಿಂದ ಅಕ್ಟೋಬರ್‌ವರೆಗೆ ವೀರಭದ್ರನ ರಾಯಭಾರಿ ದೇವರಸ ಶೆಣೈ ಮತ್ತು ಪೋರ್ಚುಗೀಸರ ನಡುವೆ ಕೆನರಾದ ಎರಡು ಕೋಟೆಗಳ ಪೈಕಿ (ಬಸರೂರು ಮತ್ತು ಗಂಗೋಳ್ಳಿ ಕೋಟೆ)ಒಂದನ್ನು ಒಡೆದು ಹಾಕುವ ಚರ್ಚ್‌ಗಳಾದವು.

ಕ್ರಿ.ಶ.1637ರಲ್ಲಿ ಭಂಗರಾಜನು ವೀರಭದ್ರನ ವಿರುದ್ಧ ದಂಗೆಯೆದ್ದ. ಜನವರಿ 1638ರಲ್ಲಿ ಬಂಗರಾಣಿ ವೀರಭದ್ರನ ವಿರುದ್ಧವಾಗಿ ಪೋರ್ಚುಗೀಸರ ನೆರವನ್ನು ಕೋರಿದಳೂ. ವೀರಭದ್ರನೊಂದಿಗೆ ಹೊಂದಾಣಿಕೆಯಿಂದಿದ್ದ ಪೋರ್ಚುಗೀಸರು ರಾಣಿಗೆ ನೆರವು ನೀಡಲಿಲ್ಲ.[29]

ಶಿವಪ್ಪನಾಯಕ (1645–60)ಇಕ್ಕೇರಿಯ ರಾಜರಲ್ಲಿ ಅತ್ಯುತ್ತಮನಾದವನು. ಆತ ಕೆನರಾದಲ್ಲಿ ಪೋರ್ಚುಗೀಸರ ಅಧಿಕಾರಾಶಕ್ತಿಯನ್ನು ಮುರಿದ. ಕ್ರಿ.ಶ.1650ರಲ್ಲಿ ಪೋರ್ಚುಗೀಸರ ವಶದಲ್ಲಿದ್ದ ಕೆನರಾದ ಎಲ್ಲಾ ಕೋಟೆಗಳನ್ನು ವಶಪಡಿಸಿಕೊಂಡ. ಶಿವಪ್ಪ ನಾಯಕನು ಜನವರಿ 1652ರಲ್ಲಿ ಬಸರೂರನ್ನು ಆಕ್ರಮಿಸಿದ. ನವೆಂಬರ್ 1652ರಲ್ಲಿ ಗಂಗೋಳ್ಳಿಯನ್ನು ಆಕ್ರಮಿಸಿದ. ಇದರಿಂದಾಗಿ ಪೋರ್ಚುಗೀಸರು ತಮ್ಮ ಇನ್ನುಳಿದ ಎರಡು ಕೋಟೆಗಳಾದ ಮಂಗಳೂರು ಮತ್ತು ಹೊನ್ನಾವರವನ್ನು ಬಲಪಡಿಸಬೇಕಾಯಿತು. ಆದರೆ ಜುಲೈ–ಆಗಸ್ಟ್ 1653ರಲ್ಲಿ ಶಿವಪ್ಪ ಮಂಗಳೂರು ಕೋಟೆಯ ಮೇಲೆ ಆಕ್ರಮಣ ಮಾಡಿದ ಮತ್ತು ತನ್ನ ಕೈವಶಮಾಡಿಕೊಂಡ. ಮುಂದೆ ಕ್ರಿ.ಶ.1654ರಲ್ಲಿ ಹೊನ್ನಾವರ ಕೋಟೆಯನ್ನು ವಶಪಡಿಸಿಕೊಂಡನು.

ಆಗಸ್ಟ್ 1654ರಲ್ಲಿ ಆದಿಲ್‌ಷಾ ಪೋರ್ಚುಗೀಸರ ಮೇಲೆ ದಂಡೆತ್ತಿ ಬಂದ ಕಾರಣ ಅವರಿಗೆ ತೊಂದರೆಯಾಯಿತು. ಅವರು ಸೆಪ್ಟೆಂಬರ್ 1654ರಲ್ಲಿ ಹೊನ್ನಾವರ ಕೋಟೆಯನ್ನು ಕೆಡವಿದರು. ಶಿವಪ್ಪನಾಯಕನಿಗೆ 'ಪಡುಗಡಲ ಒಡೆಯ' ಎಂಬ ಬಿರುದು ದೊರೆಯಿತು.

ಫಲಿತಾಂಶವೇನೆಂದರೆ ಶಿವಪ್ಪ ಪೋರ್ಚುಗೀಸರ ವೈರಿಯಾಗಿದ್ದ. ಅವರು ಅವನೊಂದಿಗೆ ವಾಣಿಜ್ಯ ವ್ಯವಹಾರ ನಿಲ್ಲಿಸಿದರು. ಆದರೆ ಈ ವೈರತ್ವ ಬಹಳ ದಿನ ನಿಲ್ಲಲಿಲ್ಲ. ಮತ್ತೆ ಶಿವಪ್ಪ ಪೋರ್ಚುಗೀಸರೊಂದಿಗೆ ವ್ಯವಹಾರ ಮುಂದುವರೆಸಿದ. ಮಂಗಳೂರು ಬಸರೂರುಗಳಲ್ಲಿ ಕಾರ್ಖಾನೆಗಳನ್ನು ಸ್ಥಾಪಿಸಲು ಹೇಳಿದ. ಆದರೆ ಅವರು ಇದನ್ನು ಒಪ್ಪಲಿಲ್ಲ. ಶಿವಪ್ಪನು ಕ್ರಿ.ಶ.1660ರಲ್ಲಿ ಮರಣ ಹೊಂದಿದನು. ನಂತರ ಎರಡನೇ ವೆಂಕಟಪ್ಪನಾಯಕ ಅಧಿಕಾರಕ್ಕೆ ಬಂದ. ಪೋರ್ಚುಗೀಸರು ಅವನ ಹಡಗೊಂದನ್ನು ಸಿಬ್ಬಂದಿ ಸಮೇತ ವಶಪಡಿಸಿಕೊಂಡರು. ಆ ಸಿಬ್ಬಂದಿಯಲ್ಲಿ ಕೆಲವರನ್ನು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಿಸಲಾಯಿತು. ಇದಕ್ಕೆ ಪ್ರತಿಯಾಗಿ ವೆಂಕಟಪ್ಪ ಕೊಚ್ಚಿನ್‌ನಿಂದ ಗೋವೆಗೆ ಹೋಗುತ್ತಿದ್ದ ಪಾದ್ರಿಯೊಬ್ಬರನ್ನು ಸೆರೆಹಿಡಿದನು. [30]

ಆದಿಲ್‌ಷಾನು ಸೆಪ್ಟೆಂಬರ್ 1663ರಲ್ಲಿ ಭದ್ರಪ್ಪನಾಯಕನ ಅಧೀನದಲ್ಲಿದ್ದ ಇಕ್ಕೇರಿಯ ಗಡಿ ಪ್ರದೇಶಗಳನ್ನು ಆಕ್ರಮಿಸಿದಲ್ಲದೇ ಅವನ ರಾಜಧಾನಿಯೂ ಸೇರಿದಂತೆ ಪ್ರಮುಖ ಪ್ರದೇಶಗಳನ್ನು ಆಕ್ರಮಿಸಿಕೊಂಡನು. ಆದಿಲ್‌ಷಾನಿಂದ ಆಘಾತಕ್ಕೊಳಗಾಗಿದ್ದ ಭದ್ರಪ್ಪನ ನೆರವಿಗೆ ಬಂದ ಪೋರ್ಚುಗೀಸರು ಕೆನರಾದ ಕೆಲವು ಪ್ರದೇಶಗಳನ್ನಾದರೂ ವಾಪಸ್ಸು ಸಿಗುವಂತೆ ಆದಿಲ್ ಷಾನ ಮೇಲೆ ಒತ್ತಡ ಏರಿದರು. ಈ ಬಗ್ಗೆ ಮಾತುಕತೆ ಆರಂಭವಾದಾಗ ಭದ್ರಪ್ಪ ತನ್ನ ರಾಯಭಾರಿ ಯನ್ನು ಗೋವಾಕ್ಕೆ ಕಳುಹಿಸಿ ಪೋರ್ಚುಗೀಸರಿಗೆ ಅವರ ಹಿಂದಿನ ಕೋಟೆಗಳಾದ ಹೊನ್ನಾವರ, ಬಸರೂರು (ಭಟ್ಕಳ) ಮತ್ತು ಮಂಗಳೂರನ್ನು ಮತ್ತೆ ಹಿಂದಿರುಗಿಸುವ ಪ್ರಸ್ತಾಪವನ್ನು ಮಂಡಿಸಿದನು. ಇನ್ನೂ ಮಾತುಕತೆ ಮುಂದುವರಿಯುತ್ತಿರುವಾಗಲೇ ಭದ್ರಪ್ಪ ತನ್ನ ತಮ್ಮನಿಂದ ಕೊಲೆಯಾದ.

ಸೋಮಶೇಖರ ನಾಯಕ (1664–71)ಭದ್ರಪ್ಪನ ನಂತರ ಇಕ್ಕೇರಿಯ ರಾಜನಾದ ಈತನ ಆಡಳಿತದ ಅವಧಿಯಲ್ಲಿ ಇಕ್ಕೇರಿ ತನ್ನ ರಾಜಕೀಯ ಸ್ಥಿರತೆಯನ್ನು ಕಳೆದುಕೊಂಡಿತು. ನವೆಂಬರ್ 1664ರಲ್ಲಿ ನಾಯಕ ಪೋರ್ಚುಗೀಸರೊಂದಿಗೆ ಅವರ ಹಿಂದಿನ ಕೋಟೆಗಳಾದ ಹೊನ್ನಾವರ, ಬಸರೂರು (ಭಟ್ಕಳ) ಮತ್ತು ಮಂಗಳೂರನ್ನು ಮತ್ತೆ ಹಿಂದಿರುಗಿಸಲು ಒಪ್ಪಿದ. ಆದರೆ ಇದನ್ನು ಡಚ್ಚರು ವಿರೋಧಿಸಿದರು. ಅವರು ಮಂಗಳೂರನ್ನು ತಮ್ಮ ವಶಕ್ಕೆ ಒಪ್ಪಿಸಬೇಕೆಂಬ ಒತ್ತಡವನ್ನು ನಾಯಕನ ಮೇಲೆ ಹೇರಿದರು. ಪೋರ್ಚುಗೀಸರಂತೆ ಡಚ್ಚರಿಗೂ ಮಂಗಳೂರಿನಲ್ಲಿ ದೊರೆಯುತ್ತಿದ್ದ ಮೆಣಸು ಮತ್ತು ಅಕ್ಕಿಯ ಮೇಲೆ ಆಸಕ್ತಿಯಿತ್ತು. ಪೋರ್ಚುಗೀಸರಿಗೆ ಗಂಗೋಳ್ಳಿ ಕೋಟೆಯನ್ನು ಮಾತ್ರ ವಶಕ್ಕೆ ತೆಗೆದುಕೊಳ್ಳಲು ಸಾಧ್ಯವಾಯಿತು. ನವೆಂಬರ್ 1667ರ ಕೊನೆಯ ವೇಳೆಗೆ ಮಹರಾಷ್ಟ್ರದ ರಾಜ ಶಿವಾಜಿ ಗೋವಾದ ಮೇಲೆ ಆಕ್ರಮಣ ಮಾಡಿದ. ಈ

ಸದವಕಾಶವನ್ನು ಬಳಸಿಕೊಂಡ ಸೋಮಶೇಖರ ನಾಯಕ ಗಂಗೋಳ್ಳಿಯನ್ನು ಮತ್ತೆ ವಾಪಸ್ಸು ಪಡೆದುಕೊಂಡನು.[31]

ಸೋಮಶೇಖರ ನಾಯಕ ಕ್ರಿ.ಶ.1671ರಲ್ಲಿ ಪೋರ್ಚುಗೀಸರೊಂದಿಗೆ ಶಾಂತಿ ಸಂದಾನವನ್ನು ಪುನರಾರಂಬಿಸಿದ. 20ನೇ ಏಪ್ರಿಲ್ 1671ರಲ್ಲಿ ಅವರೊಂದಿಗಿನ ಒಪ್ಪಂದ ಒಂದಕ್ಕೆ ಸಹಿ ಹಾಕಿದ. ಈ ಒಪ್ಪಂದದಲ್ಲಿ ಆಡಳಿತ ಪ್ರದೇಶ ಮತ್ತು ವಾಣಿಜ್ಯ ರಿಯಾಯಿತಿಗಳಿದ್ದವು. ಪೋರ್ಚುಗೀಸರಿಗೆ ಮಂಗಳೂರು, ಬಸರೂರು ಮತ್ತು ಹೊನ್ನಾವರಗಳಲ್ಲಿ ಕಾರ್ಖಾನೆಯನ್ನು ಸ್ಥಾಪಿಸಲು ನಿವೇಶನ ನೀಡಲಾಯಿತು.[32] ಒಪ್ಪಂದವು ಪೋರ್ಚುಗೀಸರು ನಾಯಕನಿಗೆ ತಮ್ಮ ನೌಕಾದಳ ಯುದ್ಧೋಪಕರಣಗಳನ್ನು ಶತ್ರುಗಳ ವಿರುದ್ಧವಾಗಿ ಬಳಕೆ ಮಾಡಲು ಸಹಕರಿಸಬೇಕೆಂದು ಮತ್ತು ಅವರು ನಾಯಕನ ಶತ್ರುಗಳಿಗೆ ಯಾವುದೇ ನೆರವು ನೀಡಬಾರದೆಂಬ ಅಂಶಗಳಿದ್ದವು.

ಚೆನ್ನಮ್ಮಾಜಿ ಇಕ್ಕೇರಿಯನ್ನು 1671 ರಿಂದ 1674ರವರೆಗೆ ಆಳಿದಳು. ಕ್ರಿ.ಶ.1674ರಲ್ಲಿ ಪೋರ್ಚುಗೀಸರು ಕೆಂಪು ಸಮುದ್ರದ ಕೊಲ್ಲಿಯಲ್ಲಿ ಚೆನ್ನಮ್ಮನ ಎರಡು ಹಡಗುಗಳನ್ನು ವಶಪಡಿಸಿಕೊಂಡು ಅದರಲ್ಲಿದ್ದ ಸರಕುಗಳನ್ನು ಮಾರಿದರು. ರಾಣಿ ಇದಕ್ಕೆ ಪ್ರತಿಕ್ರಿಯೆಯಾಗಿ ಕೆನರಾದಲ್ಲಿ ಪೋರ್ಚುಗೀಸರ ದಳವನ್ನು ಬಂಧನಕ್ಕೆ ಒಳಪಡಿಸಿದಳು. ಕ್ರಿ.ಶ.1667ರ ಕೊನೆಯ ಭಾಗದಲ್ಲಿ ಚೆನ್ನಾಮ್ಮಾಜಿ ಅರಬ್ಬರಿಗೆ ಅಕ್ಕಿ ವಹಿವಾಟನ್ನು ವಹಿಸಿದಳಲ್ಲದೆ ಬಸರೂರು, ಹೊನ್ನಾವರ ಮತ್ತು ಮಂಗಳೂರುಗಳಲ್ಲಿ ಕಾರ್ಖಾನೆಗಳನ್ನು ಸ್ಥಾಪಿಸಲು ಅವಕಾಶ ನೀಡಿದಳು.

ಈ ಸಂಬಂಧಗಳಲ್ಲಿ ಮತ್ತೆ ಬದಲಾವಣೆಗಳಾದವು. ಡಿಸೆಂಬರ್ 1678ರಲ್ಲಿ ಚೆನ್ನಮ್ಮಾಜಿ ಮತ್ತು ದತ್ತು ಪುತ್ರನಾದ ಬಸವಪ್ಪ ಮತ್ತು ಪೋರ್ಚುಗೀಸರ ನಡುವೆ ದೀರ್ಘಕಾಲದ ಶಾಂತಿ, ಸಂಬಂಧ ಮತ್ತು ವಾಣಿಜ್ಯಕ್ಕೆ ಸಂಬಂಧಿಸಿದ ಒಪ್ಪಂದಗಳಿಗೆ ಸಹಿಯಾದವು. ಈ ಒಪ್ಪಂದ ಪೋರ್ಚುಗೀಸರಿಗೆ ಕೆನರಾದಲ್ಲಿ ಸಾಕಷ್ಟು ಅವಕಾಶಗಳನ್ನು ನೀಡಿತ್ತು. ಚೆನ್ನಮ್ಮಾಜಿಯೊಂದಿಗಿನ ಪೋರ್ಚುಗೀಸರ ಸಂಬಂಧಗಳು ಕ್ರಿ.ಶ.1678–1695ರ ವರೆಗೆ ಸೌಹಾರ್ದಯುತವಾಗಿದ್ದವು.[33] ಇಲ್ಲಿಗೆ ಪೋರ್ಚುಗೀಸರು ಮತ್ತು ಕೆಳದಿಯ ನಾಯಕರ ನಡುವಿನ ಸಂಬಂಧಗಳ ಇತಿಹಾಸವನ್ನು ನಾನು ಕೊನೆಗೊಳಿಸುತ್ತೇನೆ. ಕ್ರಿ.ಶ.1763ರವರೆಗೂ ಅವರ ಸಂಬಂಧ ಮುಂದುವರೆದರೂ ನನ್ನ ಸಂಶೋಧನೆಯ ವ್ಯಾಪ್ತಿಗೆ ಸಂಬಂದಿಸಿದಂತೆ ಕ್ರಿ.ಶ. 1681ರಲ್ಲಿ ಶ್ರೀರಂಗನು ಮರಣ ಹೊಂದಿದ ಮೇಲೆ ವಿಜಯನಗರ ಸಾಮ್ರಾಜ್ಯ ಅವನತಿ ಸಂಪೂರ್ಣವಾಗಿ ಕೊನೆಯಾಗುತ್ತದೆ. ಈ ಕಾರಣದಿಂದಾಗಿ ನಾನು ಇಲ್ಲಿಗೆ ಮಿತಿಗೊಳಿಸಿದ್ದೇನೆ.

**ಪೋರ್ಚುಗೀಸರು ಮತ್ತು ಮೂಡಬಿದರೆಯ ಚೌಲರು:**

ಮಧ್ಯಯುಗದಲ್ಲಿ ಅಂದರೆ 12ನೇ ಶತಮಾನದಿಂದ 18ನೇ ಶತಮಾದವರೆಗೆ ಉಳ್ಳಾಲ (ಪುತ್ತಿಗೆ) ಮೂಡಬಿದರೆಯ ಚೌಲರು ದಕ್ಷಿಣ ಕನ್ನಡ ಜಿಲ್ಲೆಯ ಪ್ರಮುಖ ಆಡಳಿತಗಾರರಾಗಿದ್ದರು. ಚೌಲರ ರಾಣಿಯಾದ ಅಬ್ಬಕ್ಕದೇವಿ ಬಹುಶಃ ದಕ್ಷಿಣ ಕನ್ನಡದ ಅತ್ಯಂತ ಜನಪ್ರಿಯ ರಾಣಿಯಾಗಿದ್ದಳು. ಏಕೆಂದರೆ ಅವಳು ಪೋರ್ಚುಗೀಸರಿಗೆ ಕಪ್ಪವನ್ನು ಕೊಡಲು ಒಪ್ಪದೇ ಅವರನ್ನು ಯುದ್ಧದಲ್ಲಿ ಎದುರಿಸಿದ್ದಳು. ಯುದ್ಧದಲ್ಲಿ ಸೋಲನ್ನು ಒಪಿಕೊಳ್ಳಬೇಕಾಯಿತಾದರೂ ಅವಳು ಈ ಪ್ರದೇಶದ ನಾಯಕಿಯಾಗಿ ಪ್ರಸಿದ್ಧ ವ್ಯಕ್ತಿಯಾಗಿಬಿಟ್ಟಳು. ದಕ್ಷಿಣ ಕನ್ನಡದ ಇತಿಹಾಸದಲ್ಲಿ ತನ್ನ ಹೆಸರನ್ನು ಅಜರಾಮರವಾಗಿಸಿಬಿಟ್ಟಳು. ಪೋರ್ಚುಗೀಸರು ದಕ್ಷಿಣ ಕನ್ನಡದ ಭೌಗೋಳಿಕ–ರಾಜಕೀಯ ಹಾಗೂ ವ್ಯಾಪಾರೀ ಪ್ರಾಮುಖ್ಯತೆಗಳಿಂದಾಗಿ ಇಲ್ಲಿ ತಮ್ಮ ಅಧಿಪತ್ಯವನ್ನು ಸ್ಥಾಪಿಸುವಲ್ಲಿ ಉತ್ಸಾಹಿಗಳಾಗಿದ್ದರು.[34] ಅವರ ಎರಡು ಪ್ರಮುಖ ಉದ್ದೇಶಗಳಿಂದ ಉತ್ಪನ್ನದ ಬೆಳವಣಿಗೆ ಹಾಗೂ ಕ್ರೈಸ್ತ ಧರ್ಮ ಪ್ರಚಾರ ಇವೆರಡಕ್ಕೂ ಇಲ್ಲಿ ವಿಪುಲವಾದ ಅವಕಾಶಗಳಿದ್ದವು.

ಆದುದರಿಂದಲೇ ಇಲ್ಲಿನ ಭತ್ತ, ಸಾಂಬಾರ ಪದಾರ್ಥಗಳು ಫಲವತ್ತಾದ ಭೂಮಿ ಇವುಗಳು ಅವರಿಗೆ ಅತಿ ಅಮೂಲ್ಯವಾಗಿದ್ದವು. ಅವುಗಳ ಮೇಲೆ ಅವರ ಲಕ್ಷ್ಯವಿತ್ತು. ಅಪೊನೊಡಿ ಅಲ್ಬುಕರ್ಕ್‌ನ ಕಾಲದಿಂದಲೂ ಪೋರ್ಚುಗೀಸರಿಗೆ ಮಂಗಳೂರಿನ ಸಂಪರ್ಕವಿತ್ತು. ಹಲವಾರು ಸನ್ನಿವೇಶಗಳಲ್ಲಿ ಮಂಗಳೂರು ಅವರ ದಾಳಿ, ಮುತ್ತಿಗೆ ಲೂಟಿಗಳಿಗೆ ಒಳಗಾಗಿತ್ತು. ಕ್ರಿ.ಶ.1530ರಲ್ಲಿ ಇಲ್ಲಿಯ ಶೆಟ್ಟಿಯು ಕಲ್ಲಿಕೋಟೆಯ ಜಾಮೊರಿನ್‌ನೊಂದಿಗೆ ಗುಪ್ತವಾಗಿ ವ್ಯಾಪಾರ ವ್ಯವಹಾರ ನಡೆಸುವುದಕ್ಕಾಗಿ ಅಂದಿನ ಅಡ್ಮಿರಲ್ ಡಿಯಾಗೋ ಡಾ ಸಿಲ್ವೇರಾನ ಆದೇಶದಂತೆ ಅವರು ಮಂಗಳೂರಿನ ಮೇಲೆ ದಾಳಿ ಮಾಡಿದರು. ದಾಳಿಯಲ್ಲಿ ಶೆಟ್ಟಿಯನ್ನು ಕೊಲ್ಲಲಾಯಿತು. ಪೋರ್ಚುಗೀಸರು ಬೃಹತ್ ಆಸ್ತಿಯನ್ನು ಲೂಟಿ ಮಾಡಿದರು. ಪುನಃ ಕ್ರಿ.ಶ.1532ರಲ್ಲಿ ಅದೇ ಅಡ್ಮಿರಲ್‌ನ ಆದೇಶದಿಂದ ಪುನಃ ದಾಳಿ ನಡೆಯಿತು. ಗೋವಾದಿಂದ ಕನ್ಯಾಕುಮಾರಿವರೆಗೆ ಅತ್ಯಂತ ಶ್ರೀಮಂತ ವ್ಯಾಪಾರಿ ಎನಿಸಿಕೊಂಡಿದ್ದ, ಪೋರ್ಚುಗೀಸರ ಒಬ್ಬ ಗೆಳೆಯ ಶೆಟ್ಟಿ ಎಂಬುವವನು ಇಲ್ಲಿ ನೆಲೆಸಿದ. ಪೋರ್ಚುಗೀಸರು ಮಂಗಳೂರು, ಹೊನ್ನಾವರ, ಬಸರೂರು ಈ ಪ್ರದೇಶಗಳಲ್ಲಿ ಕ್ರಿ.ಶ.1568–1569ರಲ್ಲಿ ಕೋಟೆಗಳನ್ನು ಕಟ್ಟಿದರು. ಅವುಗಳನ್ನು ಕ್ರಿ.ಶ.1651ರಲ್ಲಿ ಶಿವಪ್ಪನಾಯಕ ವಶಪಡಿಸಿಕೊಳ್ಳುವವರೆಗೆ ಬಳಸುತ್ತಿದ್ದರು. ಕ್ರಿ.ಶ.1568ರಲ್ಲಿ ಪೋರ್ಚುಗೀಸರು ಮಂಗಳೂರಿ ನಲ್ಲಿಯೂ ಒಂದು ಕೋಟೆಯನ್ನು ಕಟ್ಟಿದರು.[35]

ಅಬ್ಬಕ್ಕರಾಣಿ ಕಪ್ಪ ಕೊಡಲು ನಿರಾಕರಿಸುತ್ತಿದ್ದರಿಂದ ಅವಳ ಮತ್ತು ಪೋರ್ಚುಗೀಸರ ನಡುವೆ ಶೀತಲ ಸಮರ ನಡೆಯುತ್ತಲೇ ಇತ್ತು. ಕ್ರಿ.ಶ.1556ರಲ್ಲಿ ಪೋರ್ಚುಗೀಸ್ ಸೈನ್ಯಾಧಿಕಾರಿಯಾಗಿದ್ದ ಅಲ್ಸಾರೂ ಡೇ ಸಿಲ್ವೇರಾ ಎಂಬುವವನು ಗೋವಾದಿಂದ ಅಬ್ಬಕ್ಕದೇವಿಯಿದ್ದ ಉಳ್ಳಾಲಕ್ಕೆ ಅಬ್ಬಕ್ಕ ರಾಣಿಯಿಂದ ಕಪ್ಪವನ್ನು ಸಂಗ್ರಹಿಸಿ ತರಲು ಒಂದು ಸೈನ್ಯದ ತುಕಡಿಯನ್ನು ಕಳುಹಿಸಿದನು. ಅವನು ಮಂಗಳೂರನ್ನು ಲೂಟಿ ಮಾಡಿ ಅನೇಕ ಜನರ ಪ್ರಾಣಹಾನಿ ಮಾಡಿದನೆಂದು ಹೇಳಲಾಗುತ್ತದೆ. ಕ್ರಿ.ಶ.1558ರಲ್ಲಿ ಪೋರ್ಚುಗೀಸರು ಮಲಬಾರ್ ತೀರ ಪ್ರದೇಶದ ಅಧಿಕಾರವನ್ನು ಲೂಯಿಸ್ ಡೆ ಮಾಲೂ ಎಂಬುವವನಿಗೆ ವಹಿಸಿಕೊಟ್ಟರು. ಅದೇ ವರ್ಷ ಅವನು ಮಂಗಳೂರಿನ ಬಂದರಿನಲ್ಲಿ ಕಣ್ಣನೂರ್ ದೊರೆಯ ಹಡಗನ್ನು ಕಂಡು ತಕ್ಷಣವೇ ಮುತ್ತಿಗೆ ಹಾಕಿದನು. ಆದರೆ ಮಂಗಳೂರಿನವರ ಸಹಕಾರದಿಂದ ರಾಣಿ ಅಬ್ಬಕ್ಕದೇವಿ ಈ ಮುತ್ತಿಗೆಯನ್ನು ಹತ್ತಿಕ್ಕಿದಳು.

ಲೂಯಿಸ್ ಡೆ ಮಾಲೂ ಜನರ ಈ ವರ್ತನೆಗೆ ಕೋಪಗೊಂಡು ನಗರವನ್ನು ಬೂದಿ ಮಾಡಿ ಸಿಕ್ಕವರನ್ನು ಕೊಂದು ಜಯಬೇರಿಯ ಮೆರವಣಿಗೆಯೊಂದಿಗೆ ಹಿಂದಿರುಗಿದನು. ಹಲವು ವರ್ಷಗಳ ನಂತರ ಅಬ್ಬಕ್ಕ ರಾಣಿ ಪೋರ್ಚುಗೀಸರಿಗೆ ಕಪ್ಪ ಕೊಡುವುದನ್ನು ಪುನಃ ನಿಲ್ಲಿಸಿಬಿಟ್ಟಳೂ. ಕ್ರಿ.ಶ 1567ರ ಸೆಪ್ಟೆಂಬರ್ ತಿಂಗಳಿನಲ್ಲಿ ಪೋರ್ಚುಗೀಸರ ವೈಸರಾಯ್ ರಾಣಿಯ ಸಹಚರರು ಮುಂದಿನ ಮುತ್ತಿಗೆಯಲ್ಲಿ ಸಹಾಯ ಮಾಡಲು ಸಾಧ್ಯವಾಗದಂತೆ ಹೊಡೆದು ಹಾಕಲು ಜಾಜ್ ಪೆಕ್ಸೋಟೊನನ್ನು ಒಂದು ಸೈನ್ಯದ ತುಕಡಿಯೊಂದಿಗೆ ಕಳುಹಿಸಿ ಕೊಟ್ಟರು. ಜೊತೆಗೆ ತಾನೇ ನಗರವನ್ನು ಮುತ್ತಿಗೆ ಹಾಕಿ ಅರಮನೆಯನ್ನು ಪ್ರವೇಶಿಸಿಬಿಟ್ಟನು. ರಾಣಿಯ ಸಹಚರರು ತಕ್ಷಣವೇ ಪೋರ್ಚುಗೀಸರ ಸೇನೆಯನ್ನು ಎದುರಿಸಿ ಪೆಕ್ಸೋಟೋ ಸೇರಿಸದಂತೆ ಎಪ್ಪತ್ತು ಜನರನ್ನು ಕೊಂದು ಹಾಕಿದರು. ಉಳಿದವರು ಉಳಿಗಾಲವಿಲ್ಲವೆಂದರಿತು ತಕ್ಷಣವೇ ತಮ್ಮ ಹಡಗನ್ನು ಸೇರಿಕೊಂಡರು. ಈ ಅವಮಾನಕರವಾದ ಸೋಲಿನ ಹಿನ್ನೆಲೆಯಲ್ಲಿ ಪೋರ್ಚುಗೀಸ್ ವೈಸರಾಯ್‌ಯು ಅಬ್ಬಕ್ಕಳ ಶರಣಾಗತಿಗೆ ಹೆಚ್ಚಿನ ಸೈನಿಕರನ್ನು ಕಳುಹಿಸಲು ನಿರ್ಧರಿಸಿದನು. 4ನೇ ಜನವರಿ 1568ರಲ್ಲಿ ಪೋರ್ಚುಗೀಸರು ಅಬ್ಬಕ್ಕಳ ಶರಣಾಗತಿಗಾಗಿ ತಮ್ಮ ಸೈನ್ಯವನ್ನು ಕಳುಹಿಸಿ ಯುದ್ಧ ಮಾಡಿದರು.[36]

ಉಳ್ಳಾಲದ ಸೈನ್ಯ ದಿಟ್ಟತನದಿಂದ ತಿರುಗೇಟು ನೀಡಿತು. ಆದರೆ ಪೋರ್ಚುಗೀಸರ ಸೈನ್ಯ ಅಬ್ಬಕ್ಕ ಸೈನ್ಯಕ್ಕಿಂತ ಶಕ್ತಿಯುತವಾಗಿತ್ತು, ಪೋರ್ಚುಗೀಸರು ಯಶಸ್ವಿಯಾದರು. ಇದಾದನಂತರ ವೈಸರಾಯ್‌ಯು ಮಂಗಳೂರಿನ ದಕ್ಷಿಣ ದ್ವಾರದ ನದಿ ದಂಡೆಯಲ್ಲಿ ಕೋಟೆಯನ್ನು ಕಟ್ಟಲು ಭೂ ಪರೀಕ್ಷೆ ಮಾಡಿದನು. ಇದು ತೆರಿಗೆ ನೀಡದಿರುವುದು ಮಾತ್ರವಲ್ಲದೆ ಪೋರ್ಚುಗೀಸರ ಶತ್ರುಗಳಿಗೆ

ಮಲಬಾರಿನಲ್ಲಿ ಸಹಾಯ ಮಾಡತ್ತಿದ್ದ ಅಬ್ಬಕ್ಕಳನ್ನು ಹತ್ತಿಕ್ಕಲು ಒಳ್ಳೆಯ ದಾರಿಯಾಗಿತ್ತು. ಉಳ್ಳಾಲದ ಸ್ಥಳ ಕೋಟೆ ಕಟ್ಟಲು ಅವನಿಗೆ ಅಷ್ಟು ಪ್ರಶಸ್ತವಾಗಿ ಕಾಣಲಿಲ್ಲ. ಹಾಗಾಗಿ ಅವನು ಮಂಗಳೂರಿನ ಉತ್ತರಕ್ಕೆ ಬಂದನು. ಕ್ರಿ.ಶ.1568ರಲ್ಲಿ ಬಂಗರ ದೊರೆಯ ಸಹಾಯದಿಂದ ಇಲ್ಲಿಯೇ ಒಂದು ಕೋಟೆಯನ್ನು ಕಟ್ಟಿದನು.[37] ಈ ಕೋಟೆಯ ನಿರ್ಮಾಣದ ಜೊತೆ ಜೊತೆಯಲ್ಲಿ ಅಬ್ಬಕ್ಕ ಮತ್ತು ಬಂಗರ ದೊರೆ ದೂರವಾದರು. ಯುದ್ಧದ ಸನ್ನಿವೇಶ ಪೋರ್ಚುಗೀಸರ ವ್ಯಾಪಾರಕ್ಕೆ ಅಡ್ಡಿಯಾಯಿತು. ಇದನ್ನು ಅರಿತ ಪೋರ್ಚುಗೀಸರ ವೈಸರಾಯ್ ಲೂಯಿಸ್ ಡೆ ಅಬ್ಬದ  ಕ್ರಿ.ಶ. 1569ರಲ್ಲಿ ಮಂಗಳೂರಿಗೆ ಬಂದು ಈ ಎರಡು ಪ್ರದೇಶದ ಮುಖ್ಯಸ್ಥರು ರಾಜಿಯಾಗುವಂತೆ ಪ್ರೋತ್ಸಾಹಿಸಿದರು. ಅವನ ಈ ಪ್ರಯತ್ನ ಫಲ ಕೊಟ್ಟಿತಾದರೂ ಅವರ ನಡುವೆ ಜಗಳಗಳು ಮುಂದುವರಿಯುತ್ತಲೇ ಇತ್ತು. ಪೋರ್ಚುಗೀಸರ ವಿರುದ್ಧದ ಆಕ್ರೋಶ ಅಬ್ಬಕ್ಕಳಲ್ಲಿ ಮುಂದುವರಿಯುತ್ತಲೇ ಇತ್ತು. ಕಪ್ಪ ಕೊಡಲು ನಿರಾಕರಿಸುವ ಒಂದು ಅವಕಾಶಕ್ಕಾಗಿ ಅವಳು ಕಾಯುತ್ತಲೆ ಇದ್ದಳು. ಕ್ರಿ.ಶ. 1570–1574ರಲ್ಲಿ ಬಿಜಾಪುರದ ಆದಿಲ್ ಷಾ ಅಹಮದ್ ನಗರದ ಸುಲ್ತಾನ ಇವರೆಲ್ಲರೂ ಒಟ್ಟಾಗಿ ಪೋರ್ಚುಗೀಸರನ್ನು ಎದುರಿಸಲು ಸನ್ನದ್ಧರಾದರು.[38] ಕಲ್ಲಿಕೋಟೆಯ ಜಾಮೋರಿನ್ ಪೋರ್ಚುಗೀಸರೊಂದಿಗೆ ಹೋರಾಡಬೇಕೆಂದು ಅಬ್ಬಕ್ಕ ಹುರಿದುಂಬಿಸಿದಳು.

**ಪೋರ್ಚುಗೀಸರು ಮತ್ತು ಬಂಗವಾಡಿಯ ಬಂಗರು:**

ಕ್ರಿ.ಶ. 1568ರ ವೇಳೆಗಾಗಲೇ ಪೋರ್ಚುಗೀಸರು ಬಂಗರ ದೊರೆಯೊಂದಿಗೆ ಗೆಳೆತನ ಬೆಳಸಿಕೊಂಡಿದ್ದರು. ಕ್ರಿ.ಶ.1568ರಲ್ಲಿ ಉಳ್ಳಾಲದ ರಾಣಿಯ ಮೇಲಿನ ಜಯದ ಮಗ್ಗುಲಲ್ಲೇ ಬಂಗದೊರೆಯ ಸಹಾಯದಿಂದ ಮಂಗಳೂರಿನಲ್ಲಿ ಕೋಟೆಯನ್ನು ಕಟ್ಟಿಸಿಯೂ ಆಗಿತ್ತು. ಇದೇ ಬಂಗರ ದೊರೆ ಮತ್ತು ಅಬ್ಬಕ್ಕಳ ನಡುವಿನ ದ್ವೇಷಕ್ಕೂ ಕಾರಣವಾಗಿತ್ತು ಮತ್ತು ಜಗಳಗಳು ನಡೆದವು. ಪೋರ್ಚುಗೀಸರು ಬಂಗರ ದೊರೆಯ ಪರವಾಗಿಯೇ ಇದ್ದರು. ಕ್ರಿ.ಶ.1594ರಲ್ಲಿ ರಾಣಿಯೇ ಉಳ್ಳಾಲದಲ್ಲಿ ಪೋರ್ಚುಗೀಸರು ಕಟ್ಟಿದ ಕೋಟೆಯನ್ನು ಕೆಡವಿದಳು.[39]

ಕ್ರಿ.ಶ.1612ರಲ್ಲಿ ಬಂಗರ ದೊರೆ ಕೆಳದಿಯ ದೊರೆಯಾದ ವೆಂಕಟಪ್ಪ ನಾಯಕನ ವಿರುದ್ಧ ಹೋರಾಡಲು ಸಹಾಯ ಮಾಡಬೇಕೆಂದು ಕೇಳಿಕೊಂಡನು. ಆದರೆ ಪೋರ್ಚುಗೀಸರು ಇದಕ್ಕೆ ಒಪ್ಪಲಿಲ್ಲ. ಅದಾಗ್ಯೂ ಅವನ ವಿರುದ್ಧ ಗುಟ್ಟಾಗಿ ಗುಂಪು ಕಟ್ಟಿದರು. ಇದರಲ್ಲಿ ಬಂಗರ ದೊರೆ, ಕಲ್ಲಿಕೋಟೆಯ ಜಾಮೊರಿನ್ ಮತ್ತು ಕಾರ್ನಾಡಿನ ರಾಣಿ ಸೇರಿಕೊಂಡಿದ್ದರು. ಅಜಿಲ, ಕಾಂದಿಗೆರೆ ಮತ್ತು ಉಳ್ಳಾಲದ ದೊರೆಗಳು ಮುಂದೆ ಇದರಲ್ಲಿ ಸೇರಿದರು. ಪೋರ್ಚುಗೀಸರು ಇವರಿಗೆ

ಸಹಾಯ ಮಾಡಿದರಾದರೂ ವೆಂಕಟಪ್ಪನಾಯಕನ ವಿರುದ್ಧ ಹೋರಾಡಲಿಲ್ಲ. ಕ್ರಿ.ಶ. 1616ರಲ್ಲಿ ಬಂಗರ ದೊರೆಗೂ ವೆಂಕಟಪ್ಪ ನಾಯಕನಿಗೂ ಯುದ್ಧ ನಡೆಯಿತು. ಬಂಗರ ದೊರೆಗೆ ಸೋಲಾಯಿತು. [40]

**ಪೋರ್ಚುಗೀಸರು ಮತ್ತು ವಿಜಯನಗರ ಸಾಮ್ರಾಜ್ಯದ ಪ್ರಮುಖ ರಾಜರೊಂದಿಗಿನ ಸಂಬಂಧ:**

ಪೋರ್ಚುಗೀಸರು ಕ್ರಿ.ಶ.1498ರಲ್ಲಿ ಕೇರಳದ ಕ್ಯಾಲಿಕಟ್‌ಗೆ ಬಂದು ತಲುಪಿದರು. ಕ್ರಿ.ಶ 1500ರ ಹೊತ್ತಿಗೆ ಕೊಲತ್ತಿರಿ, ಸಮುದ್ರಿ ರಾಜ ಮತ್ತು ತ್ರಿವೇದಿ ರಾಜರವರ ಸಣ್ಣ ಸಂಸ್ಥಾನಗಳನ್ನು ಬಿಟ್ಟು ಹೆಚ್ಚುಕಡಿಮೆ ಉಳಿದೆಲ್ಲ ದಕ್ಷಿಣ ಭಾರತ ವಿಜಯನಗರ ಅರಸರ ಕೈಯಲ್ಲಿತ್ತು. ಪೋರ್ಚುಗೀಸರು ಇದನ್ನು 'ನರಸಿಂಗರಾಜ್ಯ' ಎಂದು ಕರೆಯುತ್ತಿದ್ದರು. ಕಾರಣ ಸಾಳ್ವ ವಂಶದ ಒಂದನೇ ನರಸಿಂಹ ಅಥವಾ ವೀರ ನರಸಿಂಹನು ಆಳ್ವಿಕೆ ಮಾಡುತ್ತಿದ್ದನು. ಇವನ ಆಳ್ವಿಕೆಯ ಕಾಲದಲ್ಲಿಯೇ ಪೋರ್ಚುಗೀಸರು ತಮ್ಮ ವ್ಯಾಪಾರ ವಾಣಿಜ್ಯ ಕೇಂದ್ರಗಳನ್ನು ಸ್ಥಾಪಿಸಲು ಪ್ರಾರಂಭಿಸಿದರು. ಇವನ ನಂತರ ಕೃಷ್ಣದೇವರಾಯನು ಅಧಿಕಾರಕ್ಕೆ ಬಂದನು. ಇವನು ಸಹ ಪೋರ್ಚುಗೀಸರಿಗೆ ಸಹಾಯ ಮಾಡಿ ಪೋರ್ಚುಗೀಸರ ವ್ಯಾಪಾರಕ್ಕೆ ಸಹಕರಿಸಿದನು. ಪೋರ್ಚುಗೀಸರು ಮತ್ತು ವಿಜಯನಗರ ಅರಸರ ನಡುವಿನ ಸಂಬಂಧವನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

ಕ್ರಿ.ಶ.1925ರಲ್ಲಿ ಎಸ್.ಜಿ.ಫಾದರ್ ಹೆನ್ರಿ ಹೆರಾಸ್ ರವರು "Early relation between Vlijayanagara and Portugal" ಪ್ರಬಂಧವನ್ನು ಸಾದರ ಪಡಿಸಿದ್ದು, ಇದು ಕೇರಳ ವಿಶ್ವವಿದ್ಯಾಲಯದ Journal of Indian History ಸಂಪುಟದಲ್ಲಿ ಪ್ರಕಟವಾಯಿತು.[41] ಇದಕ್ಕೆ ಮುಂಚೆ ರಾಬರ್ಟ್ ಸಿವೆಲ್ ರವರು ಮರೆತು ಹೋದ ಮಹಾಸಾಮ್ರಾಜ್ಯ ವಿಜಯನಗರ ಕೃತಿಯಲ್ಲಿ ನರಸಿಂಹನ ಕಾಲದಿಂದ ಕ್ರಿ.ಶ. 1565ರ ವರೆಗೆ ವಿಜಯನಗರ ಪೋರ್ಚುಗೀಸರನ್ನು ಕುರಿತು ಐತಿಹಾಸಿಕ ಸಂಗತಿಗಳು ಸಮ್ಮಿಳಿತಗೊಂಡಿವೆ.

**ಇಮ್ಮಡಿ ನರಸಿಂಗರಾಯ ಮತ್ತು ಪೋರ್ಚುಗೀಸರು:**

ಕ್ರಿ.ಶ.1503–1509ರವರೆಗೆ ವಿಜಯನಗರದಲ್ಲಿ ಇಮ್ಮಡಿ ನರಸಿಂಹರಾಯ ಅಥವಾ ವೀರ ನರಸಿಂಹ ಆಳ್ವಿಕೆ ಮಾಡಿದನು. ಅಲ್ಮೆಡಾನು ಒಬ್ಬ ಪ್ರಭಾವಿ ಸ್ಥಳೀಯನಿಂದ ವಿಜಯನಗರದ ಸರ್ವೋತ್ತಮ ರಾಜ್ಯದ ಸ್ಥಿತಿ ಹಾಗೂ ನರಸಿಂಹನ ಬಗೆಗೆ ಹಾಗೂ ದೇಶದ ಸ್ಥಿತಿಗತಿಗಳನ್ನು

ಕಣ್ಣನೂರಿನ ರಾಜಪ್ರತಿನಿದಿಯ ಮಗ ತಾರೆಂಕೋ ಮತ್ತು ಇಟಾಲಿಯನ್ ಪ್ರವಾಸಿ ವಾರ್ತೆಮಾನಿಂದ ತಿಳಿದುಕೊಂಡ. ಇದರ ಪರಣಾಮದಿಂದ ನರಸಿಂಗ ರಾಜನನ್ನು ಭಟ್ಕಳದಲ್ಲಿ ಕೋಟೆ ಕಟ್ಟಿಕೊಳ್ಳಲು ಅನುಮತಿ ಕೋರಿದ, ಆದರೆ ವೀರ ನರಸಿಂಹ ಯಾವುದೇ ಉತ್ತರ ನೀಡಲಿಲ್ಲ.

ಮುಸಲ್ಮಾನರಿಂದ ಕ್ಯಾಲಿಕಟ್‌ನಲ್ಲಿ ನಲವತ್ತೇಳು ಪೋರ್ಚುಗೀಸ್ ವರ್ತಕರು ಕೊಲೆಯಾದುದನ್ನು ವಾರ್ತೆಮಾ ಕಂಡನು. ಕ್ರಿ.ಶ.1506ರಲ್ಲಿ ಪೋರ್ಚುಗೀಸ್ ಹಡಗು ಪಡೆ ಕ್ಯಾಲಿಕಟ್ ರಾಜನಿಗೆ ಸೇರಿದ ದೋಣಿಗಳ ತಂಡವನ್ನು ನಾಶಪಡಿಸಿತು.[42] ಈ ಅತ್ಯಾಚಾರದಿಂದ ಕಣ್ಣನೂರಿನ ಕಾರ್ಖಾನೆಗೆ ರಾಜನ ಪಡೆ ಮುತ್ತಿಗೆ ಹಾಕಿತು. ಕ್ರಿ.ಶ.1507ರಲ್ಲಿ ಅಲ್ಮೆಡಾ ಮತ್ತು ಟ್ರಸ್ಟ್‌ನ ದ ಕುನ್ಹಾ ಮುತ್ತಿಗೆಯನ್ನು ತೆಗೆಸಿ ಕ್ಯಾಲಿಕಟ್ ಮೇಲೆ ದಾಳಿ ಮಾಡಿದನು.

ಪಶ್ಚಿಮ ಕರಾವಳಿಯ ಭಟ್ಕಳ ಕುರಿತು ಬಾರ್ಬೋಸನು ಲೋಹ, ಮಸಾಲೆ, ಔಷಧಿ, ಅವರೇಕಾಯಿ ಅಲ್ಲಿನ ನಿರ್ಯಾತಗಳು ಕುದುರೆ ಹಾಗೂ ಮುತ್ತುಗಳು ಆಯಾತಗಳು. ಆದರೆ ಕುದುರೆ, ಮುತ್ತುಗಳು ಪೋರ್ಚುಗೀಸರಿಂದಾಗಿ ಗೋವಾಕ್ಕೆ ಹೋಗುತ್ತವೆ. ಭಟ್ಕಳನ ಪ್ರಾಂತ್ಯಾಧಿಪತಿ ದೊರೆ ಕೃಷ್ಣದೇವರಾಯನ ಸೋದರನ ಮಗನಾಗಿದ್ದಾನೆ. ಅವನು ವೈಭವದ ಜೀವನ ಸಾಗಿಸುತ್ತಿದ್ದು ತನ್ನನ್ನು ದೊರೆ ಎಂದು ಕರೆದು ಕೊಳ್ಳುತ್ತಾನೆ. ಆದರೆ ತನ್ನ ರಾಜನಿಗೆ ವಿದಾಯನಾಗಿದ್ದಾನೆ. ಈ ರೀತಿ ಹೇಳಿ ಕರಾವಳಿ ಬಿಟ್ಟು ಘಟ್ಟಗಳ ಮೇಲೆ ಸಾಗಿ ನರಸಿಂಗ ರಾಜನಿದ್ದ ಬಿಜನಗರದ ವೈಭವವನ್ನು ವರ್ಣಿಸುತ್ತಾ ಪೆಗು ಮತ್ತು ಸಿಲೋನ್‌ಗಳಿಂದ ತರಲಾಗುವ ರತ್ನಗಳು, ವಜ್ರಗಳು ಹಾಗೂ ನರಸಿಂಗನ ರಾಜ್ಯದಲ್ಲೊಂದು ಮುತ್ತಿನ ಗಣಿ ಇರುವುದನ್ನು ಕಥಿಸಿದ್ದಾನೆ.[43]

**ವಿಜಯನಗರಕ್ಕೆ ಪೋರ್ಚುಗೀಸರ ನಿಯೋಗಗಳು:**

ಕ್ರಿ.ಶ.1505ರಿಂದ 1512 ರವರೆಗೆ ನಾಲ್ಕು ಬಾರಿ ರಾಯಭಾರಿಗಳಾಗಿ ಪೋರ್ಚುಗೀಸ್ ನಿಯೋಗಿಗಳು ವಿಜಯನಗರಕ್ಕೆ ಭೇಟಿನೀಡಿದ್ದು ಕಂಡು ಬರುತ್ತದೆ. ಈ ಮಧ್ಯೆ ಪೋರ್ಚುಗೀಸರು ವಿಜಯನಗರದ ಸ್ನೇಹ ಹಾಗೂ ಮೌನದ ದುರುಪಯೋಗ ಪಡೆದು ಕುಂದಾಪುರ ಆದಿಯಾಗಿ ವಿಜಯನಗರದ ಅಧೀನದಲ್ಲಿದ್ದ ಕರಾವಳಿ ಪ್ರದೇಶಗಳಲ್ಲಿ ಸರ್ವಸ್ವಾಮಿಗಳೆಂಬಂತೆ ವರ್ತಿಸಿ ವಾರ್ಷಿಕ ಕಪ್ಪ ಸಂಗ್ರಹಿಸತೊಡಗಿದರು. ಮಂಗಳೂರು ಹಾಗೂ ಭಟ್ಕಳಗಳನ್ನು ಸುಟ್ಟು ನಾಶ ಮಾಡಿದರು. 'ಪೋರ್ಚುಗೀಸ್' ಎಂದರೆ 'ಜಗಳಗಂಟ' ಎಂಬ ಅರ್ಥ ಕರಾವಳಿಯಲ್ಲಿ

ರೂಢಿಯಾಗಿತ್ತು.[44] ವೀರನರಸಿಂಹ ಆಡಳಿತ ಅವಧಿಯಲ್ಲಿ ಮೊದಲ ನಿಯೋಗ. ಕ್ರಿ.ಶ. 1510ರಲ್ಲಿ ಪ್ರೇಲೂಯಿಜ್‌ನ ನೇತೃತ್ವದ ಎರಡನೇ ನಿಯೋಗ ವಿಜನಗರಕ್ಕೆ ಭೇಟಿ ನೀಡಿತ್ತು.

ಕ್ರಿ.ಶ.1511ರಲ್ಲಿ ಅಲ್ಬುಕರ್ಕ್‌ನು ಗ್ಯಾಸ್‌ಪರ್ ಜಾನುಕೋ ಎಂಬುವನನ್ನು ಮೂರನೇ ಬಾರಿ ವಿಜಯನಗರಕ್ಕೆ ನಿಯೋಗಿಯನ್ನಾಗಿ ಕಳುಹಿಸಿದನು. ಇಸ್ಮಾಯಿಲ್ ಆದಿಲ್‌ಷಾನಿಂದ ಇರುವ ಅಪಾಯವನ್ನರಿತ ಚಕ್ರವರ್ತಿಯು ಪೋರ್ಚುಗೀಸ್ ನಿಯೋಗಿಯನ್ನು ಬರಮಾಡಿಕೊಂಡು ಸ್ನೇಹದ ಒಪ್ಪಂದಕ್ಕೆ ಸಹಿ ಹಾಕಿದನು. ವಿಜಯನಗರಕ್ಕೆ ಯಾವಾಗ ಆಹ್ವಾನಿಸಿದರೂ ಪೋರ್ಚುಗೀಸರು ಸಹಕಾರ ನೀಡಬೇಕಾಗಿಯೂ, ವಿದೇಶಗಳಿಂದ ಗೋವೆಗೆ ಬಂದಿಳಿದ ಯುದ್ಧಾಶ್ವಗಳನ್ನು ವಿಜಯನಗರಕ್ಕೆ ಮಾರಬೇಕೆಂದು ಒಪ್ಪಂದವೇರ್ಪಟ್ಟಿತು. ಸಾಮ್ರಾಜ್ಯದೊಳಗಿನ ಎಲ್ಲಾ ವ್ಯಾಪಾರಿಗಳೂ ವಸ್ತುಗಳನ್ನು ಕುಂದಾಪುರ ಮತ್ತು ಹೊನ್ನಾವರ ಬಂದರುಗಳ ಮುಖಾಂತರ ಪೋರ್ಚುಗೀಸರಿಗೆ ಮಾರತಕ್ಕದೆಂದು ಕರಾರಾಯಿತು.

ಕ್ರಿ.ಶ.1512ರಲ್ಲಿ ತಿರುಗಿ ನಾಲ್ಕನೆಯ ಬಾರಿ ಗ್ಯಾಸ್‌ಪರ್ ಚಾನೋಕಾನನ್ನು ನಿಯೋಗಿಯಾಗಿ ವಿಜಯನರಕ್ಕೆ ಕಳುಹಿಸಿ ಭಟ್ಕಳದಲ್ಲಿ ಕೋಟೆ ಮತ್ತು ಕಾರ್ಖಾನೆ ನಿರ್ಮಾಣಕ್ಕೆ ಅಲ್ಬುಕರ್ಕ್‌ನು ಅನುಮತಿ ಕೇಳಿದನು.[45] ಈ ಕಾಲದಲ್ಲಿ ಒರಿಸ್ಸಾದ ಗಜಪತಿ ಮೇಲಣ ದಂಡಯತ್ರೆ ಜರುಗಿದ್ದರಿಂದ ಚಕ್ರವರ್ತಿಯಿಂದ ಯಾವ ಪ್ರತಿಕ್ರಿಯೆ ಬಂತೆಂಬುದು ಅಸ್ಪಷ್ಟ ಸಂಗತಿಯಾಗಿದೆ. ಡಾ. ಬಿ.ಎಸ್.ಶಾಸ್ತ್ರಿರವರ ಪ್ರಕಾರ ಅನುಮತಿ ಪಡೆಯಲು ಅಲ್ಬುಕರ್ಕ್‌ನಿಗೆ ಸಾಧ್ಯವಾಗಲಿಲ್ಲವೆಂದು ಅಭಿಪ್ರಾಯ ಪಟ್ಟಿದ್ದಾರೆ.

**ಶ್ರೀ ಕೃಷ್ಣದೇವರಾಯ ಮತ್ತು ಪೋರ್ಚುಗೀಸರು**

ವಿಜಯನಗರ ಚಕ್ರವರ್ತಿಯ ಸಹಾಯ ಬೆಳೆಸಲು ಅಲ್ಬುಕರ್ಕ್‌ನು ಕ್ರಿ.ಶ.1510ರಲ್ಲಿ ಫ್ರೇಲೂಯಿಜ್‌ನನ್ನು ಪ್ರಾನ್ಸಿಸ್ಕಾನ್ ಪ್ರೆಯರ್ ಮುಖಾಂತರ ಉಚಿತ ಉಡುಗೊರೆಗಳೊಂದಿಗೆ ನಿಯೋಗವನ್ನು ಕಳುಹಿಸಿದನು. ಬಿಜಾಪುರದ ಸುಲ್ತಾನ ಆದಿಲ್‌ಷಾನನ್ನು ಸೋಲಿಸಿ ಪೋರ್ಚುಗೀಸರು ಗೋವೆಯನ್ನು ವಶಪಡಿಸಿಕೊಂಡಿರುವುದನ್ನು ತಿಳಿದು ಕೃಷ್ಣದೇವರಾಯನು ಪೋರ್ಚುಗೀಸರೊಂದಿಗೆ ಸ್ನೇಹ ಹಸ್ತ ಚಾಚಲು ಸಿದ್ಧನಾಗಿದ್ದನು. ಅರಬ್ಬರು ಮತ್ತು ಪೋರ್ಚುಗೀಸರಿಗೆ ದ್ವೇಷವಿರುವುದನ್ನು ಮನಗೊಂಡು ರಣರಂಗಗಳಿಂದ ಬೇಸತ್ತು ಒಪ್ಪಂದವನ್ನು ಮಾಡಿಕೊಳ್ಳಲು ಕಾತುರನಾದನು.[46] ಪರ್ಷಿಯಾದಿಂದ ಯುದ್ಧಾಶ್ವಗಳನ್ನು ಸರಬರಾಜು ಮಾಡುತ್ತಿದ್ದ ಅರಬ್ಬರು ಬಿಜಾಪುರಕ್ಕೆ ಮಾರುತ್ತಿದ್ದರು. ಇದನ್ನು ತಪ್ಪಿಸಿ ವಿಜಯನಗರಕ್ಕೆ

ಲಭಿಸುವಂತೆ ಪೋರ್ಚುಗೀಸರಿಗೆ ಸ್ನೇಹಹಸ್ತ ನೀಡಲು ಅಗತ್ಯವಾಗಿತ್ತು. ಈ ಕಾರಣಗಳಿಂದ ಕೃಷ್ಣದೇವರಾಯನು ಬಾರ್ಕೂರಿನ ರಾಜ್ಯಪಾಲ ರತ್ನಂಶೇಟ್ಟಿಯ ಮುಖಾಂತರ ನಿಯೋಗವನ್ನು ಕ್ರಿ.ಶ.1514ರಲ್ಲಿ ಕಳುಹಿಸಿದನು. ಇದೇ ಕಾಲದಲ್ಲಿ ಬಿಜಾಪುರ ಅಧಿಪತಿಯೂ ಇದೇ ಉದ್ದೇಶಕ್ಕೆ ಗೋವಾಕ್ಕೆ ದೂತನನ್ನು ಕಳುಹಿಸಿದನು. ಅಂತ್ಯದಲ್ಲಿ ಅಲ್ಬುಕರ್ಕ್‌ನು ಸೈನಿಕರಿಗೆ ಭತ್ಯವನ್ನೂ ಯುದ್ಧಾಶ್ತ್ರಗಳಿಗೆ ವಾರ್ಷಿಕವಾಗಿ ಮೂವತ್ತು ಸಾವಿರ ಕ್ರುಜಾಡೋ ಕೃಷ್ಣದೇವರಾಯನು ಸಲ್ಲಿಸತಕ್ಕದೆಂದು ಒಪ್ಪಂದವಾಗಿತ್ತು.

**ಶ್ರೀ ಕೃಷ್ಣದೇವರಾಯ ಮತ್ತು ಪೋರ್ಚುಗೀಸ್ ಗವರ್ನರ್ ಅಲ್ಫೆನೋ ಡಿ ಅಲ್ಬುಕರ್ಕ್‌ರ ನಡುವಿನ ರಾಜ ತಾಂತ್ರಿಕ ಸಂಬಂಧಗಳು**

ವಿಜಯನಗರ ಸಾಮ್ರಾಜ್ಯದ ಸುಪ್ರಸಿದ್ಧ ಸಾಮ್ರಾಟ ಶ್ರೀ ಕೃಷ್ಣದೇವರಾಯನು ದೇಶ ವಿದೇಶದೊಂದಿಗೆ ಉತ್ತಮ ಸ್ನೇಹ ಸಂಬಂಧವನ್ನು ಹೊಂದಿದ್ದನು. ವಿದೇಶೀಯರಾದ ಪೋರ್ಚುಗೀಸರೊಂದಿಗೆ ಅವನು ಹೊಂದಿದ್ದ ರಾಜತಾಂತ್ರಿಕ ಸಂಬಂಧಗಳು ದಕ್ಷಿಣ ಭಾರತದ ರಾಜಕೀಯ, ಆರ್ಥಿಕ, ಸಾಂಸ್ಕೃತಿಕ ಇತಿಹಾಸದ ಮೇಲೆ ಅಪಾರ ಪ್ರಭಾವ ಬೀರಿದ್ದವೆನ್ನಬಹುದು. ಶ್ರೀ ಕೃಷ್ಣದೇವರಾಯ ಮತ್ತು ಅವನ ಸಮಕಾಲೀನನಾದ ಪೋರ್ಚುಗೀಸ್ ಗವರ್ನರ್ ಅಲ್ಫೆನೋ ಡಿ ಅಲ್ಬುಕರ್ಕ್ ರವರು ಹೊಂದಿದ್ದ ರಾಜತಾಂತ್ರಿಕ ನೈಪುಣ್ಯತೆಯು ಪರಸ್ಪರರ ಸೌಹಾರ್ದಯುತ ಒಡನಾಟ ಹಾಗೂ ರಾಜಕೀಯ ಏಳಿಗೆಗೆ ಸಾಧನವಾಯಿತು.[47] ಕ್ರಿ.ಶ.16ನೇ ಶತಮಾನದ ಆರಂಭದ ವೇಳೆಗೆ ಅಂದರೆ ಕ್ರಿ.ಶ.1509ರಲ್ಲಿ ಏಕಕಾಲದಲ್ಲಿ ಈ ಇಬ್ಬರು ಮಹಾನ್ ನಾಯಕರು ಅಧಿಕಾರಕ್ಕೆ ಬಂದಿದ್ದು ಕಾಕತಾಳೀಯ ಎನಿಸಿದರೂ ಅಂದಿನ ರಾಜಕೀಯ ಪ್ರಕ್ಷುಬ್ಧತೆಯು ಸ್ವದೇಶಿ ಮತ್ತು ವಿದೇಶಿ ಶಕ್ತಿಗಳ ನಡುವಣ ಸ್ನೇಹ ಸೌಹಾರ್ದಯುತ ಸಂಬಂಧಗಳಿಗೆ ಸೂಕ್ತ ಅಡಿಪಾಯವನ್ನು ಹಾಕಿಕೊಟ್ಟಿತೆಂದರೆ ಅತಿಶಯೋಕ್ತಿಯಾಗಲಾರದು.

ವಿಜಯನಗರದ ಅರಸರು ಈಗಾಗಲೇ ಐರೋಪ್ಯರೊಂದಿಗೆ ರಾಯಭಾರ ಮತ್ತು ವಾಣಿಜ್ಯ ಸಂಬಂಧಗಳನ್ನು ಹೊಂದಿದ್ದರೆಂಬುದಕ್ಕೆ ಇಟಲಿಯ ವೆನಿಸ್ ನಗರದ ನಿಕೋಲ್ ಕೋಂಟಿ ಹಾಗೂ ರಷ್ಯಾದ ನಿಕೆಟಿನ್ ರವರ ವರದಿಗಳು ಚಾರಿತ್ರಿಕ ದಾಖಲೆಗಳಾಗಿವೆ. ಪೋರ್ಚುಗೀಸರು ವಿಜಯನಗರ ಸಾಮ್ರಾಜ್ಯದೊಂದಿಗೆ ಅತ್ಯಂತ ನಿಕಟವಾದ ಸಂಬಂಧವನ್ನು ಹೊಂದಿರುವುದರ ಮೂಲಕ ಹೊಸ ರಾಜತಾಂತ್ರಿಕ ವ್ಯವಹಾರಿಕ ಹಾಗೂ ಸಾಂಸ್ಕೃತಿಕ ಬಾಂದವ್ಯಗಳಿಗೆ ನಾಂದಿ ಹಾಡಿದರು. ಇದಕ್ಕೆ ಪೂರಕವಾಗಿ ತುಳುವ ಸಂತತಿಯ ವೀರನರಸಿಂಹನ ಕಾಲಕ್ಕಾಗಲೇ ಪೋರ್ಚುಗೀಸ್ ವೈಸರಾಯ್ ಫ್ರಾನ್ಸಿಸ್ಕೋ ಡಿ ಅಲ್ಮೇಡಾ ವಿಜಯನಗರದೊಂದಿಗೆ

ರಾಯಭಾರ ಹಾಗೂ ವಾಣಿಜ್ಯ ಸಂಬಂಧಗಳನ್ನು ಆರಂಭಿಸಿದ್ದನೆಂಬುದು ಪೀತ್ರೋದಲ್ಲಾವೆಲ್ಲಿ ಹಾಗೂ ಫೆರ್ನೋ ಲೋಪೆಜ್ ಡಿ ಕಾಸ್ಟ್ರೋನೆಡಾರವರ ವರದಿಗಳಿಂದ ತಿಳಿದು ಬರುತ್ತದೆ. [48]

ಕೃಷ್ಣದೇವರಾಯನು ಅಧಿಕಾರಕ್ಕೆ ಬರುವುದಕ್ಕಿಂತ ಮುಂಚಿತವಾಗಿಯೇ ಪೋರ್ಚುಗೀಸರು ಮತ್ತು ವಿಜಯನಗರ ಸಾಮ್ರಾಜ್ಯದ ನಡುವೆ ಸಾಮರಸ್ಯ ಪೂರ್ಣ ಸಂಪರ್ಕವೇರ್ಪಟ್ಟಿತು ಅವನ ಆಳ್ವಿಕೆಯಲ್ಲಿ ಸ್ನೇಹ ಸಂಬಂಧಗಳನ್ನು ಮತ್ತಷ್ಟು ಗಟ್ಟಿಗೊಂಡವೆಂದು ಅಭಿಪ್ರಾಯ ಪಡಬಹುದು. ಕೃಷ್ಣದೇವರಾಯನು ಅಧಿಕಾರಕ್ಕೆ ಬಂದ ಸಂದರ್ಭದಲ್ಲಿ ದಕ್ಷಿಣ ಭಾರತದ ರಾಜಕೀಯ ಪರಿಸ್ಥಿತಿಯು ಅತ್ಯಂತ ಕ್ಲಿಷ್ಟಕರ ಹಾಗೂ ಸವಾಲಿನಿಂದ ಕೂಡಿತ್ತು. ವಿಜಯನಗರವು ಆಂತರಿಕ ಮತ್ತು ಬಾಹ್ಯ ಶತ್ರುಗಳಿಂದ ಜರ್ಝರಿತವಾಗಿತ್ತು. ಇಂತಹ ಸಂದಿಗ್ಧ ಸಮಯದಲ್ಲಿ ಅಧಿಕಾರ ವಹಿಸಿಕೊಂಡ ಕೃಷ್ಣದೇವರಾಯನು ಬಹಳ ಎಚ್ಚರಿಕೆಯಿಂದ ತನ್ನ ರಾಜಕೀಯ ಹೆಜ್ಜೆಯನ್ನು ಇಡಬೇಕಾಗಿತ್ತು. ಇದೇ ಸಂದರ್ಭದಲ್ಲಿ ಪೋರ್ಚುಗೀಸ್ ಗವರ್ನರ್ ಆಗಿ ಅಧಿಕಾರ ವಹಿಸಿಕೊಂಡ ಅಲ್ಬುಕರ್ಕ್‌ನು ಭಾರತದಲ್ಲಿ ಪೋರ್ಚುಗೀಸರ ಪರಮಾವಧಿಕಾರವನ್ನು ಸ್ಥಾಪಿಸಬೇಕೆನ್ನುವ ಹಂಬಲವನ್ನಿಟ್ಟುಕೊಂಡಿದ್ದನು. ಹೀಗೆ ಕೃಷ್ಣದೇವರಾಯ ಮತ್ತು ಅಲ್ಬುಕರ್ಕ್‌ರವರು ಅಧಿಕಾರಕ್ಕೆ ಬಂದ ಆರಂಭದಲ್ಲಿಯೇ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗಿತಲ್ಲದೇ ತಮ್ಮ ಸಾರ್ವಭೌಮತ್ವವನ್ನು ಸ್ಥಾಪಿಸಬೇಕಾದ ಅವಶ್ಯಕತೆಯೂ ಇತ್ತು. ಪರಿಣಾಮವಾಗಿ ಶ್ರೀ ಕೃಷ್ಣದೇವರಾಯ ಮತ್ತು ಅಲ್ಬುಕರ್ಕ್‌ರವರು ಪರಸ್ಪರ ಸೌಹಾರ್ದಯುತ ಶಾಂತಿ ಒಡಂಬಡಿಕೆ ಮಾಡಿಕೊಳ್ಳಬೇಕಾದ ಅನಿವಾರ್ಯತೆ ಬಂದೊದಗಿತ್ತು. [49]

ಕೃಷ್ಣದೇವರಾಯನ ಆಳ್ವಿಕೆಯು ವಿಜಯನಗರ ಸಾಮ್ರಾಜ್ಯ ಮತ್ತು ಪೋರ್ಚುಗೀಸರ ನಡುವಿನ ಸಂಬಂಧಗಳ ಹಿನ್ನಲೆಯಲ್ಲಿ ಅತ್ಯಂತ ಮಹತ್ವದ ಕಾಲವಾಗಿತ್ತು. ರಾಯನು ಪೋರ್ಚುಗೀಸರೊಡನೆ ಸ್ನೇಹದಿಂದಿದ್ದು ವ್ಯಾಪಾರ ವಾಣಿಜ್ಯ ಚಟುವಟಿಕೆಗಳನ್ನು ಅಭಿವೃದ್ಧಿಪಡಿಸಿಕೊಂಡು ರಾಜ್ಯದ ಶತ್ರುಗಳನ್ನು ನಿಗ್ರಹಿಸಿ ರಾಜ್ಯದ ಸಂಪನ್ಮೂಲಗಳನ್ನು ಹೆಚ್ಚಿಸಿಕೊಂಡು ಅನುಕೂಲಕರವಾದ ವಾತಾವರಣವನ್ನು ನಿರ್ಮಿಸಿಕೊಳ್ಳಲು ನಿರ್ಧರಿಸಿದನು. ಅದೇ ರೀತಿ ಪಶ್ಚಿಮ ಕರಾವಳಿಯಾದ್ಯಂತ ತಮ್ಮ ಚಟುವಟಿಕೆಗಳನ್ನು ತೀವ್ರಗೊಳಿಸಿ ಗೋವಾವನ್ನು ವಶಪಡಿಸಿಕೊಳ್ಳಲು ಹವಣಿಸುತ್ತಿದ್ದ. ಅಲ್ಬುಕರ್ಕ್‌ನು ಸಹ ರಾಯನ ಸ್ನೇಹವನ್ನು ಯಾಚಿಸುತ್ತಿದ್ದನು.

ಕೃಷ್ಣದೇವರಾಯ ಮತ್ತು ಅಲ್ಬುಕರ್ಕ್ ಸಮಾನ ಮನಸ್ಕರಾಗಿದ್ದರು. ಅಲ್ಬುರ್ಕ್‌ನು ಕ್ರಿ.ಶ.1510ರಲ್ಲಿ ಗೋವಾವನ್ನು ವಶಪಡಿಸಿಕೊಂಡನು. ಅಲ್ಬುರ್ಕ್‌ನಿಗೆ ಕೃಷ್ಣದೇವರಾಯನು ಪರೋಕ್ಷವಾಗಿ ಸಹಾಯ ಮಾಡಿದನು. ಅಲ್ಬುಕರ್ಕ್ ಗೋವಾವನ್ನು ರಾಜಕೀಯ ಮತ್ತು

ಧಾರ್ಮಿಕ ಚಟುವಟಿಕೆಗಳ ರಾಜಧಾನಿಯನ್ನಾಗಿ ಮಾಡಿಕೊಂಡನು.[50] ವಿಜಯನಗರ ಸಾಮ್ರಾಜ್ಯ ಮತ್ತು ಬಿಜಾಪುರ ಸುಲ್ತಾನ ಪರಸ್ಪರ ಕಲಹಗಳಲ್ಲಿ ತೊಡಗಿದ್ದರು. ಈ ಸನ್ನಿವೇಶವನ್ನು ಸಮರ್ಪಕವಾಗಿ ಬಳಸಿಕೊಂಡ ಅಲ್ಬುಕರ್ಕ್ ಗೋವಾವನ್ನು ಆಕ್ರಮಿಸಿಕೊಳ್ಳುವಲ್ಲಿ ಯಶಸ್ವಿಯಾದನು. ಬಿ.ಎಸ್.ಶಾಸ್ತ್ರಿಯವರ ಅಭಿಪ್ರಾಯದಂತೆ "16ನೇ ಶತಮಾನದ ಆರಂಭಕಾಲದಲ್ಲಿ ಭಾರತದ ರಾಜಕೀಯ ಚದುರಂಗದಾಟದಲ್ಲಿ ಗೋವಾವನ್ನು ಬಿಜಾಪುರ ಸುಲ್ತಾನರಿಂದ ಪೋರ್ಚುಗೀಸರು ಗೆದ್ದುಕೊಳ್ಳುವುದಕ್ಕೆ ವಿಜಯನಗರ ಸಾಮ್ರಾಜ್ಯ ಅಧಿಪತಿಯಾದ ಕೃಷ್ಣದೇವರಾಯನು ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಸಹಾಯ ಹಸ್ತ ನೀಡಿದ್ದು ಅತ್ಯಂತ ನಿರ್ಣಾಯಕ ಘಟನೆಯಾಗಿದೆ".

ಶ್ರೀ ಕೃಷ್ಣದೇವರಾಯ ಮತ್ತು ಅಲ್ಬುಕರ್ಕ್‌ರವರ ಸಂಬಂಧಗಳು ವೈಯಕ್ತಿಕ ಹಿತಾಸಕ್ತಿಗಳಿಂದ ಕೂಡಿರದೆ ಎರಡು ಪ್ರಮುಖ ರಾಜಕೀಯ ಶಕ್ತಿಗಳ ಐಕ್ಯತೆಯ ಸಂಕೇತವಾಗಿತ್ತೆಂಬುದು ಡಾ॥ ಕೆ.ಎಸ್.ಶಿವಣ್ಣ ರವರ ಅಭಿಪ್ರಾಯವಾಗಿದೆ. ಈ ಸ್ವದೇಶಿ ಮತ್ತು ವಿದೇಶಿ ಶಕ್ತಿಗಳು ತಮ್ಮ ರಾಜಕೀಯ ಪರಮಾಧಿಕಾರದ ಸ್ಥಾಪನೆ ಹಾಗೂ ಆರ್ಥಿಕ ಹಿತಾಸಕ್ತಿಗಳ ರಕ್ಷಣೆಗಾಗಿ ಅದರಲ್ಲೂ ಪ್ರಮುಖವಾಗಿ ತಮ್ಮ ಪ್ರತಿಸ್ಪರ್ಧಿಗಳಾಗಿದ್ದ ಬಿಜಾಪುರದ ಆದಿಲ್‌ಷಾಹಿ ಸುಲ್ತಾನರ ವಿರುದ್ಧ ಸೇಡು ತೀರಿಸಿಕೊಳ್ಳಲು ಪೋರ್ಚುಗೀಸರೊಂದಿಗೆ ತಮ್ಮ ರಾಜತಾಂತ್ರಿಕ ಸಂಬಂಧಗಳನ್ನು ಆಯಾಯ ಸಂದರ್ಭಗಳಿಗನುಸಾರವಾಗಿ ಉತ್ತಮ ಪಡಿಸಿಕೊಂಡರೆಂಬುದು ಇಲ್ಲಿ ಉಲ್ಲೇಖಾರ್ಹ.

ಕೃಷ್ಣದೇವರಾಯನು ಪೋರ್ಚುಗೀಸರು ಗೋವಾವನ್ನು ವಶಪಡಿಸಿಕೊಂಡ ಮೇಲೆ ತನ್ನ ಮಂತ್ರಿ ತಿಮ್ಮಯ್ಯನನ್ನು ಕೆನರಾದ ಮಂಡಲಿಕನನ್ನಾಗಿ ನೇಮಿಸಿ ಪೋರ್ಚುಗೀಸರನ್ನು ನಿಯಂತ್ರಿಸುವ ಪ್ರಯತ್ನ ಮಾಡಿದನು. ಹಾಗೂ ಪೋರ್ಚುಗೀಸರಿಗೆ ಈ ಕೆಳಕಂಡ ಕೆಲವೊಂದು ಮಾರ್ಗದರ್ಶನ ನೀಡುವಂತೆ ತಿಮ್ಮಯ್ಯನಿಗೆ ತಿಳಿಸಿದನು. ಅವುಗಳೆಂದರೆ,

1) ಒಡಂಬಡಿಕೆಯು ಪೋರ್ಚುಗೀಸರ ಎಲ್ಲಾ ಹಡಗುಗಳು ಗೋವಾಕ್ಕೆ ತೆರಳಬೇಕಾದರೆ ಹೊನ್ನಾವರ ಮತ್ತು ಭಟ್ಕಳದ ಮಾರ್ಗವಾಗಿಯೇ ಹೋಗಬೇಕು.
2) ಯಾವ ಹಡಗುಗಳು ಈ ಒಡಂಬಡಿಕೆಯನ್ನು ವಿರೋದಿಸುತ್ತವೋ ಆ ಹಡಗುಗಳನ್ನು ಲೂಟಿ ಮಾಡಿ ಸಂಪತ್ತನ್ನು ನನಗೆ ಸಲ್ಲಿಸುವಂತೆ ಹೇಳಿದನು.
3) ಲೂಟಿಯ ಒಂದು ಭಾಗವನ್ನು ನಿನ್ನ ಸೇವೆಗೆ ಇಟ್ಟುಕೊಳ್ಳುವುದು.

4) ಮತ್ತೊಂದು ಭಾಗದ ಲೂಟಿಯ ಸಂಪತ್ತನ್ನು ಗೇರುಸೊಪ್ಪದ ಸಾಮಂತ ರಾಜರಿಗೆ ನೀಡುವುದು.[51]

ಹೀಗೆ ಕೃಷ್ಣದೇವರಾಯ ಹಾಗೂ ಅಲ್ಬುಕರ್ಕ್‌ನ ರಾಜನೀತಿ, ವ್ಯವಹಾರ ಚತುರತೆ, ಸಮಯ ಪ್ರಜ್ಞೆ ಮತ್ತು ದೂರದೃಷ್ಟಿಯ ಪ್ರಯತ್ನಗಳಿಂದಾಗಿ ವಿಜಯನಗರ ಹಾಗೂ ಪೋರ್ಚುಗೀಸರ ನಡುವೆ ಉತ್ತಮ ರಾಜತಾಂತ್ರಿಕ ಮತ್ತು ವಾಣಿಜ್ಯ ಸಂಬಂಧಗಳು ಏರ್ಪಟ್ಟವು. ಪೋರ್ಚುಗಲ್ ದೇಶದಿಂದ ಪೇಯಸ್ ಮತ್ತು ಬಾರ್ಬೋಸಾ ಮುಂತಾದ ವರ್ತಕ ರಾಯಭಾರಿಗಳು ರಾಯನ ಆಸ್ಥಾನಕ್ಕೆ ಭೇಟಿ ನೀಡುವುದರ ಮೂಲಕ ಈಗಾಗಲೇ ಅಸ್ತಿತ್ವದಲ್ಲಿದ್ದ ಸಂಬಂಧಗಳನ್ನು ಮತ್ತಷ್ಟು ದೃಢಪಡಿಸಿದರು. ರಾಯನ ಆಸ್ಥಾನದಲ್ಲಿದ್ದ ಪೋರ್ಚುಗೀಸ್ ಸೈನ್ಯಾಧಿಕಾರಿಗಳಾದ ಆಂಟೋನಿಯೊ ಡಿಸೋಜಾ ಮತ್ತು ಜೋಹೋ ಟಿಕ್ಕೇರಿಯಾ ಮೊದಲಾದವರು ರಾಯನ ಸೈನಿಕ ದಿಗ್ವಿಜಯಗಳಿಗೆ ಅಪೂರ್ವ ಕೊಡುಗೆ ನೀಡಿದರು.

**ಅಚ್ಯುತದೇವರಾಯ ಮತ್ತು ಪೋರ್ಚುಗೀಸರು**

ಗೋವೆಯ ಪೋರ್ಚುಗೀಸರು ಮಂಡಲಾಧಿಪತಿ ದ ಕುನ್ಹಾ ವಿಜಯನಗರದ ಅಂತಃಕಲಹಗಳು ಬಿಜಾಪುರ, ಅಹಮದ್ ನಗರ ಹಾಗೂ ರಾಯಚೂರು ದೋ ಅಬ್‌ಗಳ ದುಸ್ಥಿತಿಯನ್ನು ಹಾಗೂ ಅಲ್ಲಿನ ಘಟನೆಗಳ ಪ್ರಯೋಜನ ಪಡೆದು ದೀವ್‌ನಲ್ಲಿ ಕೋಟೆಯೊಂದನ್ನು ಕಟ್ಟಿಸಿ ಕ್ರಿ.ಶ.1536ರಲ್ಲಿ ಅಸದ್ ಖಾನ್‌ನ ವಶದಲ್ಲಿದ್ದ ಹಾಗೂ ಭೂ ಖಂಡಗಳನ್ನು ಪುನಃ ಹಿಡಿದುಕೊಂಡ. ಖಾನನು ಮೂರು ಬಾರಿ ಗೋವೆಯನ್ನು ಪಡೆಯಲು ಸೈನ್ಯ ಕಳುಹಿಸಿದರೂ ಸಾಧ್ಯವಾಗದೇ ಹಿಂದಕ್ಕೆ ಸರಿಯಬೇಕಾಗಿತ್ತು.

ಇದೇ ಸಂದರ್ಭದಲ್ಲಿ ರಾಬರ್ಟ್ ಸಿವೆಲ್ ಪ್ರಕಾರ ಈ ಆಳ್ವಿಕೆಯಲ್ಲಿ ಪೋರ್ಚುಗೀಸರು ಕರಾವಳಿಯಲ್ಲಿನ ವಿವಿಧ ಸ್ಥಳಗಳಲ್ಲಿ ನೆಲೆಯೂರುವುದರಲ್ಲಿ ನಿರತರಾಗಿದ್ದರು. ತಮ್ಮ ವ್ಯಾಪಾರದ ರಕ್ಷಣೆಗಾಗಿ ಹಲವಾರು ಕೋಟೆಗಳನ್ನು ನಿರ್ಮಿಸಿದರು. ಕ್ಯಾಲಿಕಟ್‌ನ ಸಾಮೂರಿ ಮತ್ತು ವಿಜಯನಗರದ ಇತರ ಸಾಮಂತರೊಂದಿಗೆ ಯಾವಾಗಲೂ ಕದನ ನಿರತರಾಗಿದ್ದರು.[52]

**ವೀರ ಸದಾಶಿವರಾಯ ಮತ್ತು ಪೋರ್ಚುಗೀಸರು:**

ಕ್ರಿ.ಶ.1545ರಲ್ಲಿ ಅಸೂದ್‌ಖಾನನು ಇಬ್ರಾಹಿಂ ಆದಿಲ್ ಷಾನ ಬದಲಾಗಿ ಅವನ ಸಹೋದರ ಅಬ್ದುಲ್ಲಾನನ್ನು ಪಟ್ಟಕ್ಕೇರಿಸಲು ಸಿದ್ಧತೆ ನಡೆಸಿದನು. ಗೋವಾ ಮಂಡಲಾಧಿಪತಿ

ಡೋಂ ಗಾರ್ಸಿಯಾ ಡಿ ಕ್ಯಾಸ್ಟ್ರೋ ಅಸೂದನ ವಕ್ರದೃಷ್ಟಿ ಕೊಂಕಣದ ಮೇಲಿರುವುದನ್ನು ಗಮನಿಸಿ ವಿಜಯನಗರದ ಪ್ರತಿಕ್ರಿಯೆಗಾಗಿ ನಿರೀಕ್ಷಿಸತೊಡಗಿದನು. ತನ್ನ ಆಂತರಿಕ ಕುಟುಂಬ ಕಲಹದ ದುರುಪಯೋಗ ಪಡೆಯಲು ಕರಾವಳಿ ಪ್ರದೇಶಕ್ಕೆ ಕರೆಯದಲೇ ತಳವೂರಿದ್ದ ಪೋರ್ಚುಗೀಸರನ್ನು ಶಿಕ್ಷಿಸಿ ಸದೆಬಡಿಯಲು ಆದಿಲ್‌ಷಾನು ಸೈನ್ಯದೊಂದಿಗೆ ಘಟ್ಟದ ಕೆಳಗೆ ತೆರಳಿದನು. ಇದರಿಂದ ತಾತ್ಕಾಲಿಕ ಜಯ ಉಂಟಾದರೂ ಭಯದಿಂದ ಕೂಡಿದ್ದ ಇಬ್ರಾಹಿಂನನ್ನು ಬಂಡಾಯವೆದ್ದ ರಾಜಕುಮಾರನನ್ನು ನಿಗ್ರಹಿಸಲು ಸಾಲ್ಸೆಟ್ ಮತ್ತು ಬಾರ್ಡಸ್‌ನ್ನು ತನಗೆ ಒಪ್ಪಿಸಬೇಕೆಂದು ಪೋರ್ಚುಗೀಸರಿಗೆ ತಗಾದೆ ಮಾಡಿದನು. ಸಮೃದ್ಧ ಸಾಮ್ರಾಟ್ ಮತ್ತು ಬಾರ್ಡಸ್ ತನ್ನ ಕೈಬಿಡುವುದನ್ನು ಕಂಡುಕೊಂಡ. ಗೋವಾದ ಮಂಡಲಾಧಿಪತಿ ಡಿ ಕ್ಯಾಸ್ಟ್ರೋ ವಿಜಯನಗರದೊಂದಿಗೆ ಒಪ್ಪಂದಕ್ಕೆ ಬರಬೇಕಾಯಿತು.[53] ಬರ್ಹಾನ್ ಮುಖಾಂತರ ಉಚಿತ ಆಭರಣಗಳೊಂದಿಗೆ ತಲುಪಿದ ನಿರೂಪದ ಮೇರೆಗೆ ಬಿಜಾಪುರದ ವಿರುದ್ಧವಾಗಿ ಈ ಕೆಳಕಂಡಂತೆ ಒಪ್ಪಂದ ಏರ್ಪಟ್ಟಿತ್ತು. ಅವುಗಳೆಂದರೆ,

1) ಉಭಯತಾಪಿ ಸ್ನೇಹ ಸಂವರ್ಧನದಲ್ಲಿ ಕೂಡಿ ಕೊಂಡೇ ಆಯಾ ಸಂದರ್ಭಗಳಲ್ಲಿ ಶತ್ರುಗಳನ್ನು ನಿಗ್ರಹಿಸತಕ್ಕದ್ದು. ಒಬ್ಬರ ಶತ್ರುವಿಗೆ ಇನ್ನೊಬ್ಬರು ಸಹಮತವಿಲ್ಲದೆ ಸಹಾಯವೆಸಗಕೂಡದು.
2) ನೈಜಾಂಷಾನ ಹೊರತಾಗಿ ಭಾರತದ ಪ್ರಾಂತ್ಯಾಧಿಪತಿಗಳು ಕೇಂದ್ರದಿಂದ ಅಂದರೆ ವಿಜಯನಗರದಿಂದ ಬರುವ ಸೂಚನೆಯಂತೆ ಸಹಾಯವೆಸಗತಕ್ಕದು.
3) ಪರ್ಷಿಯಾ ಮತ್ತು ಅರೇಬಿಯದಿಂದ ಸರಬರಾಜಾಗುವ ಯುದ್ಧದ ಅಶ್ವಗಳನ್ನು ಗೋವಾ ಬಂದರಿಗೆ ಬಂದ ಕೂಡಲೇ ಪೋರ್ಚುಗೀಸರು ಬಿಜಾಪುರಕ್ಕೆ ನೀಡದೇ ವಿಜಯನಗರಕ್ಕೆ ಮಾತ್ರ ಸರಬರಾಜು ಮಾಡತಕ್ಕದ್ದು.
4) ವಿಜಯನಗರ ಪ್ರಾಂತ್ಯದ ವರ್ತಕರು ತಮ್ಮ ಸರಕುಗಳನ್ನು ಆಯಾ ಬಂದರುಗಳಿಂದ ಬಿಜಾಪುರಕ್ಕೆ ನೀಡಬಾರದು ಸೂಕ್ತ ಬೆಲೆಯಲ್ಲಿ ಪೋರ್ಚುಗೀಸರಿಗೆ ಸರಬರಾಜು ಮಾಡತಕ್ಕದ್ದು.
5) ಮೂರಿಷ್ ಹಡಗುಗಳನ್ನು ಬಂದರುಗಳಲ್ಲಿ ಬಿಡಕೂಡದು ಹಾಗೂ ನಿಲ್ಲಿಸಕೂಡದು ಆ ರೀತಿ ನಿಂತ ಹಡಗುಗಳನ್ನು ವಿಜಯನಗರ ಅಥವಾ ಗೋವಾಕ್ಕೆ ಒಪ್ಪಿಸತಕ್ಕದ್ದು.[54]

**ಅಳಿಯ ರಾಮರಾಯ ಮತ್ತು ಪೋರ್ಚುಗೀಸರು:**

ಅಳಿಯ ರಾಮರಾಯ ಮತ್ತು ಪೋರ್ಚುಗೀಸರ ನಡುವಿನ ಸಂಬಂಧ ಅಷ್ಟೊಂದು ಸುಧಾರಿಸಿರಲಿಲ್ಲ. ಇವನು ಪೋರ್ಚುಗೀಸರ ವಿರುದ್ಧ ಸೈನಿಕ ಕಾರ್ಯಾಚರಣೆ ನಡೆಸಲು ಮುಂದಾದನು. ಕ್ರಿ.ಶ.1558ರಲ್ಲಿ ಪೋರ್ಚುಗೀಸರ ವಿರುದ್ಧ ಯುದ್ಧ ಮಾಡಲು ಸೈನ್ಯವನ್ನು ಸಜ್ಜುಗೊಳಿಸಿ ಅವರನ್ನು ದಂಡಿಸುವ ಪ್ರಯತ್ನ ಮಾಡಿದನು. ಈ ಕಾರ್ಯಕ್ಕೆ ತನ್ನ ಸೈನ್ಯವನ್ನು ಎರಡು ಭಾಗಗಳಾಗಿ ವಿಂಗಡಿಸಿದನು. ಒಂದು ಭಾಗಕ್ಕೆ ಇವನೇ ದಂಡ ನಾಯಕನಾದನು. ಮತ್ತೊಂದು ಭಾಗಕ್ಕೆ ಇವನ ಸಂಬಂಧಿಯಾದ ರಾಮರಾಯ ವಿಠಲನನ್ನು ನೇಮಿಸಿದನು.

ಅಳಿಯ ರಾಮರಾಯ ಮತ್ತು ಪೋರ್ಚುಗೀಸರ ನಡುವೆ ಯುದ್ಧ ಸಂಭವಿಸಲು ಯಾವುದೇ ನಿರ್ದಿಷ್ಟವಾದ ಕಾರಣಗಳು ನಮಗೆ ತಿಳಿಯುವುದಿಲ್ಲ. ಹಲವಾರು ಭಾರತದ ದಾಖಲೆಗಳು ಈ ಘಟನೆಯನ್ನು ಬಹಳ ಲಘುವಾಗಿ ಚಿತ್ರಿಸಿವೆ. ರಾಮರಾಜ್ಯಂ ಮತ್ತು ರಾಮರಾಜನ ಗ್ರಂಥಗಳು ಬಕೀರ್‌ನಿಂದ ಬರೆದಿದ್ದು. ಈ ಗ್ರಂಥಗಳ ಉಲ್ಲೇಖಗಳ ಪ್ರಕಾರ ಕೇವಲ ಪೋರ್ಚುಗೀಸರನ್ನು ದಂಡಿಸಲು ಈ ಯುದ್ಧವನ್ನು ಮಾಡಿದನೆಂದು ತಿಳಿಸುತ್ತವೆ. ಯಾವ ಕಾರಣಕ್ಕಾಗಿ ದಂಡಿಸಿದನೆಂದು ಈ ದಾಖಲೆಗಳಲ್ಲಿ ಉಲ್ಲೇಖವಿಲ್ಲ.

ಅಳಿಯ ರಾಮರಾಯನು ಸಮಾರು ಐದು ಲಕ್ಷ ಸೈನಿಕರಿಂದ ದಕ್ಷಿಣ ಭಾಗದ ಗೋವಾದ ಮೇಲೆ ದಾಳಿ ಮಾಡಿದನು. ಪೋರ್ಚುಗೀಸರ ಹಡಗುಗಳು ಅಂಟ್ಲಾಂಟಿಕ್ ಮತ್ತು ಭಾರತದ ಸಮುದ್ರಗಳಲ್ಲಿ ಯಾನ ಕೈಗೊಳ್ಳುತ್ತಿದ್ದವು. ಈ ಸಂದರ್ಭದಲ್ಲಿ ಗೋವಾದ ವೈಸ್ರಾಯ್ ಆಗಿದ್ದ ಫ್ರಾನ್ಸಿಸ್ಕೋ ಬರೆಟೊ ವಿಜಯನಗರದ ದಾಳಿಯನ್ನು ನಿರೀಕ್ಷಿಸಿರಲಿಲ್ಲ. ಅಳಿಯ ರಾಮರಾಯನು ಪೋರ್ಚುಗೀಸರ ಪ್ರಮುಖ ವ್ಯಾಪಾರ ಕೇಂದ್ರಗಳಾದ ಸಾಂಥೋಮ್, ಮೈಲಾಪುರ್ ಮತ್ತು ಗೋವಾಗಳ ಮೇಲೆ ದಾಳಿ ಮಾಡಿದನು. ಈ ಯುದ್ಧದಿಂದಾಗಿ ವಿಜಯನಗರ ಮತ್ತು ಪೋರ್ಚುಗೀಸರ ನಡುವೆ ಬಿರುಕುಂಟಾಯಿತು.[55]

**ವೆಂಕಟ ಮತ್ತು ಪೋರ್ಚುಗೀಸರು:**

ವೆಂಕಟನು ವಿಜಯನಗರವನ್ನಾಳಿದ ಅರವಿಡು ಮನೆತನದ ಪ್ರಸಿದ್ಧ ಅರಸ. ಇವನ ಆಡಳಿತಾವಧಿಯಲ್ಲಿ ಪೋರ್ಚುಗೀಸರು ಮತ್ತು ವಿಜಯನಗರ ಸಾಮ್ರಾಜ್ಯದೊಂದಿಗೆ ಹಲವಾರು ಮಹತ್ತರವಾದ ಪತ್ರ ವ್ಯವಹಾರಗಳು ಉಂಟಾಗಿವೆ. ವೆಂಕಟನು ಮೂರನೇ ಫಿಲಿಪ್‌ನಿಗೆ ಬರೆದ ಪತ್ರಗಳು ಅವುಗಳಿಗೆ ಅವನು ಕೊಟ್ಟ ಉತ್ತರಗಳು ಇವೆಲ್ಲವೂ ಉತ್ತಮವಾದ ರಾಜತಾಂತ್ರಿಕ

ಬೆಳವಣಿಗೆಗೆ ಕಾರಣವಾಗಿದ್ದವು. ಮೂರನೇ ಫಿಲಿಪನು ವೆಂಕಟಪ್ಪನಿಗೆ ಬರೆದ ಪತ್ರದ ಸಾರಾಂಶ ಈ ಕೆಳಕಂಡಂತಿದೆ.

ನಾನು ಫಿಲಿಪ್ ನೀವು ನಿಮ್ಮ ಸಾಮ್ರಾಜ್ಯದಲ್ಲಿ ನಮ್ಮವರಿಗೆ ಉತ್ತಮವಾದ ಭದ್ರತೆ ಮತ್ತು ಧರ್ಮ ಪ್ರಚಾರಕ್ಕೆ ಅವಕಾಶ ಮಾಡಿಕೊಟ್ಟಿರುವಿರಿ ಎಂದು ನಮಗೆ ತಿಳಿದಿದೆ. ಈ ಕಾರಣದಿಂದ ನಾನು ನಿಮಗೆ ಕೃತಜ್ಞನಾಗಿದ್ದೇನೆ. ಈ ರೀತಿಯ ಘಟನೆಗಳು ಮುಂದೆಯೂ ಹೀಗೆಯೇ ನಡೆದುಕೊಂಡು ಹೋಗಲಿ ಎಂದು ಆಶಿಸುತ್ತೇನೆ. ನೀವು ಉತ್ತಮ ವ್ಯಾಪಾರ ಮತ್ತು ವಾಣಿಜ್ಯಕ್ಕಾಗಿ ಅಲ್ಲಿ ಅನುಮತಿ ನೀಡಿದ್ದೀರಿ. ಹಾಗೂ ಧರ್ಮದ ಬೆಳವಣಿಗೆಗೆ ಸಹಕರಿಸಿದ್ದೀರಿ ಆ ದೇವರು ನಿಮಗೆ ಒಳ್ಳೆಯದನ್ನು ಕರುಣಿಸಲಿ ಮತ್ತು ನಿಮ್ಮನ್ನು ರಕ್ಷಿಸಲಿ ಎಂದು ಒಂದು ಪತ್ರದ ಸಂಭಾಷಣೆಯಾಗಿದೆ.

ಮತ್ತೊಂದು ಪ್ರಮುಖ ಪತ್ರವು ಕ್ರಿ.ಶ.1601ರಲ್ಲಿ ಬರೆಯಲ್ಪಟ್ಟಿದ್ದು ಇದನ್ನು ವೈಸರಾಯ್ ರಾಜನಿಗೆ ಬರೆದಿದ್ದನು. ಇದರ ಪ್ರಕಾರ, ಭಾರತದಲ್ಲಿ ಧರ್ಮ ಪ್ರಚಾರಕ್ಕೋಸ್ಕರ ಇಬ್ಬರು ಪಾದ್ರಿಗಳನ್ನು ಕಳುಹಿಸಿ ಕೊಡುವುದಾಗಿ ಅವರು ಸೈಮನ್ ಡಿಸಾ ಮತ್ತು ಮಲ್ಬೋರ್ ಕ್ಯಾಂಟಿನೋರವರಾಗಿದ್ದು, ಅವರು ಚಂದ್ರಗಿರಿಯ ಚರ್ಚ್‌ನಲ್ಲಿ ಉಳಿಯಲು ಅವಕಾಶ ನೀಡಬೇಕು. ನಂತರ ಮತ್ತಷ್ಟು ಪಾದ್ರಿಗಳು ಬರುತ್ತಾರೆ ಎಂದು ಉಲ್ಲೇಖಿಸಿದ್ದಾರೆ. ವೆಂಕಟ ಮತ್ತು ಪೋರ್ಚುಗೀಸರ ನಡುವೆ ಮುಖ್ಯವಾಗಿ ವ್ಯಾಪಾರ ವಾಣಿಜ್ಯ ಸಂಬಂಧದೊಂದಿಗೆ ಧಾರ್ಮಿಕ ಸಂಬಂಧಗಳಿದ್ದವೆಂದು ಹೇಳಿದ್ದಾನೆ.[56]

**ಕ್ರಿ.ಶ.1565ರ ತಾಳಿಕೋಟೆ ಯುದ್ಧದ ನಂತರ ಪೋರ್ಚುಗೀಸರು:**

ಕ್ರಿ.ಶ.1565ರಲ್ಲಿ ವಿಜಯನಗರ ಪತನದ ನಂತರ ಗೋವಾದಲ್ಲಿ ಪೋರ್ಚುಗೀಸರ ಪ್ರಭಾವ ತಗ್ಗಿತು. ವ್ಯಾಪಾರಕ್ಕೆ ಭಾರಿನಷ್ಟ ಉಂಟಾಯಿತು. ಫೆಡರಿಚಿಯ ಕಥನದ ಪ್ರಕಾರ ಯುದ್ಧಾಶ್ವದ ಆದಾಯವು 120 ರಿಂದ 150 ಸಾವಿರ ಡುಕಟ್‌ಗಳ ಆದಾಯ ಕೇವಲ ಆರು ಸಾವಿರಕ್ಕಿಳಿಸಲಾಯಿತು. ಆದರೆ ವಿಜಯನಗರದ ಹಿಡಿತ ಸಡಿಲಗೊಂಡಾಗ ಇವರ ಗುಂಡಾವರ್ತನೆಯೂ ಉಲ್ಬಣಗೊಂಡಿತ್ತು. ಕ್ರಿ.ಶ.1567ರಲ್ಲಿ ಮಂಗಳೂರನ್ನು ವಶಪಡಿಸಿಕೊಂಡು ಸೆಂಟ್ ಸೆಬಾಸ್ಟಿನ್‌ಕೋಟೆ ನಿರ್ಮಿಸಿದರು. ಕುಂದಾಪುರ, ಬಸ್ರೂರು, ಹೊನ್ನಾವರ ಕೋಟೆಗಳು ಪೋರ್ಚುಗೀಸರ ವಶವಾದವು.

ಇದೇ ಕಾಲದಲ್ಲಿ ಕೆಳದಿ ರಾಜ್ಯ ಸ್ವತಂತ್ರವಾಗಿ ಸಮರ್ಥ ದೊರೆಗಳು ಆಳಿದರು. ಕಿ.ಶ.1618ರಲ್ಲಿ ಕೆಳದಿ ಹಿರಿಯ ವೆಂಕಟಪ್ಪ ನಾಯಕರು ಕರಾವಳಿಯಿಂದ ಪೋರ್ಚುಗೀಸರನ್ನು ಹೊಡೆದೋಡಿಸಿ 'ಪಡುಗದೊಡೆಯ' ನೆಂದೆನಿಸಿಕೊಂಡನು. ಕೆಳದಿ ಅರಸರಿಂದ ಪೋರ್ಚುಗೀಸ್ ನೌಕಾಪಡೆಗೆ ಆದ ಬಾರಿ ಸೋಲೊಂದನ್ನು ಇಂಗ್ಲಿಷ್ ದಾಖಲೆಗಳು ವರದಿ ಮಾಡಿವೆ. ಕ್ರಿ.ಶ.1652ರಲ್ಲಿ ಕೆಳದಿ ಶಿವಪ್ಪನಾಯಕನು ಪೋರ್ಚುಗೀಸರನ್ನು ಕನ್ನಡ ಕರಾವಳಿಯಿಂದ ಪೂರ್ತಿಯಾಗಿ ಹಿಮ್ಮೆಟ್ಟಿಸಿ ಕಡಲ ತೀರದಲ್ಲಿ ತನ್ನ ಪೂರ್ತಿ ಸಾಮ್ರಾಜ್ಯವನ್ನು ಸ್ಥಾಪಿಸಿದನು.[57]

**ಸಾಮಾಜಿಕ ಮತ್ತು ಆರ್ಥಿಕ ಸಂಬಂಧಗಳು:**

ಪೋರ್ಚುಗೀಸರು, ಕ್ರಿಶ್ಚಿಯನ್ನರು ಸಾಂಬಾರ ಪದಾರ್ಥಗಳ್ನು ಹುಡುಕಿಕೊಂಡು ಭಾರತಕ್ಕೆ ಬಂದರು ಎಂದು ಹೇಳಲಾಗುತ್ತದೆ. ಪೋರ್ಚುಗೀಸರ ಆಡಳಿತ ಕಾಲದಲ್ಲಿ ಭಾರತದ ಉಳಿದ ಪ್ರದೇಶಗಳ ತೀರ ಪ್ರದೇಶಗಳೊಂದಿಗೆ, ಅದರಲ್ಲೂ ಮುಖ್ಯವಾಗಿ ಮಹಾರಾಷ್ಟ್ರ ಮತ್ತು ಕರ್ನಾಟಕದೊಂದಿಗೆ, ಗೋವಾದ ಆರ್ಥಿಕ ಮತ್ತು ಸಾಂಸ್ಕೃತಿಕ ಸಂಬಂಧಗಳು ನಿಕಟವಾಗಿದ್ದವು.

ಕ್ರಿ.ಶ.1498ರ ಸೆಪ್ಟಂಬರ್ – ಅಕ್ಟೋಬರ್‌ನಲ್ಲಿ ಕಾರವಾರದ ಅಂಜಿದಿವ ಮತ್ತು ಕುಂದಾಪುರದ ಸೇಂದ್ ಮೇರಿ ಈ ಎರಡು ದ್ವೀಪಗಳಲ್ಲಿ ತನಗೆ ಮೀನು, ಮೊಟ್ಟೆ ಮತ್ತು ಹಕ್ಕಿಯ ಮಾಂಸವನ್ನು ರವಾನಿಸುತ್ತಿದ್ದ ಸ್ಥಳೀಯರಿಗೆ ಶರ್ಟ್‌ನ್ನು ಮಾರುತ್ತಿದ್ದರು ಮತ್ತು ಕರ್ನಾಟಕದಿಂದ ಗೋವಾಕ್ಕೆ ಅಕ್ಕಿ, ಮೆಣಸು, ಸಕ್ಕರೆ, ಶುಂಠಿ ಇವುಗಳನ್ನು ತರಲಾಗುತ್ತಿತ್ತು ಎಂದು ಟಾಮ್ ಪೈರ್ಸ್‌ನ ದಾಖಲೆಗಳು ತಿಳಿಸುತ್ತವೆ. ಬಾರ್ಬೋಸ ಮತ್ತು ನಿಕೇಟಿನ್ ಇವರ ದಾಖಲೆಗಳು ಮತ್ತು ಹದಿನಾರನೇ ಶತಮಾನದ ಕೆಲವು ಪೋರ್ಚುಗೀಸ್ ದಾಖಲೆಗಳು ಗೋವಾ ಮತ್ತು ಕರ್ನಾಟಕದ ಸಮೃದ್ಧವಾದ ವ್ಯಾಪಾರಕ್ಕೆ ಸಾಕ್ಷಿಯಾಗಿವೆ. ವಿಜಯನಗರ ಮತ್ತು ಬಹುಮನಿ ರಾಜರುಗಳು ರಾಜಕೀಯ ವೈಷಮ್ಯದಿಂದಾಗಿ ಯುದ್ಧದಲ್ಲಿ ಬಳಸುವ ಕುದುರೆಗಳಿಗೆ ಬಹಳವಾದ ಬೇಡಿಕೆಯಿತ್ತು. ಆದ್ದರಿಂದ ವಿಜಯನಗರದ ರಾಜರು ಪೋರ್ಚುಗೀಸರೊಡನೆ ಉತ್ತಮ ಸಂಬಂಧವನ್ನು ಕಾಪಾಡಿಕೊಂಡಿದ್ದರು. ಬಹುಮನಿ ರಾಜರು ಅರೇಬಿಯಾದಿಂದ ಕುದುರೆಗಳನ್ನು ತರಿಸಿಕೊಳ್ಳುತ್ತಿದ್ದರು. ಕುದುರೆ ವ್ಯಾಪಾರದಲ್ಲಿ ಪೋರ್ಚುಗೀಸರು ಅತಿ ಹೆಚ್ಚಿನ ಲಾಭ ಗಳಿಸಿದರು.[58]

ಕ್ರಿ.ಶ.16 ಮತ್ತು 17ನೇ ಶತಮಾನಗಳಲ್ಲಿ ಗೋವಾದ ಇತಿಹಾಸದಲ್ಲಿನ ಒಂದು ವಿಶೇಷ ಲಕ್ಷಣವೆಂದರೆ ಗೋವಾದ ಜನರು ಕರ್ನಾಟಕಕ್ಕೆ ಅದರಲ್ಲೂ ಕರ್ನಾಟಕದ ಕಡಲ ತೀರಗಳಲ್ಲಿ ಬಂದು ನೆಲೆಸಿದ್ದು, ಇದಕ್ಕೆ ಅನೇಕ ಕಾರಣಗಳಿವೆ. ಗೋವಾದಲ್ಲಿ ಆಹಾರದ ಕೊರತೆ

ಬಹಳವಾಗಿದ್ದುದರಿಂದ ಉತ್ತಮವಾದ ಬದುಕಿಗಾಗಿ ಬಂದು ನೆಲೆನಿಂತುದುಂಟು. ಅದಲ್ಲದೆ ಕ್ಷಾಮವನ್ನು ಕಂಡ ವರ್ಷಗಳು ಸಾಂಕ್ರಾಮಿಕ ರೋಗಗಳು ಗೋವೆಯನ್ನು ಕಾಡಿತ್ತು. ಈ ಅತಿರೇಕಗಳು ಹೆಚ್ಚಾಗಿ ಕಂಡು ಬಂದ್ದು ಕ್ರಿ.ಶ.1553, 1570, 1675 ಮತ್ತು 1682ರಲ್ಲಿ ಮತಾಂತರನೀತಿ ಗುಡಿಗಳ ಮೇಲೆ ದಾಳಿ ಹಿಂದೂಗಳಿಗೆ ಕ್ರಿಶ್ಚಿಯನ್ನರ ಧಾರ್ಮಿಕ ಕಿರುಕುಳ, ಹಿಂದೂಗಳನ್ನು ಕುರಿತ ಅವರ ವಿಭಿನ್ನ ನೀತಿ ಮುಂತಾದವು. ಸಾವಿರಾರು ಜನರು ಕರ್ನಾಟಕದ ತೀರ ಪ್ರದೇಶದ ಮತ್ತು ಕೇರಳದ ಭಾಗಗಳಿಗೆ ವಲಸೆ ಬರುವಂತೆ ಮಾಡಿತು. ಇವರಲ್ಲಿ ಬಹಳಷ್ಟು ಜನರು ಗೌಡ, ಸಾರಸ್ವತ ಬ್ರಾಹ್ಮಣರು ಹೀಗೆ ವಲಸೆ ಬಂದ ಹಿಂದೂಗಳ ಕುಲದೇವರು ಗೋವೆ ಮೂಲವಾದದ್ದು, ಹಾಗಾಗಿ ಅವರ ಅನುಯಾಯಿಗಳು ಜಂಬವಲ್ಲಿ, ಮಂಗೇಶಿ, ಮಾರ್ಡೋಲ್ ಕವರೆವೆಲ್ ಮುಂತಾದ ಸ್ಥಳಗಳಿಗೆ ತೀರ್ಥಯಾತ್ರೆಗೆ ಹೋಗುತ್ತಿದ್ದರು.

ಪೋರ್ಚುಗೀಸರ ಮತಾಂತರ ನೀತಿ ಗೋವಾಗೆ ಮಾತ್ರ ಸೀಮಿತವಾಗಿರಲಿಲ್ಲ. ಕೆನರಾದ ಪ್ರತಿ ಬಂದರಿನಲ್ಲಿ ಮತ್ತು ಕೈಗಾರಿಕೆಯಲ್ಲಿ ಅವರ ಒಂದು ಇಗರ್ಜಿ ಮತ್ತು ಅದಕ್ಕೆ ಸಂಬಂಧಿಸಿದ ಮುಖ್ಯಸ್ಥರು ಪಾದ್ರಿಗಳು ಇರುತ್ತಿದ್ದರು. ಇವರು ತಮ್ಮ ಧಾರ್ಮಿಕ ಕೆಲಸಗಳನ್ನು ಮಾಡುವುದಲ್ಲದೆ ತಮ್ಮ ಧರ್ಮ ಪ್ರಚಾರ ಮತ್ತು ಮತಾಂತರವನ್ನು ಸೇರಿದಂತೆ ಇತರ ಧಾರ್ಮಿಕ ಚಟುವಟಿಕೆಗಳಲ್ಲೂ ತೊಡಗಿಸಿಕೊಂಡಿದ್ದರು. ಪೋರ್ಚುಗೀಸರು ಮತ್ತು ರಾಜ್ಯದ ಅಧಿಕಾರ ನಿರ್ವಹಿಸುತ್ತಿದ್ದ ಮುಖ್ಯಸ್ಥರ ನಡುವಿನ ರಾಜಕೀಯ ಒಪ್ಪಂದಗಳು ಕ್ರಿಶ್ಚಿಯನ್ನರ ಮತ್ತು ಪಾದ್ರಿಗಳ ಕಡೆಗೆ ಒಲವು ತೋರಿಸಿತ್ತು. ಕೆಳದಿಯ ನಾಯಕರು ಮಂಗಳೂರು, ಬಂಟ್ವಾಳ, ಹೊನ್ನಾವರ, ಕಲ್ಯಾಣಪುರ, ಚಂದ್ರಾಪುರ ಮೊದಲಾದ ಕಡೆಗಳಲ್ಲಿ ಇಗರ್ಜಿಗಳನ್ನು ನಿರ್ಮಿಸಲು ಅನುಮತಿ ನೀಡಿದರು. ಇದಲ್ಲದೆ ಹದಿನಾರು ಮತ್ತು ಹದಿನೇಳು ಶತಮಾನಗಳಲ್ಲಿ ಮತಾಂತರ ಗೊಂಡವರು ಹೆಚ್ಚಿನ ಸಂಖ್ಯೆಯಲ್ಲಿ ಕರ್ನಾಟಕದ ತೀರ ಪ್ರದೇಶಗಳಿಗೆ ವಲಸೆ ಬಂದಿದ್ದರು. ಹದಿನೇಳನೇ ಶತಮಾನದ ಉತ್ತರಾರ್ಧದಲ್ಲಿ ಗೋವಾದ ಮತ ಪ್ರಚಾರಕ ಮತ್ತು ಸ್ಥಳೀಯರ ಪಾದ್ರಿಯಾಗಿದ್ದ ಜೋಸೆಫ್ ವಾಜ್ ಎರಡು ಇಗರ್ಜಿಗಳನ್ನು ಬಸ್ರೂರು ಮತ್ತು ಗಂಗೊಳ್ಳಿಗಳಲ್ಲಿ ಕಟ್ಟಿಸಿದನು[59]. ಪೋರ್ಚುಗೀಸರು ಕರ್ನಾಟಕದ ತೀರ ಪ್ರದೇಶದಲ್ಲಿ ಅನೇಕ ಕೋಟೆಗಳನ್ನು ಮತ್ತು ಇಗರ್ಜಿಗಳನ್ನು ಕಟ್ಟಿದರು. ಮಂಗಳೂರಿನ 'ಅವರ್ ಲೇಡಿ ಆಹ್ ರೋಸರಿ' ಮತ್ತು ಸೇಂಟ್ ಫ್ರಾನ್ಸಿಸ್ ಕ್ಲೇವಿಯರ್' ಚರ್ಚುಗಳು ಉಳ್ಳಾಲದ 'ಅವರ್ ಲೇಡಿ ಆಲ್‌ಮರ್ಸಿ ಚರ್ಚ್ ಮತ್ತು ಫರಂಗಿ ಪೇಟೆಯ ಸೇಂಟ್ ಫ್ರಾನ್ಸಿಸ್ ಆವ್ ಅಪ್‌ಸಿಮ ಇವುಗಳು ಹದಿನಾರು ಮತ್ತು ಹದಿನೇಳನೇ ಶತಮಾನದಲ್ಲಿ ಪೋರ್ಚುಗೀಸರು ನಿರ್ಮಿಸಿದ ಸುಂದರ ಇಗರ್ಜಿಗಳಲ್ಲಿ ಕೆಲವು.

ಗೋವಾದಲ್ಲಿ ಪೋರ್ಚುಗೀಸರ ಆಡಳಿತ ಕಾಲದಲ್ಲಿ ಆಹಾರಕ್ಕೆ ಸಂಬಂಧಿಸಿದಂತೆ ಗೋವೆ ಸಮರ್ಪಕವಾಗಿರಲಿಲ್ಲ. ಪೋರ್ಚುಗೀಸರು ಅಗತ್ಯವಾದ ಅಕ್ಕಿಯನ್ನು ಕರ್ನಾಟಕದ ತೀರ ಪ್ರದೇಶಗಳಿಂದ ತರಿಸಿಕೊಳ್ಳುತ್ತಿದ್ದರು. ಕರ್ನಾಟಕವನ್ನು ಅವರು ತಮ್ಮ ಕಣಜವೆಂದು ಭಾವಿಸಿದ್ದರು. ಕರ್ನಾಟಕದ ಸ್ಥಳೀಯ ರಾಜರ ಅಥವಾ ಅಧಿಕಾರಿಗಳೊಂದಿಗಿನ ಒಪ್ಪಂದಗಳು ಮತ್ತು ಕೊಡುಗೆಗಳ ಮೂಲಕ ಅವರು ಅಗತ್ಯವಾದ ಅಕ್ಕಿಯನ್ನು ಒದಗಿಸಿ ಕೊಳ್ಳುತ್ತಿದ್ದರು. ಪೋರ್ಚುಗೀಸರನ್ನು ಎದುರಿಸಲು ಸಮರ್ಥನಾಗಿದ್ದ ಕೆಳದಿಯ ನಾಯಕ ಶಿವಪ್ಪನಾಯಕನನ್ನು ಬಿಟ್ಟಂತೆ ಭಟ್ಕಳ, ಹೊನ್ನಾವರ, ಬಸ್ರೂರು ಇತ್ಯಾದಿ ಬಹುತೇಕ ರಾಜರುಗಳ ಅವರ ಆಳ್ವಿಕೆಯ ಬಹುಭಾಗ ಆಕ್ಕಿಯ ಕೊಡುಗೆಯನ್ನು ಹೇರಲಾಗಿತ್ತು. ಅಲ್ಲದೆ ಪೋರ್ಚುಗೀಸರು ಮತ್ತು ಕೆಳದಿಯ ದೊರೆಗಳ ನಡುವೆ ವೈಮನಸ್ಸು ಎದ್ದಾಗಲೆಲ್ಲಾ ಅಕ್ಕಿಯ ಕೊಡುಗೆ ಸಿಗುತ್ತಿರಲಿಲ್ಲ. ಜೊತೆಗೆ ಪೋರ್ಚುಗೀಸರು ಅವರಿಗೆ ಅಗತ್ಯವಾದ ಅಕ್ಕಿಯ ಬಹುಭಾಗವನ್ನು ತಮ್ಮ ವ್ಯಾಪಾರಿಗಳಿಂದ ಖರೀದಿಸುತ್ತಿದ್ದರು. ಯುದ್ಧಕಾಲದಲ್ಲಿ ಅದಕ್ಕೆ ಅವರು ಅತಿ ಹೆಚ್ಚಿನ ಬೆಲೆ ಕೊಡಬೇಕಾಗಿತ್ತು.

ನೆಲ ಮತ್ತು ಜಲಮಾರ್ಗಗಳು ವ್ಯಾಪಾರಕ್ಕೆ ಪ್ರೋತ್ಸಾಹದಾಯಕವಾಗಿದ್ದವು. ಎತ್ತುಗಳು, ಎತ್ತಿನಗಾಡಿಗಳು, ಕೂಲಿಗಳು, ಕುದುರೆಗಳು ಮುಂತಾದವುಗಳನ್ನು ಸರಕು ಸಾಗಾಣಿಕೆಗೆ ಬಳಸಲಾಗುತ್ತಿತ್ತು. ಕೆನರಾ ಮತ್ತು ಗೋವಾದ ಬಂದರುಗಳು ಗೋವಾ ಮತ್ತು ಕರ್ನಾಟಕದ ಆಂತರಿಕ ವ್ಯಾಪಾರವನ್ನು ಸುಲಭಗೊಳಿಸಿದವು. ಹೊನ್ನಾವರದ ಹಾದಿಯಾಗಿ ಭಟ್ಕಳ ಮತ್ತು ಬಂಕಾಪುರಕ್ಕೆ ಒಂದು ಮಾರ್ಗವಿತ್ತು. ಗೋವಾಗೆ ಬಂಕಾಪುರದ ಮೂಲಕ ಸಂಪರ್ಕವಿದ್ದಿತು.

**ಕೋಟೆ–ಕೈಗಾರಿಕಾ ವ್ಯವಸ್ಥೆ ಮತ್ತು ಜಲಮಾರ್ಗ ವ್ಯಾಪಾರ ಪರವಾನಗಿ:**

ಪೋರ್ಚುಗೀಸರು ಪೌರಾತ್ಯ ದೇಶಗಳೊಡನೆ 'ಕೋಟೆ ಕೈಗಾರಿಕಾ ವ್ಯವಸ್ಥೆಯ' ಮೂಲಕ ವ್ಯಾಪಾರವನ್ನು ಸಂಘಟಿಸಿಕೊಂಡರು. ಕೆನರಾದಲ್ಲಿಯೂ ಅವರ ಕೈಗಾರಿಕೆಗಳಿದ್ದವು. ಕ್ರಿ.ಶ. 1540ರಲ್ಲಿ ಭಟ್ಕಳದಲ್ಲಿ ನಂತರ ಕ್ರಿ.ಶ. 1671ರ ಒಪ್ಪಂದದ ನಂತರ ಮಂಗಳೂರಿನಲ್ಲಿ ಅವರು ತಮ್ಮ ಕೈಗಾರಿಕೆಗಳನ್ನು ಸ್ಥಾಪಿಸಿದರು. ಕ್ರಿ.ಶ. 1556 ಮತ್ತು 1654ರ ನಡುವೆಯೂ ಅವರ ಬಳಿ ಅನೇಕ ಕೈಗಾರಿಕೆಗಳಿದ್ದವು. ಒಂದು ಕೈಗಾರಿಕೆ ಅಥವಾ ಕೋಟೆಯ ವ್ಯಾಪಾರ ಸೈನ್ಯ ಸಂಗ್ರಹ ಮತ್ತು ಮತೀಯ ಚಟುವಟಿಕೆಗಳ ಕೇಂದ್ರ ಸ್ಥಾನವಾಗಿದ್ದಿತು. ಪೋರ್ಚುಗೀಸರು ವ್ಯಾಪಾರದ ಮೇಲಿನ ತಮ್ಮ ಸ್ವಾಮ್ಯವನ್ನು ಹಿಡಿತದಲ್ಲಿಡಲು ಅರಬ್ಬರಿಗೂ ಇತರ ಯೂರೋಪಿಯನ್ನರಿಗೂ ಜಲಮಾರ್ಗ ವ್ಯಾಪಾರಕ್ಕೆ ಪರವಾನಗಿ ಕೊಡುವ ವ್ಯವಸ್ಥೆಯನ್ನು ಅನುಸರಿಸಿದ್ದರು. ಕೆನರಾದಲ್ಲಿ ಇದು ಜಾರಿಗೆ ಬಂದುದು 16ನೇ ಶತಮಾನದ ನಡುವಿನಲ್ಲಿಯೇ. ಈ 16 ಮತ್ತು 17ನೇ

ಶತಮಾನಗಳಲ್ಲಿ ಪೋರ್ಚುಗೀಸರು ಅವರಿಗೆ ಅಗತ್ಯವಾದ ಸರಕುಗಳನ್ನು ಕೆನರಾದಿಂದ ತರಲು ಸಂಗ್ರಹಕಾರರನ್ನು ನೇಮಿಸಿಕೊಂಡಿದ್ದರು. ಕೆನರಾ ವ್ಯಾಪಾರಿಗಳನ್ನು ಕೆಟ್ಟದಾಗಿ ನಡೆಸಿಕೊಳ್ಳುವಲ್ಲಿ ಮತ್ತು ನಿಯಮದ ವಿರುದ್ಧವಾದ ಕೆಲಸಗಳನ್ನು ಮಾಡುವಲ್ಲಿ ಪೊರ್ಚೋಗೀಸರು ಎತ್ತಿದ ಕೈ. ಒತ್ತಾಯ ಪೂರ್ವಕವಾಗಿ ಅವರಿಂದ ಕಡಿಮೆ ಬೆಲೆಗೆ ಸರಕುಗಳನ್ನು ಕೊಳ್ಳುವುದು ಮತ್ತು ನಿಯಮಬಾಹಿರವಾಗಿ ನಡೆದುಕೊಳ್ಳುವುದು ಇವರ ವ್ಯಾಪಾರದ ಭಾಗವಾಗಿತ್ತು.

ಕೆನರಾದಲ್ಲಿದ್ದ ಪೋರ್ಚುಗೀಸರ ಚುರುಕಿನ ವ್ಯಾಪಾರ ಅದೇ ಸ್ಥಳದ ಹಾಗೂ ದೂರ ಪ್ರದೇಶದ ವ್ಯವಸಾಯಿಕ ಉತ್ಪನ್ನಗಳಿಗೂ ಮತ್ತು ಸಾಂಬಾರ ಪದಾರ್ಥಗಳಿಗೂ ಹೆಚ್ಚಿನ ಬೇಡಿಕೆಯನ್ನು ಒದಗಿಸಿತು. ಇದು ಗೌಡ ಸಾರಸ್ವತ ಬ್ರಾಹ್ಮಣರು, ಚೆಟ್ಟಿಗಳು, ಮುಸ್ಲಿಮರು ಇತ್ಯಾದಿ ವ್ಯಾಪಾರಿ ವರ್ಗದ ಉಗಮಕ್ಕೆ ಕಾರಣವಾಯಿತು. ಮುಂದುವರಿದ ವಾಣಿಜ್ಯ ವ್ಯಾಪಾರ ಆಧಾರದ ಮಂಗಳೂರು, ಬಸ್ರೂರು, ಇತ್ಯಾದಿ ನಗರ ಕೇಂದ್ರಗಳು ಹುಟ್ಟಿಕೊಳ್ಳಲು ಕಾರಣವಾಯಿತು. ತೀರ ಪ್ರದೇಶದ ನಗರಗಳಲ್ಲಿ ನಾಗರಿಕ ಲಕ್ಷಣಗಳು ಮೂಡಿ ಬರಲು ಇಗರ್ಜಿಗಳ ನಿರ್ಮಾಣ ಸಹಾಯಕವಾಯಿತು.[60]

**3.7 ಮಲಬಾರ್ ತೀರ ಪ್ರದೇಶಗಳಲ್ಲಿ ಪೋರ್ಚುಗೀಸರ ಏಕಸ್ವಾಮ್ಯ:**

ಭಾರತದಲ್ಲಿ ಪೋರ್ಚುಗೀಸರು ತಮ್ಮ ವ್ಯಾಪಾರ ವಹಿವಾಟುಗಳನ್ನು ಉನ್ನತಿಪಡಿಸಿ ಕೊಳ್ಳಲು ಹಲವಾರು ಪ್ರದೇಶಗಳಲ್ಲಿ ತಮ್ಮ ಏಕಸ್ವಾಮ್ಯವನ್ನು ಸ್ಥಾಪಿಸಿದರು. ಮಲಬಾರ್ ತೀರ ಪ್ರದೇಶವು ಒಂದು ಉತ್ತಮವಾದ ಬಂದರುಗಳ ವಾಸಸ್ಥಾನವಾಗಿದ್ದು ಮಲಬಾರ್ ತೀರ ಪ್ರದೇಶದಲ್ಲಿ ಅವರು ತಮ್ಮ ಅದಿಪತ್ಯವನ್ನು ಸ್ಥಾಪಿಸಲು ಮುಂದಾದರು. ಮಲಬಾರ್ ತೀರಪ್ರದೇಶ ಅಂದರೆ ಪಾರಂಪರಿಕವಾಗಿ ಕೇಪ್ ಕ್ಯಾಮೊರಿನ್‌ನಿಂದ ಮಂಜೆಸ್ವಾರ್‌ವರೆಗೆ ಹಬ್ಬಿದೆ. ಆದರೆ ಐತಿಹಾಸಿಕವಾಗಿ ಮಲಯಾಳಂ ಭಾಷೆಯನ್ನು ಮಾತನಾಡುವ ಪ್ರದೇಶವನ್ನು ಮಲಬಾರ್ ತೀರ ಪ್ರದೇಶವೆಂದು ಕರೆಯುವರು. ಈ ಮಲಬಾರ್ ತೀರವು ಪಶ್ಚಿಮ ಘಟ್ಟಗಳಿಂದ ಸುತ್ತುವರಿಯಲ್ಪಟ್ಟಿದೆ.

ವಾರಂಗಲ್‌ನ ರುದ್ರದೇವನ ಮಗ ಕೃಷ್ಣನಾಯಕ ಮತ್ತು ಬಲ್ಲಾಳದೇವ ರವರು ಒಂದೇ ಕೂಟವನ್ನು ರಚಿಸಿಕೊಂಡು ಮಹಮದೀಯರನ್ನು ದಖನ್ನಿನಿಂದ ಹೊರದೂಡಲು ಯತ್ನಿಸಿದರು. ಈ ಕಾರ್ಯವನ್ನು ಸಾಧಿಸಲು ಮಲಬಾರ್ ಮತ್ತು ಕೆನರಾ ರಾಜರ ಸಹಾಯ ಹಸ್ತವನ್ನು ಚಾಚಿದರು. ಪೆರಿಸ್ತಾನ ಹೇಳಿಕೆಗಳ ಪ್ರಕಾರ ಇಡೀ ದಕ್ಷಿಣ ಭಾರತವು ದೇವರಾಯನ

ಅದೀನದಲ್ಲಿತ್ತು. ಇಡೀ ದಕ್ಷಿಣ ಭಾರತ ವಿಜಯನಗರದ ಅಧೀನದಲ್ಲಿತ್ತು. ಎರಡನೇ ದೇವರಾಯನು ಕೂಡ ಮಲಬಾರಿನ ಮೇಲೆ ನಿಯಂತ್ರಣ ಹೊಂದಿದ್ದನು. ಮಲಬಾರಿನ ಕೇರಳ ತೀರಕ್ಕೆ ತನ್ನ ಸೈನ್ಯವನ್ನು ತೆಗೆದುಕೊಂಡು ಹೋಗಿ ಕೊಲ್ಲಂ ರಾಜನನ್ನು ಸೋಲಿಸಿದನು. ಜಾಮೊರಿನ್‌ನು ತನ್ನ ಸ್ವಾತಂತ್ರವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದನು. ಅಬ್ದುಲ್ ರಜಾಕ್‌ನ ಹೇಳಿಕೆಗಳ ಪ್ರಕಾರ "ಜಾಮೊರಿನ್‌ನು 2ನೇ ದೇವರಾಯನ ಅಧೀನದಲ್ಲಿರಲಿಲ್ಲ. ಆದರೆ ಇವನಿಗೆ ಅವನ ಭಯವಿತ್ತು. ವಿಜಯನಗರದ ರಾಜನಿಂದ ಒಂದು ಪತ್ರವನ್ನು ಪಡೆದ ಜಾಮೊರಿನ್‌ನು ಆ ಪತ್ರದಲ್ಲಿ ಪರ್ಷಿಯಾದ ರಾಯಭಾರಿಯನ್ನು ಕೂಡಲೇ 2ನೇ ದೇವರಾಯನ ಆಸ್ಥಾನಕ್ಕೆ ಕಳುಹಿಸಬೇಕೆಂದು ಬರೆದಿತ್ತು. ಈ ಪತ್ರದ ಬೇಡಿಕೆಯನ್ನು ಜಾಮೋರಿನ್‌ನು ಪಾಲಿಸಿದನು."[61]

ರಾಜಕೀಯವಾಗಿ ಮಲಬಾರ್ ಹಲವಾರು ಸಣ್ಣಪುಟ್ಟ ಸಂಸ್ಥಾನಗಳಾಗಿ ವಿಂಗಡಣೆಯಾಗಿತ್ತು. ಕೃಷ್ಣದೇವರಾಯನ ಕಾಲದಲ್ಲಿ ಸಂಪೂರ್ಣವಾಗಿ ಮಲಬಾರ್ ಪ್ರಾಂತ್ಯವನ್ನು ತನ್ನ ಅಧಿಪತ್ಯಕ್ಕೆ ತೆಗೆದುಕೊಳ್ಳಲಾಯಿತು. ಕೃಷ್ಣದೇವರಾಯನು ವ್ಯಾಪಾರ ಮತ್ತು ವಾಣಿಜ್ಯ ಬೆಳವಣಿಗೆಯ ದೃಷ್ಟಿಯಿಂದ ಮಲಬಾರ್ ತೀರ ಪ್ರದೇಶಗಳ ಮೇಲೆ ನಿಯಂತ್ರಣ ಹೊಂದಿದ್ದನು. ಇವನ ಕಾಲದಲ್ಲಿ ವಿದೇಶಿಯರು ಮತ್ತು ಮಲಬಾರಿನ ಸ್ಥಳೀಯ ಸಂಸ್ಥಾನಗಳೊಂದಿಗೆ ಬಹಳಷ್ಟು ಕಲಹಗಳುಂಟಾದವು. ಪೋರ್ಚುಗೀಸರು ತಮ್ಮ ಆಗಮನದ ನಂತರ ಕೊಂಕಣ ಮತ್ತು ಮಲಬಾರ್ ತೀರಪ್ರದೇಶದಲ್ಲಿ ತಮ್ಮ ಅದಿಪತ್ಯ ಸ್ಥಾಪಿಸಲು ಮುಂದಾದರು. ಮತ್ತೊಂದು ಕಡೆ ವಿಜಯನಗರ ಅರಸ ಮತ್ತು ಬಿಜಾಪುರದ ಸುಲ್ತಾನರು ಕೂಡ ಮಲಬಾರ್ ಮೇಲೆ ತಮ್ಮ ನಿಯಂತ್ರಣ ಹೊಂದಲು ಹವಣಿಸುತ್ತಿದ್ದರು.

ಜಾಮೊರಿನ್ ಹಿಂದೂ ರಾಜನಾಗಿದ್ದು, ಮುಸ್ಲಿಂ ವರ್ತಕರಿಗೆ ಸಹಾಯ ಮಾಡುತ್ತಿದ್ದನು. ಆದರೆ ಅಲ್ಲಿನ ವರ್ತಕರಿಗೆ ಇವನು ಪೂರ್ಣವಾದ ಸ್ವಾತಂತ್ರ್ಯವನ್ನು ನೀಡಲಿಲ್ಲ ಸ್ಥಳೀಯ ಮತ್ತು ವಿದೇಶಿ ವರ್ತಕರನ್ನು ಆತ ಸಮನಾಗಿ ಕಂಡನು. ಕ್ರಿ.ಶ.1510ರಲ್ಲಿ ಪೋರ್ಚುಗೀಸರು ಮಲಬಾರಿನ ಪ್ರದೇಶಗಳ ಮೇಲೆ ಹಿಡಿತ ಸಾಧಿಸಲು ಪ್ರಾರಂಭಿಸಿದರು. ಈ ಹಂತದಲ್ಲಿ ಜಾಮೊರಿನನಿಗೂ ಮತ್ತು ಪೋರ್ಚುಗೀಸರಿಗೂ ಯುದ್ಧ ಸಂಭವಿಸಿ ಪೋರ್ಚುಗೀಸರು ಜಾಮೋರಿನ್ ಮತ್ತು ಮುಸ್ಲಿಮರ ಸೈನ್ಯದಿಂದ ಪರಾಭವಗೊಂಡರು.

ಕೃಷ್ಣದೇವರಾಯ ಮತ್ತು ಪೋರ್ಚುಗೀಸರು ಒಂದು ಕೂಟವನ್ನು ರಚಿಸಿಕೊಂಡರು. ಇದರ ಉದ್ದೇಶ ಬಂದರುಗಳನ್ನು ಅರಬ್ಬರಿಂದ ಮುಕ್ತಿಗೊಳಿಸುವುದು. ನಂತರ ಇದರಿಂದಾಗಿ ಪೋರ್ಚುಗೀಸರು ಪಶ್ಚಿಮದ ಬಂದರುಗಳನ್ನು ವಶಪಡಿಸಿಕೊಂಡರು. ಗೋವಾವನ್ನು ಅವರು

ವಶಪಡಿಸಿಕೊಂಡ ಮೇಲೆ ಅಲ್ಲಿ ಒಂದು ರಾಜಕೀಯ ಕೇಂದ್ರವನ್ನು ಸ್ಥಾಪಿಸಿದರು. ಇಲ್ಲಿಂದ ಹಂತ ಹಂತವಾಗಿ ಮಲಬಾರ್ ತೀರ ಪ್ರದೇಶಗಳ ಬಂದರಿನ ಮೆಲೆ ನಿಯಂತ್ರಣವನ್ನು ಹೊಂದುತ್ತಾ ಹೋದರು.

**ಜಾಮೊರಿನ್ ಮತ್ತು ಪೋರ್ಚುಗೀಸರ ಸಂಬಂಧಗಳು:**

15ನೇ ಶತಮಾನದಲ್ಲಿ ಕ್ಯಾಲಿಕಟ್‌ನ ಇತಿಹಾಸದಲ್ಲಿ ಮಹತ್ತರವಾದ ಬದಲಾವಣೆ ಗಳುಂಟಾದವು. ಈ ಭಾಗದಲ್ಲಿ ವ್ಯಾಪಾರ ಮತ್ತು ವಾಣಿಜ್ಯ ಪೋರ್ಚುಗೀಸರೊಂದಿಗೆ ಬಲವರ್ಧನೆಗೊಂಡಿತು. ಪೋರ್ಚುಗೀಸರು ಮೊದಲ ಯೂರೋಪ್ ವ್ಯಾಪಾರಿಗಳು ಮಲಬಾರ್ ತೀರದೊಂದಿಗೆ ವಾಣಿಜ್ಯ ಸಂಬಂಧವನ್ನು ಏರ್ಪಡಿಸಿಕೊಂಡರು. ಯೂರೋಪಿಯನ್ನರಿಗೆ ಪಶ್ಚಿಮ ಕರಾವಳಿಯಲ್ಲಿ ಕ್ಯಾಲಿಕಟ್ ಒಂದು ಮುಖ್ಯ ಬಂದರಾಯಿತೆಂದು ತಿಳಿದಿತ್ತು. ಪೋರ್ಚುಗೀಸ ರಿಗಿಂತ ಮುಂಚೆ ಮುಸ್ಲಿಮರು ಮಲಬಾರ್‌ನಲ್ಲಿ ತಮ್ಮ ವ್ಯಾಪಾರ ಏಕಸ್ವಾಮ್ಯವನ್ನು ಸ್ಥಾಪಿಸಿದ್ದರು. ಪೋರ್ಚುಗೀಸರು ಮಲಬಾರ್ ಬಂದರೊಳಗೆ ಆಕರ್ಷಿತರಾಗಲು ಕಾರಣವೇನೆಂದರೆ ಅಲ್ಲಿ ಅಗಾಧವಾಗಿ ದೊರೆಯುತ್ತಿದ್ದ ಸಾಂಬಾರ ಪದಾರ್ಥಗಳು, ಪೋರ್ಚುಗೀಸರು ಕ್ಯಾಲಿಕಟ್‌ನ್ನು ಒಂದು ಆಯಕಟ್ಟಿನ ಸ್ಥಳವೆಂದು ಗುರ್ತಿಸಿದರು. ಅಲ್ಲಿಂದ ನೇರವಾಗಿ ಭಾರತದ ವಿವಿಧ ಬಂದರುಗಳಿಗೆ ವ್ಯಾಪಾರ ಕೈಗೊಳ್ಳಬಹುದಾಗಿತ್ತು. ಅದರಿಂದ ತಮ್ಮ ಅದಿಪತ್ಯವನ್ನು ಸ್ಥಾಪಿಸಲು ಮುಂದಾದರು.[62]

ಭಾರತಕ್ಕೆ ಪೋರ್ಚುಗೀಸರು ಆಗಮನದ ಸಂದರ್ಭದಲ್ಲಿ ಜಾಮೊರಿನನು ಮಲಬಾರಿನ ಪ್ರಸಿದ್ಧ ರಾಜನಾಗಿದ್ದನು. ಕ್ಯಾಲಿಕಟ್ ಅವನ ರಾಜಧಾನಿಯಾಗಿದ್ದು ಇದು ಉಳಿದ ಬಂದರುಗಳಿಗೆ ಸಂಪರ್ಕ ಕಲ್ಪಿಸುವ ಕೇಂದ್ರವಾಗಿತ್ತು. ಇಬನ್‌ಬತೂತನ ಹೇಳಿಕೆಯ ಪ್ರಕಾರ "ಕ್ಯಾಲಿಕಟ್ ಮಲಬಾರಿನಲ್ಲಿ ಒಂದು ಪ್ರಮುಖ ಬಂದರಾಗಿತ್ತು. ಇಲ್ಲಿಗೆ ವಿಶ್ವದ ಎಲ್ಲಾ ದೇಶಗಳ ವ್ಯಾಪಾರಸ್ಥರು ಭೇಟಿ ನೀಡುತ್ತಿದ್ದರು." ಎಂದು ಹೇಳೀದ್ದಾನೆ.

ಪ್ರಾರಂಭದಲ್ಲಿ ಜಾಮೊರಿನ್‌ನು ಪೋರ್ಚುಗೀಸರನ್ನು ಆತ್ಮೀಯವಾಗಿ ಬರಮಾಡಿ ಕೊಂಡನು. ತನ್ನ ದರ್ಬಾರಿನಲ್ಲಿ ಅವರನ್ನು ವಿಶೇಷವಾಗಿ ಉಪಚರಿಸಿದನು. ಮಾನ್ಸೂನ್ ಸಂದರ್ಭದಲ್ಲಿ ಕ್ಯಾಲಿಕಟ್‌ಗಿಂತ ಪಂಥಲಾಯಿನಿ ಕೊಲಂ ಬದರು ಸುರಕ್ಷಿತವೆಂದು ತಿಳಿಸಿದನು. ವಾಸ್ಕೋಡಿಗಾಮನು ಜಾಮೋರಿನ್ ಬಳಿ ವ್ಯಾಪಾರದ ರಿಯಾಯಿತಿಗಳನ್ನು ಕೇಳಿದನು. ಜಾಮೋರಿನನು ಒಪ್ಪಿಗೆ ನೀಡಿ ಸ್ಥಳೀಯ ಮದ್ಯವರ್ತಿಗಳ ಪರಿಚಯ ಮಾಡಿಸಿದನು. ಮೊದಲು

ಇವರಿಬ್ಬರ ನಡುವೆ ಉತ್ತಮ ಸಂಬಂಧವಿದ್ದು ನಂತರ ಮನಸ್ತಾಪಗಳುಂಟಾದವು. ಹಾಗಾದರೂ ಸಹ ಅವರಿಬ್ಬರ ನಡುವೆ ವ್ಯಾಪಾರ ಮತ್ತು ವಹಿವಾಟುಗಳು ನಡೆಯುತ್ತಿದ್ದವು. ಕೃಷ್ಣದೇವರಾಯ ಅಧಿಕಾರಕ್ಕೆ ಬಂದ ನಂತರ ಪೋರ್ಚುಗೀಸರ ಅದೃಷ್ಟವೇ ಬದಲಾಯಿತು. ಪೋರ್ಚುಗೀಸರು ಗೋವಾ ಮತು ಕೊಚ್ಚಿನ್‌ಗಳಲ್ಲಿ ತಮ್ಮ ಅದಿಪತ್ಯವನ್ನು ಸ್ಥಾಪಿಸಿದರು. ಕೊಚ್ಚಿನ್ ಮತ್ತು ಕ್ಯಾಲಿಕಟ್ ರಾಜರ ನಡುವೆ ಇದ್ದ ದ್ವೇಷವನ್ನು ಅವರು ಬಳಸಿಕೊಂಡು ಕೊಚ್ಚಿನ್ ರಾಜನೊಂದಿಗೆ ಉತ್ತಮ ಸಂಬಂಧವನ್ನು ಬೆಳೆಸಿಕೊಂಡು ಜಾಮೊರಿನ್‌ನ  ಮೇಲೆ ಯುದ್ಧ ಸಾರಿದರು.

ಪೋರ್ಚುಗೀಸರು ಕ್ಯಾಲಿಕಟ್‌ನಲ್ಲಿ ಸಾಂಬಾರ ವ್ಯಾಪಾರದ ಏಕಸ್ವಾಮ್ಯವನ್ನು ಸ್ಥಾಪಿಸಲು ಮುಂದಾದರು. ಆದರೆ ಅಲ್ಲಿ ಅವರಿಗೆ ಯಾವುದೇ ಯಶಸ್ಸು ಸಿಗಲಿಲ್ಲ. ನಂತರ ಕ್ಯಾಲಿಕಟ್‌ನಿಂದ ಕೊಚ್ಚಿನ್‌ಗೆ ತಮ್ಮ ವ್ಯಾಪಾರವನ್ನು ವರ್ಗಾಯಿಸಿದರು. ಕೊಚ್ಚಿನ್ ರಾಜ ಪೋರ್ಚುಗೀಸರ ಎಲ್ಲಾ ಬೇಡಿಕೆಗಳನ್ನು ಒಪ್ಪಿಕೊಂಡ ಜಾಮೋರಿನ್‌ನ ವಿರುದ್ಧ ಹೋರಾಡಲು ಸಹಾಯ ಮಾಡಿದನು. ಪೋರ್ಚುಗೀಸರು ಕೊಚ್ಚಿನ್‌ನಲ್ಲಿ ತಮ್ಮ ಪ್ರಾಬಲ್ಯವನ್ನು ಹೆಚ್ಚಿಸಿಕೊಂಡರು ಮತ್ತು ಜಾಮೋರಿನ್‌ನ ವಿರುದ್ಧ ಹಲವಾರು ಯುದ್ಧಗಳನ್ನು ಕೈಗೊಂಡರು. ಇವರು ಕೊಚ್ಚಿನ್, ಕಣ್ಣನೂರು ಮತ್ತು ಕೊಲ್ಲಂಗಳಲ್ಲಿ ವ್ಯಾಪಾರ ಕೋಠಿಗಳನ್ನು ತೆರೆದರು. ಕೊಚ್ಚಿನ್ ಪ್ರದೇಶವನ್ನು ರಾಜಕೀಯವಾಗಿ, ಆರ್ಥಿಕವಾಗಿ ನಿಯಂತ್ರಿಸಲು ಪ್ರಯತ್ನಿಸಿದರು. 16ನೇ ಶತಮಾನದಲ್ಲಿ ಪೋರ್ಚುಗೀಸರು ಮತ್ತು ಕ್ಯಾಲಿಕಟ್‌ನ ನಡುವೆ ಸಾಂಬಾರ ವ್ಯಾಪಾರದ ಮೇಲೆ ಪೈಪೋಟಿ ಉಂಟಾಯಿತು. ಕೊನೆಗೂ ಪೋರ್ಚುಗೀಸರು ಮಲಬಾರ್ ಬಂದರುಗಳಲ್ಲಿ ತಮ್ಮ ವ್ಯಾಪಾರ ಏಕಸ್ವಾಮ್ಯವನ್ನು ಸ್ಥಾಪಿಸಿದರು.[63]

**3.8 ಪೋರ್ಚುಗೀಸರು ಮತ್ತು ಕ್ರೈಸ್ತಧರ್ಮದ ಪ್ರಚಾರ:**

ಭಾರತದಲ್ಲಿ ಕ್ರೈಸ್ತಧರ್ಮ ಪ್ರಚಾರ ಯೂರೋಪಿಯನ್ನರ ಆಗಮನಕ್ಕೆ ಮುಂಚಿನಿಂದಲೂ ಕಾರ್ಯಪ್ರವೃತವಾಗಿತ್ತೆಂದೂ ಕೆಲವೊಂದು ದಾಖಲೆಗಳು ನಮಗೆ ಸ್ಪಷ್ಟಪಡಿಸುತ್ತವೆ. ಇಟಲಿಯ ಪ್ರವಾಸಿ ಮಾರ್ಕೋಪೋಲೋ ತನ್ನ ಪ್ರವಾಸಕಥನದಲ್ಲಿ ದಾಖಲಿಸಿರುವಂತೆ 13ನೆಯ ಶತಮಾನದಲ್ಲಿ ಕೆಂಪು ಸಮುದ್ರ ಮತ್ತು ಕನ್ನಡ ಕರಾವಳಿ ತೀರದ ನಡುವೆ ಗಣನೀಯವಾಗಿ ವ್ಯಾಪಾರ ವಹಿವಾಟು ನಡೆಯುತ್ತಿತ್ತು. ಆ ಕಾಲದಲ್ಲಿ ವಿದೇಶಿ ಕ್ರೈಸ್ತ ವ್ಯಾಪಾರಿಗಳು ಕರ್ನಾಟಕ ಕರಾವಳಿಯನ್ನು ಸಂದರ್ಶಿಸುವ ಸಾಧ್ಯತೆಯನ್ನು ಅಲ್ಲಗೆಳೆಯಲಾಗದು. ಅದೇ ರೀತಿ ಅವರ ಜೊತೆಗೆ ಕೆಲವು ಕ್ರೈಸ್ತ ಪಾದ್ರಿಗಳು, ಧರ್ಮ ಬೋಧನೆ ನಿಮಿತ್ತವಾಗಿ ಬರತೊಡಗಿರಬೇಕು. ಕ್ರಿ.ಶ.1321ರ ಏಪ್ರಿಲ್‌ನಲ್ಲಿ ನೈಋತ್ಯ ಫ್ರಾನ್ಸಿನ ಜೋರ್ಡಾನಾಸ್ ಕಟಲನಿ ಎನ್ನುವ ಕ್ರೈಸ್ತ ಪಾದ್ರಿ ತನ್ನ ನಾಲ್ವರು ಅನುಯಾಯಿಗಳೊಂದಿಗೆ ಪ್ರಯಾಣಿಸಿ ಠಾಣೆ ಬಂದರನ್ನು ತಲುಪಿದನು. ಅವರು

ಅಲ್ಲಿಂದ ಕ್ರಿ.ಶ.1328ರಲ್ಲಿ ಉತ್ತರ ಕನ್ನಡದ ಭಟ್ಕಳಕ್ಕೆ ಪ್ರಯಾಣಿಸಿದರು. ಕ್ರಿ.ಶ.1498ರಲ್ಲಿ ಮಂಗಳೂರಿನ ಮೀನುಗಾರರ ಬಲೆಗೆ ಬಂದು ಶಿಲುಬೆ ದೊರೆಯಿತು. ಓಲಿವ್ ಮರದಿಂದ ತಯಾರಾದ ಈ ಶಿಲುಬೆಯಿಂದಾಗಿ ಸ್ಥಳೀಯವಾಗಿ ಕ್ರಿಶ್ಚಿಯನ್ ಸಮುದಾಯದ ಅಸ್ತಿತ್ವ ಗುರ್ತಿಸಿಕೊಂಡಿತು. ಇತಿಹಾಸಕಾರ ಸೆವಾರಿನ್ ಸಿಲ್ವಾ ಅಭಿಪ್ರಾಯದಂತೆ 16ನೇ ಶತಮಾನಕ್ಕಿಂತ ಮೊದಲು ದಕ್ಷಿಣ ಕನ್ನಡದಲ್ಲಿ ಕ್ರೈಸ್ತ ಸಮುದಾಯದ ವಾಸ್ತವ್ಯ ಕುರುಹುಗಳು ಅಗೋಚರವಾಗಿವೆ. ಇನ್ನೊಂದು ಊಹೆಯ ಪ್ರಕಾರ ಪೋರ್ಚುಗೀಸರ ಆಗಮನಕ್ಕೆ ಮೊದಲೇ ಕರಾವಳಿಯಲ್ಲಿ ಕ್ರೈಸ್ಥರ ನೆಲೆಗಳಿದ್ದು ಕ್ರಿ.ಶ.1498ರ ಕಾಲಕ್ಕೆ ಅವರು ಹೊರಹೋಗಿರಬೇಕು.[64]

ಕ್ರೈಸ್ತರ ಆಗಮನ ಮತ್ತು ನೆಲೆಗಳು ಆ ಮೊದಲೇ ಆಗಿದ್ದರೂ ಕೂಡ ಪೋರ್ಚುಗೀಸರು ಈ ಪ್ರದೇಶಕ್ಕೆ ಆಗಮಿಸಿದ ಮೇಲೆಯೇ ಕ್ರಿಶ್ಚಿಯನ್ನರ ಮತ ಪ್ರಚಾರ ಆರಂಭಗೊಂಡಿತು. ಕ್ರಿ.ಶ.1498ರಲ್ಲಿ ಪೋರ್ಚುಗೀಸರ ನಾವಿಕ ವಾಸ್ಕೋಡಿಗಾಮನು ಪೋರ್ಚುಗಲ್‌ನಿಂದ ಭಾರತಕ್ಕೆ ಪ್ರವಾಸ ಕೈಗೊಂಡನು. ಅದೇ ಹಾದಿಯಲ್ಲಿ ಅವನು ದ್ವೀಪ ಸಮೂಹವೊಂದನ್ನು ಕಂಡು ಹಿಡಿದ. ಅದನ್ನು 'ಎಲ್‌ಪೇಡನ್ ಡಿ ಸಂತಮೇರಿಯಾ' ಎಂದು ಹೆಸರಿಸಿದ. ಅದು ಮುಂದೆ 'ಸೈಂಟ್ ಮೇರಿಸ್ ದ್ವೀಪ' ಸಮೂಹವೆಂದು ಹೆಸರಾಯಿತು. ಕ್ರಿ.ಶ.1500ರಲ್ಲಿ ಪೇಡ್ರೋ ಆಲ್ವಾರಿಸ್ ಕೆಬ್ರಾಲ್ ಎನ್ನುವ ಪೋರ್ಚುಗೀಸ್ ನಾವಿಕ ಹದಿನೆಂಟು ಮಂದಿ ಫ್ರೆಂಚ್ ಮಿಷನರಿಯೊಂದಿಗೆ ಅಂಜು ದ್ವೀಪಕ್ಕೆ ಬಂದಿಳಿದ. ಈ ಮಿಷನರಿಗಳು ಹೆನ್ರಿ ಸುವಾರಿಸ್ ಡೆ ಕೊಯಿಂಬ್ರಾನ ನೇತೃತ್ವದಲ್ಲಿ ಮಂಗಳೂರು ಪ್ರದೇಶದಲ್ಲಿ 22 ರಿಂದ 23 ಸ್ಥಳೀಯರನ್ನು ಕ್ರೈಸ್ತ ಧರ್ಮಕ್ಕೆ ಮತಾಂತರಿಸಿದರು. ಕ್ರಿ.ಶ.1502ರ ನವೆಂಬರ್ 19ರಂದು ಮಂಗಳೂರು ಹಾಗೂ ಸುತ್ತಮುತ್ತಲಿನ ಕೆಲವು ಕ್ರೈಸ್ತರು ಕೊಚ್ಚಿಯಲ್ಲಿದ್ದ ವಾಸ್ಕೋಡಿಗಾಮನ ಬಳಿಗೆ ಉಡುಗೊರೆಯೊಂದಿಗೆ ಹೋದರು. ವಾಸ್ಕೋಡಿ ಗಾಮನಲ್ಲಿ ಅವರು ತಮಗೆ ಬಿಷಪ್ ಇರುವುದಾಗಿ ತಿಳಿಸಿದರು. ಅವರೆಲ್ಲರೂ ಸಾಮೂಹಿಕ ಪ್ರಾರ್ಥನೆ ಸಲ್ಲಿಸಿದರು. ಅಲ್ಫೋನ್ಸೋ ಡಿ ಅಲ್ಬುಕರ್ಕ್‌ನು ಕ್ರಿ.ಶ.1510ರಲ್ಲಿ ಗೋವಾವನ್ನು ವಶಪಡಿಸಿಕೊಳ್ಳುವ ಮೊದಲೇ ಪೋರ್ಚುಗೀಸರು ಕೆನರಾ ಜಿಲ್ಲೆಯಲ್ಲಿ ಕೆಲವು ವಸಾಹತುಗಳನ್ನು ಹೊಂದಿದ್ದರು. ಹಾಗಾಗಿ ಆ ವೇಳೆಗಾಗಲೇ ಇದ್ದ ವಸಾಹತುಗಳಿಗೆ ಮತ ಪ್ರಚಾರಕರನ್ನು ಕಳುಹಿಸುವುದು ಅವರಿಗೆ ಸುಲಭವಾಯಿತು.

ಗೋವೆಯಿಂದ ಮಂಗಳೂರಿಗೆ ಬಂದ ಕ್ಯಾಥೋಲಿಕರು ಮೂರು ಪ್ರದಾನ ಕಾಲಮಾನಗಳಲ್ಲಿ ವಲಸೆ ಬಂದವರು. ಅವರಲ್ಲಿ ಮೊದಲನೆಯದು ಕ್ರಿ.ಶ.1560ರ ವೇಳೆಗೆ ಎರಡನೆಯದು ಕ್ರಿ.ಶ.1570ರ ವೇಳೆಗೆ ಹಾಗೂ ಮೂರನೆಯದಾಗಿ ಕ್ರಿ.ಶ.1683ರಲ್ಲಿ ಕ್ರಿ.ಶ.1500ರಲ್ಲಿ

ಗೋವೆ ಪೋರ್ಚುಗೀಸರ ವಶವಾದಾಗ ಕ್ಯಾಥೋಲಿಕರು ಅಲ್ಲಿಂದ ವಲಸೆ ಹೊರಟರು. ಕ್ಷಾಮ ಮಾರಣಾಂತಿಕ ಖಾಯಿಲೆಗಳು ಹಾಗೂ ಪೋರ್ಚುಗೀಸ್–ಮರಾಠಾ ಯುದ್ಧಗಳ ನಂತರ ರಾಜಕೀಯ ವೈಪರೀತ್ಯಗಳ ಕಾರಣವಾಗಿ ಎರಡನೆಯ ಮತ್ತು ಮೂರನೆಯ ಬಾರಿಯ ವಲಸೆಗಳು ನಡೆದವು.

16ನೇ ಶತಮಾನದ ವೇಳೆಗೆ ಕೆನರಾ ಜಿಲ್ಲೆಯು ವಿಜಯನಗರ ಸಾಮ್ರಾಟ ಕೃಷ್ಣದೇವರಾಯನ ಆಳ್ವಿಕೆಗೆ ಒಳಪಟ್ಟಿತ್ತು.[65] ಹೀಗಾಗಿ ಪೋರ್ಚುಗೀಸರು ಕೆನರಾವನ್ನು ಪ್ರವೇಶಿಸುವುದಕ್ಕಾಗಿ ಕೃಷ್ಣದೇವರಾಯನೊಡನೆ ಒಪ್ಪಂದವನ್ನು ಮಾಡಿಕೊಂಡರು. ಕೃಷ್ಣ ದೇವರಾಯನು ಪೋರ್ಚುಗೀಸರಿಗೆ ಕೆನರಾದಲ್ಲಿ ವ್ಯಾಪಾರದ ಸವಲತ್ತುಗಳನ್ನು ಕೊಡ ಮಾಡಿದನು. ಹಾಗೂ ಧಾರ್ಮಿಕ ಆಚರಣೆ, ನಂಬಿಕೆ ಮತ್ತು ಧಾರ್ಮಿಕ ಪ್ರಚಾರಗಳಿಗೆ ವಿಜಯನಗರ ಸಾಮ್ರಾಜ್ಯದಲ್ಲಿ ಯಾವುದೇ ಅಡ್ಡಿ ಇದ್ದಿರಲಿಲ್ಲ.

ಕ್ರಿ.ಶ.1526ರಲ್ಲಿ ವೈಸರಾಯ್ ಲೋಪೊ ವಾಝೋ ಡಿ ಸಾಂಪ್ಯೂನ ವೈಸರಾಯತ್ವದಲ್ಲಿ ಪೋರ್ಚುಗೀಸರು ಮಂಗಳೂರನ್ನು ವಶಪಡಿಸಿಕೊಂಡರು. ಲೋಪೋನ ಆಳ್ವಿಕೆಯ ಸಮಯದಲ್ಲಿ ಕ್ರಿ.ಶ.1517ರಲ್ಲಿ ಗೋವೆಯಿಂದ ಆಗಮಿಸಿದ ಮಿಷನರಿಗಳ ಮೂಲಕ ಮಂಗಳೂರಿನಲ್ಲಿ ನಿಯಮಿತವಾದ ಮತಪ್ರಚಾರ ಕಾರ್ಯ ಆರಂಭಗೊಂಡಿತು. ಕ್ರಿ.ಶ.1533ರ ಜನವರಿ 31ರಂದು 7ನೆಯ ಪ್ಲೇಪ್ ಕ್ಲೆಮೆಂಟ್ ಅವರ ಸನ್ನದಿನ ಮೇರೆಗೆ ಗೋವಾ ಡಯಾಸಿಸ್ ನಿರ್ಮಾಣವಾಯಿತು. ಪ್ರಾನ್ಸಿಸ್ಕನ ಸನ್ಯಾಸಿ ಫಾದರ್ ಜಾನ್ ಅಲ್ಬುಕರ್ಕ್ ಅವರು ಕ್ರಿ.ಶ.1537ರಲ್ಲಿ ಗೋವೆಯ ಮೊತ್ತಮೊದಲ ಬಿಷಪರಾಗಿ ನಿಯುಕ್ತಿಗೊಂಡರು. ಕ್ರಿ.ಶ.1534ರಲ್ಲಿ ಪೋರ್ಚುಗೀಸರ ಪ್ರಾಬಲ್ಯವಿದ್ದ ಮಂಗಳೂರನ್ನು ಗೋವಾದ ಬಿಷಪರ ಧಾರ್ಮಿಕ ಪರಿವ್ಯಾಪ್ತಿಗೆ ಒಳಪಡಿಸಲಾಯಿತು. ಮಿಷನರಿಗಳ ಆಗಮನವಾಯಿತು. ದಕ್ಷಿಣ ಕನ್ನಡದಲ್ಲಿ ಮತ ಸೇರ್ಪಡೆಯ ಸಂಖ್ಯೆ ವೃದ್ಧಿಸಿತು. 16ನೆಯ ಶತಮಾನದ ಮಧ್ಯಭಾಗದಲ್ಲಿ ಉಳ್ಳಾಲದ ರಾಣಿ ಅಬ್ಬಕ್ಕನಿಂದ ಪೋರ್ಚುಗೀಸರು ಪ್ರತಿರೋಧ ಎದುರಿಸಬೇಕಾಯಿತು.[66]

ಈ ಧಾರ್ಮಿಕ ವಿಚಾರಣೆಯು ಹಿಂದುತ್ವದ ಯಾವುದೇ ಧಾರ್ಮಿಕ ನಂಬಿಕೆಯನ್ನು ನಿಷೇದಿಸಿತ್ತು. ಕ್ರೈಸ್ತ ಮತ ಪರಿವರ್ತಕರು ಯಾವುದೇ ಹಿಂದೂ ಹೆಸರುಗಳು ಹೊಂದಿರುವುದು. ಹಿಂದೂಗಳ ಯಾವುದೇ ವಿವಾಹಾದಿ ಸಮಾರಂಭಗಳಿಗೆ ಹಾಜರಾಗುವುದು, ಹಿಂದೂ ವೈದ್ಯರು, ಸೂಲಗಿತ್ತಿಯರನ್ನು ನೇಮಿಸಿಕೊಳ್ಳುವುದು, ಧೋತಿ ಧರಿಸುವುದು, ರವಿಕೆ ತೊಡುವುದು, ತುಳಸಿಗಿಡವನ್ನು ನೆಡುವುದು ಮುಂತಾದುವನ್ನು ನಿಷೇದಿಸಲಾಗಿತ್ತು. ತಮ್ಮ ಪೂರ್ವಾಶ್ರಮದ

ಹಿಂದೂ ನಂಬಿಕೆ, ಸಂಪ್ರದಾಯಗಳನ್ನು ಸಂಪೂರ್ಣವಾಗಿ ಬಿಡುವುದು ಕ್ರಿಶ್ಚಿಯ್ನನರನ್ನು ತತ್ವಭ್ರಷ್ಟರು ಎಂದು ಘೋಷಿಸಿ ಅಧಿಕಾರವನ್ನು ಮರಣದಂಡನೆಗೂ ಈಡಾಗಿಸುವ ಪರಿಸ್ಥಿತಿಯಿತ್ತು.

ಗೋವಾ ಮೂಲದ ಹಲವಾರು ಕ್ರೈಸ್ತರು ತಮ್ಮ ಹಿಂದಿನ ಕೆಲವು ಭಾರತೀಯ ಸಂಪ್ರದಾಯಗಳನ್ನು ಬಿಡಲೊಲ್ಲದೆ ಪ್ರತಿಭಟಿಸಿದರು. ತತ್ಪರಿಣಾಮವಾಗಿ ಅವರು ಜೀವಭಯದಿಂದಲೇ ಬದುಕಬೇಕಾದ ದುರ್ಭರ ಸನ್ನಿವೇಶವಿತ್ತು. ಧಾರ್ಮಿಕ ವಿಚಾರಣೆಯ ನಿರ್ಬಂಧಗಳನ್ನು ವಿರೋಧಿಸುವವರು ಗೋವೆಯನ್ನು ತ್ಯಜಿಸಿ ಪೋರ್ಚುಗೀಸರ ವಲಯದಿಂದ ದೂರ ಹೋಗಬೇಕಾದ ಪರಿಸ್ಥಿತಿ ಒದಗಿತು.

ಈ ಸನ್ನಿವೇಶದಲ್ಲಿ ಮಂಗಳೂರು ಕ್ಯಾಥೋಲಿಕರ ಸಂಪ್ರದಾಯ ನಂಬಿಕೆಗಳ ಕತೆ ಕುತೂಹಲಕಾರಿಯಾಗಿತ್ತು. ಗೋವೆ ಹಾಗೂ ಪ್ರದಾನವಾಗಿ ಉತ್ತರ ಜಿಲ್ಲೆಗಳಿಂದ ವಲಸೆ ಬಂದಿದ್ದ ಈ ಸಮೂಹಗಳು ತಮ್ಮ ಧಾರ್ಮಿಕ ಸಮಾರಂಭಗಳಲ್ಲಿ ವೀಳ್ಯದೆಲೆ, ಅಡಿಕೆ, ಭತ್ತ, ಹೂ ಮುಂತಾದವುಗಳನ್ನು ಉಪಯೋಗಿಸಲಾಗುತ್ತಿದ್ದು, ಅವೆಲ್ಲವೂ ಧಾರ್ಮಿಕ ವಿಚಾರಣೆಯಲ್ಲಿ ನಿಷಿದ್ಧವಾದವುಗಳೇ ಆಗಿದ್ದವು.[67]

ಸ್ವತಂತ್ರ ಜೀವನ ಸಾಧಿಸಲು ಗೋವೆಯನ್ನು ತೊರೆದು ಬಂದ ಕ್ರಿಶ್ಚಿಯನ್ನರು ಪರಿಣಿತ ಕೃಷಿಕರಾಗಿದ್ದರು. ತಮ್ಮ ನೀರಾವರಿ ಜಮೀನುಗಳನ್ನು ಬಿಟ್ಟು ಓಡಿ ಬಂದವರಾಗಿದ್ದರು. ಹಾಗೆ ಅವರು ಕೆನರಾಕ್ಕೆ ವಲಸೆ ಬರುವ ಸಮಯದಲ್ಲಿ ಇಕ್ಕೇರಿ ಅರಸ ಶಿವಪ್ಪನಾಯಕನ ಆಳ್ವಿಕೆಯಿತ್ತು. ಶಿವಪ್ಪನಾಯಕನಿಗೆ ತನ್ನ ಸಾಮ್ರಾಜ್ಯದಲ್ಲಿ ಕೃಷಿ ಅಭಿವೃದ್ಧಿ ಕುರಿತು ತೀವ್ರ ಆಸಕ್ತಿಯಿತ್ತು. ಹಾಗಾಗಿ ಕೃಷಿ ಹಿನ್ನೆಲೆವುಳ್ಳ ಈ ಕ್ಯಾಥೋಲಿಕರನ್ನು ಅವನು ಉತ್ಸಾಹದಿಂದಲೇ ಕೆನರಾದಲ್ಲಿದ್ದ ಸಮೃದ್ಧ ಕೃಷಿ ಹೊಲಗಳತ್ತ ಸ್ವಾಗತಿಸಿದ. ಈ ವಿಚಾರವನ್ನು ಕೆನರಾಗೆ ಕ್ರಿ.ಶ.1801ರಲ್ಲಿ ಭೇಟಿಯಿತ್ತ ಸ್ಕಾಟಿಶ್ ವೈದ್ಯ ಪ್ರಾನ್ಸಿಸ್ ಬುಕಾನನ್ ತನ್ನ ಪ್ರವಾಸ ಕಥನ 'A Journey from madras through the countries of Mysore, Kanara and Malabar' ಎಂಬ ಗ್ರಂಥದಲ್ಲಿ ದಾಖಲಿಸಿರುವನು. ಅವನು ಬರೆದಂತೆ 'ಇಕ್ಕೇರಿ ಸಂಸ್ಥಾನವು ಕ್ರೈಸ್ತರಿಗೆ ಅಪಾರ ಪ್ರೋತ್ಸಾಹವನ್ನು ನೀಡಿ ಬೆಂಬಲಿಸಿತ್ತು. ಸುಮಾರು 80,000 ಮಂದಿಗೆ ತುಳುವದಲ್ಲಿ ವಸಾಹತು ಇತ್ತನು. ಈ ಸಂಖ್ಯೆಯು ತಪ್ಪಾಗಿ ದಾಖಲಾಗಿದ್ದು, ಅದು 8,000 ಆಗಬೇಕಿತ್ತೆಂದೂ ನಂತರ ಈ ಸಂಖ್ಯೆಯಲ್ಲಿ ಗೋವೆಯಿಂದ ವಲಸೆ ಬಂದ ಎರಡನೆಯ ತಂಡವು ಸೇರಿತ್ತೆಂದು ಮುಂದೆ ನಿರ್ಧರಿಸಲಾಯಿತು. ಬಿದನೂರಿನ ಸೈನ್ಯದಲ್ಲಿಯೂ ಕ್ರೈಸ್ತರನ್ನು ಭರ್ತಿ ಮಾಡಿಕೊಳ್ಳಲಾಯಿತು. ಕ್ರಿಶ್ಚಿಯನ್ನರು ಗೋವಾ

ಮೂಲದ ಹಿಂದೂಗಳೊಂದಿಗೆ ಸಂಪರ್ಕದಲ್ಲಿದ್ದರು. ತಮ್ಮ ವಿವಾಹಾದಿ ಶುಭಕಾರ್ಯಗಳಿಗೆ ಅವರನ್ನು ಆಮಂತ್ರಿಸುತ್ತಿದ್ದರು.

ಪೋರ್ಚುಗೀಸರು ಮತ್ತು ಬಿದನೂರು ಅರಸರು ಮಾಡಿಕೊಂಡ ತಾತ್ಕಾಲಿಕ ಒಪ್ಪಂದದ ಮೇರೆಗೆ ಕ್ರೈಸ್ತರು ದಕ್ಷಿಣ ಕನ್ನಡದಲ್ಲಿ ಇಗರ್ಜಿಗಳನ್ನು ನಿರ್ಮಿಸಿಕೊಂಡು ಮತಾಚರಣೆ ನಡೆಸಲು ನೆರವು ಒದಗಿತು. ಬ್ರಿಟಿಷರು ಮತ್ತು ಡಚ್ಚರ ಆಗಮನವು ಪೋರ್ಚುಗೀಸರ ಚಟುವಟಿಕೆಯ ಮೇಲೆ ತಡೆಯೊಡ್ಡಿದುದಲ್ಲದೆ ಮಂಗಳೂರಿಗೆ ಅವಶ್ಯ ಸಂಖ್ಯೆಯ ಮತ ಪ್ರಚಾರಕರನ್ನು ಕರೆಸಿಕೊಳ್ಳುವುದು ಪೋರ್ಚುಗೀಸರಿಗೆ ಅಸಾಧ್ಯವಾಯಿತು. ಕ್ರಿ.ಶ.1568ರಲ್ಲಿ ಪೋರ್ಚುಗೀಸರು ಮಂಗಳೂರಿನ ಚೋಳಾರದಲ್ಲಿ **"**our lady of Rosarary**"** ಚರ್ಚನ್ನು ನಿರ್ಮಾಣ ಮಾಡಿದರು. ಅದೇ ಕಾಲದಲ್ಲಿ ಅವರು ಉಳ್ಳಾಲ ಮತ್ತು ಫರಂಗಿ ಪೇಟೆಯಲ್ಲಿಯೂ ಇಗರ್ಜಿಗಳನ್ನು ನಿರ್ಮಿಸಿದರು. ಕ್ರಿ.ಶ.1623ರಲ್ಲಿ ಮಂಗಳೂರನ್ನು ಸಂದರ್ಶಿಸಿದ ಪಿಯಾಸ್ರ್ರೋ ದಲ್ಲಾವೆಲ್ಲಿಯೂ ಈ ಮೂರು ಚರ್ಚುಗಳನ್ನು ಉಲ್ಲೇಖಿಸಿದ್ದಾನೆ.[68]

ಕ್ರಿ.ಶ.1571ರಲ್ಲಿ ಬಿಜಾಪುರದ ಸುಲ್ತಾನನು ಗೋವೆಯ ಮೇಲೆ ಮುತ್ತಿಗೆ ಹಾಕಿ, ಈ ಭಾಗದಲ್ಲಿ ಪೋರ್ಚುಗೀಸರ ಪ್ರಭಾವವನ್ನು ದಮನ ಮಾಡಿದನು. ತಲೆದಂಡಕ್ಕೆ ಹೆದರಿ ಬಹು ಸಂಖ್ಯೆಯ ಕ್ರೈಸ್ತರು ಗೋವೆಯಿಂದ ದಕ್ಷಿಣ ಕನ್ನಡ ಜಿಲ್ಲೆಗೆ ವಲಸೆ ಬಂದರು. ಈ ವಲಸೆಯು **'**ಎರಡನೆಯ ವಲಸೆ**'** ಎಂಬುದಾಗಿ ಉಲ್ಲೇಖಗೊಂಡಿದೆ. ಪೋಪ್ ಕ್ಲೆಮೆಂಡರು ಗೋವೆಯ ಕ್ಯಾಥೋಲಿಕ್ ಧರ್ಮಗುರು ಬಿಷಪ್ ಥಾಮಸ್ ಡಿಕಾಸ್ರ್ರೋ ಇವರನ್ನು ಕೆನರಾ ವಿಕಾರ್ ಅಪೋಸಲ್ ಎಂದು ನೇಮಕ ಮಾಡಿದರು. ಈ ಬಿಷಪರು ಕ್ರಿ.ಶ.1680ರಲ್ಲಿ ಮಂಗಳೂರಿನ ಮಿಲಾಗ್ರಿಸ್ ಚರ್ಚನ್ನು ಸ್ಥಾಪಿಸಿದರು. ಕ್ರಿ.ಶ.16ನೇ ಶತಮಾನದ ಮಧ್ಯಭಾಗದಲ್ಲಿ ಗೋವೆಯ ಮೇಲೆ ಮರಾಠಾ ಚಕ್ರಾಧಿಪತ್ಯದ ದಾಳಿಯೂ ಕ್ರೈಸ್ತ ವಲಸೆಗೆ ಇನ್ನೊಂದು ಕಾರಣವಾಯಿತು. ಮುಂದೆ ಕ್ರಿ.ಶ.1680ರಲ್ಲಿ ಶಿವಾಜಿಯ ಮರಣ ನಂತರ ಮಗನಾದ ಸಂಭಾಜಿಯು ಮರಾಠ ಗದ್ದುಗೆಯನ್ನೇರಿದ ಅವನ ಆಡಳಿತ ಕಾಲದಲ್ಲಿ ಗೋವೆಯ ಉತ್ತರ ಭಾಗದಲ್ಲಿ ನಡೆದ ಹತ್ಯಾಕಾಂಡದಿಂದ ಬೆದರಿ ಅಲ್ಲಿನ ಹೆಚ್ಚಿನ ಸಂಖ್ಯೆಯ ಕ್ರೈಸ್ತರು ದಕ್ಷಿಣ ಕನ್ನಡ ಜಿಲ್ಲೆಗೆ ವಲಸೆ ಬಂದರು. ಇದು ವಲಸೆಯ ತೃತೀಯ ಹಂತ ಎಂದು ಉಲ್ಲೇಖಗೊಂಡಿದೆ. ಗೋವೆಯ ಸಾಲ್ಸೀಟ್ ಜಿಲ್ಲೆಯಿಂದ ವರ್ಷವೊಂದಕ್ಕೆ ಸುಮಾರು ಎರಡು ಸಾವಿರದಷ್ಟು ಸಂಖ್ಯೆಯ ಕ್ರೈಸ್ತರು ದಕ್ಷಿಣ ಕನ್ನಡ ಜಿಲ್ಲೆಗೆ ವಲಸೆ ಬಂದರು.

**ಕೃಷ್ಣದೇವರಾಯನ ಕಾಲದಲ್ಲಿ ಕ್ರೈಸ್ತಧರ್ಮದ ಬೆಳವಣಿಗೆ:**

ಕ್ರಿಸ್ತಶಕ ಮೊದಲನೇ ಶತಮಾನದಲ್ಲಿಯೇ ಏಸುವಿನ ಶಿಷ್ಯರು ಭಾರತಕ್ಕೆ ಬಂದರೆಂದು ಹೇಳಲಾಗಿದೆ. ಎರಡನೆಯ ಶತಮಾನದಲ್ಲಿ ಅಲೆಕ್ಸಾಂಡ್ರಿಯಾದಿಂದ ಕ್ರೈಸ್ತ ಪಾದ್ರಿಗಳು ಬ್ರಾಹ್ಮಣರೊಂದಿಗೆ ವಾದ ಮಾಡಲು ಭಾರತಕ್ಕೆ ಬಂದರಂತೆ. ಆರನೆಯ ಶತಮಾನದಲ್ಲಿ ಕಲ್ಯಾಣವೆಂದರೆ ಈಗಿನ ಆನೆಗೊಂದಿಯಲ್ಲಿ ಇಗರ್ಜಿಯೇ ಇತ್ತೆಂದು ರೆವರೆಂಡ್ ಕಿಟ್ಟಲ್ ಹೇಳುತ್ತಾರೆ. ಈ ರೀತಿಯಲ್ಲಿ ಹದಿನಾಲ್ಕನೇ ಶತಮಾನದವರೆಗೆ ಕ್ರೈಸ್ತ ಮಿಷನರಿಗಳು ಪಾಲಸ್ತೈನ್, ಪರ್ಷಿಯಾ, ಬ್ಯಾಬಿಲೋನ್, ಸಿರಿಯ ಅರಮೇನಿಯಾ, ಅಲೆಕ್ಸಾಂಡ್ರಿಯದಿಂದ ತಂಡ ತಂಡವಾಗಿ ಭಾರತಕ್ಕೆ ಬಂದರು. ಕರ್ನಾಟಕಕ್ಕೆ ಯೂರೋಪಿಯನ್ ಮಿಷನರಿಗಳು ಹದಿಮೂರನೇ ಶತಮಾನದಲ್ಲಿ ಆಗಮಿಸಿದರು. ಅವರು ಕೆನರಾ, ಮೈಸೂರು ಮತ್ತು ತಿರುವನಂತಪುರದ ಕಡೆ ಮತಾಂತರದ ಕೆಲಸ ನಡೆಸಿದರು. ವಾಸ್ಕೋಡಿಗಾಮ ಕಲ್ಲಿಕೋಟೆ ತಲುಪಿದ ಮೇಲೆ ಮಿಷನರಿಗಳು ಬಲಗೊಂಡರು. ಕ್ರಿ.ಶ.1506ರಲ್ಲಿ ಅಲ್ಬುರ್ಕ್‌ನು ಗವರ್ನರ್ ಆಗಿ ನಿಯುಕ್ತಿಗೊಂಡನು.[69]

ವಿಜಯನಗರ ಸಾಮ್ರಾಜ್ಯದ ಕೃಷ್ಣದೇವರಾಯನ ಆಡಳಿತ ಅವಧಿಯಲ್ಲಿ ಪೋರ್ಚುಗೀಸರು ಮತ್ತು ಸಾಮ್ರಾಜ್ಯದೊಂದಿಗೆ ಉತ್ತಮವಾದ ಸಂಬಂಧವಿತ್ತು. ಗೋವಾವನ್ನು ವಶಪಡಿಸಿಕೊಂಡ ಪೋರ್ಚುಗೀಸರು ಹೊನ್ನಾವರದಲ್ಲಿಯೂ ತಮ್ಮ ಪ್ರಾಬಲ್ಯವನ್ನು ವಿಸ್ತರಿಸಿದರು. ಕ್ರಿಸ್ಮವೊ.ಡಿ.ವಿಗರಿಡೋ ಪೋರ್ಚುಗೀಸರ ಕ್ರೈಸ್ತರ ಪ್ರತಿನಿಧಿಯಾಗಿ ಕೃಷ್ಣದೇವರಾಯನ ಆಸ್ಥಾನದಲ್ಲಿದ್ದನು. ಇವನ ಮುಖ್ಯ ಕರ್ತವ್ಯ ವಿಜಯನಗರ ಸಾಮ್ರಾಜ್ಯದಲ್ಲಿದ್ದ ಕ್ರಿಶ್ಚಿಯನ್ನರ ಸಾಮಾಜಿಕ, ಧಾರ್ಮಿಕ, ರಾಜಕೀಯ ಮತ್ತು ಆರ್ಥಿಕ ಹಿತಾಸಕ್ತಿಗಳನ್ನು ಬೆಳೆಸುವುದು ಮತ್ತು ರಕ್ಷಿಸುವುದಾಗಿತ್ತು. ವಿಜಯನಗರ ಸಾಮ್ರಾಜ್ಯವು ಧಾರ್ಮಿಕ ಸಹಿಷ್ಣುತೆಯನ್ನು ಕಾಪಾಡುತ್ತಿತ್ತು. ಪೋರ್ಚುಗೀಸರ ಚರ್ಚ್‌ಗಳು, ವ್ಯಾಪಾರಿ ಕೇಂದ್ರಗಳು ಮತ್ತು ಬಂದರುಗಳು ರಕ್ಷಿಸಲ್ಪಟ್ಟವು. ಕ್ರೈಸ್ತರ ಅವಶ್ಯಕತೆ ಉಂಟಾದಾಗಲೆಲ್ಲಾ ಅವರನ್ನು ಸೇನೆಗೆ ಆಡಳಿತಕ್ಕೆ ನೇಮಿಸಿಕೊಳ್ಳಲಾಗುತ್ತಿತ್ತು.

ಪೋರ್ಚುಗಲ್ ಕ್ರೈಸ್ತರು ವಿಜಯನಗರ ಸಾಮ್ರಾಜ್ಯಕ್ಕೆ ಉತ್ತಮವಾದ ಸೇವೆಯನ್ನು ಸಲ್ಲಿಸಿದರು. ಇವರು ಸಾಮ್ರಾಜ್ಯಕ್ಕೆ ಕುದುರೆಗಳನ್ನು ಸರಬರಾಜು ಮಾಡುತ್ತಿದ್ದರು. ವಿಜಯನಗರಕ್ಕೆ ತಂತ್ರಜ್ಞಾನವನ್ನು ಪರಿಚಯಿಸಿದರು. ನೀರಾವರಿ ಯೋಜನೆಗಳಿಗೆ ಕೊಡುಗೆ ನೀಡಿದರು. ಇವರು ವಿಜಯನಗರದ ಸೈನ್ಯದಲ್ಲಿ ಸೈನಿಕರಾಗಿ ಕಾರ್ಯನಿರ್ವಹಿಸುತ್ತಿದ್ದರು. ಮಿಲಿಟರಿ ಕ್ಷೇತ್ರದಲ್ಲಿ ಬದಲಾವಣೆ ತಂದರು. ಗನ್‌ಪೌಡರ್ ಬಳಕೆ, ಕುದುರೆಗಳ ಬಳಕೆ, ಕೃಷ್ಣದೇವರಾಯನು ಪೋರ್ಚುಗೀಸ್ ಕ್ರೈಸ್ತರೊಂದಿಗೆ ಒಪ್ಪಂದ ಮಾಡಿಕೊಳ್ಳುವಾಗ ಭಾರತೀಯ ಕ್ರೈಸ್ತ ವೈದ್ಯರನ್ನು

ವಿಜಯನಗರಕ್ಕೆ ಕಳುಹಿಸುವಂತೆ ಬೇಡಿಕೆ ಇಟ್ಟಿದ್ದನು. ಆಯುರ್ವೇದವು ಅಂದಿನ ವಿಜಯನಗರ ಸಾಮ್ರಾಜ್ಯದ ಪ್ರಮುಖ ವೈದ್ಯವಿಜ್ಞಾನವಾಗಿತ್ತು. ಭಾರತೀಯ ಕ್ರೈಸ್ತ ವೈದ್ಯ ವಿಜ್ಞಾನಿಗಳು ಬಹುಶಃ ಪಾಶ್ಚಿಮಾತ್ಯ ವೈದ್ಯಕೀಯ ಪರಿಣಿತರಾಗಿದ್ದಿರಬಹುದು. ಕ್ರೈಸ್ತರು ಭಾರತೀಯ ಸಂಸ್ಕೃತಿಗಳಲ್ಲಿ ವಿಭಿನ್ನತೆಗಳನ್ನು ಪರಿಚಯಿಸಿದರು. ರೋಮನ್ ಕ್ಯಾಥೋಲಿಕ್ ಸಂಸ್ಕೃತಿ ಅತಿ ಹೆಚ್ಚಾಗಿ ಬೆಳವಣಿಗೆ ಪಡೆಯಿತು. ಪಾಶ್ಚಿಮಾತ್ಯ ಬಟ್ಟೆ, ವರ್ತನೆ, ಸಂಪ್ರದಾಯಗಳು ಮತ್ತು ಭಾಷೆಗಳಲ್ಲಿ ಬದಲಾವಣೆ ಕಂಡು ಬಂದಿತು. [70]

ಕ್ರಿ.ಶ.1510–1511ರ ಅವಧಿಯಲ್ಲಿ ಲೂಯಿಸ್ ಎಂಬ ಪಾದ್ರಿಯು ಹಲವು ಬಾರಿ ವಿಜಯನಗರಕ್ಕೆ ಬಂದಿದ್ದನು. ಕೃಷ್ಣದೇವರಾಯನಿಗೆ ಇವನೇ ಕ್ರೈಸ್ತಧರ್ಮದ ಪರಿಚಯ ಮಾಡಿದನು. ರಾಯರ ಸೈನ್ಯದಲ್ಲಿ ಸಾಕಷ್ಟು ಕ್ರಿಶ್ಚಿಯನ್ ಯೋಧರು ಇದ್ದರು. ಕೃಷ್ಣದೇವರಾಯನಿಗೆ ಅಲ್ಬುರ್ಕ್‌ನು ಸ್ನೇಹ ಮತ್ತು ಅವನು ತರಿಸುತ್ತಿದ್ದ ಕುದುರೆಗಳು ಬೇಕಾಗಿದ್ದವು. ಯೂರೋಪಿನಿಂದ ಬರುತ್ತಿದ್ದ ಎಲ್ಲಾ ಕುದುರೆಗಳನ್ನು ಖರೀದಿಸುವ ಅವಶ್ಯಕತೆಯೂ ಇತ್ತು. ಹೀಗಾಗಿ ರಾಯರು ಲೂಯಿಸ್ ಪಾದ್ರಿಗೆ ಕ್ರೈಸ್ತಧರ್ಮ ಪ್ರಚಾರ ಮಾಡಲು ಇಗರ್ಜಿಗಳನ್ನು ಕಟ್ಟಲೂ ಅನುಮತಿ ನೀಡಿದರಂತೆ ಆದರೆ ಅವನು ಮತಾಂತರ ಮಾಡಲು ಯತ್ನಿಸಲಿಲ್ಲ. ಪ್ರಾನ್ಸಿಸ್ಕನ ಮಿಷನರಿಗಳ ಚರಿತ್ರೆಯಲ್ಲಿ ಹೇಳಿದಂತೆ ಲೂಯಿಸ್ ಪಾದ್ರಿಯು ವಿಜಯನಗರದಲ್ಲಿ ಕ್ರೈಸ್ತಧರ್ಮ ಪ್ರವಚನ ನಡೆಸುತ್ತಿರುವಾಗ ಬ್ರಾಹ್ಮಣರು ಅವನ ಸಭೆಗೆ ನುಗ್ಗಿ ಅವನನ್ನು ಹೊಡೆದರಂತೆ. ಆಗ ರಾಯರು ಪಾದ್ರಿಯನ್ನು ಕರೆಸಿ ವಿಚಾರಿಸಿ, ಸಾಂತ್ವಾನ ಮಾಡಿ ಪೋರ್ಚುಗಲ್‌ಗೆ ವಾಪಸ್ಸಾಗಲು ಧನ ಸಹಾಯ ಮಾಡಿದರಂತೆ, ಇನ್ನೊಂದು ದಾಖಲೆಯ ಪ್ರಕರ ಈ ಪಾದ್ರಿಯನ್ನು ವಿಜಯನಗರದಲ್ಲಿ ಕೊಲೆ ಮಾಡಿದರೆಂದು ಅದರ ಹಿಂದೆ ಆದಿಲ್‌ಷಾಹನ ಕೈವಾಡವಿತ್ತೆಂದು ಹೇಳಲಾಗಿದೆ. ಆದರೆ ರಾಜಗುರುಗಳಾದ ತಾತಾಚಾರ್ಯರ ವಿರೋಧದಿಂದ ಮಿಷನರಿಗಳು ತತ್ಕಾಲಕ್ಕೆ ಗೋವೆಗೆ ಮರಳಿದರಂತೆ.

ಕ್ರಿ.ಶ.1542ರಲ್ಲಿ ಆಂಟೋನಿಯೆ ಪತ್ರಾ ವೋ ಎಂಬ ಪ್ರಾನ್ಸಿಸ್ಕನ ಪಾದ್ರಿಯು ವಿಜಯನಗರದಲ್ಲಿ 1300 ಜನ ಹಿಂದೂಗಳನ್ನು ಕ್ರೈಸ್ತರನ್ನಾಗಿ ಮತಾಂತರಿಸಿದ್ದಲ್ಲದೆ ರಾಜಧಾನಿಯಲ್ಲಿಯೇ ಸಂತ ಆಂಟೋನಿಯರ ಇಗರ್ಜಿಯನ್ನು ಕಟ್ಟಿಸಿದನೆಂದು ಪಾದರೆ ಹೆರಾಸ್ ಬರೆದಿದ್ದಾರೆ.[71] ಆದರೆ ಕ್ರಿ.ಶ 1599ರಲ್ಲಿ ಚಂದ್ರಗಿರಿಯಲ್ಲಿ ಪರಿಪಾಲನೆ ಮಾಡುತ್ತಿದ್ದ. ಅರವೀಡು ವಂಶದ ವೆಂಕಟಪತಿ ರಾಯನ ಆಹ್ವಾನದ ಮೇರೆಗೆ ಜಿಸುಟ್ ಮಿಷನ್ ಆರಂಭವಾಯಿತು. ವೆಂಕಟಪತಿರಾಯನ ಮಾವನು ಜಿಸುಟರಿಗೆ ಇಗರ್ಜಿಯನ್ನು ಕಟ್ಟಲು ಭೂಮಿಯನ್ನು

ನೀಡಿದನಲ್ಲದೇ ಅವರ ಖರ್ಚಿಗೆಂದು ರಾಜ್ಯಕೋಶದಿಂದ ವರ್ಷಕ್ಕೆ ಸಾವಿರ ಪಗೋಡಾ ಸಿಗುವಂತೆ ವ್ಯವಸ್ಥೆ ಮಾಡಿದನು. ಈ ಮಿಷನರಿಗಳ ಮೂಲಕ ವೆಂಕಟಪತಿರಾಯ ಗೋವೆಯ ಪೋರ್ಚುಗಲ್ ರಾಜ್ಯಪಾಲನ ಮತ್ತು ಸ್ಪೇನ್ ದೇಶದ ಅರಸನಾಗಿದ್ದ ಪಿಲಿಫೈನ್ ಗೆಳೆತನವನ್ನು ಸಂಪಾದಿಸಿದನು.

ಕ್ರಿ.ಶ. 1600ರಲ್ಲಿ ಶ್ರೀರಂಗಪಟ್ಟಣದಲ್ಲಿ ನೆಲೆಸಿದ್ದ ವಿಜಯನಗರದ ರಾಜಪ್ರತಿನಿಧಿ ತಿರುಮಲರಾಯನು ಜೆಸುಟ್ ಗುರುಗಳಿಗೆ ಪತ್ರಬರೆದು ಆಹ್ವಾನಿಸುತ್ತಾನೆ. ಶ್ರೀರಂಗಪಟ್ಟಣದಲ್ಲಿ ಇಗರ್ಜಿ ಕಟ್ಟಲು ಸ್ಥಳ ನೀಡುವ ಮತ್ತು ವಾರ್ಷಿಕ ಐದುನೂರು ಪಗೋಡ ಜೀವನಾಂಶ ನೀಡುವ ಭರವಸೆ ನೀಡುತ್ತಾನೆ. ಆದರೆ ಅವರು ಬರಲಾಗಲಿಲ್ಲ. ಕ್ರಿ.ಶ 1714ರಲ್ಲಿ ಪಾದರ್ ಆಲ್ ಪ್ರಾನ್ಸೋ ಡಿಕೋಸ್ಟಾ ಪತ್ರವು ಶ್ರೀರಂಗರಾಯನು ತನ್ನ ಪತ್ನಿ ಸಮೇತ ಕ್ರೈಸ್ತ ಮತಾವಲಂಬಿಯಾದನೆಂದು ಹೇಳುತ್ತದೆ. ಈ ಎಲ್ಲಾ ಆಧಾರಗಳ ಮೇಲೆ ಮಿಷನರಿ ದಾಖಲೆಗಳು ಹೀಗೆ ಸಾರುತ್ತವೆ. ವಿಜಯನಗರ ಸಾಮ್ರಾಜ್ಯದ ಅರಸ ನಿಜವಾಗಿಯೂ ಕ್ರಿಶ್ಚಿಯನ್‌ರ ಸ್ನೇಹಿತನಾಗಿದ್ದನು. ಕ್ರಿ.ಶ 1443ರಲ್ಲಿ ಕ್ರಿಶ್ಚಿಯನ್ನರ ಸಮುದಾಯದ ಒಬ್ಬ ಮಂತ್ರಿಯಾಗಿದ್ದನು.[72]

ವಿಜಯನಗರ ಕಾಲದಲ್ಲಿ ಹಿಂದೂ ಸಮಾಜವು ಅತ್ಯಂತ ಸಂಘಟಿತವಾಗಿತ್ತು. ರಾಜ ಮತ್ತು ರಾಷ್ಟ್ರಧರ್ಮವಾಗಿತ್ತು. ಆದರೆ ಕ್ರೈಸ್ತಮಿಷನರಿಗಳು ದೂರದ ಯೂರೋಪಿನಿಂದ ಬಂದು ನಾನಾ ರೀತಿಯ ಬುದ್ದಿವಂತಿಕೆಯಿಂದ ಸ್ಥಳೀಯ ರಾಜಕಾರಣದ ಉಪಯೋಗ ಪಡೆದು ಹಿಂದೂ-ಮುಸ್ಲಿಮರ ದ್ವೇಷದ ಅವಕಾಶದ ಲಾಭ ಪಡೆದು ಕೆಲಸ ಮಾಡಿದರು. ರಾಜಾಶ್ರಯ ಪಡೆಯಲು ಅಧಿಕಾರಿಗಳ ಬೆಂಬಲ ಗಳಿಸಲು ಪ್ರಯತ್ನಿಸಿದರು. ಕೆಳಜಾತಿಯ ಮುಗ್ಧರನ್ನು ಮತಾಂತರ ಮಾಡಿದರು. ದೇಶಭಾಷೆಗಳನ್ನು ಕಲಿತು ಕಾವ್ಯ ರಚಿಸಿ ಸಾಹಿತ್ಯದ ನಾನಾ ಪ್ರಕಾರಗಳಲ್ಲಿ ಕೆಲಸ ಮಾಡಿ ಗೌರವಾನ್ವಿತರೆನಿಸಿದರು. ಆಗ ಮೇಲು ಜಾತಿಯವರನ್ನು ವಿಚಾರವಾದಿಗಳನ್ನು ಮತಾಂತರಗೊಳಿಸಿದರು. ತಮ್ಮ ಬುದ್ಧಿವಂತಿಕೆಯಿಂದ ಆ ಕಾಲದ ಸದ್ಭಾವನೆಗಳನ್ನು ಸಂಪಾದಿಸಿ ದಕ್ಷಿಣ ಭಾರತದಲ್ಲಿ ಕ್ರಮವಾಗಿ ತಮ್ಮ ಮಿಷನರಿ ಕೆಲಸವನ್ನು ವಿಸ್ತರಿಸಿ ಗಟ್ಟಿಯಾದದ್ದು ಇತಿಹಾಸ,

### 3.9 ಪೋರ್ಚುಗೀಸರ ಕಾಲದ ಪ್ರಮುಖ ಬಂದರುಗಳು:

ಎರಡನೇ ದೇವರಾಯನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯದಲ್ಲಿ ಸುಮಾರು ಮುನ್ನೂರು ಬಂದರುಗಳಿದ್ದು ಈ ಎಲ್ಲಾ ಬಂದರುಗಳು ಕ್ಯಾಲಿಕಟ್ ಬಂದರಿಗೆ ಸಮವಾಗಿದ್ದ

ವೆಂದು ಹೇಳಬಹುದು. 16ನೇ ಶತಮಾನದಲ್ಲಿ ಭಾರತಕ್ಕೆ ಪೋರ್ಚುಗೀಸರ ಆಗಮನದ ನಂತರ ವಿಜಯನಗರದ ಅರಸರು ಕೆಲವೊಂದು ಪ್ರಮುಖ ಬಂದರುಗಳನ್ನು ಕಳೆದುಕೊಂಡರು. ಗೋವಾ, ಚಾಹುಲ್ ಮತ್ತು ದಾಬೂಲ್ ವಿಜಯನಗರ ಅರಸರಿಂದ ಪೋರ್ಚುಗೀಸರ ಕೈಗೆ ವರ್ಗಾವಣೆ ಗೊಂಡಿತು. ತುಳುನಾಡಿನ ಅರಸರು ಈಶಾನ್ಯ ಭಾಗ ಮತ್ತು ದಕ್ಷಿಣದ ಭಾಗಗಳಲ್ಲಿ ದಾಳಿ ಮಾಡಿದರು. ಕೃಷ್ಣದೇವರಾಯನು ಕೊಂಡವೀಡು ಮತ್ತು ಉದಯಗಿರಿಯನ್ನು ವಶಪಡಿಸಿ ಕೊಂಡನು. ಕೊಲ್ಲಂ ಬಂದರುಗಳ ರಾಜರನ್ನು ಸೋಲಿಸಿದನು. ಕೆಲವೊಂದು ತುಳುರಾಜರು ಮತ್ತು ಕೃಷ್ಣದೇವರಾಯ ಮಲಬಾರಿನ ಬಂದರುಗಳನ್ನು ಅಭಿವೃದ್ಧಿ ಪಡಿಸುವಲ್ಲಿ ಪ್ರಯತ್ನಿಸಿದರು. ವಿದೇಶಿ ವಸ್ತುಗಳನ್ನು ಭಾರತಕ್ಕೆ ಆಮದು ಮಾಡಿಕೊಳ್ಳಲು ಆಯಕಟ್ಟಾದ ಸ್ಥಳಗಳನ್ನು ಸ್ಥಾಪಿಸಿದರು.

ಗೋವಾ ಬಂದರು ಪಶ್ಚಿಮ ಕರಾವಳಿಯಲ್ಲಿ ಒಂದು ದೊಡ್ಡ ಬಹುಮುಖ್ಯವಾದ ಬಂದರಾಯಿತು. ಹಲವಾರು ಸರಕುಗಳನ್ನು ಒಳಗೊಂಡ ವ್ಯಾಪಾರ ನಡೆಯುತ್ತಿತ್ತು. ಮಲಬಾರಿನ ಈ ಬಂದರುಗಳಿಗೆ ಓರ್ಮಜ್‌ನಿಂದ ಪ್ರತಿವರ್ಷ ಕುದುರೆಗಳನ್ನು ತುಂಬಿದ ಹಡಗುಗಳು ಬರುತ್ತಿದ್ದವು. ಓರ್ಮಜ್‌ನ ವ್ಯಾಪಾರಿಗಳು ಅಕ್ಕಿ, ಸಕ್ಕರೆ, ಕಬ್ಬಿಣ ಮತ್ತು ಸಾಂಬಾರ ಪದಾರ್ಥಗಳಾದ ಶುಂಠಿ ಮತ್ತಿತರ ಪದಾರ್ಥಗಳನ್ನು ತಮ್ಮ ದೇಶಕ್ಕೆ ಕೊಂಡೊಯ್ಯುತ್ತಿದ್ದರು.

**ಕರಾವಳಿ ಬಂದರುಗಳು ಸಾಮಾನ್ಯ ಲಕ್ಷಣಗಳು:**

ಕರ್ನಾಟಕದ ತೀರ ಪ್ರದೇಶ ಕರಾವಳಿಯು ಸಾಂಬಾರ ದಿನಿಸುಗಳ ಮಾರ್ಗ ಎಂದೇ ಪ್ರಖ್ಯಾತವಾಗಿದೆ. ಜಗತ್ತಿನ ಪ್ರಮುಖ ದೇಶಗಳಿಗೆ ಮುಕ್ತ ವ್ಯಾಪಾರಿ ಮಾರ್ಗವಾಗಿದೆ. ಕಾರವಾರದಿಂದ ಮಂಗಳೂರಿನವರೆಗಿರುವ ಬಂದರುಗಳು ನೈಸರ್ಗಿಕ ವರಮಾಲೆ ಧರಿಸಿರುವಂತೆ ಕಂಡು ಬರುತ್ತವೆ. ಜಗತ್ತಿನ ಪ್ರಖ್ಯಾತ ಬಂದರುಗಳೊಂದಿಗೆ ನಿಕಟ ಸ್ಪರ್ಧೆಯೊಡ್ಡುತ್ತಿರುವ ಈ ಬಂದರುಗಳು ತೇಲಿಬರುವ ಹಡಗುಗಳಿಗೆ ಸುರಕ್ಷಿತ ತಂಗುದಾಣವಾಗಿವೆ.[73]

ಕರಾವಳಿಯ ಎಲ್ಲಾ ಬಂದರುಗಳಿಗೆ ಪಶ್ಚಿಮ ಘಟ್ಟಗಳು ರಕ್ಷಾ ಕವಚದಂತಿವೆ. ಕಾರವಾರ, ಅಂಕೋಲಾ, ಕುಮುಟಾ, ಹೊನ್ನಾವರ, ಭಟ್ಕಳ, ಬೈಂದೂರು, ಕುಂದಾಪುರ ಮಲ್ಪೆ, ಮಂಗಳೂರು ಮತ್ತು ಇವುಗಳ ನಡುವೆ ಇರುವ ಅನೇಕ ಬಂದರುಗಳಿಗೆ ಪಶ್ಚಿಮ ಘಟ್ಟಗಳು ಬಹು ವಿಧದ ಸಹಾಯ ನೀಡಿವೆ. ಈ ಪಶ್ಚಿಮ ಘಟ್ಟಗಳು ಹಲವೆಡೆ ಕಡಲಿಗೆ ಚಾಚಿ ನಿಂತಿವೆ. ಹೀಗೆ ಕಡಲುಗಳಲ್ಲಿರುವ ಪರ್ವತಗಳು ಅರ್ಧಚಂದ್ರಾಕೃತಿಯಲ್ಲಿ ಬಾಗಿಕೊಂಡಿವೆ. ಇದರಿಂದ ಕಡಲ

ನೀರು ಒಳನುಗ್ಗಿ ಬಂದರುಗಳು ಕೊಲ್ಲಿಯಾಕಾರವಾಗಿವೆ. ಇವು ಕಡಲೆಡೆಯಿಂದ ಬೀಸಿ ಬರುವ ಮಾರುತಗಳನ್ನು ಶಾಂತಗೊಳಿಸುತ್ತವೆ. ಹಾಗೇ ಇದು ಗಟ್ಟಿಲೆಟರೈಟ್ ಮಣ್ಣಿನಿಂದ ನಿರ್ಮಿತವಾದ ತಳದಿಂದ  ಕೂಡಿರುವುದರಿಂದ ಬಂದರಿನಲ್ಲಿ ನೀರಿನ ಮಟ್ಟ ಏರುಪೇರಾಗದೇ ಶಾಶ್ವತವಾಗಿ ಒಂದೇ ಮಟ್ಟದಲ್ಲಿ ಇರುತ್ತದೆ.

ಕಡಲಲ್ಲಿ ನಿಂತಿರುವ ದ್ವೀಪಗಳು ಬಂದರಿಗೆ ಬಹು ವಿಧದ ಸಹಾಯ ನೀಡುತ್ತಿವೆ. ಮುಖ್ಯವಾಗಿ ಕಡಲೆಡೆಯಿಂದ ಬೀಸಿ ಬರುವ ಮಾರುತಗಳಿಗೆ ತಡೆಯೊಡ್ಡುತ್ತಿವೆ. ತೆರೆಗಳು ಹೂಳಿನೊಂದಿಗೆ ಕಡಲೆಡೆ ಬರದಂತೆ ತಡೆಯುತ್ತವೆ. ವ್ಯಾಪಾರಿ ಹಡಗುಗಳಿಗೆ ತಾತ್ಕಾಲಿಕ ತಂಗುದಾಣದಂತೆ ಈ ದ್ವೀಪಗಳು ಕಾರ್ಯ ನಿರ್ವಹಿಸುತ್ತವೆ. ಇಲ್ಲಿ ದೊರೆಯುವ ಸಿಹಿ ನೀರು ವ್ಯಾಪಾರಿ ಹಡಗುಗಳಿಗೆ ತುಂಬ ಉಪಕಾರಿಯಾಗಿತ್ತು. ಹಾಗೆ ಹಲವು ಸಂದರ್ಭದಲ್ಲಿ ಸರಕು ಸಂಗ್ರಹಕ್ಕೆ ಇವು ಸಹಾಯ ಮಾಡುತ್ತಿದ್ದವು.

ಕರಾವಳಿ ತೀರದ ಬಳಿಯಲ್ಲಿ ಕಡಲಿಗೆ ಚಾಚಿರುವ ಎತ್ತರ ಶಿಖರಗಳು ದಾರಿ ದೀಪದಂತಿದ್ದವು. ಹಲವು ಸಂದರ್ಭಗಳಲ್ಲಿ ಅವುಗಳ ತುದಿಯಲ್ಲಿ ದೀಪಗಳನ್ನು ಬೆಳಗಿಸಿ ಕಡಲಲ್ಲಿರುವ ಹಡಗುಗಳಿಗೆ ಮಾರ್ಗದರ್ಶನ ಮಾಡುತ್ತಿದ್ದರು. ಕರಾವಳಿಯ ತೀರದ ಉದ್ದಕ್ಕೂ ಇರುವ ಬಂದರುಗಳಿಗೆ ಇನ್ನೊಂದು ಬಹುಮುಖ್ಯ ಕೊಡುಗೆಗಳೆಂದರೆ ಪಶ್ಚಿಮ ಘಟ್ಟಗಳಲ್ಲಿ ಹುಟ್ಟಿ ಕಡಲನ್ನು ಸೇರುವ ನದಿಗಳು, ಈ ನದಿಗಳು ಮುಖಜ ಪ್ರದೇಶಗಳಲ್ಲಿ ಶಾಂತವೂ ವಿಸ್ತಾರವೂ ಆಗಿ ಕಡಲು ಸೇರುತ್ತವೆ. ಇಲ್ಲಿ ಹಲವು ದೊಡ್ಡ ಹಡಗುಗಳನ್ನು ಏಕ ಕಾಲದಲ್ಲಿ ಲಂಗರು ಮಾಡಬಹುದಾಗಿತ್ತು.

ಪಶ್ಚಿಮ ಘಟ್ಟಗಳಲ್ಲಿ ನೈಸರ್ಗಿಕವಾಗಿ ಬೆಳೆಯುತ್ತಿದ್ದ ಮಸಾಲೆ ದಿನಿಸು, ಮರಮುಟ್ಟು ಹಾಗೂ ಪ್ರಾಣಿ ಪಕ್ಷಿಗಳನ್ನು ಈ ನದಿಗಳ ಮೂಲಕ ದೊಡ್ಡ ದೊಡ್ಡ ದೋಣಿಗಳಲ್ಲಿ ಬಂದರಿಗೆ ಸಾಗಿಸಲು ಅನುಕೂಲವಾಗಿತ್ತು. ಹಾಗೇ ಹೊರನಾಡಿನಿಂದ ಬಂಥ ಸರಕನ್ನು ಹಿನ್ನಾಡಿಗೆ ಸಾಗಿಸಲು ಈ ನದಿ ತೊರೆಗಳು ಸಹಾಯಕವಾಗಿದ್ದವು.[74]

ಈ ಬಂದರು ಪಟ್ಟಣಗಳು ರಾಜಧಾನಿ ಪಟ್ಟಣ, ವ್ಯಾಪಾರಿ ಪಟ್ಟಣ ಧಾರ್ಮಿಕ ಕೇಂದ್ರ ಮತ್ತು ಆಡಳಿತ ಕೇಂದ್ರಗಳಾಗಿದ್ದವು. ಈ ಎಲ್ಲಾ ಬಗೆಯ ಬಂದರು ಪಟ್ಟಣಗಳಲ್ಲಿ ವರ್ತಕರಿಗೆ ಅನುಕೂಲ ನೀಡುವ ಏಕಕಾಲದಲ್ಲಿ ಹಲವು ಹಡಗುಗಳನ್ನು ಲಂಗರು ಮಾಡಲು ಸ್ಥಳ ಸರಕು– ಸಂಗ್ರಹಕ್ಕೆ ವಿಶಾಲವಾದ ಸ್ಥಳಗಳು ಬಂದರಿನ ಹೊರ ವಲಯದಲ್ಲಿ ಕೈಗಾರಿಕೆಗಳು ಮತ್ತು ಕೃಷಿ

ಮಾಡುವ ವಿಶಾಲ ಗದ್ದೆಗಳಿದ್ದವು. ಈ ಎಲ್ಲಾ ಬಂದರುಗಳಲ್ಲಿ ಒಂದೇ ಸಮಯದಲ್ಲಿ ಹಡಗುಗಳು ಒಳಬರಲು ಹಾಗೂ ಹೊರಹೋಗಲು ಪ್ರತ್ಯೇಕ ಮಾರ್ಗಗಳಿದ್ದವು.

**ಕಾರವಾರ ಬಂದರು:**

ಕಾರವಾರ ಬಂದರು ವಿಜಯನಗರ ಸಾಮ್ರಾಜ್ಯದ ಆಡಳಿತ ಅವಧಿಯಲ್ಲಿ ಪ್ರಮುಖ ಬಂದರಾಗಿತ್ತು. ಈ ಬಂದರು ಉತ್ತರ ಕನ್ನಡ ಜಿಲ್ಲೆಯ ಕರಾವಳಿ ಪ್ರದೇಶದ ಉತ್ತರದ ತುದಿಯಲ್ಲಿ ಕಂಡುಬರುವ ಒಂದು ತಾಲ್ಲೂಕು ಕೇಂದ್ರವಾಗಿದೆ. ಈ ಪರ್ವತ ಸಾಲಿನಲ್ಲಿ ಉಷ್ಣವಲಯದ ಮರಗಳು ಹಾಗೂ ಮಸಾಲೆ ದಿನಿಸುಗಳು ಹೇರಳವಾಗಿ ಬೆಳೆಯುತ್ತವೆ. ಇಲ್ಲಿ ಬೆಳೆಯುವ ಕರಿ ಮೆಣಸು ಬಹು ಪ್ರಖ್ಯಾತವಾಗಿದ್ದು ಪಶ್ಚಿಮ ಘಟ್ಟದ ಉಳಿದ ಮೆಣಸಿನ ಕಾಳುಗಳಿಗಿಂತ ದೊಡ್ಡದಿದ್ದು ಹೆಚ್ಚು ಭಾರವನ್ನು ಹೊಂದಿರುವುದಿಲ್ಲ.

ಕಾರವಾರದ ಬಳಿಯಲ್ಲಿ ಅರಬ್ಬೀ ಸಮುದ್ರದಲ್ಲಿ ಐದು ದ್ವೀಪಗಳು ನಿಂತಿವೆ. ಇವುಗಳು ಬಂದರನ್ನು ರಕ್ಷಿಸುವ ನಿಸರ್ಗ ನಿರ್ಮಿತ ಸೈನಿಕರಂತಿದ್ದಾರೆ. ಇವುಗಳು ಕಡಲೋತ್ತರ ವ್ಯಾಪಾರಕ್ಕೆ ತುಂಬಾ ಸಹಾಯಕವಾಗಿವೆ. ಕಾರವಾರದ ವಾಯುವ್ಯದಿಂದ ಅಂದರೆ ಗೋವಾದ ದಕ್ಷಿಣ ತುದಿಯಿಂದ ಪಶ್ಚಿಮ ಘಟ್ಟಗಳು ಎದ್ದು ನಿಂತಿವೆ. ಗಗನಚುಂಬಿಯಾಗಿರುವ ಈ ಪರ್ವತ ಶ್ರೇಣಿಗಳು ಕಾರವಾರ ನಗರವನ್ನು ಬಿಣಗ-ಅಲಿಗದ್ದಾವರೆಗೆ ಅರ್ಧಚಂದ್ರಾಕೃತಿಯಲ್ಲಿ ಸುತ್ತುವರೆದಿದೆ. ಇದರಿಂದ ಕಾರವಾರದ ಹವಾಮಾನ, ಮಳೆ ಹಾಗೂ ವಾಣಿಜ್ಯದ ಮೇಲೆ ದೊಡ್ಡ ಪ್ರಭಾವವನ್ನು ಬೀರಿವೆ. ಪಶ್ಚಿಮ ಘಟ್ಟಗಳು ಕುದುರೆ ಲಾಳಾಕಾರದಲ್ಲಿ ಬಾಗಿರುವುದರಿಂದ ಕಡಲ ನೀರು ಎಂಟರಿಂದ ಹನ್ನೆರಡು ಮೀಟರ್‌ವರೆಗೆ ಶಾಂತವಾಗಿ ನಿಂತಿರುವುದರಿಂದ ಸರಕುಗಳನ್ನು ಹೊತ್ತ ಹಡಗುಗಳು ಸಲೀಸಾಗಿ ಒಳಪ್ರವೇಶಿಸಿ ಲಂಗರು ಹಾಕಬಹುದಾಗಿದೆ. [75]

ಕಾರವಾರ ಇದ್ದ ಸ್ಥಳವು ಭೌಗೋಳಿಕವಾಗಿ ಪಶ್ಚಿಮ ಏಷ್ಯಾ ಹಾಗೂ ಯೂರೋಪಿನ ದೇಶಗಳಿಗೆ ನೇರ ಸಂಪರ್ಕ ಹೊಂದಲು ಅನುಕೂಲವಾಗಿತ್ತು. ಹಿಪ್ಪಲಸ್ ಮಾರುತವು ಕಾರವಾರಕ್ಕೆ ಪಶ್ಚಿಮದಿಂದ ಹಡಗುಗಳನ್ನು ಸುರಕ್ಷಿತವಾಗಿ ತಲುಪಿಸುವ ಮಾರುತವಾಗಿತ್ತು. ವರ್ಷದ ಐದು ತಿಂಗಳು ಮಾರುತದ ಪ್ರಯೋಜನ ಪಡೆಯಬಹುದಾಗಿತ್ತು. ಮೆಡಿಟರೇನಿಯನ್ ಸಾಗರದ ಮೂಲಕ ಬರುವ ಹಡಗುಗಳು ಅಲೆಗ್ಸಾಂಡ್ರಿಯಾದ ಮೂಲಕ ಅಥವಾ ಅಥೆನ್ಸ್‌ನ್ನು ಹಾದು ಬರುತ್ತಿದ್ದವು. ಮುಂದೆ ಈ ಮಾರ್ಗ ಕೊಂಚ ಬದಲಾವಣೆಯೊಂದಿಗೆ ಮೈಯೋಸ್ ಹಾರ್ಮಸ್ ಮೂಲಕ ಜಿದ್ದಾ, ಏಡನ್ ಸುಕೋತ್ರಾ ಬಳಸಿ ಕಾರವಾರ ತಲುಪುತ್ತಿತ್ತು. ಕಾರವಾರ

ತಲುಪಲು ಬಳಸುತ್ತಿದ್ದ ಮತ್ತೊಂದು ಮಾರ್ಗವೆಂದರೆ ಅಥೈನ್ಸ್ ಮೂಲಕ ಬ್ಯಾಬಿಲೋನ್ ಬಾಗ್ದಾದ್ ಸೂಸ್‌ಗಳನ್ನು ಬಳಸಿ ಹಾಗೂ ಕೊಲ್ಲಿಯ ಮಸ್ಕತ್ ಮೂಲಕ ನೇರವಾಗಿ ಕಾರವಾರ ತಲುಪುತ್ತಿತ್ತು.

**ಅಂಕೋಲಾ ಬಂದರು:**

ವಿಜಯನಗರ ಸಾಮ್ರಾಜ್ಯದ ಮತ್ತೊಂದು ಪ್ರಮುಖ ಬಂದರು ಅಂಕೋಲಾ ಬಂದರು. ಕಾರವಾರದಿಂದ ಮೂವತ್ತು ಕಿಲೋಮೀಟರ್ ದೂರದಲ್ಲಿ ಅಂಕೋಲಾ ಬಂದರಿದೆ. ಅಂಕೋಲಾ ತಾಲ್ಲೂಕು ಕೇಂದ್ರವೂ ಕೂಡ ಹೌದು. ಅಂಕೋಲಾ ಎಂಬ ಹಗುರವೂ, ಗಟ್ಟಿಯೂ ಅದ ಮರವು ಇಲ್ಲಿ ಬೆಳೆಯುತ್ತದೆ. ಆದ್ದರಿಂದ ಈ ಊರಿಗೆ ಅಂಕೋಲಾ ಹೆಸರು ಬಂದಿತ್ತೆಂದು ಹೇಳುತ್ತಾರೆ. ಅಂಕೋಲಾ ಬಂದರಿನ ಇನ್ನೊಂದು ವೈಶಿಷ್ಟ್ಯವೆಂದರೆ ತೀರದ ಬಳಿಯಲ್ಲಿ ಬಂಡೆಗಲ್ಲು ಗಳಿಲ್ಲದಿರುವುದು, ಹೀಗಾಗಿ ಹಗಲು ರಾತ್ರಿಯೆನ್ನದೆ ಹಡಗುಗಳು ತೀರವನ್ನು ತಲುಪಬಹುದಾಗಿತ್ತು. ಕಾರವಾರದಿಂದ ದಕ್ಷಿಣಕ್ಕೆ ಕೇವಲ 32 ಕಿ.ಮೀ.ದೂರದಲ್ಲಿ ಈ ಬಂದರಿರುವುದರಿಂದ ಇದು ಕೂಡ ಹಿಪ್ಪಲಸ್ ಮಾರುತಗಳ ಸಹಾಯದಿಂದ ಪಶ್ಚಿಮ ಏಷ್ಯಾ ಹಾಗೂ ಆಪ್ರಿಕಾ ಹಾಗೂ ಮೆಡಿಟರೇನಿಯನ್ ದೇಶಗಳೊಡನೆ ನೇರ ಸಂಪರ್ಕ ಹೊಂದುತ್ತಿತ್ತು.[76]

ಅಂಕೋಲಾ ಬಂದರಿಗೆ ಕಾರವಾರ ಬಂದರಿಗಿದ್ದ ಪ್ರದೇಶಗಳೇ ಹಿನ್ನಾಡಾಗಿತ್ತು. ಆಂದ್ರಪ್ರದೇಶದ ಅನಂತಪುರಂ, ತಮಿಳುನಾಡಿನ ಪೂರ್ವ ಕರಾವಳಿಯ ಬಂದರುಗಳು ಸೊಲ್ಲಾಪುರ, ಕೊಲ್ಲಾಪುರದವರೆಗಿನ ಪ್ರದೇಶಗಳು ಇದರ ಹಿನ್ನಾಡಾಗಿದ್ದವು. ಹತ್ತಿ, ಕಬ್ಬು, ಹತ್ತಿಬಟ್ಟೆ, ಅಕ್ಕಿ ಹಾಗೂ ಮರಮಟ್ಟು, ವನಸ್ಪತಿ, ಉತ್ಪನ್ನಗಳನ್ನು ಈ ಬಂದರಿನ ಮೂಲಕ ನಿರ್ಯಾತ ಮಾಡಲಾಗುತ್ತಿತ್ತು.

**ಕುಮುಟಾ ಬಂದರು:**

ಆಂಕೋಲಾದಿಂದ 40 ಕಿ,ಮೀ.ದಕ್ಷಿಣದಲ್ಲಿ ಕುಮುಟಾ ತಾಲ್ಲೂಕು ಇದೆ. ಕುಮುಟಾ ಪ್ರಾಚೀನ ಕಾಲದಿಂದಲೂ ಕಡಲೋತ್ತರ ವ್ಯಾಪಾರದಲ್ಲಿ ಪ್ರಖ್ಯಾತವಾಗಿದ್ದ ಬಂದರು. ಇಲ್ಲಿಂದ ನಿರ್ಯಾತವಾಗುತ್ತಿದ್ದ ಹತ್ತಿ ಮಧ್ಯಕಾಲೀನ ಯೂರೋಪಿನ ಆರ್ಥಿಕತೆಯನ್ನು ರೂಪಿಸಿತ್ತು. ಇಂದಿಗೂ ಲಂಡನ್ ಪಟ್ಟಣದ ಒಂದು ಪೇಟೆ ಕಾಟನ್ ಮಾರ್ಕೆಟ್ ಅಥವಾ ಕುಮುಟಾ ಮಾರ್ಕೆಟ್ ಎಂದು ಕರೆಯಲ್ಪಡುತ್ತದೆ.

ಕುಮುಟಾದ ಉತ್ತರದಲ್ಲಿ ಅಂಕೋಲಾ ತಾಲ್ಲೂಕು ದಕ್ಷಿಣದಲ್ಲಿ ಹೊನ್ನಾವರ ತಾಲ್ಲೂಕು ಪೂರ್ವದಲ್ಲಿ ಶಿರ್ಶಿ ಮತ್ತು ಸಿದ್ದಾಪುರ ತಾಲ್ಲೂಕುಗಳಿವೆ. ಪಶ್ಚಿಮದಲ್ಲಿ ಅರಬ್ಬೀ ಸಮುದ್ರವಿದೆ, ಪೂರ್ವದಲ್ಲಿ ಉತ್ತರ ದಕ್ಷಿಣವಾಗಿ ಸಹ್ಯಾದ್ರಿ ಪರ್ವತಗಳು ಹಬ್ಬಿವೆ, ಈ ಪರ್ವತ ಶ್ರೇಣಿಯ ಉದ್ದಕ್ಕೂ ಪೂರ್ವದಿಂದ ಪಶ್ಚಿಮದಲ್ಲಿ ಅಲ್ಲಲ್ಲಿ ಕಣಿವೆಗಳು ಉಂಟಾಗಿವೆ. ಈ ಇಳಿಜಾರಿನಲ್ಲಿ ನಿರ್ಮಿತವಾಗುವ ರಸ್ತೆ ಮಾರ್ಗವು ಬಂದರನ್ನು ಹಾಗೂ ಘಟ್ಟ ಪ್ರದೇಶವನ್ನು ಸಂಪರ್ಕಿಸುತ್ತದೆ.

ಕುಮಟಾ ಬಂದರಿಗೆ ನಿಸರ್ಗ ನೀಡಿದ ಬಹುದೊಡ್ಡ ಕೊಡುಗೆ ಎಂದರೆ ಈ ಪಶ್ಚಿಮ ಘಟ್ಟಗಳು, ಕುಮಟಾ ಬಂದರು. ಅಘನಾಶಿನಿನದಿಯ ಸಣ್ಣ ತೊರೆಯೊಂದು ಕಡಲು ಸೇರುವಲ್ಲಿ ನಿರ್ಮಾಣಗೊಂಡಿದೆ.[77] ಕುಮಟಾ ಬಂದರು ತಳದಲ್ಲಿ ಗಟ್ಟಿ ನೆಲವಾಗಿದೆ. ಇಲ್ಲಿ ಹೂಳು ಅಥವಾ ಕೆಸರು ತುಂಬಿಕೊಳ್ಳುವ ಭಯವಿರಲಿಲ್ಲ. ಹಡಗುಗಳಿಗೆ ಲಂಗರು ಮಾಡಲು ಅನುಕೂಲವಾಗುವಂತೆ ನಾಲ್ಕರಿಂದ ಐದು ಮೀಟರ್ ಇಲ್ಲಿ ಸದಾ ನೀರು ನಿಂತಿರುತ್ತದೆ.

ಕುಮುಟಾ ಬಂದರಿಗೆ ಬಂದು ಸೇರುತ್ತಿದ್ದ ತೊರೆಯು ಊರಿನ ಒಳಗೆ ಅಂದರೆ ಹಿನ್ನಾಡಿಗೆ ಮೂರರಿಂದ ನಾಲ್ಕು ಕಿ.ಮೀಟರ್ ವರೆಗೂ ನೌಕಾಯಾನಕ್ಕೆ ಯೋಗ್ಯವಾಗಿತ್ತು. ಇದು ಆಯಾತ ನಿರ್ಯಾತದ ಸರಕುಗಳನ್ನು ಬಂದರಿಗೆ ತಲುಪಿಸಲು ಉಪಯುಕ್ತವಾಗಿತ್ತು. ಕುಮುಟಾ ಬಂದರಿನ ದಕ್ಷಿಣ ತುದಿಯ ಸಮತಟ್ಟಾದ ವಿಶಾಲಭೂಮಿಯಿಂದ ಕೂಡಿದೆ. ಇದು ಆಯಾತ ನಿರ್ಯಾತದ ಸರಕುಗಳನ್ನು ಸಂಗ್ರಹಿಸಲು ಸಹಾಯ ಮಾಡುತ್ತಿತ್ತು. ಬಂದರಿನ ಈ ಮುಖ್ಯ ಸೌಲಭ್ಯಗಳಿಂದ ಇಲ್ಲಿ ಏಕಕಾಲದಲ್ಲಿ ನಾಲ್ಕರಿಂದ ಆರು ಬೃಹತ್ ಹಡಗುಗಳನ್ನು ಲಂಗರು ಮಾಡಬಹುದಾಗಿತ್ತು.

**ಹೊನ್ನಾವರ ಬಂದರು:**

ಹೊನ್ನಾವರವು ವಿಜಯನಗರ ಸಾಮ್ರಾಜ್ಯದ ಪಶ್ಚಿಮ ಕರಾವಳಿಯ ಪ್ರಮುಖ ಬಂದರುಗಳಲ್ಲಿ ಒಂದು, ಈ ಬಂದರು ವಿಜಯನಗರ ಸಾಮ್ರಾಜ್ಯದ ವ್ಯಾಪಾರದ ಅಭಿವೃದ್ಧಿಗೆ ಸಹಕಾರಿಯಾಗಿತ್ತು. ಮಲಬಾರಿನ ಜನರು ಉತ್ತಮವಾದ ವ್ಯಾಪಾರವನ್ನು ಅಭಿವೃದ್ಧಿ ಪಡಿಸಿದರು. ಇವರು ಕಪ್ಪು ಅಕ್ಕಿಯನ್ನು ತೆಗೆದುಕೊಂಡು ಹೋಗುತ್ತಿದ್ದರು ಮತ್ತು ವಾಪಸ್ಸು ಬರುವಾಗ ತೆಂಗಿನಕಾಯಿ, ಎಣ್ಣೆ, ಸಕ್ಕರೆ ಮತ್ತು ದ್ರಾಕ್ಷರಸವನು ವ್ಯಾಪಾರ ಮಾಡುತ್ತಿದ್ದರು.[78]

ಹೊನ್ನಾವರ ಬಂದರು ತಿಮ್ಮಾಜಿಯ ಮುಖ್ಯ ಕೇಂದ್ರವಾಗಿತ್ತು. ಇವನು ವಿಜಯನಗರ ಸಾಮ್ರಾಜ್ಯದ ಸೈನ್ಯಾಧಿಕಾರಿಯಾಗಿದ್ದನು. ಹೊನ್ನಾವರ ಬಂದರು ಶ್ರೀಲಂಕಾ ಹಾಗೂ ಆಫ್ರಿಕಾದ

ದೇಶಗಳಿಗೆ ಸಂಪರ್ಕ ಕಲ್ಪಿಸಲು ಇದ್ದ ಉತ್ತಮ ಮಾರ್ಗವಾಗಿತ್ತು. ಬನವಾಸಿ ಬೌದ್ಧ ಕೇಂದ್ರದಿಂದ ಶ್ರೀಲಂಕಾಕ್ಕೆ ಹೋದ ಬೌದ್ಧ ಬಿಕ್ಷುಗಳು ಬಳಸಿದ್ದು ಇದೇ ಬಂದರು ಮಾರ್ಗ ಎಂದು ಹಲವು ವಿದ್ವಾಂಸರು ಸ್ಪಷ್ಟಪಡಿಸಿದ್ದಾರೆ. ಹೊನ್ನಾವರ ಬಂದರು ಶರಾವತಿ ನದಿಯ ಮುಖಜ ಭೂಮಿಯಲ್ಲಿದೆ. ಹೊನ್ನಾವರ ಬಂದರು ಶರಾವತಿ ನದಿಯು ಅರಬ್ಬೀ ಸಮುದ್ರ ಸೇರುವಲ್ಲಿ ನಿರ್ಮಾಣಗೊಂಡಿದೆ. ಹೊನ್ನಾವರ ಬಂದರು ಭಟ್ಕಳ ಮತ್ತು ಮಂಗಳೂರು ಬಂದರುಗಳನ್ನು ಒಳಗೊಂಡ ದೊಡ್ಡ ಬಂದರು. ಅರಬ್ ವ್ಯಾಪಾರಿಗಳು ಮತ್ತು ಯೂರೋಪಿನ ವ್ಯಾಪಾರಿಗಳು ಮುಖ್ಯವಾಗಿ ಪೋರ್ಚುಗೀಸರು ಇಲ್ಲಿ ಏಕಸ್ವಾಮ್ಯಗಳಾಗಿದ್ದರು. ಇಬನ್ ಬತೂತನು ಈ ಬಂದರಿಗೆ ಭೇಟಿ ಮಾಡಿದನು. ಕಪ್ಪು ಮೆಣಸು ಮುಖ್ಯವಾಗಿ ಈ ಬಂದರಿನಿಂದ ಬೇರೆ ದೇಶಗಳಿಗೆ ರಫ್ತಾಗುತ್ತಿತ್ತು.

**ಭಟ್ಕಳ ಬಂದರು:**

ಉತ್ತರ ಕನ್ನಡದ ದಕ್ಷಿಣ ತುದಿಯಲ್ಲಿರುವ ತಾಲ್ಲೂಕು ಕೇಂದ್ರ ಪ್ರದೇಶವೇ ಭಟ್ಕಳ. ಇಲ್ಲಿ ಭಟ್ಕಳ ನದಿ ಕಡಲು ಸೇರುವ ಸ್ಥಳದಲ್ಲಿ ಬಂದರು ನಿರ್ಮಾಣವಾಗಿದ್ದು, ಇದು ನೈಸರ್ಗಿಕ ಕೊಡುಗೆಗಳಿಂದ ಅತ್ಯಂತ ಶ್ರೀಮಂತವಾಗಿದೆ. ಕಡಲಲ್ಲಿರುವ ನೇತ್ರಾಣಿ ದ್ವೀಪದಿಂದ ಈ ಬಂದರಿಗೆ ಭೌಗೋಳಿಕವಾದ ರಕ್ಷಣೆ ಹಾಗೂ ವ್ಯಾಪಾರಿ ಸರಕುಗಳ ಸಂಗ್ರಹಗಳಿಗೆ ಅನುಕೂಲ ಉಂಟಾಗಿದೆ. ಬಂದರಿನಲ್ಲಿ ಸರಕು ಸಂಗ್ರಹಣೆಗೆ ಸಾಕಷ್ಟು ಸ್ಥಳಾವಕಾಶವಿದ್ದು ದೊಡ್ಡ ದೊಡ್ಡ ನೌಕೆಗಳು ಲಂಗರು ಮಾಡಲು ಅನುಕೂಲತೆಗಳಿವೆ. ಹಿಪ್ಪಲಸ್ ಮಾರುತದ ಸಹಾಯದಿಂದ ಅರಬ್ಬಿ ವರ್ತಕರು ನೇರವಾಗಿ ಭಟ್ಕಳಕ್ಕೆ ಬಂದು ವ್ಯಾಪಾರ ವಹಿವಾಟು ನಡೆಸುತ್ತಿದ್ದರು. ಇಲ್ಲಿಂದ ಅಕ್ಕಿ ಮಸಾಲೆ ದಿನಸುಗಳು ಐರೋಪ್ಯ ಹಾಗೂ ಅರಬ್ ರಾಷ್ಟ್ರಗಳಿಗೆ ಹೋದಂತೆ ಗ್ರೀಕ್ ರೋಮನ್‌ಗಳ ಮೂಲಕ ಬೆಲೆಬಾಳುವ ಉತ್ತಮ ದರ್ಜೆಯ ಮಧ್ಯ ಅರಬ್ಬಿ ಕುದುರೆಗಳು ಆಮದಾಗುತ್ತಿದ್ದವು. [79]

ಭಟ್ಕಳ ಬಂದರು ಉತ್ತರ ಕನ್ನಡದ ಜಿಲ್ಲೆಯ ದಕ್ಷಿಣ ತುದಿಯಲ್ಲಿದೆ. ಇದು ಪ್ರಾಚೀನ ಕಾಲದಿಂದಲೂ ಪ್ರಮುಖ ವ್ಯಾಪಾರಿ ಕೇಂದ್ರವಾಗಿದೆ. ಭಟ್ಕಳದ ಬಂದರು ಕಡಲೋತ್ತರ ವ್ಯಾಪಾರದಲ್ಲಿ ಪ್ರಸಿದ್ದವಾಗಲು ಅದರ ಬೌತಿಕ ಸ್ಥಿತಿ ಕಾರಣವಾಗಿದೆ. ಭಟ್ಕಳ ನದಿಯು ಕಡಲು ಸೇರುವ ಪ್ರದೇಶದಲ್ಲಿ ಬಂದರು ನಿರ್ಮಾಣವಾಗಿದ್ದು, ಇದರಲ್ಲಿ ಇಂದಿಗೂ ಐದರಿಂದ ಆರು ಕಿ.ಮೀ. ಪೂರ್ವದತ್ತ ನೌಕೆಗಳನ್ನು ಸಲೀಸಾಗಿ ಸಾಗಿಸಬಹುದಾಗಿದೆ. ಸಹ್ಯಾದ್ರಿಯಲ್ಲಿ ಜನಿಸುವ ಭಟ್ಕಳ ನದಿಯು ಸುಮಾರು 20 ಕಿ.ಮೀ. ದಕ್ಷಿಣದತ್ತ ಹರಿದು ಬಂದು ಕಡಲನ್ನು ಸೇರುತ್ತದೆ.

ಭಟ್ಕಳ ಬಂದರಿಗೆ ಪ್ರತಿವರ್ಷ ಓರ್ಮುಜ್‌ನಿಂದ ಬರುತ್ತಿದ್ದ ಹಡಗುಗಳು ಬಿಳಿ ಅಕ್ಕಿಯನ್ನು ಮತ್ತು ಸಕ್ಕರೆಯನ್ನು ತೆಗೆದುಕೊಂಡು ಹೋಗುತ್ತಿದ್ದವು. ಮಲಬಾರಿನ ವ್ಯಾಪಾರಿಗಳು ಸಾಂಬಾರ ಪದಾರ್ಥಗಳನ್ನು ಹೆಚ್ಚಾಗಿ ಇಲ್ಲಿ ಮಾರಾಟ ಮಾಡುತ್ತಿದ್ದರು. ಇದನ್ನು ಅರೇಬಿಯ, ಪರ್ಷಿಯಾ ಮತ್ತು ಯೂರೋಪಿನ ವ್ಯಾಪಾರಿಗಳು ಉತ್ತಮ ಬೆಲೆಗೆ ಕೊಂಡುಕೊಳ್ಳುತ್ತಿದ್ದರು. ಈ ಬಂದರಿನಲ್ಲಿ ಮುಸ್ಲಿಮರು ವ್ಯಾಪಾರದ ಏಕಸ್ವಾಮ್ಯ ಹೊಂದಿದ್ದರು. ಇವರು ಯೂರೋಪ್ ಮತ್ತು ಅರೇಬಿಯಾದಿಂದ ಬರುತ್ತಿದ್ದ ಹಡಗುಗಳಿಗೆ ಮತ್ತು ವ್ಯಾಪಾರಿಗಳಿಗೆ ಇಲ್ಲಿ ಉತ್ತಮ ಅವಕಾಶ ಕಲ್ಪಿಸಿಕೊಟ್ಟಿದ್ದರು. ಸಕ್ಕರೆ ಮತ್ತು ಕಬ್ಬಿಣವನ್ನು ಇಲ್ಲಿ ತುಂಬಿಕೊಂಡು ಹೋಗುತ್ತಿದ್ದವು. ಸಕ್ಕರೆ, ತೆಂಗಿನಕಾಯಿ, ಸಾಂಬಾರ ಪದಾರ್ಥಗಳು ಮತ್ತು ಕೆಲವು ಔಷಧಿಗಳನ್ನು ಇಲ್ಲಿಂದ ರಫ್ತು ಮಾಡಲಾಗುತ್ತಿತ್ತು. ಅಡುಗೆ ಪಾತ್ರೆಗಳು, ಕೆಂಪು ಬಣ್ಣದ ಸ್ಪಟಿಕ, ದಂತ ಮುಂತಾದ ವಸ್ತುಗಳು ಈ ಬಂದರಿನಲ್ಲಿ ವ್ಯಾಪಾರ ವಹಿವಾಟಿಗೆ ಒಳಪಟ್ಟಿದ್ದವು.[80]

**ಬಾರ್ಕೂರು ಬಂದರು:**

ಬಾರ್ಕೂರು ಬ್ರಹ್ಮಾವರದಿಂದ 4 ಕಿ.ಮೀ. ದಕ್ಷಿಣದಲ್ಲಿರುವ ಊರು. ಬಸ್ರೂರಿನಿಂದ ಸುಮರು 16 ಕಿ.ಮೀ. ದಕ್ಷಿಣದಲ್ಲಿದೆ. ಸ್ವರ್ಣನದಿಯು ಬಾರ್ಕೂರಿನಿಂದ ಹರಿದು ಹೋಗಿ ಹಂಗಾರ ಕಟ್ಟೆಯ ಬಳಿಯಲ್ಲಿ ಕಡಲು ಸೇರುತ್ತದೆ. ಇಲ್ಲಿಯೇ ಸೀತಾನದಿಯು, ಕಡಲನ್ನು ಸೇರುತ್ತದೆ. ಇದು ಸ್ವರ್ಣಾನದಿಯ ಮುಖಜ ಪ್ರದೇಶದಿಂದ ಸುಮಾರು 4 ರಿಂದ 5 ಕಿ.ಮೀ. ದೂರದಲ್ಲಿದೆ. ಈ ಎರಡು ನದಿಗಳು ಕಡಲನ್ನು ಸೇರುವ ಸ್ಥಳವು ಉತ್ತಮ ಬಂದರಾಗಿದೆ.

ಅಳುಪರಸರ ರಾಜಧಾನಿ ಪಟ್ಟಣ ಹಾಗೂ ಬಂದರು ಪಟ್ಟಣವಾಗಿ ಬಾರ್ಕೂರು ಪ್ರಖ್ಯಾತವಾಗಿದೆ. ಕಡಲೋತ್ತರ ವ್ಯಾಪಾರಿ ಮಹತ್ವ ಅರಿತ ಅಳುಪರು 8ನೇ ಶತಮಾನದಿಂದೀಚೆಗೆ ತಮ್ಮ ರಾಜಧಾನಿಯಾಗಿ, ಹಾಗೂ ಹನ್ನೊಂದನೇ ಶತಮಾನದಿಂದ ಸುಸಜ್ಜಿತವೂ ವಿಸ್ತಾರವೂ ಆದ ಬಾರ್ಕೂರನ್ನು ತಮ್ಮ ರಾಜಧಾನಿಗಳಲ್ಲಿ ಒಂದಾಗಿ ಮಾಡಿಕೊಂಡು ಆಳತೊಡಗಿದರು. ಸಾವಿರಾರು ಮನೆಗಳನ್ನು ಹೊಂದಿದ್ದ ಈ ನಗರವು 'ಜಯಂತಿಕಾ' ಎಂದೂ ಕರೆಯಲಾಗುತ್ತಿತ್ತು. ಉದ್ಯಾವರ ಹಾಗೂ ಕಲ್ಯಾಣಪುರ ನದಿಗಳೆರಡರ ನಡುವೆ ಇರುವ ಬಾರ್ಕೂರು ಸಹಜವಾದ ನೈಸರ್ಗಿಕ ರಕ್ಷಣೆ ಪಡೆದಿತ್ತು. ಇದರಿಂದ ಇದೊಂದು ಅಂತರಾಷ್ಟ್ರೀಯ ವಾಣಿಜ್ಯದ ಕೇಂದ್ರವಾಗಿ ಬೆಳೆದಿತ್ತು. ಇಲ್ಲಿ ದೊರೆಯುವ ಹೂಜಿಗಳು ಹಾಗೂ ಅನೇಕ ಅವಶೇಷಗಳು ಈ ಪ್ರದೇಶವು ಗ್ರೀಕ್ ಹಾಗೂ ರೋಮನ್‌ರೊಂದಿಗೆ ಸಂಪರ್ಕ ಹೊಂದಿತ್ತೆಂದು ತಿಳಿಸುತ್ತದೆ.[81]

ವ್ಯಾಪಾರಿ ವರ್ಗದವರು ಈ ರೇವು ಪಟ್ಟಣಗಳನ್ನು ತಮಗೆ ಬೇಕಾಗುವಂತೆ ವ್ಯವಸ್ಥಿತವಾಗಿ ಆಳಲು ಸಿದ್ದಪಡಿಸಿಕೊಂಡಿದ್ದರು. ನಗರವನ್ನು ಹತ್ತು ಕೇರಿಯಾಗಿ ವಿಂಗಡಿಸಿ ಒಂದೊಂದು ಕೇರಿಯನ್ನು ಒಂದೊಂದು ವ್ಯಕ್ತಿ ಮೀಸಲಿರಿಸಿದ್ದರು. ಇಲ್ಲಿ ದೊರೆಯುವ ಶಾಸನಗಳು ವಿವಿಧ ವೃತ್ತಿ ಸಂಘಗಳು ಇಲ್ಲಿ ಹೊಂದಿದ್ದ ಪ್ರಾಮುಖ್ಯತೆಯನ್ನು ತಿಳಿಸುತ್ತವೆ. ಅಂತರರಾಷ್ಟ್ರೀಯ ವ್ಯಾಪಾರ ಭರದಿಂದ ನಡೆಯುತ್ತಿದ್ದಾಗ ಇಲ್ಲಿ ವಿವಿಧ ಬಗೆಯ ವ್ಯಾಪಾರಿ ಸಂಘಗಳು ಸಕ್ರಿಯವಾಗಿದ್ದವು. ಕೇವಲ ದೇಶೀಯವಲ್ಲದೆ ವಿದೇಶಿ ವ್ಯಾಪಾರಿಗಳು ಇಲ್ಲಿ ನೆಲೆಸಿದ್ದರು ಎಂದು ತಿಳಿಯುತ್ತದೆ.

**ಮಂಗಳೂರು ಬಂದರು:**

ಇಂದಿನ ಕರ್ನಾಟಕ ದಕ್ಷಿಣ ತುದಿಯ ಬಂದರಾಗಿರುವ ಮಂಗಳೂರು ಬಂದರು ಕ್ರಿಸ್ತಶಕದ ಆರಂಭದಲ್ಲಿಯೇ ಜಗತ್ತಿನ ಪ್ರಮುಖ ಬಂದರುಗಳೊಂದಿಗೆ ಸಂಪರ್ಕ ಪಡೆದಿತ್ತು. ಟಾಲೆಮಿಯು ಭೂಗೋಳದಲ್ಲಿ ಉಲ್ಲೇಖಿತಗೊಂಡಿದೆ. ನೇತ್ರಾವತಿ ನದಿ ದಂಡೆಯ ಈ ಬಂದರನ್ನು ಆತ ನಿತ್ರಾಸ್ ಎಂದು ಉಲ್ಲೇಖಿಸಿದ್ದಾನೆ. ಗೋವಿಂದ ಪೈ ರವರು ಕ್ರಿ.ಶ. ಒಂದರಿಂದ ಎರಡನೆಯ ಶತಮಾನದ ಪ್ರವಾಸಿ ಕಥನಗಳಲ್ಲಿ ಉಲ್ಲೇಖಿತ 'ಮಂಡೆಗೋರ ಮತ್ತು ಮಂಗರೂತ್'ಗಳು ಮಂಗಳೂರೆಂದೇ ಹೇಳುತ್ತಾರೆ. ಶಂಗಂನ ಅಕನಾನೂರಿನಲ್ಲಿ ಮಂಗಳಾಪುರ ವರ್ಣಿತವಾಗಿದೆ. ಕಡಲ್ಗಳ್ಳರ ಹಾವಳಿಯ ಬಂದರೆಂದು ಕೂಡಾ ಇದನ್ನು ಕರೆಯುತ್ತಿದ್ದರು.

ತುಳು, ಕನ್ನಡ, ಕೊಂಕಣಿ ಹಾಗೂ ಮಲಯಾಳಂ ಭಾಷೆಗಳ ಜನಪದದಿಂದ ಕೂಡಿರುವ ಈ ಪಟ್ಟಣವು ಕಡಲೋತ್ತರ ವ್ಯಾಪಾರದ ಬಹುದೊಡ್ಡ ಕೀರ್ತಿ ಕೇಂದ್ರವಾಗಿತ್ತು. ಕ್ರಿ.ಶ.6 ಮತ್ತು 7ನೇ ಶತಮಾನದಲ್ಲಿ 'ಹಂಜಮಾನ' ಎಂಬ ವ್ಯಾಪಾರಿ ಸಂಘ ಇಲ್ಲಿದ್ದಿತ್ತು. ವ್ಯಾಪಾರಕ್ಕಾಗಿ ಬಂದ ಅರಬ್ಬಿಗಳು ಸ್ಥಳೀಯ ಸ್ತ್ರೀಯರನ್ನು ವಿವಾಹವಾಗಿ 'ಬ್ಯಾರಿ'ಗಳೆಂದು ಅವರ ಪೀಳಿಗೆ ಗುರ್ತಿಸಲ್ಪಟ್ಟಿತ್ತು. ಇವರು ಸ್ಥಳೀಯ ವಿದೇಶೀ ವ್ಯಾಪಾರದಲ್ಲಿ ದೊಡ್ಡ ಹೆಸರು ಮಾಡಿದಂತೆ ಮುಂದೆ ಕೆಲವು ಅರಸರುಗಳ ಸೈನಿಕರೂ ಆಗಿದ್ದರು. ಶ್ರೇಷ್ಠಿಗಳು, ನಗರದವರು, ನಾನಾದೇಶಿಗಳು ಹಲವು ಮುಂತಾದ ವ್ಯಾಪಾರಿ ಸಂಘಗಳು ಇಲ್ಲಿ ಸಕ್ರೀಯವಾಗಿದ್ದು, ಪ್ರಾಕೃತಿಕ ಸೌಲಭ್ಯಗಳನ್ನು ತಮ್ಮ ಆರ್ಥಿಕ ಲಾಭಕ್ಕಾಗಿ ಬಳಸಿಕೊಂಡರು. ಹೀಗೆ ಕ್ರಿಸ್ತಶಕದ ಆರಂಭದಿಂದ ಆರ್ಥಿಕ ಚಟುವಟಿಕೆ ಆರಂಭವಾದ ದಾಖಲೆಗಳು ಲಭ್ಯವಾದಂತೆ ಶಿಲಾಯುಗದ ಕಾಲದಿಂದ ಈ ಪ್ರದೇಶ ಹೊರನಾಡುಗಳೊಂದಿಗೆ ಸಂಪರ್ಕ ಹೊಂದಿದ್ದು, ಪುರಾತತ್ವ ಆಧಾರಗಳಿಂದ ತಿಳಿಯುತ್ತದೆ. [82]

ಕರ್ನಾಟಕದ ಪ್ರಾಚೀನ ಬಂದರು ಪಟ್ಟಣಗಳಲ್ಲಿ ಮಂಗಳೂರು ಒಂದು ಪ್ರಮುಖವಾದ ರೇವು ಪಟ್ಟಣವಾಗಿದೆ. ಗುರುಪುರ ನೇತ್ರಾವತಿ ನದಿಗಳು ಕಡಲು ಸೇರುವ ಸ್ಥಳದಲ್ಲಿ ವಿಸ್ತಾರವಾದ ಅಳಿವೆ ನಿರ್ಮಾಣವಾಗಿದ್ದು ದೊಡ್ಡ ದೊಡ್ಡ ಹಡಗುಗಳನ್ನು ಲಂಗರು ಮಾಡಬಹುದಾಗಿದೆ. ಇದು ಜಯಂತಿಕಾ ಪಟ್ಟಣವಾಗಿದ್ದು ಇದನ್ನು ಟಾಲೆಮಿ, ಕಾಸ್ಮಸ್ ಮುಂತಾದವರ ಕಥನಗಳಲ್ಲಿ ನೋಡಬಹುದಾಗಿದೆ. ಪೋರ್ಚುಗೀಸರು ಕ್ರಿ.ಶ.1498ರ ನಂತರ ಈ ಬಂದರಿನ ಮೇಲೆ ಏಕಸ್ವಾಮ್ಯವನ್ನು ಸಾದಿಸಿದರು. ಈ ಭಾಗದಲ್ಲಿ ವಿಜಯನಗರ ಅರಸರ ಸಹಾಯದಿಂದ ಪೋರ್ಚುಗೀಸರು ವ್ಯಾಪಾರವನ್ನು ಕೈಗೊಂಡಿದ್ದರು. ಕ್ರಿ.ಶ 16 ಮತ್ತು 17ನೇ ಶತಮಾನದ ಸಂದರ್ಭದಲ್ಲಿ ಈ ಭಾಗದಿಂದಲೇ ಇಡೀ ಅರಬ್ಬೀ ಸಮುದ್ರದ ಮೇಲೆ ನಿಯಂತ್ರಣ ಹೊಂದಿದ್ದರು.

**3.10 ವ್ಯಾಪಾರ ವಹಿವಾಟು ಆಮದು ಮತ್ತು ರಫ್ತು:**

ಕಿ.ಶ.15ನೇ ಶತಮಾನದಲ್ಲಿ ದಕ್ಷಿಣ ಭಾರತದ ವಿದೇಶೀ ವ್ಯಾಪಾರದ ವಿಶಿಷ್ಟ ಲಕ್ಷಣವೆಂದರೆ ಪಶ್ಚಿಮ ಕರಾವಳಿಯಲ್ಲಿ ಅದರಲ್ಲಿಯೂ ವಿಶೇಷವಾಗಿ ಮಲಬಾರಿನ ಕರಾವಳಿಯಲ್ಲಿ ವ್ಯಾಪಾರ ವ್ಯವಹಾರದ ಕೇಂದ್ರೀಕರಣ ಕಲ್ಲಿಕೋಟೆ ಅದರ ಅತ್ಯಂತ ಪ್ರಮುಖ ಕೇಂದ್ರವಾಗಿತ್ತು. ಕೆಂಪು ಸಮುದ್ರಕ್ಕೆ ಪೆಗು ಮತ್ತು ಮೆಕ್ಕಾದಿಂದ ಹೊರಟ ಹಡಗುಗಳು ಮಾರ್ಗಮಧ್ಯೆ ಕಲ್ಲಿಕೋಟೆಯಲ್ಲಿ ತಂಗಿ ವಿವಿಧ ಬಂದರುಗಳಲ್ಲಿ ವಿತರಣೆ ಮಾಡುವುದಕ್ಕಾಗಿ ಭಾರತೀಯ ವಸ್ತುಗಳನ್ನು ಒಯ್ಯುತ್ತಿದ್ದವು. ಮಡಗಾಸ್ಕರದಿಂದ ಮಲಕ್ಕಾವರೆಗೆ ಹಿಂದೂ ಮಹಾಸಾಗರದ ಎಲ್ಲಾ ಪ್ರಮುಖ ಬಂದರುಗಳಲ್ಲಿ ನೆಲೆಗೊಂಡಿದ್ದ ಮುಸ್ಲಿಮರ ಕೈಯಲ್ಲಿ ವ್ಯಾಪಾರವಿತ್ತು. ಕ್ರಿ.ಶ.15ನೇ ಶತಮಾನದ ನಂತರ ಪೋರ್ಚುಗೀಸರ ಕೈಯಲ್ಲಿ ವ್ಯಾಪಾರವಿತ್ತು. ಕ್ರಿ.ಶ 15ನೇ ಶತಮಾನದಲ್ಲಿ ಪೋರ್ಚುಗೀಸರ ಆಗಮನದೊಂದಿಗೆ ಮುಸ್ಲಿಮರ ಈ ಏಕಸ್ವಾಮ್ಯವು ಭಗ್ನವಾಯಿತು. ಇಮ್ಮಡಿ ದೇವರಾಯನ ಕಾಲದಲ್ಲಿ ಮತ್ತು 16ನೇ ಶತಮಾನದ ಅರಂಭದವರೆಗೆ ಕುದುರೆ ವ್ಯಾಪಾರವು ಬಹುಮಟ್ಟಿಗೆ ಒರ್ಮಜ್‌ನ ಮುಸ್ಲಿಂ ವರ್ತಕರ ಏಕಸ್ವಾಮ್ಯವಾಗಿತ್ತು. ಪೂರ್ವ ಕರಾವಳಿಯಲ್ಲಿ ಅಭಿವೃದ್ಧಿ ಹೊಂದಿದ ಮೊತ್ತುಪಲ್ಲಿಯ ಒಂದು ಪ್ರಮುಖ ಬಂದರಾಗಿತ್ತೆಂದು ಮತ್ತು ಅಲ್ಲಿಗೆ ಆಮದಾಗುತ್ತಿದ್ದ ವಿವಿಧ ಪದಾರ್ಥಗಳ ಮೇಲೆ ಅಮದು ಸುಂಕವನ್ನು ವಿಧಿಸಲಾಗುತ್ತಿತ್ತೆಂದು ನಮಗೆ ಕ್ರಿ.ಶ.1390ರ ಶಾಸನವೊಂದರಿಂದ ತಿಳಿದು ಬರುತ್ತದೆ.

**ಆಮದು:**

ಭೋಗದ ಮತ್ತು ಉಪಯೋಗದ ಅನೇಕ ವಸ್ತುಗಳು ಆಮದಾಗುತ್ತಿದ್ದವು. ಸಾಮ್ರಾಜ್ಯದಲ್ಲಿ ಕುದುರೆ ವ್ಯಾಪಾರವನ್ನು ಪ್ರಾರಂಭದಲ್ಲಿ ಅರಬ್ಬರು ಮಾಡುತಿದ್ದಂತೆ ತೋರುತ್ತದೆ. ಸೈನ್ಯಕ್ಕೆ ಅವಶ್ಯಕವಾದ ಆನೆಗಳನ್ನು ಶ್ರೀಲಂಕಾದಿಂದ ಬಂದ ವರ್ತಕರು ಸರಬರಾಜು ಮಾಡುತ್ತಿದ್ದರು. ಅಮದಾಗುತ್ತಿದ್ದ ಸರಕುಗಳೆಂದರೆ ಮುತ್ತು, ಹವಳ, ಪಾದರಸ, ಸಿಂಧೂರ, ಚೀನಾರೇಷ್ಮೆ ಮಖಮಲ್, ಸೀಸ, ತವರ, ಕಬ್ಬಿಣ, ರಸತವರ ವರ್ಣದ್ರವ್ಯ ಹಾಗೂ ಕರ್ಪೂರ ಇವು. ಸಾಮ್ರಾಜ್ಯದಲ್ಲಿ ಚಿನ್ನ ಲಭ್ಯವಿದ್ದರೂ, ನಾಣ್ಯ ತಯಾರಿಕೆಯ ಉದ್ದೇಶಗಳಿಗಾಗಿ ಸ್ವಲ್ಪ ಪ್ರಮಾಣದಲ್ಲಿ ಚಿನ್ನವನ್ನು ಎಡನ್, ಆಫ್ರಿಕಾದ ಬೆರ್ಬರ್ ಹಾಗೂ ಚೀನಾಗಳಿಂದ ಆಮದು ಮಾಡಿಕೊಳ್ಳಲಾಗುತ್ತಿದ್ದರೆ ಬೆಳ್ಳಿಯು ಪೂರ್ವ ದೇಶದಿಂದ ಆಮದಾಗುತ್ತಿತ್ತು. ಆನೆ ವ್ಯಾಪಾರದ ಏಕಸ್ವಾಮ್ಯವನ್ನು ಹೊಂದಿದ್ದಂತೆ ತೋರುವ ಶ್ರೀಲಂಕಾದ ಅರಸನು ಕೋರಮಂಡಲ ಕರಾವಳಿ ಮಲಬಾರ್ ಮತ್ತು ದಖ್ಖನ್ನಿನ ವರ್ತಕರಿಗೆ ಆನೆಗಳನ್ನು ಮಾರುತ್ತಿದ್ದನು..

ಭಾರತದ ಪಶ್ಚಿಮ ಘಟ್ಟದ ಅರಣ್ಯದಲ್ಲಿಯೇ ಆನೆಗಳು ದೊರೆಯುತ್ತಿದ್ದವಾದರೂ ವಿಜಯನಗರಕ್ಕೆ ಶ್ರೀಲಂಕಾದಿಂದ ಅವು ಸರಬರಾಜಾಗುತ್ತಿದ್ದು ಏಕೆನ್ನುವುದರ ಕಾರಣ ತಿಳಿಯುವುದಿಲ್ಲ. ಮಹಾಲಿಂಗಂರವರು ಇದಕ್ಕೆ ಎರಡು ಕಾರಣಗಳಿದ್ದಿರಬಹುದೆಂದು ಭಾವಿಸುತ್ತಾರೆ. ಮೊದಲನೆಯದಾಗಿ ಶ್ರೀಲಂಕಾದ ಆನೆಗಳು ಯುದ್ಧಗಳಲ್ಲಿ ಬಳಸಲು ಹೆಚ್ಚು ಸೂಕ್ತವಾಗಿದ್ದಿರಬೇಕು ಹಾಗೂ ಎರಡನೆಯದಾಗಿ ಉತ್ತರ ಭಾರತದ ಆನೆ ವ್ಯಾಪಾರಿಗಳಿಗೆ ವಿಜಯನಗರವನ್ನು ಸಂದರ್ಶಿಸಲು ಬಹುಮನಿ ಸುಲ್ತಾನರು ಅವಕಾಶ ಕೊಡದೆ ಇರಬಹುದು. ವಿಜಯನಗರದ ಅಶ್ವದಳದಲ್ಲಿ ಓರ್ಮಜಿನ ಕುದುರೆಗಳಿಗೆ ತುಂಬಾ ಬೇಡಿಕೆ ಇತ್ತು. ಅವುಗಳನ್ನು ಹೆಚ್ಚು ಬೆಲೆ ಕೊಟ್ಟು ಕೊಂಡುಕೊಳ್ಳಲಾಗುತ್ತಿತ್ತು. ಆದುದರಿಂದ ಕುದುರೆಗಳ ಉತ್ತಮ ಸರಬರಾಜು ವ್ಯವಸ್ಥೆ ಹೊಂದಿರಬೇಕೆಂಬ ಅರಸರ ಆಕಾಂಕ್ಷೆ–ನಿರೀಕ್ಷೆಗಳಿಂದ ಅವರ ವಿದೇಶಾಂಗ ನೀತಿಯು ಬಹುಮಟ್ಟಿಗೆ ಪ್ರಭಾವಿತವಾಗಿತ್ತು. ವ್ಯಾಪಾರಿಗಳ ಮೂಲಕ ಆಮದಾದ ಮತ್ತು ವಿಪರೀತ ಬೆಲೆಗೆ ಮಾರಾಟವಾಗುತ್ತಿದ್ದ ಕುದುರೆಗಳು ನೆರೆಹೊರೆಯ ಶತ್ರು ರಾಜ್ಯಗಳಿಗೆ ಸೇರಬಾರದೆಂಬ ಉದ್ದೇಶದಿಂದ ವಿಜಯನಗರದ ಅರಸರು ಕುದುರೆ ವ್ಯಾಪಾರಿಗಳನ್ನು ತಮ್ಮ ಮಿತ್ರರನ್ನಾಗಿ ಕಾಣುತ್ತಿದ್ದು, ಅವರ ಸ್ನೇಹ ವಿಶ್ವಾಸಗಳನ್ನು ಗಳಿಸಿದ್ದರೆಂದು ಈಶ್ವರದತ್ತ ಅವರು ಅಭಿಪ್ರಾಯಪಡುತ್ತಾರೆ.

ಸಾಂಬಾರ ಪದಾರ್ಥಗಳು ಸಾಮ್ರಾಜ್ಯದ ಪಶ್ಚಿಮ ಕರಾವಳಿಯಲ್ಲಿ ಲಭ್ಯವಿದ್ದರೂ ಲವಂಗ, ಏಲಕ್ಕಿ ಮತ್ತು ದಾಲ್ಚಿನ್ನಿಗಳಂಥ ಸಾಂಬಾರ ಪದಾರ್ಥಗಳನ್ನು ವಿಜಯನಗರದ ಅರಸರು ಆಮದು ಮಾಡಿಕೊಳ್ಳುತ್ತಿದ್ದರು. ದೇಶದಲ್ಲಿನ ಉತ್ಪನ್ನಗಳಿಗೆ ಅವನ್ನು ಹೋಲಿಸಿದರೆ ಅವು ಹೆಚ್ಚು ಉತ್ತಮ ಗುಣಮಟ್ಟವಾಗಿದ್ದವು. ಅವು ಬಹುಮಟ್ಟಿಗೆ ಮಲುಕಸ್ ಮತ್ತು ಶ್ರೀಲಂಕಾಗಳಿಂದ ಸರಬರಾಜಾಗುತ್ತಿದ್ದವು. ಬೋರ್ನಿಯೋ ಮತ್ತು ಸುಮಾತ್ರಗಳು ಗಣನೀಯವಾಗಿ ಕರ್ಪೂರವನ್ನು ಒದಗಿಸುತ್ತಿದ್ದವು. ಕರ್ಪೂರವು ತನ್ನ ತೂಕದಷ್ಟು ಬೆಳ್ಳಿಯ ಬೆಲೆ ಹೊಂದಿರುವಷ್ಟು ಭಾರತೀಯ ಗೌರವಧಾರಗಳಿಗೆ ಪಾತ್ರವಾಗಿತ್ತು. ನರಸಿಂಗ ಮಲಬಾರ್ ಮತ್ತು ದಖನ್‌ಗಳಿಗೆ ಬೆತ್ತದ ಕೊಳವೆಗಳಲ್ಲಿ ಅದರ ಪುಡಿಯನ್ನು ಅವರು ಒಯ್ಯುತ್ತಾರೆ. ಓರ್ಮುಜ್‌ನಿಂದ ಮುತ್ತುಗಳು ಬರುತ್ತಿದ್ದವು ಹಾಗೂ ಮೆಕ್ಕಾದಿಂದ ಮಖಮಲ್ ಬರುತ್ತಿತ್ತು. ಚೀನಾದಿಂದ ಅಫೀಮು ಆಮದಾಗುತ್ತಿತ್ತು. ಸುಗಂಧ ದ್ರವ್ಯಗಳಲ್ಲಿ ಕೇಸರಿ ಮತ್ತು ಪನ್ನೀರು ಜಿಡ್ಡಾದಿಂದ ಹಾಗೂ ಕಸ್ತೂರಿಯು ಆವಾದಿಂದ ಬರುತ್ತಿದ್ದವು.

**ಆಮದು ಸರಕುಗಳ ವಿಂಗಡಣೆ:**

ಭಾರತಕ್ಕೆ ಆಮದಾಗುತ್ತಿದ್ದ ವಸ್ತುಗಳನ್ನು ಅವುಗಳ ಗುಣಲಕ್ಷಣ ಆಧಾರದ ಮೇಲೆ ಹಲವಾರು ಭಾಗಗಳಾಗಿ ವಿಂಗಡಿಸಲಾಗಿತ್ತು. 1) ಅವಶ್ಯಕ ವಸ್ತುಗಳು 2)ಕಚ್ಚಾ ವಸ್ತುಗಳು ಮತ್ತು 3) ಐಷರಾಮಿ ವಸ್ತುಗಳು. ಈ ವಿಂಗಡಣೆಯು ಸಾಮ್ರಾಜ್ಯದಲ್ಲಿ ಜನರು ಬಳಸುವ ಆಧಾರದ ಮೇಲೆ ವಿಂಗಡಿಸಲಾಗಿತ್ತು. ಸಾಮ್ರಾಜ್ಯವು ಚಿನ್ನ ಮತ್ತು ಬೆಳ್ಳಿಯನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು. ಈ ವಸ್ತುಗಳು ಅವಶ್ಯಕ ವಸ್ತುಗಳೆಂದು ಕರೆಯಲಾಗುತ್ತಿತ್ತು. ಅತಿ ಹೆಚ್ಚು ಪ್ರಮಾಣದ ಚಿನ್ನ ಮತ್ತು ಬೆಳ್ಳಿ ಆಭರಣಗಳ ತಯಾರಿಕೆಗೆ ಬಳಸಲಾಗುತ್ತಿತ್ತು. ಪ್ರಮುಖ ಆಮದು ಸರಕುಗಳನ್ನು ಈ ಕೆಳಗೆ ವಿವರಿಸಲಾಗಿದೆ.

**ಔಷಧಿ ಮತ್ತು ಕರ್ಪೂರ:**

ಹಲವಾರು ಔಷಧಿಗಳು ವಿಜಯನಗರಕ್ಕೆ ಆಮದಾಗುತ್ತಿದ್ದವು. ಭಾರತ ಯಥೇಚ್ಚವಾಗಿ ಆಯುರ್ವೇದ ಮತ್ತು ಸ್ಥಳೀಯ ಔಷಧಿಗಳನ್ನು ಬಳಸುತ್ತಿದ್ದರು ಹಾಗೂ ಹಲವಾರು ವಿವಿಧ ಬಗೆಯ ಔಷಧಿಗಳು ತಯರಾಗುತ್ತಿದ್ದವು. ಆದರೂ ಕೂಡ ಸಾಮ್ರಾಜ್ಯದ ಅರಸರು ಹಲವಾರು ಔಷಧಿಗಳನ್ನು ಆಮದು ಮಾಡಿಕೊಳ್ಳುತ್ತಿದ್ದರು. ಅವುಗಳೆಂದರೆ 1) ಕಿತ್ತಾಳೆಗಿಡ 2) ಕರ್ಪೂರ 3) ಸಾಂಬ್ರಾಣಿ 4) ಸುಗಂಧ ವನಸ್ಪತಿ 5) ಗೇರುಮರ ಮುಂತಾದವು. ಕರ್ಪೂರವನ್ನು ದೂಪ ಮತ್ತು

ವೀಳ್ಯದೆಲೆ ಜಿಗಿಯುವುದಕ್ಕೂ ಬಳಸುತ್ತಿದ್ದರು. ಎರಡು ಬಗೆಯ ಕರ್ಪೂರಗಳು ಚಾಲ್ತಿಯಲ್ಲಿದ್ದವು. 1) ಮಲಯನ್ ಬಗೆ 2) ಚೀನಾದ ಬಗೆ ಮಲಯನ್ ಬಗೆಯ ಕರ್ಪೂರವು ಅತಿ ಹೆಚ್ಚಾಗಿ ಸುಮಾತ್ರ ಮತ್ತು ಬೊರೆನೋದಲ್ಲಿ ದೊರಕುತ್ತಿತ್ತು. ಈ ಬಗೆಯ ಕರ್ಪೂರಗಳ ಬೇರೆ ಕರ್ಪೂರಗಳಿಗಿಂತ ಹೆಚ್ಚು ಮೌಲ್ಯ ಹೊಂದಿದ್ದವು. ಭಾರತೀಯರು ಕರ್ಪೂರವನ್ನು ಗೌರವದಿಂದ ಕಾಣುತ್ತಿದ್ದರು.[83]

ರಾಜರು ಒತ್ತಾಯಪೂರ್ವಕವಾಗಿ ಎಲ್ಲಾ ಸರಕುಗಳನ್ನು ತಮ್ಮ ಬಳಿ ತೆಗೆದುಕೊಂಡು ಹೋಗುತ್ತಿದ್ದರು. ಚಿನ್ನ, ಆನೆಗಳು, ಕುದುರೆಗಳು, ಹವಳಗಳು ಮುಂತಾದವುಗಳನ್ನು ನೇರವಾಗಿ ತಮ್ಮ ವಶಕ್ಕೆ ಪಡೆದುಕೊಳ್ಳುತ್ತಿದ್ದರು. ಒಂದು ಪಗೋಡದ ಮೌಲ್ಯದ ಪನ್ನೀರು, ದಂತ, ಕರ್ಪೂರ, ಪುನಗಿನ ಬೆಕ್ಕು, ತಾಮ್ರ, ರೇಷ್ಮೆ ದಾರಗಳು, ಸುಗಂಧ ದ್ರವ್ಯಗಳು 1 1/4 ಮತ್ತು 1/8ನೇ ಪಾನಂಗಳಿಗೆ ಸಮನಾಗಿತ್ತು.[84] ಒಂದು ಪಗೋಡದ ಸಾಂಬಾರದ ಮೌಲ್ಯ 3/4 ಮತ್ತು 1/8 ನೇ ಪಾನಂಗೆ ಸಮನಾಗಿತ್ತು. ಪ್ರತಿ ಒಂದು ಲಕ್ಷ ಅಡಿಕೆಯ ಮೌಲ್ಯದ ಬೆಲೆ ಒಂದು ಪಗೋಡವಾಗಿತ್ತು. ವಿಜಯನಗರ ಸಾಮ್ರಾಜ್ಯದ ರಾಜರು ವ್ಯಾಪಾರ ಮತ್ತು ವಾಣಿಜ್ಯವನ್ನು ರಕ್ಷಿಸುವಂತಹ ಉದ್ದೇಶದಿಂದ ಈ ವ್ಯಾಪಾರಕ್ಕೆ ಭದ್ರತೆ ಒದಗಿಸಿದ್ದರು. ಎರಡು ಬಗೆಯ ಸಾಂಬ್ರಾಣಿಗಳಿದ್ದವು. 1) ಬಿಳಿಯ ಬಗೆ 2) ಕಂದುಬಣ್ಣದ ಬಗೆ, ಕಂದುಬಣ್ಣದ ಬಗೆ ಭಾರತದಲ್ಲಿ ತಯಾರಾಗುತ್ತಿತ್ತು. ಬಿಳಿ ಬಣ್ಣದ ಬಗೆ ಅರೇಬಿಯಾದಿಂದ ಆಮದಾಗುತ್ತಿತ್ತು. ಬಾರ್ಬೋಸಾನ ಪ್ರಕಾರ ಒಂದು ಕ್ವಿಂಟಾಲ್ ಸಾಂಬ್ರಾಣಿಯ ದರ ಸುಮಾರು 150 ರೈಸ್‌ಗಳು.

**ಸುಗಂಧದ್ರವ್ಯಗಳು  ಅಮೂಲ್ಯ ರತ್ನಗಳು ಮತ್ತು ರೇಷ್ಮೆ:**

ಬಾರ್ಬೋಸನ ದಾಖಲೆಗಳು ಭಾರತಕ್ಕೆ ಹಲವಾರು ಸುಗಂಧ ದ್ರವ್ಯಗಳು ಆಮದಾಗುತ್ತಿದ್ದುದರ ಬಗ್ಗೆ ಮಾಹಿತಿ ನೀಡುತ್ತವೆ. ಕೇಸರಿ ಮತ್ತು ಪನ್ನೀರು ಜಿದ್ದಾದಿಂದ ಆಮದಾಗುತ್ತಿದ್ದವು. ಪನ್ನೀರು ಅದೇನ್ ನಿಂದಲೂ, ಅವದ ರಾಜಧಾನಿಯಿಂದ ಕಸ್ತೂರಿಯು ಅರೇಬಿಯಾದಿಂದ ದಂತ ಆಮದಾಗುತ್ತಿತ್ತು. ಈ ಸರಕುಗಳಿಗಿಂದ ವ್ಯಾಪಾರಿಗಳು ಉತ್ತಮ ಲಾಭವನ್ನು ಮಾಡುತ್ತಿದ್ದರು. ವಿಜಯನಗರ ಸಾಮ್ರಾಜ್ಯ ಹಲವಾರು ಅಮೂಲ್ಯ ರತ್ನಗಳನ್ನು ಆಮದು ಮಾಡಿಕೊಳ್ಳುತ್ತಿತ್ತು. ಇವುಗಳು ಕಚ್ಚಾ ವಸ್ತುಗಳಾಗಿದ್ದವು. ನಂತರ ಕಚ್ಚಾ ವಸ್ತುಗಳನ್ನು ಆಭರಣಗಳ ತಯಾರಿಕೆಗೆ ಬಳಸಲಾಗುತ್ತಿತ್ತು. ದಕ್ಷಿಣ ಭಾರತದ ಪ್ರಮುಖ ಬಂದರುಗಳಿಂದ ಮುತ್ತುಗಳು ಮತ್ತು ರತ್ನಗಳನ್ನು ರಫ್ತುಮಾಡಲಾಗುತ್ತಿತ್ತು. ವಿವಿಧ ಬಗೆಯ ಮುತ್ತುಗಳು ಬೇರೆ

ದೇಶಗಳಿಂದ ಆಮದಾಗುತ್ತಿದ್ದವು. ರೂಬಿ ಮತ್ತು ವಜ್ರವು ಪೆಗು, ಬರ್ಮಾ ಮತ್ತು ಶ್ರೀಲಂಕಾದಿಂದ ಆಮದಾಗುತ್ತಿದ್ದವು.[85]

ಭಾರತವು ಕೆಲವೊಂದು ಮೊದಲೇ ತಯರಾದ ಪದಾರ್ಥಗಳನ್ನು ಆಮದು ಮಾಡಿಕೊಳ್ಳುತ್ತಿತ್ತು. ಅವುಗಳೆಂದರೆ ಚೀನಾದ ಪಿಂಗಾಣಿಗಳು ಹಿತ್ತಾಳೆ, ಅಡುಗೆ ವಸ್ತುಗಳು, ವಿವಿಧ ಬಗೆಯ ವಸ್ತ್ರಗಳು ಮತ್ತು ಅಪೀಮು ಮುಖ್ಯವಾದವುಗಳಾಗಿದ್ದವು.

**ಲೋಹಗಳು:**

ಚಿನ್ನವು ಅದೇನ್, ಮಿಲೆಂದಿ, ಮಗಡೊಕ್ಸೋ, ಬರ್‌ಬೀರ್ ಆಫ್ರಿಕಾ ಮತು ಚೀನಾದಿಂದ ಆಮದಾಗುತ್ತಿದ್ದವು. ಬೆಳ್ಳಿಯು ಪೂರ್ವದಿಂದ ಬರುತ್ತಿತ್ತು. 13ನೇ ಶತಮಾನದಲ್ಲಿ ಚೀನಾ ಸರ್ಕಾರವು ಲೋಹಗಳ ರಫ್ತು ಪ್ರಕ್ರಿಯೆಯನ್ನು ರದ್ದುಗೊಳಿಸಿತು. ನಂತರ ಪಶ್ಚಿಮ ದೇಶಗಳ ಕಡೆ ಮುಖಮಾಡಿ ಅವರೊಂದಿಗೆ ನೇರ ವ್ಯಾಪಾರ ನಡೆಸತೊಡಗಿತ್ತು.

**ಆನೆಗಳು:**

ಆನೆಗಳು ಭಾರತದಲ್ಲಿ ಅತಿ ಹೆಚ್ಚು ಪ್ರಾಮುಖ್ಯತೆ ಗಳಿಸಿದ್ದವು. ಭಾರತದ ಯುದ್ಧ ಭೂಮಿಯಲ್ಲಿ ಅವುಗಳಿಗೆ ಬಹಳಷ್ಟು ಬೇಡಿಕೆಯಿತ್ತು. ಹಾಸನದಲ್ಲಿ ದೊರಕಿರುವ ಕ್ರಿ.ಶ.1188ನೇ ಶಾಸನವು ಉಲ್ಲೇಖಿಸುವ ಪ್ರಕಾರ ವ್ಯಾಪಾರಿಗಳು ಆನೆಗಳನ್ನು ಹಡಗುಗಳಿಂದ ತರಿಸಿಕೊಂಡು ಅವುಗಳನ್ನು ಸ್ಥಳೀಯ ರಾಜರಿಗೆ ಮಾರಾಟ ಮಾಡುತ್ತಿದ್ದರು. ಅತಿ ಹೆಚ್ಚು ಆನೆಗಳು ಶ್ರೀಲಂಕಾ ಮತ್ತು ಪೆಗುವಿನಿಂದ ಆಮದಾಗುತ್ತಿದ್ದವು.[86] ವಿಜಯನಗರದ ಅರಸರು ವ್ಯಾಪಾರದ ಏಕಸ್ವಾಮ್ಯವನ್ನು ಪಡೆದಿದ್ದರು. ತರಭೇತಿ ಪಡೆದಿದ್ದ ಉತ್ತಮ ತಳಿಯ ಆನೆಗಳು ಅತಿ ಹೆಚ್ಚು ಬೆಲೆಗಳನ್ನು ಹೊಂದಿದ್ದವು.

**ಕುದುರೆಗಳು:**

ವಿಜಯನಗರ ಸಾಮ್ರಾಜ್ಯದ ವ್ಯಾಪಾರ ಮತ್ತು ವಾಣಿಜ್ಯ ಕ್ಷೇತ್ರದಲ್ಲಿ ಕುದುರೆಗಳ ಆಮದು ಉತ್ತಮವಾದ ಪಾತ್ರವನ್ನು ನಿರ್ವಹಿಸುತ್ತಿತ್ತು. ಕುದುರೆಗಳ ಬೇಡಿಕೆಗೆ ಪ್ರಮುಖವಾಗಿ ಎರಡು ಕಾರಣಗಳಿದ್ದವು. 1) ಸೈನ್ಯದ ಅವಶ್ಯಕತೆಗೆ 2) ವಿದೇಶಿ ಕುದುರೆಗಳ ವಿಶಿಷ್ಟವಾದ ಸಾಮರ್ಥ್ಯ, ವಿಜಯನಗರ ಸಾಮ್ರಾಜ್ಯವು ಮತ್ತು ಬಹುಮನಿ ಸಾಮ್ರಾಜ್ಯವು ಉತ್ಕ್ರಮವಾದ ಅಶ್ವದಳವನ್ನು ಹೊಂದಿದ್ದವು. ವಿಜಯನಗರ ಸಾಮ್ರಾಜ್ಯದ ಹಲವಾರು ಕುಟುಂಬಗಳು ಅಶ್ವದಳದಲ್ಲಿ ಕೆಲಸ

ಪಡೆದಿದ್ದವು. ಪ್ರತಿವರ್ಷ ಸಾವಿರಾರು ಕುದುರೆಗಳು ವಿಜಯನಗರ ಸಾಮ್ರಾಜ್ಯದಲ್ಲಿ ಬೇಡಿಕೆ ಹೊಂದಿದ್ದವು. ಕೆಲವು ನಂಬಿಕಸ್ಥ ಬರಹಗಾರರಾದ ಪ್ರಕಾರ ಅತಬಕ್ ಅಬೂಬಕರ್ ಪ್ರಕಾರ ವಾರ್ಷಿಕ ಸುಮಾರು 10,000 ಕುದುರೆಗಳು ಭಾರತದ ಮಲಬಾರ್ ಬಂದರುಗಳಿಗೆ ಆಮದಾಗುತ್ತಿದ್ದವು. ಕುದುರೆಗಳು ಸಾಗಾಣಿಕೆಯ ಸಂದರ್ಭದಲ್ಲಿ ಗಾಯಗೊಂಡರೂ, ಮರಣ ಹೊಂದಿದರೂ ಸಾಮ್ರಾಜ್ಯದ ಅರಸರು ಹಣವನ್ನು ಕಟ್ಟಲೇಬೇಕಿತ್ತು. ಈ ವ್ಯಾಪಾರದಲ್ಲಿ ತೊಡಗಿದ್ದ ಮಧ್ಯವರ್ತಿಗಳು ಮತ್ತು ಏಜೆನ್ಸಿಗಳಿಗೆ ಯಾವುದೇ ತೊಂದರೆಗಳಾಗದಂತೆ ರಾಜರು ನೋಡಿಕೊಳ್ಳಬೇಕಿತ್ತು.[87]

ಕ್ರಿ.ಶ.14 ಮತ್ತು 15ನೇ ಶತಮಾನದಲ್ಲಿ ಕುದುರೆಗಳ ಬೇಡಿಕೆ ಮತ್ತಷ್ಟು ಹೆಚ್ಚಾಯಿತು. ನ್ಯೂನಿಚನ ಪ್ರಕಾರ ಪ್ರತಿವರ್ಷ ವಿಜಯನಗರದ ಅರಸ ಸುಮಾರು 13,000 ಕುದುರೆಗಳನ್ನು ಓರ್ಮಜ್‌ನಿಂದ ಖರೀದಿಸುತ್ತಿದ್ದನು. ಪೋರ್ಚುಗೀಸರು ಭಾರತಕ್ಕೆ ಬಂದ ನಂತರ ಕುದುರೆ ವ್ಯಾಪಾರದ ಮೇಲೆ ಏಕಸಾಮ್ಯಗಳಿಸಿದ್ದರು, ಪೋರ್ಚುಗೀಸರು ವಿಜಯನಗರ ಮತ್ತು ದಖನ್ನಿನ ರಾಜರೊಂದಿಗೆ ವ್ಯಾಪಾರ ಸಂಪರ್ಕವನ್ನು ಏರ್ಪಡಿಸಿಕೊಂಡರು. ಅಲ್ಬುಕರ್ಕ್‌ನು ವಿಜಯನಗರ ಸಾಮ್ರಾಜ್ಯ ಮತ್ತು ದಕ್ಷಿಣ ರಾಜ್ಯಗಳ ಕುದುರೆಗಳ ಬೇಡಿಕೆಯನ್ನು ಸಮರ್ಪಕವಾಗಿ ತಿಳಿದಿದ್ದ ಹಾಗೂ ಸಾಮ್ರಾಜ್ಯಗಳು ಅತಿ ಹೆಚ್ಚಾಗಿ ಕುದುರೆಗಳ ಮೇಲೆ ಅವಲಂಬಿತವಾಗಿದ್ದರು. ಗೋವಾವನ್ನು ಪೋರ್ಚುಗೀಸರು ವಶಪಡಿಸಿಕೊಂಡ ಮೇಲೆ ಕುದುರೆ ವ್ಯಾಪಾರ ಪೋರ್ಚುಗೀಸರ ಪಾಲಾಯಿತು. ಕ್ರಿ.ಶ.1514ರಲ್ಲಿ ಕೃಷ್ಣದೇವರಾಯನು ಅಲ್ಬುಕರ್ಕ್‌ನಿಗೆ ಕುದುರೆ ವ್ಯಾಪಾರದ ಅನುಮತಿಯನ್ನು ನೀಡಿದನು. ಹಾಗೂ ಸುಮಾರು ಇಪ್ಪತ್ತು ಸಾವಿರ ಕುದುರೆಗಳ ಬೇಡಿಕೆ ಇಟ್ಟಿದ್ದನೆಂದು ಹೇಳಲಾಗುತ್ತದೆ.

ಕುದುರೆಗಳನ್ನು ಆಮದು ಮಾಡಿಕೊಳ್ಳುತ್ತಿದ್ದ ವಿಜಯನಗರದ ಅರಸರು ನಂತರ ಸಾಮ್ರಾಜ್ಯದಲ್ಲೇ ಕುದುರೆಗಳ ಸಂತಾನ ಕಾರ್ಯವನ್ನು ಮಾಡತೊಡಗಿದರು. ಆದರೆ ಕುದುರೆಗಳ ಸಂತಾನೋತ್ಪತ್ತಿ ಕ್ರಮಬದ್ಧವಾಗಿ ನಡೆಯದೇ ಕುದುರೆಗಳು ಮರಣ ಹೊಂದಿದವು. ಕುದುರೆಗಳಿಗೆ ಬೇಯಿಸಿದ ಅಕ್ಕಿ, ಬೇಯಿಸಿದ ಮಾಂಸ ಮತ್ತು ಉಳಿದ ಬಗೆಯ ಆಹಾರಗಳನ್ನು ನೀಡುತ್ತಿದ್ದರು. ಕುದುರೆಗೆ ಹಸುವಿನ ಹಾಲು ಕೊಡುತ್ತಿದ್ದರು. ಕುದುರೆಗಳಿಗೆ ತರಬೇತಿಯನ್ನು ಸಹ ನೀಡಲಾಗುತ್ತಿತ್ತು. ಕುದುರೆಗಳನ್ನು ಸುಮಾರು 40 ದಿನಗಳ ವರೆಗೆ ಒಂದು ಕಡೆ ಕಟ್ಟಿಹಾಕಿ ಆಹಾರವನ್ನು ನೀಡಿ ಅವುಗಳನ್ನು ಪುಷ್ಟಿಗೊಳಿಸಿ ನಂತರ ಅವುಗಳಿಗೆ ತರಬೇತಿ ನೀಡಲಾಗುತ್ತಿತ್ತು. ಈ ಸಂದರ್ಭದಲ್ಲಿ ಕೆಲವು ಕುದುರೆಗಳು ಸಾವನ್ನಪ್ಪುತ್ತಿದ್ದವು. ಕೆಲವು ಬಹಳ ದೊಡ್ಡದಾದ

ಆರೋಗ್ಯ ಸಮಸ್ಯೆಗೆ ಒಳಗಾಗುತ್ತಿದ್ದವು. ಇದರಿಂದಾಗಿ ಹಲವಾರು ಕುದುರೆಗಳು ಸಾವನ್ನಪ್ಪುತ್ತಿದ್ದವು, ಈ ಕೆಟ್ಟ ತರಬೇತಿ ಮತ್ತು ಕೆಟ್ಟದಾದ ಆಹಾರ ಪದ್ದತಿ ಕುದುರೆಗಳ ಸಾವಿಗೆ ಕಾರಣವಾಗಿತ್ತು. ಅರೇಬಿಯಾ, ಸಿರಿಯಾ ಮತ್ತು ಟರ್ಕಿ ಕುದುರೆ ವ್ಯಾಪಾರದಲ್ಲಿ ಹೆಚ್ಚು ಮುಂಚೂಣಿಯಲ್ಲಿದ್ದ ದೇಶಗಳೂ ಕೇವಲ ವಿದೇಶಗಳಿಂದ ಆಮದು ಮಾತ್ರವಲ್ಲದೇ ಉತ್ತರ ಭಾರತದ ಲಾಹೋರಿನಿಂದಲೂ ಹಲವಾರು ಕುದುರೆಗಳು ಆಮದಾಗುತ್ತಿದ್ದವು.

**ರಫ್ತು**

ವಿಜಯನಗರ ಸಾಮ್ರಾಜ್ಯವು ಪರ್ಷಿಯಾ, ಅರೇಬಿಯಾ, ಆಫ್ರಿಕಾ ಚೀನಾ ಶ್ರೀಲಂಕಾ ಮತ್ತು ಯೂರೋಪಿನ ದೇಶಗಳೊಂದಿಗೆ ವಾಣಿಜ್ಯ ಸಂಪರ್ಕವನ್ನು ಹೊಂದಿತ್ತು. ಗುಜರಾತ್ ಬಂದರುಗಳು ದಕ್ಷಿಣದ ಬಂದರುಗಳೊಂದಿಗೆ ವ್ಯಾಪಾರವನ್ನು ಹೊಂದಿದ್ದವು. ಪರ್ಷಿಯನ್ ಕೊಲ್ಲಿಯಲ್ಲಿ ಓರ್ಮಜ್ ದೊಡ್ಡ ವ್ಯಾಪಾರ ಬಂದರಾಗಿತ್ತು. ಸಾಮ್ರಾಜ್ಯದಿಂದ ರಫ್ತಾಗುತ್ತಿದ್ದ ಪ್ರಮುಖ ಪದಾರ್ಥಗಳೆಂದರೆ ಅಕ್ಕಿ, ಬಟ್ಟೆ, ಕಬ್ಬಿಣ, ಸಕ್ಕರೆ ಹಾಗೂ ಸಾಂಬಾರ ಪದಾರ್ಥಗಳು, ಅಕ್ಕಿಯು ಅತ್ಯಂತ ಮುಖ್ಯವಾದ ಕೃಷಿ ಉತ್ಪನ್ನವಾಗಿದ್ದು ಬಸ್ರೂರು, ಬಾರ್ಕೂರು ಹಾಗೂ ಮಂಗಳೂರು ಮತ್ತು ಮಲಬಾರ್‌ಗಳಿಂದ ಮಾಲ್ಡೀವ್ಸ್ ದ್ವೀಪಗಳು, ಓರ್ಮಜ್ ಮತ್ತು ವಡನ್‌ಗಳಿಗೆ ರಫ್ತಾಗುತ್ತಿತ್ತು. ಸಕ್ಕರೆ ಗೋದಿ ಮತ್ತು ಕಾಳುಗಳು ಕೂಡ ವಿದೇಶಗಳಿಗೆ ರಫ್ತಾಗುತ್ತಿದ್ದವು. ಪುಡಿ ಮಾಡಿದ ಸಕ್ಕರೆಯನ್ನು ಭಟ್ಕಳದಿಂದ ಓರ್ಮಜಿಗೆ ರಫ್ತು ಮಾಡಲಾಗುತ್ತಿತ್ತು. ಶ್ರೀಗಂಧ ಮತ್ತು ತೇಗದ ಮರಗಳನ್ನು ಅರೇಬಿಯಾದ ಅತಿ ಸಮೀಪದ ದೇಶಗಳಿಗೆ ಕಳುಹಿಸಲಾಗುತ್ತಿತ್ತು. ಸಾಂಬಾರ ಪದಾರ್ಥಗಳಿಗಾಗಿ ಮೆಕ್ಕಾದಿಂದ ಹಡಗುಗಳು ಬರುತ್ತಿದ್ದವು. ಪಶ್ಚಿಮ ಕರಾವಳಿಯಲ್ಲಿ ಬೃಹತ್ ಪ್ರಮಾಣದಲ್ಲಿ ಬೆಳೆಯುತ್ತಿದ್ದ ಶುಂಠಿಯು ಪರ್ಷಿಯ ಮತ್ತು ಯಮನ್‌ಗಳಿಗೆ ರಫ್ತಾಗುತ್ತಿತ್ತು. ವಿಜಯನಗರದ ವರ್ತಕರಿಂದ ಪೋರ್ಚುಗೀಸರು ಬಟ್ಟೆಯನ್ನು ಅಂಕೋಲಾ ಅಥವಾ ಹೊನ್ನಾವರದಲ್ಲಿ ಖರೀದಿಸುತ್ತಿದ್ದರು. ಮೆಕ್ಕಾ, ಪೆಗು ಮತ್ತು ಸುಮಾತ್ರಗಳಿಗೆ ವಿನ್ಯಾಸ ಮುದ್ರಿತ ಬಟ್ಟೆಯು ಪುಲಿಕಟ್ ಮತ್ತು ಮೈಲಾಪುರಗಳಿಂದ ಬೃಹತ್ ಪ್ರಮಾಣದಲ್ಲಿ ರಫ್ತಾಗುತ್ತಿತ್ತು.

ಕ್ರಿ.ಶ.1336ರಲ್ಲಿ ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ಆರ್ಥಿಕ ಇತಿಹಾಸದಲ್ಲಿ ಮಹತ್ವದ ಮೈಲಿಗಳೆಂದು ಹೇಳಬಹುದು. ದಕ್ಷಿಣ ಭಾರತದಲ್ಲಿ ಆಳ್ವಿಕೆ ನಡೆಸಿದ ಹಲವಾರು ಸಾಮ್ರಾಜ್ಯಗಳಲ್ಲಿ ಇದು ಬಹಳ ವಿಶಿಷ್ಟವಾದ ಸಾಮ್ರಾಜ್ಯ. ಅತಿ ಕಡಿಮೆ ಕಾಲಾವಧಿಯ ಆಡಳಿತ ಅವಧಿಯಲ್ಲಿ ಸಂಗಮ ವಂಶವು 2ನೇ ದೇವರಾಯನ ಕಾಲದಲ್ಲಿ ದಕ್ಷಿಣ ಭಾರತದ ಪಶ್ಚಿಮ ಮತ್ತು ಪೂರ್ವ

ಬಂದರುಗಳ ಮೇಲೆ ಏಕಸಾಮ್ಯ ಸಾದಿಸಿತ್ತು. ಇದರಿಂದ ಮಹತ್ವಪೂರ್ಣವಾದ ಸಾಧನೆ, ಕೇವಲ ರಾಜಕೀಯ ವಾಗಲ್ಲ ಆರ್ಥಿಕವಾಗಿ ವಿದೇಶೀ ವ್ಯಾಪಾರದ ಬೆಳವಣಿಗೆಗೆ ಇದು ಸಹಾಯಕರವಾಯಿತು. ಕೃಷ್ಣದೇವರಾಯನ ಕಾಲದಲ್ಲಿ ವಿಜಯನಗರ ಸಾಮ್ರಜ್ಯವು ಪರಾಕಾಷ್ಟತೆಯನ್ನು ತಲುಪಿತ್ತು. ಇದು ವಿದೇಶೀ ವ್ಯಾಪಾರಕ್ಕೆ ನಾಂದಿಯಾಯಿತು. ವಿಜಯನಗರ ಅರಸರು ಸ್ನೇಹಯುತ ಸಂಬಂಧ ವಿದೇಶಿಯರೊಂದಿಗೆ ಉದಾರತೆ ವಿದೇಶಿ ವ್ಯಾಪಾರಕ್ಕೆ ಕಾರಣವಾಯಿತು.

ವಿಜಯನಗರ ಸಾಮ್ರಾಜ್ಯವು ರಫ್ತು ವ್ಯಾಪಾರದಲ್ಲಿ ಬಹಳಷ್ಟು ಪ್ರಾಮುಖ್ಯತೆ ಗಳಿಸಿತ್ತು. ಯೂರೋಪಿಯನ್ನರು ದಕ್ಷಿಣ ಭಾರತದ ಸಾಮ್ರಾಜ್ಯದೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದರು. ಯೂರೋಪಿನ ಪ್ರವಾಸಿಗರ ದಾಖಲೆಗಳಲ್ಲಿ ಅಂದಿನ ವ್ಯಾಪಾರದ ಮಾಹಿತಿಯನ್ನು ತಿಳಿಯಬಹುದು. ಈ ಸಾಮ್ರಾಜ್ಯವು ಶ್ರೀಲಂಕಾ, ಚೀನಾ, ಯೂರೋಪಿನ ದೇಶಗಳು, ಆಗ್ನೇಯ ಏಷ್ಯಾ ಮತ್ತು ಮಧ್ಯಪ್ರಾಚ್ಯದೊಂದಿಗೆ ವ್ಯಾಪಾರ ಸಂಪರ್ಕ ಹೊಂದಿತ್ತು. ಕ್ರಿ.ಶ.1498ರಲ್ಲಿ ಭಾರತಕ್ಕೆ ಪೋರ್ಚುಗೀಸರು ಬಂದಾಗ ಭಾರತದಲ್ಲಿ ಅರಬ್ಬರು ಮತ್ತು ಚೀನಿಯರು ತಮ್ಮ ವ್ಯಾಪಾರ ಏಕಸ್ವಾಮ್ಯವನ್ನು ಹೊಂದಿದ್ದರು. ಪೋರ್ಚುಗೀಸರ ಆಗಮನ ಅರಬ್ಬರ ವ್ಯಾಪಾರ ಏಕಸ್ವಾಮ್ಯವನ್ನು ಮುರಿಯಿತು. ಪೋರ್ಚುಗೀಸರು ಅರಬ್ಬರಿಂದ ವ್ಯಾಪಾರ ವಹಿವಾಟುನ್ನು ವಶಪಡಿಸಿಕೊಂಡ ಮೇಲೆ ರಾಜಕೀಯ ಕ್ಷೇತ್ರದಲ್ಲಿ ಮಾತ್ರವಲ್ಲದೇ ವಿದೇಶೀ ವ್ಯಾಪಾರದ ಆರ್ಥಿಕ ಕ್ಷೇತ್ರದಲ್ಲಿ ಏಕಸ್ವಾಮ್ಯಗಳಿಸಿದ್ದರು. ಭಾರತದಲ್ಲದ ವ್ಯಾಪಾರಿ ಸಂಘಗಳು ವಿದೇಶೀ ವ್ಯಾಪಾರದ ಮಧ್ಯವರ್ತಿಗಳಾಗಿ ಕಾರ್ಯ ನಿರ್ವಹಿಸಿದವು. ವಿದೇಶಿಯರಿಗೆ ಸರಕುಗಳನ್ನು ಒದಗಿಸಿದವು. ಮತ್ತು ವಿದೇಶಿಯರಿಂದ ಸರಕುಗಳನ್ನು ಪಡೆದು ಮಾರಾಟ ಮಾಡಿದವು. ಪ್ರಮುಖ ರಫ್ತುಗಳು ಈ ಕೆಳಕಂಡಂತಿವೆ.

**ಸಾಂಬಾರ ಪದಾರ್ಥಗಳು ಮುಖ್ಯವಾಗಿ ಮೆಣಸು:**

ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಕರ್ನಾಟಕವು ತನ್ನ ಪಶ್ಚಿಮ ಕರಾವಳಿಯಿಂದ ಸಾಂಬಾರ ಪದಾರ್ಥಗಳನ್ನು ರಫ್ತು ಮಾಡುತ್ತಿತ್ತು. ಸಾಂಬಾರ ಪದಾರ್ಥಗಳಲ್ಲಿ ಮೆಣಸು ಬಹಳ ಬೇಡಿಕೆ ಪಡೆದಿದ್ದ ಸರಕಾಗಿತ್ತು. ಉತ್ತರ ಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳು ಮೆಣಸು ಬೆಳೆಯುವಲ್ಲಿ ಪ್ರಮುಖ ಪಾತ್ರ ವಹಿಸಿದ್ದವು. ಕಾರವಾರದ ಮೆಣಸು ವಿಶ್ವ ಪ್ರಸಿದ್ಧಿ ಪಡೆದಿತ್ತು. ಯೂರೋಪಿನಲ್ಲಿ ಈ ಎಲ್ಲಾ ಸಾಂಬಾರ ಪದಾರ್ಥಗಳಿಗೆ ಉತ್ತಮ ಬೇಡಿಕೆ ಇತ್ತು. ಬಾರ್ಬೋಸನ ಪ್ರಕಾರ ಎರಡು ವಿದದ ಮೆಣಸುಗಳಿದ್ದವು. 1) ಕಪ್ಪು ಮೆಣಸು 2) ಬಿಳಿ ಮೆಣಸು, ಕಪ್ಪು

ಮೆಣಸು ಹೆಚ್ಚು ಪ್ರಾಮುಖ್ಯತೆ ಪಡೆದಿತ್ತು. ಇದನ್ನು ಯೂರೋಪ್ ಮತ್ತು ಪಶ್ಚಿಮ ಏಷ್ಯಾ ರಾಷ್ಟ್ರಗಳಿಗೆ ರಫ್ತು ಮಾಡಲಾಗುತ್ತಿತ್ತು. ಜಾಮೊರಿನ್‌ನು ಮಲಬಾರಿನ ತೀರ ಪ್ರದೇಶಗಳಲ್ಲಿ ಮೆಣಸು ವ್ಯಾಪಾರವನ್ನು ನಿಯಂತ್ರಿಸುತ್ತಿದ್ದನು. ಬಾರ್ಬೋಸನ ಪ್ರಕಾರ ವಿಜಯನಗರ ಸಾಮ್ರಾಜ್ಯದಲ್ಲಿ ಮೆಣಸನ್ನು ಯಥೇಚ್ಚವಾಗಿ ಬಳಸುತ್ತಿದ್ದರು. ದೇವಸ್ಥಾನಗಳಲ್ಲಿ ಕೂಡ ಮೆಣಸು ಬಳಸುತ್ತಿದ್ದರು. ಶಾಸನಗಳು ಪ್ರಕಾರ ಮೆಣಸಿನ ಕೊರತೆ ಉಂಟಾದಾಗ ಉತ್ತರ ಭಾರತದಿಂದ ದಕ್ಷಿಣ ಭಾರತಕ್ಕೆ ಮೆಣಸು ಆಮದು ಮಾಡಿಕೊಳ್ಳುತ್ತಿದ್ದರೆಂದು ತಿಳಿಸುತ್ತವೆ.

16ನೇ ಶತಮಾನ ಕೆಲವು ಬರಹಗಾರರು ಬಿಳಿ ಮತ್ತು ಕಪ್ಪು ಬಣ್ಣದ ಮೆಣಸಿನ ಬಗ್ಗೆ ಮಾಹಿತಿಯನ್ನು ನೀಡಲು ಪ್ರಯತ್ನಿಸಿದ್ದಾರೆ. ಬೆಂಜಮಿನ್‌ನ ಹೇಳಿಕೆಗಳ ಪ್ರಕಾರ ಮೆಣಸು ಸಾಮಾನ್ಯವಾಗಿ ಬಿಳಿಬಣ್ಣದ್ದು, ಇದನ್ನು ಬಿಸಿನೀರಿನಿಂದ ಕುದಿಸಿ ದೊಡ್ಡ ದೊಡ್ಡ ಪಾತ್ರೆಗಳಲ್ಲಿ ಹಾಕಿ ನಂತರ ಬಿಸಿಲಿನಿಂದ ಒಣಗಿಸಿದ ಮೇಲೆ ಇದು ಕಪ್ಪು ಬಣ್ಣಕ್ಕೆ ತಿರುಗುತ್ತಿತ್ತು ಎಂದು ಹೇಳಿದ್ದಾನೆ. ಕ್ರಿ.ಶ.1340ರಲ್ಲಿ ಬಾರ್ಬೋಸ ನೀಡಿರುವ ಹೇಳಿಕೆಗಳ ಪ್ರಕಾರ ಬಿಳಿ ಮೆಣಸಿಗಿಂತ ಕಪ್ಪು ಮೆಣಸು ಹೆಚ್ಚು ಶ್ರೇಷ್ಠವಾಗಿತ್ತು ಮತ್ತು ಇದನ್ನು ಹೆಚ್ಚಾಗಿ ರಪ್ತು ಮಾಡಲಾಗುತ್ತಿತ್ತು. ಎಂದು ವಿವರಿಸಿದ್ದಾನೆ.[88]

ದಕ್ಷಿಣ ಕರಾವಳಿಯ ಮೆಣಸು ಅದರಲ್ಲಿಯೂ ಕಾರವಾರ ಮತ್ತು ಕೇರಳದ ಮೆಣಸಿಗೆ ಬಹಳಷ್ಟು ಬೇಡಿಕೆ ಇತ್ತು. ಬಾರ್ಬೋಸನ ಪ್ರಕಾರ ಮಲಬಾರಿನ ಮೆಣಸು ಕಣ್ಣನೂರು ಮತ್ತು ಕಾರವಾರದ ಮೆಣಸು ಇಡೀ ವಿಶ್ವದಲ್ಲೇ ಶ್ರೇಷ್ಠ ದರ್ಜೆಯ ಮೆಣಸಾಗಿತ್ತೆಂದು ಹೇಳಿದ್ದಾನೆ. ವಿಜಯನಗರ ಕಾಲದಲ್ಲಿ ಗೋವಾ, ಕೊಲ್ಲಂ, ಕಣ್ಣನೂರು, ಮಂಗಳೂರು, ಹೊನ್ನಾವರ, ಭಟ್ಕಳ ಮತ್ತು ಕಾರವಾರ ಬಂದರುಗಳು ಪ್ರಮುಖವಾಗಿ ಮೆಣಸನ್ನು ವಿದೇಶಕ್ಕೆ ರಫ್ತು ಮಾಡುತ್ತಿದ್ದ ಬಂದರುಗಳೆಂದು ಹೇಳಬಹುದು. ಮೆಣಸಿಗೆ ಅಂದಿನ ಕಾಲದಲ್ಲಿ ಎಷ್ಟು ಬೆಲೆ ಇತ್ತೆಂದು ಹೇಳುವುದು ಕಷ್ಟ, ಕಾರಣ ಅದಕ್ಕೆ ಪೂರಕವಾದ ಯಾವ ದಾಖಲೆಗಳು ನಮಗೆ ದೊರಕುವುದಿಲ್ಲ. ಆದರೂ ಕ್ರಿ.ಶ1409ರ ಮಹೋನ್‌ನ ದಾಖಲೆಗಳ ಪ್ರಕಾರ ಕೊಚ್ಚಿನ್‌ನಲ್ಲಿ ಐದು ಟೇಲ್‌ಗಳಿಗೆ ಮೆಣಸನ್ನು ಮಾರಾಟ ಮಾಡಲಾಯಿತ್ತೆಂದು ಹೇಳಿದ್ದಾನೆ. ಇದು ಒಂದು ಪೌಂಡುಗಳಿಗಿಂತಲೂ ಕಡಿಮೆ ಎಂದು ದಾಖಲೆಗಳು ತಿಳಿಸುತ್ತವೆ.

## ದಾಲ್ಚಿನ್ನಿ ಚೆಕ್ಕೆ

ದಾಲ್ಚಿನ್ನಿ ಚೆಕ್ಕೆಯು ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ವಿದೇಶಗಳಿಗೆ ರಫ್ತಾಗುತ್ತಿತ್ತು. ಇವುಗಳನ್ನು ಅತಿ ಹೆಚ್ಚಾಗಿ ಮಲಬಾರ್ ತೀರ ಪ್ರದೇಶಗಳಲ್ಲಿ ಬೆಳೆಯುತ್ತಿದ್ದರು.

ವಾಸ್ಕೋಡಿಗಾಮನು ಭಾರತಕ್ಕೆ ಬಂದ ಮೇಲೆ ಅತಿ ಹೆಚ್ಚಾಗಿ ದಾಲ್‌ಚಿನ್ನಿಚೆಕ್ಕೆ ಕ್ಯಾಲಿಕಟ್‌ನಲ್ಲಿ ಪೂರೈಕೆಯಾಗುತ್ತಿದ್ದುದನ್ನು ಕಂಡು ಖುಷಿಪಟ್ಟನು. ದಕ್ಷಿಣ ಭಾರತವಲ್ಲದೇ ಸಿಲೋನ್ ಅಥವಾ ಶ್ರೀಲಂಕಾ ಕೂಡ ದಾಲಚೆನ್ನಿ ಚೆಕ್ಕೆಯನ್ನು ಬೆಳೆಯುತ್ತಿತ್ತು. ಶ್ರೀಲಂಕಾ ಮತ್ತು ಮಲಬಾರ್ ಪ್ರದೇಶಗಳ ನಡುವೆ ವಿದೇಶೀ ವ್ಯಾಪಾರವನ್ನು ವಶಪಡಿಸಿಕೊಳ್ಳಲು ಬಹಳಷ್ಟು ಪೈಪೋಟಿ ಇತ್ತು. ಶ್ರೀಲಂಕಾದ ದಾಲ್‌ಚಿನ್ನಿ ಚೆಕ್ಕೆಯು ಉತ್ತಮ ದರ್ಜೆಯದಾಗಿತ್ತು. ಶ್ರೀಲಂಕಾದಲ್ಲಿ ಹೆಚ್ಚಾಗಿ ಈ ಬೆಳೆಯನ್ನು ಬೆಳೆಯುತ್ತಿದ್ದರು. ಶ್ರೀಲಂಕಾದಿಂದ ಕರ್ನಾಟಕದ ಪಶ್ಚಿಮ ಬಂದರುಗಳಿಗೆ ತಂದು ಇವುಗಳನ್ನು ವಿದೇಶಗಳಿಗೆ ರಫ್ತು ಮಾಡಲಾಗುತ್ತಿತ್ತು. ಬಾರ್ಬೋಸನ ಪ್ರಕಾರ ಮಲಬಾರ್ ತೀರ ಪ್ರದೇಶಗಳಲ್ಲಿ ಅತಿ ಹೆಚ್ಚು ದಾಲ್ಚಿನ್ನಿ ಚೆಕ್ಕೆ ಪೂರೈಕೆಯಾಗುತ್ತಿತ್ತು. ನಿಕೋಲೋ ಕೌಂಟಿಯ ಪ್ರಕಾರ ದಾಲ್ಚಿನ್ನಿ ಚೆಕ್ಕೆಯು ವಿದೇಶಿ ವ್ಯಾಪಾರದಲ್ಲಿ ಪ್ರವೇಶವಾಗಿದ್ದೇ ಎಣ್ಣೆಯನ್ನು ತಯಾರಿಸುವ ವಸ್ತುವಾಗಿದೆ.[89]

**ಲವಂಗ:**

ವಿಜಯನಗರ ಕಾಲದಲ್ಲಿ ಲವಂಗವು ಮತ್ತೊಂದು ಪ್ರಮುಖವಾದ ರಫ್ತು ಸರಕಾಗಿತ್ತು. ವಿಜಯನಗರ ಸಾಮ್ರಾಜ್ಯದ ವ್ಯಾಪಾರಿಗಳು ಲವಂಗವನ್ನು ಜಾವಾ ಮತ್ತು ಸುಮಾತ್ರದಿಂದ ಆಮದು ಮಾಡಿಕೊಂಡು ಅದನ್ನು ವಿದೇಶಗಳಿಗೆ ರಫ್ತು ಮಾಡುತ್ತಿದ್ದರು. ಅಂಡಮಾನ್ ಮತ್ತು ನಿಕೋಬಾರ್ ದ್ವೀಪ ಮತ್ತು ಮಲಕ್ಕಾದಲ್ಲಿ ಲವಂಗವನ್ನು ಬೆಳೆಯುತ್ತಿದ್ದರು. ಮಲಬಾರಿನ ಎಲ್ಲಾ ಬಂದರುಗಳು ಸಕ್ರೀಯವಾಗಿ ಲವಂಗ ವ್ಯಾಪಾರದಲ್ಲಿ ತೊಡಗಿದ್ದವು. ಕ್ರಿ.ಶ1504ರಲ್ಲಿ ಹಲವಾರು ಕರ್ನಾಟಕದ ಬಂದರುಗಳಿಂದ ವಿದೇಶಿಗಳಿಗೆ ಲವಂಗದ ಸರಕುಗಳು ಹೋಗುತ್ತಿದ್ದವು. ವಿಜಯನಗರ ಸಾಮ್ರಾಜ್ಯದಲ್ಲಿ ತಯಾರಾಗುತ್ತಿದ್ದ ವಿವಿಧ ಬಗೆಯ ಹತ್ತಿಯ ಬಟ್ಟೆಗಳು ಇಂದಿನ ಇಂಡೋನೇಷ್ಯಾ ದೇಶಕ್ಕೆ ರಫ್ತಾಗುತ್ತಿದ್ದವು. ಆ ಹಡಗುಗಳು ಅಲ್ಲಿಂದ ವಾಪಸ್ಸು ಬರುವಾಗ ಲವಂಗವನ್ನು ತುಂಬಿಕೊಂಡು ಬರುತ್ತಿದ್ದವು. ಹಲವಾರು ಶಾಸನಗಳಲ್ಲಿ ಲವಂಗ ಮತ್ತು ಮೆಣಸು ಉತ್ತಮವಾದ ವ್ಯಾಪಾರದ ಸರಕುಗಳಾಗಿದ್ದವೆಂದು ಮಾಹಿತಿ ನೀಡಲಾಗಿದೆ.

**ಶುಂಠಿ:**

ಶುಂಠಿಯು ಮತ್ತೊಂದು ಉತ್ತಮ ಸರಕಾಗಿದ್ದು ಇದು ವಿದೇಶಗಳಿಗೆ ರಫ್ತಾಗುತ್ತಿತ್ತು. ಇದನ್ನು ಸಾಂಬಾರದ ಭಾಗವಾಗಿ ಬಳಸುತ್ತಿದ್ದರು. ಮಧ್ಯಕಾಲೀನ ಭಾರತದಲ್ಲಿ ಶುಂಠಿಯು ಬಹಳ ಪ್ರಮುಖವಾದ ಮೌಲ್ಯಧಾರಿತವಾದ ಸರಕಾಗಿತ್ತು. ಈ ಸರಕಿಗೆ ಯೂರೋಪಿನಲ್ಲಿ ಅಪಾರವಾದ

ಬೇಡಿಕೆ ಇತ್ತು. ಇದನ್ನು ಔಷಧಿಯ ವಸ್ತುವಾಗಿ ಬಳಸಲಾಗುತ್ತಿತ್ತು, ಮಧ್ಯಕಾಲೀನ ದಾಖಲೆಗಳು ಮೂರು ಬಗೆಯ ಶುಂಠಿಗಳ ಬಗ್ಗೆ ಮಾಹಿತಿ ನೀಡುತ್ತವೆ. ಅವುಗಳೆಂದರೆ 1) ಬಿಲಿದಿ 2) ಕೊಲಂಬಿನೋ 3) ಮೆಕಿನೋ ಈ ವಿವಿಧ ಬಗೆಯ ಶುಂಠಿಗಳು ಯಾವ ಸ್ಥಳದಲ್ಲಿ ದೊರಕುತ್ತವೆ ಎಂಬುದರ ಆಧಾರದ ಮೇಲೆ ವಿಂಗಡಿಸಲಾಗಿದೆ. ಮೆಕಿನೋ ಒಂದು ಮಾದರಿಯ ಶುಂಠಿಯಾಗಿದ್ದು, ಇದನ್ನು ಮಲಕ್ಕಾದಲ್ಲಿ ಬೆಳೆಯಲಾಗುತ್ತಿತ್ತು. ಬಿಲಿದಿ ಮಾದರಿಯ ಶುಂಠಿಯು ಸಾಮಾನ್ಯವಾಗಿ ಪಶ್ಚಿಮ ಕರಾವಳಿಯಲ್ಲಿ ಮತ್ತು ಕೊಚ್ಚಿನ್‌ನಲ್ಲಿ ಬೆಳೆಯಲಾಗುತ್ತಿತ್ತು. ಕೊಲಂಬಿನೋ ಮಾದರಿಯ ಶುಂಠಿಯು ಕೂಡ ದಕ್ಷಿಣ ಭಾರತದಲ್ಲಿ ಬೆಳೆಯಲಾಗುತ್ತಿತ್ತು. ವಾರ್ತೆಮಾ ಹೇಳಿರುವ ಪ್ರಕಾರ ಶುಂಠಿಯು ಅಧಿಕವಾಗಿ ಮಲಬಾರ್‌ನಲ್ಲಿ ದೊರೆಯುತ್ತಿದ್ದು ಅದನ್ನು ವಿಶ್ವದ ನಾನಾ ಭಾಗಗಳಿಗೆ ರಫ್ತು ಮಾಡಲಾಗುತ್ತಿತ್ತು.[90]

ಶುಂಠಿಯು ಹೇಗೆ ವಿದೇಶಗಳಿಗೆ ರಫ್ತಾಗುತ್ತಿತ್ತು ಎಂಬುದರ ಬಗ್ಗೆ ನಿಕೊಲೋ ಕೋಂಟಿ ಹೇಳಿರುವ ಪ್ರಕಾರ ಶುಂಠಿಯನ್ನು ಪುಡಿ ಮಾಡಿ ಅದನ್ನು ಮೂರು ದಿನಗಳ ಕಾಲ ಬಿಸಿಲಿನಲ್ಲಿ ಒಣಗಿಸಿ ನಂತರ ಅದನ್ನು ಮಾರುಕಟ್ಟೆಗಳಿಗೆ ತಂದು ಮಾರಾಟ ಮಾಡಲಾಗುತ್ತಿತ್ತೆಂದು ಹೇಳಿದ್ದಾನೆ. ವಾಸ್ಕೋಡಿಗಾಮನು ನೀಡಿರುವ ಹೇಳಿಕೆಗಳ ಪ್ರಕಾರ ಹಸಿರು ಬಣ್ಣದ ಶುಂಠಿಯನ್ನು ರಫ್ತು ಮಾಡಲಾಗುತ್ತಿತ್ತು. ಕೆಲವೊಮ್ಮೆ ಶುಂಠಿಯನ್ನು ಕೆಮ್ಮಣ್ಣಿನಿಂದ ಲೇಪಿಸಿ ರಫ್ತು ಮಾಡಲಾಗುತ್ತಿತ್ತು. ಕಾರಣ ಅದು ಬಹಳಷ್ಟು ದೂರ ಹೋಗಬೇಕಾಗಿರುವುದರಿಂದ ಹಾಳಾಗದಂದತೆ ನೋಡಿಕೊಳ್ಳಲು ಈ ರೀತಿ ಮಾಡಲಾಗುತ್ತಿತ್ತೆಂದು ಹೇಳಿದ್ದಾನೆ. ಶುಂಠಿಯು ಮಲಬಾರಿನ ಬಂದರುಗಳಾದ ಕ್ಯಾಲಿಕಟ್, ಕಣ್ಣನೂರ್ ಮತ್ತು ಮಂಗಳೂರುಗಳಿಂದ ರಫ್ತಾಗುತ್ತಿತ್ತು. ಬಾರ್ಬೋಸನ ಪ್ರಕಾರ ಈ ಭಾಗದ ವ್ಯಾಪಾರಿಗಳು, ಪರ್ಷಿಯಾ, ಯಮನ್ ಮತ್ತು ಯೂರೋಪಿನ ದೇಶಗಳೊಂದಿಗೆ ಶುಂಠಿಯ ವ್ಯಾಪಾರ-ವಾಣಿಜ್ಯ ಸಂಬಂಧವನ್ನು ಹೊಂದಿದ್ದರು.

**ಜಾಪತ್ರೆ, ಜಾಕಾಯಿ ಮತ್ತು ಏಲಕ್ಕಿ:**

ಜಾಪತ್ರೆ ಮತ್ತು ಜಾಕಾಯಿ ಪ್ರಮುಖ ಸಾಂಬಾರ ಪದಾರ್ಥಗಳಾಗಿದ್ದವು. ಇವು ಸಹ ವಿದೇಶಕ್ಕೆ ರಫ್ತಾಗುತ್ತಿದ್ದವು. ದಕ್ಷಿಣ ಭಾರತದ ಹಲವಾರು ಬಂದರುಗಳು ಜಾಪತ್ರೆ ಮತ್ತು ಜಾಕಾಯಿ ಸರಕುಗಳನ್ನು ರಫ್ತು ಮಾಡುತ್ತಿದ್ದವು. ಕರ್ನಾಟಕದ ವ್ಯಾಪಾರಿಗಳು ಜಾಪತ್ರೆ ಮತ್ತು ಜಾಕಾಯಿಗಳನ್ನು ಜಾವಾದಿಂದ ಮೊದಲು ಆಮದು ಮಾಡಿಕೊಂಡು ನಂತರ ವಿದೇಶಗಳಿಗೆ ರಫ್ತು ಮಾಡುತ್ತಿದ್ದರು. ಇದಕ್ಕೆ ಕಾರಣ ಕರ್ನಾಟಕದಲ್ಲಿ ಈ ಸರಕುಗಳನ್ನು ಹೆಚ್ಚಾಗಿ ಬೆಳೆಯುತ್ತಿರಲಿಲ್ಲ.

ಇದರಿಂದ ಜಾವಾದಿಂದ ಆಮದು ಮಾಡಿಕೊಳ್ಳುತ್ತಿದ್ದರು. ಅರಬ್ ಮತ್ತು ಯೂರೋಪಿನ ವ್ಯಾಪಾರಿಗಳು ಈ ಸರಕುಗಳನ್ನು ಮಲಬಾರಿನ ಬಂದರುಗಳಲ್ಲಿ ಸ್ಥಳೀಯ ವ್ಯಾಪರಸ್ಥರಿಂದ ಕೊಂಡು ಕೊಳ್ಳುತ್ತಿದ್ದರು. ಏಲಕ್ಕಿಯನ್ನು ಕರ್ನಾಟಕದ ಪಶ್ಚಿಮ ಭಾಗಗಳಲ್ಲಿ ಉತ್ಪಾದಿಸಲಾಗುತ್ತಿತ್ತು. ಅರಬ್ಬರು ಮತ್ತು ಪೋರ್ಚುಗೀಸರು ಏಲಕ್ಕಿಯನ್ನು ಸ್ಥಳೀಯರಿಂದ ಕೊಂಡುಕೊಂಡು ವಿದೇಶಗಳಿಗೆ ರಫ್ತು ಮಾಡುತ್ತಿದ್ದರು. ಮಲಬಾರಿನ ವ್ಯಾಪಾರಿಗಳು ಏಲಕ್ಕಿಯನ್ನು ಸೂರತ್‌ಗೆ ತೆಗೆದುಕೊಂಡು ಹೋಗಿ ಅಲ್ಲಿಂದಲೇ ವಿದೇಶಗಳಿಗೆ ರಫ್ತು ಮಾಡುತ್ತಿದ್ದರು. [91]

ವಿಜಯನಗರ ಕಾಲದಲ್ಲಿ ಸಾಂಬಾರ ವ್ಯಾಪಾರವು ವಿದೇಶಿ ವ್ಯಾಪಾರದಲ್ಲಿ ಪ್ರದಾನವಾದ ವ್ಯಾಪಾರವಾಗಿತ್ತು. ಯೂರೋಪ್ ವ್ಯಾಪಾರಿಗಳು ಈ ಪದಾರ್ಥಗಳಿಗೆ ಉತ್ತಮವಾದ ಮಾರುಕಟ್ಟೆಯನ್ನು ನಿರ್ಮಾಣ ಮಾಡಿದ್ದರು. ಪ್ರಾರಂಭದಲ್ಲಿ ಅರಬ್ಬರು ಯೂರೋಪ್ ಮತ್ತು ದಕ್ಷಿಣ ಭಾರತದ ನಡುವೆ ಮಧ್ಯವರ್ತಿಗಳಾಗಿ ಕಾರ್ಯನಿರ್ವಹಿಸುತ್ತಿದ್ದರು. ಕ್ರಿ.ಶ.1498ರಲ್ಲಿ ವಾಸ್ಕೋಡಿಗಾಮ ಭಾರತಕ್ಕೆ ಪಾದಾರ್ಪಣೆ ಮಾಡಿದ ಮೇಲೆ ಪೋರ್ಚುಗೀಸರು ದಕ್ಷಿಣ ಭಾರತದಲ್ಲಿ ನೇರವಾಗಿ ಈ ಪದಾರ್ಥಗಳನ್ನು ಕೊಂಡುಕೊಳ್ಳುವುದನ್ನು ಪ್ರಾರಂಭಿಸಿದರು. ಈ ವ್ಯಾಪಾರವು ದಕ್ಷಿಣ ಭಾರತದ ವ್ಯಾಪಾರಿಗಳಿಗೆ ಉತ್ತಮವಾದ ಆದಾಯವನ್ನು ತಂದುಕೊಡುತ್ತಿತ್ತು.

ವಿಜಯನಗರ ಸಾಮ್ರಾಜ್ಯದ ಅವದಿಯಲ್ಲಿ ಮಲಬಾರ್ ಬಂದರುಗಳಿಂದ ಪೋರ್ಚುಗಲ್‌ಗೆ ರಫ್ತಾದ ಸಾಂಬಾರ ಪದಾರ್ಥಗಳ ಪ್ರಮಾಣವನ್ನು ಈ ಕೆಳಗಿನ ಕೋಷ್ಠಕದಲ್ಲಿ ವಿವರಿಸಲಾಗಿದೆ. ಈ ಕೋಷ್ಠಕದಲ್ಲಿ ಕ್ರಿ.ಶ.1501ರಿಂದ ಕ್ರಿ.ಶ.1600 ರವರೆಗೆ ಈ ನೂರು ವರ್ಷಗಳ ಅವಧಿಯಲ್ಲಿ ಪ್ರಮುಖ ವರ್ಷಗಳನ್ನು ಗಣನೆಗೆ ತೆಗೆದುಕೊಂಡು ಭಾರತದಿಂದ ಪೋರ್ಚುಗಲ್‌ಗೆ ರಫ್ತಾದ ಸಾಂಬಾರ ಪದಾರ್ಥಗಳ ವಿವರಣೆ ಈ ಕೆಳಕಂಡಂತಿದೆ. [92]

| **ವರ್ಷ** | **ಸಾಂಬಾರ (ಕೆ.ಜಿ.ಗಳಲ್ಲಿ)** | **ವರ್ಷ** | **ಸಾಂಬಾರ (ಕೆ.ಜಿಗಳಲ್ಲಿ)** |
|---|---|---|---|
| 1501 | 1,04,920 | 1582 | 11,27,675 |
| 1502 | 52,459 | 1587 | 6,829,715 |
| 1504 | 5,24,590 | 1588 | 12,04,409 |
| 1505 | 11,54,120 | 1589 | 15,75,703 |
| 1513 | 10,50,249 | 1590 | 12,42,121 |
| 1514 | 10,70,865 | 1592 | 8,15,021 |
| 1517 | 3,09,875 | 1593 | 2,62,336 |
| 1519 | 18,36,065 | 1594 | 3,41,792 |
| 1523 | 3,93,442 | 1595 | 9,23,697 |

**ಗೋದಿ, ಅಕ್ಕಿ ಮತ್ತು ಸಾಸಿವೆ:**

ವಿಜಯನಗರ ಸಾಮ್ರಾಜ್ಯದ ವ್ಯಾಪಾರಿಗಳು ಗೋದಿ, ಅಕ್ಕಿ ಮತ್ತು ಸಾಸಿವೆಗಳನ್ನು ರಫ್ತು ಮಾಡುತ್ತಿದ್ದರು. ದಕ್ಷಿಣ ಭಾರತದ ವ್ಯಾಪಾರಿಗಳಿಂದ ಮುಸ್ಲಿಮ್ ವ್ಯಾಪಾರಿಗಳು ಈ ಪದಾರ್ಥಗಳನ್ನು ಕೊಂಡುಕೊಳ್ಳುತ್ತಿದ್ದರು. 15ನೇ ಶತಮಾನದ ಪ್ರಾರಂಭದಲ್ಲಿ ಕ್ಯಾಲಿಕಟ್‌ನಲ್ಲಿ ಉತ್ತಮವಾದ ಮುಸ್ಲಿಂ ಜನಸಂಖ್ಯೆ ಇದ್ದಿತ್ತು. ಹಾಗೂ ಪಶ್ಚಿಮ ಕರಾವಳಿ ತೀರ ಪ್ರದೇಶಗಳಲ್ಲಿಯೂ ಕೂಡ ಹೆಚ್ಚಿನ ಜನಸಂಖ್ಯೆಯಲ್ಲಿ ಮುಸ್ಲಿಂ ಸಮುದಾಯವಿತ್ತು. ಈ ಸಮುದಾಯವು ವ್ಯಾಪಾರಿ ವರ್ಗವಾಗಿದ್ದು ಆಮದು ಮತ್ತು ರಫ್ತು ವ್ಯಾಪಾರದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿತ್ತು. ವಿಜಯನಗರದ ರಾಜಧಾನಿ ಹಂಪಿಯಲ್ಲಿ ಮುಸ್ಲಿಂ ವ್ಯಾಪಾರಿಗಳಿಗೆ ಪ್ರತ್ಯೇಕವಾದ ಒಂದು ವಸತಿ ಸಮುಚ್ಛಯವಿತ್ತು. ಅಕ್ಕಿಯು ಕ್ಯಾಲಿಕಟ್‌ನಿಂದ ಪರ್ಷಿಯನ್ ಕೊಲ್ಲಿ ರಾಷ್ಟ್ರಗಳಿಗೆ ರಫ್ತಾಗುತ್ತಿತ್ತು. ಬಾರ್ಬೋಸನ ಪ್ರಕಾರ ಅಕ್ಕಿಯು ಪ್ರಮುಖ ಆಹಾರದ ಸರಕಾಗಿದ್ದು ಮಲಬಾರ್ ತೀರಗಳಿಂದ ವಿದೇಶಕ್ಕೆ ರಫ್ತಾಗುತ್ತಿತ್ತು. ಎಂದು ಹೇಳಿದ್ದಾನೆ. ಅರೇಬಿಯದಲ್ಲಿ ಹಾಗೂ ಯೂರೋಪಿನ ದೇಶಗಳಿಗೆ ಅತಿ ಹೆಚ್ಚಾಗಿ ಕರ್ನಾಟಕದ ಅಕ್ಕಿಯನ್ನು ಬಳಸುತ್ತಿದ್ದರು.

ಮಲಬಾರಿನ ವ್ಯಾಪಾರಿಗಳು ಕರ್ನಾಟಕದ ವಿವಿಧ ಭಾಗಗಳಿಂದ ಅಕ್ಕಿಯನ್ನು ತೆಗೆದುಕೊಂಡು ಬರುತ್ತಿದ್ದರು, ಅಕ್ಕಿಯನ್ನು ಕರ್ನಾಟಕದ ವಿವಿದ ಭಾಗಗಳಲ್ಲಿ ಬೆಳೆಯುತ್ತಿದ್ದರು. ವಿಜಯನಗರ ಸಾಮ್ರಾಜ್ಯದ ವಿವಿಧ ಭಾಗಗಳಿಂದ ಶ್ರೀಲಂಕಾ ಮತ್ತು ಯೂರೋಪಿನ ದೇಶಗಳಿಗೆ ಅಕ್ಕಿ ರಫ್ತಾಗುತ್ತಿತ್ತು. ಬೇಲೂರಿನ ಶಾಸನದ ಪ್ರಕಾರ ಸಾಲು ಮಾಳೆ ಬಣಜಿಗ ವ್ಯಾಪಾರಿಗಳು ಅಕ್ಕಿಯ ವ್ಯಾಪಾರ ಏಕಸ್ವಾಮ್ಯವನ್ನು ಹೊಂದಿದ್ದರು. ವಿದೇಶಗಳಿಗೆ ಕಪ್ಪು ಅಕ್ಕಿಯನ್ನು ರಫ್ತು ಮಾಡಲಾಗುತ್ತಿತ್ತು. ಕಪ್ಪು ಅಕ್ಕಿಯು ಬಿಳಿ ಅಕ್ಕಿಗಿಂತ ಕಡಿಮೆ ದರಕ್ಕೆ ಸಿಗುತ್ತಿತ್ತು. ದಕ್ಷಿಣ ಕನ್ನಡದ ಪ್ರಮುಖ ಬಂದರುಗಳಾದ ಬಾರ್ಕೂರು ಮತ್ತು ಬಸ್ರೂರುಗಳು ಅಕ್ಕಿ ವ್ಯಾಪಾರದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದವು.

**ಸಕ್ಕರೆ:**

ವಿಜಯನಗರ ಸಾಮ್ರಾಜ್ಯದಲ್ಲಿ ಸಕ್ಕರೆ ಯೆಥೇಚ್ಚವಾಗಿ ಉತ್ಪಾದನೆಯಾಗುತ್ತಿತ್ತು. ದಕ್ಷಿಣಕನ್ನಡದ ಹಲವಾರು ಭಾಗಗಳಲ್ಲಿ ಸಕ್ಕರೆ ಉತ್ಪಾದನೆಯನ್ನು ಮಾಡಲಾಗುತ್ತಿತ್ತು. ಬಾರ್ಬೋಸನ ಪ್ರಕಾರ ದಕ್ಷಿಣ ಕನ್ನಡದಲ್ಲಿ ಸಕ್ಕರೆಯನ್ನು ಪುಡಿ ಮಾದರಿಯಲ್ಲಿ

ತಯಾರಿಸಲಾಗುತ್ತಿತ್ತು. ಇಲ್ಲಿನ ಜನರಿಗೆ ಸಕ್ಕರೆಯನ್ನು ಕಣಗಳ ಮಾದರಿಯಲ್ಲಿ ಮಾಡಲು ಗೊತ್ತಾಗುತ್ತಿರಲಿಲ್ಲ. ಅದರಿಂದಾಗಿ ಪುಡಿ ಮಾಡಿ ಸಣ್ಣ ಸಣ್ಣ ಪೊಟ್ಟಣಗಳಾಗಿ ಮಾಡುತ್ತಿದ್ದರು. ಸಕ್ಕರೆ ಸಿಹಿಯಾದ ಪದಾರ್ಥವಾಗಿರುವುದರಿಂದ ಅದಕ್ಕೆ ಸಾಮ್ರಾಜ್ಯದಾದ್ಯಂತ ಬಹಳಷ್ಟು ಬೇಡಿಕೆ ಇತ್ತು. ಹಲವಾರು ಶಾಸನಗಳ ಉಲ್ಲೇಖಗಳ ಪ್ರಕಾರ ಸಾಮ್ರಾಜ್ಯದ ವಿವಿಧ ಭಾಗಗಳಲ್ಲಿ ಸಕ್ಕರೆ ತಯಾರಿಸುವ ಹಲವಾರು ಗಿರಣಿಗಳು ಇದ್ದವೆಂದು ಉಲ್ಲೇಖಿಸುತ್ತವೆ. ಸಕ್ಕರೆಯು ಮುಖ್ಯವಾಗಿ ಈ ಕಾಲದಲ್ಲಿ ಬಹಳಷ್ಟು ಪ್ರಾಮುಖ್ಯತೆ ಗಳಿಸಿತ್ತು.[93]

**ತೆಂಗಿನಕಾಯಿ:**

ತೆಂಗಿನಕಾಯಿಯು ಮತ್ತೊಂದು ಪ್ರಮುಖ ರಫ್ತಿನ ಸರಕಾಗಿತ್ತು. ಅರಬ್ಬರು ಭಾರತೀಯ ತೆಂಗಿನಕಾಯಿಯ ಬಗ್ಗೆ ಪರಿಚಿತರಾಗಿದ್ದರು. ತೆಂಗಿನಕಾಯಿಯನ್ನು ದಕ್ಷಿಣ ಭಾರತದಲ್ಲಿ ಮುಖ್ಯವಾಗಿ ಕರಾವಳಿ ತೀರಗಳಲ್ಲಿ ಬೆಳೆಯುತ್ತಿದ್ದರು. ಶ್ರೀಲಂಕಾದಲ್ಲಿಯೂ ಕೂಡ ಅಧಿಕವಾಗಿ ಬೆಳೆಯಲಾಗುತ್ತಿತ್ತು. ತೆಂಗಿನಕಾಯಿಯ ಸಂಪೂರ್ಣ ವ್ಯಾಪಾರ ಏಕಸ್ವಾಮ್ಯ ಭಾರತೀಯ ವ್ಯಾಪಾರಿಗಳ ಕೈಯಲ್ಲಿತ್ತು. ಪಶ್ಚಿಮ ಕರಾವಳಿಯ ವ್ಯಾಪಾರಿಗಳು ಮಂಗಳೂರು, ಬಸ್ರೂರು, ಭಟ್ಕಳ ಮತ್ತು ಕ್ಯಾಲಿಕಟ್ ಬಂದರುಗಳ ಮುಖಾಂತರ ತೆಂಗಿನಕಾಯಿಯನ್ನು ರಫ್ತು ಮಾಡುತ್ತಿದ್ದರು. ತೆಂಗಿನಕಾಯಿಗೆ ಭಾರತ ಮಾತ್ರವಲ್ಲದೇ ಅರೇಬಿಯಾ ಮತ್ತು ಯೂರೋಪಿನ ದೇಶಗಳಲ್ಲಿ ಅಪಾರವಾದ ಬೇಡಿಕೆಯಿತ್ತು. ತೆಂಗಿನಕಾಯಿ ಆಹಾರದ ಬಳಕೆಗೆ ಮಾತ್ರವಲ್ಲದೇ ಅದರಿಂದ ಬರುತ್ತಿದ್ದ ಅಪವ್ಯಯದಿಂದ ಹುರಿಯನ್ನು ತಯಾರು ಮಾಡುತ್ತಿದ್ದರು. ಈ ಹುರಿಯನ್ನು ಹಡಗುಗಳ ನಿರ್ಮಾಣದಲ್ಲಿ ಬಳಸಲಾಗುತ್ತಿತ್ತು.

**ಗಿಡಮೂಲಿಕೆ ಮತ್ತು ಕಚ್ಚಾ ಸಾಮಗ್ರಿಗಳು:**

ವಿಜಯನಗರ ಸಾಮ್ರಾಜ್ಯದಲ್ಲಿ ಕೆಲವು ಗಿಡಮೂಲಿಕೆಗಳು ವಿದೇಶಗಳಿಗೆ ರಫ್ತಾಗುತ್ತಿದ್ದವು. ಪ್ರಮುಖ ಗಿಡಮೂಲಿಕೆಗಳೆಂದರೆ ಕಿತ್ತಾಳೆಯ ಗಿಡ, ಶಿಲಾರಾಳ, ಸಾಂಬ್ರಾಣಿ, ಬಳಿಗಾರ, ಕರ್ಪೂರ ಕಸ್ತೂರಿ, ಅಫೀಮು, ಶ್ರೀಗಂಧದ ಮರ, ಸುಗಂಧ ವನಸ್ಪತಿ ಮತ್ತು ಬಿದಿರುಪ್ಪು ಪ್ರಮುಖವಾದವುಗಳಾಗಿದ್ದವು. ಈ ಕಾಲದಲ್ಲಿ ಹಲವಾರು ಕಚ್ಚಾ ವಸ್ತುಗಳು ರಫ್ತಾಗುತ್ತಿದ್ದವು ಅವುಗಳೆಂದರೆ, ಬಣ್ಣ, ಮರಗಳು, ಲೋಹಗಳು ಮತ್ತು ಅಮೂಲ್ಯವಾದ ಮುತ್ತುರತ್ನಗಳು ಇತ್ಯಾದಿ. ಕೆಲವೊಂದು ಬಣ್ಣಗಳು ಅಥವಾ ನೀಲಿ ದಕ್ಷಿಣ ಭಾರತದ ವಿವಿಧ ಭಾಗಗಳಲ್ಲಿ

ಉತ್ಪಾದನೆಯಾಗುತ್ತಿತ್ತು. ತೇಗದ ಮರವು ಅತಿ ಹೆಚ್ಚಾಗಿ ದಕ್ಷಿಣ ಭಾರತದ ಬಂದರುಗಳಿಂದ ವಿದೇಶಗಳಿಗೆ ರಫ್ತಾಗುತ್ತಿತ್ತು.[94]

**ಲೋಹಗಳು:**

ವಿಜಯನಗರ ಸಾಮ್ರಾಜ್ಯದಲ್ಲಿ ಲೋಹಗಳು ಬಹಳಷ್ಟು ಪ್ರಾಮುಖ್ಯತೆ ಪಡೆದಿದ್ದವು ಹಾಗೂ ವಿದೇಶಗಳಿಗೆ ರಫ್ತಾಗುತ್ತಿದ್ದವು. ಕಬ್ಬಿಣದ ಲೋಹವು ಅರೇಬಿಯಾ ದೇಶಗಳಿಗೆ ಮತ್ತು ಯೂರೋಪಿನ ದೇಶಗಳಿಗೆ ರಫ್ತಾಗುತ್ತಿದ್ದವು. ಕಬ್ಬಿಣ ಭಟ್ಕಳದ ಬಂದರಿನಿಂದ ರಫ್ತಾಗುತ್ತಿತ್ತು. ಭಾರತವು ವಿವಿಧ ಬಗೆಯ ಲೋಹಗಳಿಗೆ ವಿದೇಶಗಳಿಗೆ ಅವಲಂಬಿತವಾಗಿತ್ತು. ಈ ಕೆಳಕಂಡ ಪ್ರಮುಖ ಅಮೂಲ್ಯ ಲೋಹಗಳು ವಿದೇಶಗಳಿಗೆ ರಫ್ತಾಗುತ್ತಿದ್ದವು. ಹರಳುಗಳು, ರತ್ನಗಳು, ರೂಬಿಗಳು, ನೀಲಿಮಣಿ, ಪುಷ್ಪರಾಗ ಮುಂತಾದ ಅಮೂಲ್ಯ ಲೋಹಗಳು ರಫ್ತಾಗುತ್ತಿದ್ದವು.

**ಸಿದ್ಧ ವಸ್ತುಗಳು:**

ವಿಜಯನಗರ ಆಡಳಿತ ಅವಧಿಯಲ್ಲಿ ಹಲವಾರು ಸಿದ್ಧ ವಸ್ತುಗಳು ರಫ್ತಾಗುತ್ತಿದ್ದವು. ಇವುಗಳಲ್ಲಿ ಮುಖ್ಯವಾದವು ಹತ್ತಿಯ ಬಟ್ಟೆಗಳಾಗಿದ್ದವು. ಹತ್ತಿಯ ಬಟ್ಟೆಗಳು ಮತ್ತು ಪಿಂಗಾಣಿ ಪಾತ್ರೆಗಳು ಅತಿ ಹೆಚ್ಚಾಗಿ ವಿದೇಶಗಳಿಗೆ ರಫ್ತಾಗುತ್ತಿದ್ದ ಸಿದ್ಧ ವಸ್ತುಗಳಾಗಿದ್ದವು. ಪ್ರಾರಂಭದಲ್ಲಿ ಅರಬ್ಬರು ಸಿದ್ಧವಸ್ತುಗಳ ಆಮದು ವ್ಯಾಪಾರದ ಏಕಸ್ವಾಮ್ಯಗಳಿಸಿದ್ದರು. ಪೋರ್ಚುಗೀಸರ ಆಗಮನದ ನಂತರ ಪಶ್ಚಿಮ ಕರಾವಳಿಯ ವ್ಯಾಪಾರ ಅವರ ಕೈಸೇರಿತು. ಪೋರ್ಚುಗೀಸರು ಪ್ರಸ್ತುತ ಉತ್ತರ ಕನ್ನಡ ಜಿಲ್ಲೆಗಳ ಪ್ರಮುಖ ಬಂದರುಗಳಾದ ಅಂಕೋಲಾ ಮತ್ತು ಹೊನ್ನಾವರದಲ್ಲಿ ಬಟ್ಟೆಯನ್ನು ಖರೀದಿಸುತ್ತಿದ್ದರು. ಅಂಕೋಲಾ ಮತ್ತು ಹೊನ್ನಾವರ ಬಂದರುಗಳು ಹತ್ತಿಯನ್ನು ಬೆಳೆಯುವ ಪ್ರದೇಶಗಳಿಗೆ ಹೊಂದಿಕೊಂಡಿರುವುದರಿಂದ ಇಲ್ಲಿ ಹಲವಾರು ವಿದೇಶೀ ವ್ಯಾಪಾರಿಗಳು ಸಂಪರ್ಕವನ್ನು ಏರ್ಪಡಿಸಿಕೊಂಡು ವ್ಯಾಪಾರ–ವಾಣಿಜ್ಯದಲ್ಲಿ ತೊಡಗಿಸಿಕೊಂಡಿದ್ದರು. ವಿಜಯನಗರ ಸಾಮ್ರಾಜ್ಯದ ವ್ಯಾಪಾರಿಗಳು ಸಾಮ್ರಾಜ್ಯದ ವಿವಿಧ ಮೂಲಗಳಿಂದ ಹತ್ತಿ ಬಟ್ಟೆಗಳನ್ನು ಖರೀದಿಸಿ ಅಂಕೋಲಾ ಮತ್ತು ಹೊನ್ನಾವರ ಬಂದರುಗಳಲ್ಲಿ ವಿದೇಶಿಯರಿಗೆ ಮಾರಾಟ ಮಾಡುತ್ತಿದ್ದರು. ಇದರಿಂದಾಗಿ ಈ ಬಂದರುಗಳು ವಿಜಯನಗರ ಸಾಮ್ರಾಜ್ಯದ ಹತ್ತಿಬಟ್ಟೆ ವ್ಯಾಪಾರದ ಪ್ರಮುಖ ಕೇಂದ್ರಗಳಾಗಿದ್ದವು. ಹಲವಾರು ವಿವಿಧ ಬಗೆಯ ಹತ್ತಿ ಬಟ್ಟೆಗಳು ಮತ್ತು ಇತರ ಬಟ್ಟೆಗಳ ಸಿದ್ಧ ಉಡುಪುಗಳು ರಫ್ತಾಗುತ್ತಿದ್ದವು. ಅವುಗಳೆಂದರೆ, 1) ಕೆಂಪು ಪಟ್ಟಿಯನ್ನು ಒಳಗೊಂಡ ರೇಷ್ಮೆ ಬಟ್ಟೆಗಳು 2) ಕೆಂಪು ಪಟ್ಟಿಯ ಸಾಮಾನ್ಯ ಬಟ್ಟೆಗಳು 3)

ಕಪ್ಪು ಮತ್ತು ಕೆಂಪು ಬಟ್ಟೆ 4) ಕಪ್ಪು ಮತ್ತು ನೀಲಿ ಬಟ್ಟೆ 5) ಕಪ್ಪು ಮತ್ತು ಬಿಳಿ ಬಟ್ಟೆ 6) ಬಿಳಿ ಬಟ್ಟೆ 7) ಕೆಂಪು ಬಟ್ಟೆ 8) ಕಪ್ಪು ಬಟ್ಟೆ ಹೀಗೆ ವಿವಿಧ ಬಗೆಯ ಬಟ್ಟೆಗಳು ವಿದೇಶಗಳಿಗೆ ರಫ್ತಾಗುತ್ತಿದ್ದವು.[95]

ಹೀಗೆ ವಿಜಯನಗರ ಸಾಮ್ರಾಜ್ಯದಲ್ಲಿ ಆಮದು ಮತ್ತು ರಫ್ತು ವಹಿವಾಟು ಬಹಳ ವಿಶೇಷವಾಗಿ ನಡೆಯುತ್ತಿತ್ತು. ವ್ಯಾಪಾರಿಗಳು ಪರಸ್ಪರ ವಸ್ತು ವಿನಿಮಯಗಳ ಮೂಲಕ ಹಾಗೂ ಕೊಂಡುಕೊಳ್ಳುವಿಕೆ ಮತ್ತು ಮಾರಾಟ ಮಾಡುವ ಮೂಲಕ ವ್ಯಾಪಾರ ಮತ್ತು ವಾಣಿಜ್ಯವನ್ನು ಅಭಿವೃದ್ಧಿ ಪಡಿಸಿದ್ದರು. ವಿಜಯನಗರ ಸಾಮ್ರಾಜ್ಯ ಪೋರ್ಚುಗೀಸರಿಗೆ ಎಲ್ಲಾ ರೀತಿಯ ನೆರವನ್ನು ನೀಡುವುದರ ಮೂಲಕ ಅಂತರಾಷ್ಟ್ರೀಯ ವ್ಯಾಪಾರವನ್ನು ಉನ್ನತೀಕರಿಸಿತು. ಪೋರ್ಚುಗೀಸರು ಭಾರತದಲ್ಲಿ ತಮ್ಮ ವ್ಯಾಪಾರದ ಏಕಸ್ವಾಮ್ಯವನ್ನು ಗಳಿಸಿಕೊಂಡು ಎರಡು ಶತಮಾನಗಳ ಕಾಲ ಭಾರತ ಮತ್ತು ಯೂರೋಪಿನ ನಡುವೆ ಕೊಂಡಿಯಾಗಿ ಕಾರ್ಯ ನಿರ್ವಹಿಸಿದರು.

**3.11 ಪೋರ್ಚುಗೀಸರ ಅವನತಿಗೆ ಕಾರಣಗಳು:**

ಭಾರತಕ್ಕೆ ಕ್ರಿ.ಶ 1498ರಲ್ಲಿ ವ್ಯಾಪಾರದ ಉದ್ದೇಶದಿಂದ ಬಂದ ಪೋರ್ಚುಗೀಸರು ಭಾರತಕ್ಕೆ ಬಂದ ನಂತರ ತಮ್ಮ ವ್ಯಾಪಾರ ಏಕಸ್ವಾಮ್ಯದೊಂದಿಗೆ ಸ್ಥಳೀಯ ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದರು. ಪೋರ್ಚುಗೀಸರು ತಮ್ಮನ್ನು ತಾವೇ ಸಮುದ್ರದ ಒಡೆಯರೆಂದು ಕರೆದುಕೊಂಡರು. ಪೋರ್ಚುಗೀಸರ ರಾಜ ಮತ್ತು ಅವನ ವೈಸರಾಯ್‌ಗಳು ಕ್ರಮವಾಗಿ ಭಾರತದ ರಾಜ, ವೈಸರಾಯ್ ಮತ್ತು ಗವರ್ನರ್‌ಗಳೆಂದು ತಮ್ಮನ್ನು ತಾವೇ ಕರೆದುಕೊಂಡರು. ಈ ಏಕಸ್ವಾಮ್ಯವನ್ನು ಭಾರತೀಯರು ಒಪ್ಪಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಪೋರ್ಚುಗೀಸರನ್ನು ಭಾರತದ ಸಮುದ್ರಗಳ ಒಡೆಯರೆಂದು ಒಪ್ಪಿಕೊಳ್ಳಲಿಲ್ಲ. ಪ್ರಾರಂಭದಲ್ಲಿ ವಿಜಯನಗರ ಸಾಮ್ರಾಜ್ಯದೊಂದಿಗೆ ಉತ್ತಮವಾದ ಸಂಬಂಧವನ್ನು ಹೊಂದಿದ್ದರು. ಪೋರ್ಚುಗೀಸರು ಧಾರ್ಮಿಕವಾಗಿ, ಸಾಮಾಜಿಕವಾಗಿ, ವ್ಯಾಪಾರ ಮತ್ತು ವಾಣಿಜ್ಯದ ಕ್ರಮವಾಗಿ ತಮ್ಮನ್ನು ತೊಡಗಿಸಿಕೊಂಡರು. ಪ್ರಾರಂಭದ ವಿಜಯನಗರ ಅರಸರು ಪೋರ್ಚುಗೀಸರೊಂದಿಗೆ ಉತ್ತಮ ಸಂಬಂಧವನ್ನು ಏರ್ಪಡಿಸಿಕೊಂಡಿದ್ದರು. ಆದರೆ ವಿಜಯನಗರ ಸಾಮ್ರಾಜ್ಯದ ಕೊನೆಯ ಅರಸರು ಮತ್ತು ಪೋರ್ಚುಗೀಸರ ನಡುವೆ ವೈಷಮ್ಯಗಳು ಉಂಟಾಗಿ ಅವರಿಬ್ಬರ ನಡುವೆ ಸಂಬಂಧಗಳು ಕೊನೆಗೊಂಡವು. ರಾಮರಾಯ ಪೋರ್ಚುಗೀಸರೊಂದಿಗೆ ಯುದ್ಧವನ್ನು ಮಾಡುವ ಮೂಲಕ ಅವರಿಬ್ಬರ ನಡುವೆ ವೈಷಮ್ಯವಿದೆ ಎಂಬುದನ್ನು ತೋರಿಸಿದನು. ಪೋರ್ಚುಗೀಸರ ಅವನತಿಗೆ ಬಹಳ ಪ್ರಮುಖವಾದ ಕಾರಣಗಳನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

1) **ಪೋರ್ಚುಗೀಸರ ಧಾರ್ಮಿಕ ನೀತಿ:** ಪೋರ್ಚುಗೀಸರ ಧಾರ್ಮಿಕ ಅಸಹಿಷ್ಣು ನೀತಿ ಅವರ ಪ್ರಾಬಲ್ಯವನ್ನು ಕುಗ್ಗಿಸಿತು. ಮತಾಂಧರಾದ ಅವರು ಭಾರತದಲ್ಲಿ ಕ್ರೈಸ್ತರ ಸಂಖ್ಯೆಯನ್ನು ಹೆಚ್ಚಿಸುವ ಸಲುವಾಗಿ ಹಿಂದೂಗಳನ್ನು ಬಲಾತ್ಕಾರವಾಗಿ ಕ್ರೈಸ್ತ ಧರ್ಮಕ್ಕೆ ಮತಾಂತರಿಸಿದರು. ಇದು ಸ್ಥಳೀಯರ ವಿರೋಧಕ್ಕೆ ಕಾರಣವಾಯಿತು. ಅವರ ಅಂತರ ಜಾತಿ ವಿವಾಹಗಳು ಸಂಪ್ರದಾಯಸ್ಥ ಹಿಂದೂಗಳನ್ನು ಕೆರಳಿಸಿದವು. ಗೋವಾದಲ್ಲಿ ಪ್ರಾನ್ಸಿಸ್ಕನ್ ಕ್ರೈಸ್ತ ಮಿಷನರಿಗಳು ಮತಾಂತರದಲ್ಲಿ ತೊಡಗಿದವು. ಮತಾಂತರಕ್ಕೆ ವಿರೋಧಿಸಿದವರನ್ನು ವಿಚಾರಣೆ ಮಾಡಿ ಶಿಕ್ಷಿಸಲು ಗೋವಾದಲ್ಲಿ ಒಂದು ಇನ್‌ಕ್ವೀಜಿಷನ್ ನ್ಯಾಯಾಲಯ ಸ್ಥಾಪನೆಯಾಯಿತು. ಕ್ರಿ.ಶ 1540ರಲ್ಲಿ ಗೋವಾದಲ್ಲಿ ಹಿಂದೂ ದೇವಾಲಯಗಳನ್ನು ನೆಲಸಮ ಮಾಡಿದರು. ಮತಾಂತರ ಕ್ರೂರವಾಗಿತ್ತು. ವಿರೋಧಿಸಿದವರಿಗೆ ಜೀವ ಬೆದರಿಕೆ ಹಾಕುವುದು ಹಣದ ಅಧಿಕಾರದ ಆಸೆ ತೋರಿಸುವುದು ಸಾಮಾನ್ಯವಾಗಿತ್ತು. ಇವೆಲ್ಲಾ ಹಿಂದೂಗಳನ್ನು ಕೆರಳಿಸಿದವು. ಮುಸ್ಲಿಮರಿಗೆ ಇದೇ ಕ್ರೂರ ಕಿರುಕುಳ ಎದುರಾಯಿತು.
2) **ವಿಜಯನಗರ ಸಾಮ್ರಾಜ್ಯದ ಅವನತಿ:** ವಿಜಯನಗರ ಸಾಮ್ರಾಜ್ಯದಲ್ಲಿ ಅವರ ಶ್ರೀಮಂತ ವ್ಯಾಪಾರ ನಡೆಯುತ್ತಿತ್ತು. ಪೋರ್ಚುಗೀಸರ ಆರ್ಥಿಕ ಸಮೃದ್ಧಿ ಪ್ರಾಬಲ್ಯಗಳೆಲ್ಲ ವಿಜಯನರ ಸಾಮ್ರಾಜ್ಯದ ಪ್ರಾಬಲ್ಯದ ಮೇಲೆ ಅವಲಂಬಿಸಿದ್ದವು. ಆದರೆ ಕ್ರಿ.ಶ.1565ರಲ್ಲಿ ತಾಳಿಕೋಟೆ ಕದನದಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಸೋಲಾದ ಮೇಲೆ ಪೋರ್ಚುಗೀಸರ ಪ್ರಾಬಲ್ಯ ಕ್ಷೀಣಿಸಿತು.
3) **ವಿದೇಶೀಯರ ಪೈಪೋಟಿ:** ತಡವಾಗಿ ಭಾರತಕ್ಕೆ ಬಂದ ಡಚ್ಚರು ಮತ್ತು ಬ್ರಿಟಿಷರೊಂದಿಗೆ ಪೋರ್ಚುಗೀಸರು ಪೈಪೋಟಿ ನಡೆಸಲಾಗದೆ ದುರ್ಬಲರಾದರು. ಅಲ್ಲದೆ ಪೋರ್ಚುಗೀಸರು ನೌಕಾಶಕ್ತಿಯಲ್ಲಿ ದುರ್ಬಲರಾಗಿದ್ದರು. ನೌಕಾಶಕ್ತಿಯಲ್ಲಿ ಅಜೇಯರಾಗಿದ್ದ ಬ್ರಿಟಿಷರು ಪೋರ್ಚುಗೀಸರ ನೆಲೆಗಳನ್ನು ಒಂದೊಂದಾಗಿ ಆಕ್ರಮಿಸಿದರು. ಉದಾ: ಬಾಂಬೆ ಬ್ರಿಟಿಷರ ವಶವಾಯಿತು. ಅದೇ ರೀತಿ 1654 ರಲ್ಲಿ ಶ್ರೀಲಂಕಾ ಹಾಗೂ ಕ್ರಿ.ಶ.1640ರಲ್ಲಿ ಮಲಕ್ಕಾಗಳು ಡಚ್ಚರ ವಶವಾದವು. ಕ್ರಿ.ಶ 1642ರಲ್ಲಿ ಪೋರ್ಚುಗೀಸರು ಸ್ವಾಲಿ ಕದನದಲ್ಲಿ ಬ್ರಿಟಿಷರಿಂದ ಸೋತು ಭಾರತದಿಂದ ನಿರ್ಗಮಿಸಿದರು.
4) **ಸ್ಪೈನಿನಲ್ಲಿ ಪೋರ್ಚುಗಲ್ ವಿಲೀನ:** ಕ್ರಿ.ಶ.1580ರಲ್ಲಿ ಸ್ಪೈನಿನ ದೊರೆ 2ನೇ ಪಿಲಿಪ್‌ನು ಪೋರ್ಚುಗಲ್‌ನ್ನು ತಾತ್ಕಾಲಿಕವಾಗಿ ಸ್ಪೈನಿನಲ್ಲಿ ವಿಲೀನಗೊಳಿಸಿದನು. ಇದು

ಪೋರ್ಚುಗೀಸರ ಹಿತಕ್ಕೆ ಗಂಡಾಂತರವಾಯಿತು. ಭಾರತದ ಪೋರ್ಚುಗಲ್ ಸ್ವಾಸ್ಥಗಳ ಉತ್ತರಾಧಿಕಾರಿಗಳಾಗಿ ಬಂದ ಸ್ಪೇನರು ಪೋರ್ಚುಗೀಸರ ಹಿತಾಸಕ್ತಿಯನ್ನು ಕಡೆಗಣಿಸಿದರು. ಲಿಸ್ಬನ್ ಸಹ ತನ್ನ ವಾಣಿಜ್ಯ ಹಾಗೂ ನೌಕಾಶ್ರೇಷ್ಠತೆಯನ್ನು ಕಳೆದುಕೊಂಡಿತು.

5) **ಬ್ರೆಜಿಲ್ ಅನ್ವೇಷಣೆ:** ಕೆಬ್ರಾಲ್‌ನು ಬ್ರೆಜಿಲ್‌ನು ಅನ್ವೇಷಿಸಿದನು. ಈ ಅನ್ವೇಷಣೆಯಿಂದಾಗಿ ಪೋರ್ಚುಗೀಸರು ಬ್ರೆಜಿಲ್‌ನತ್ತ ಗಮನಹರಿಸಿ ಭಾರತದ ಕಡೆ ತಮ್ಮ ಗಮನವನ್ನು ಕಳೆದುಕೊಂಡರು.

6) **ಪೋರ್ಚುಗೀಸರಿಗೆ ಆಯ ಕಟ್ಟಿನ ಸ್ಥಳದ ಕೊರತೆ ಉಂಟಾಯಿತು:** ಪೋರ್ಚುಗೀಸರು ಮಲಬಾರ್ ಮೂಲಕ ಭಾರತವನ್ನು ಪ್ರವೇಶಿಸಿದರು. ಮಲಬಾರ್ ರಾಜಕೀಯ ವಿಸ್ತರಣೆಗೆ ಪೂರಕವಾಗಿರಲಿಲ್ಲ. ಅವರ ರಕ್ಷಣೆಗೆ ಉತ್ತಮ ಒಳನಾಡು ಸಿಗಲಿಲ್ಲ. ಪಶ್ಚಿಮ ಘಟ್ಟಗಳ ಸಲುವಾಗಿ ಅವರಿಗೆ ಉತ್ತಮ ಹಿನ್ನಾಡು ಸಿಗಲಿಲ್ಲ. ಪೋರ್ಚುಗೀಸರು ಸಮುದ್ರಗಳ ಮೇಲೆ ಒಡೆತನ ಸ್ಥಾಪಿಸಲು ಆಸಕ್ತಿ ವಹಿಸಿ ಒಳ ಭೂ ಭಾಗಗಳನ್ನು ಗೆಲ್ಲುವುದನ್ನು ನಿರ್ಲಕ್ಷಿಸಿದರು. ಹೀಗಾಗಿ ಅವರು ಕೆಲವೇ ಕರಾವಳಿ ಪ್ರದೇಶಗಳನ್ನು ಹೊಂದಿ ದುರ್ಬಲರಾದರು. ಪೋರ್ಚುಗೀಸರ ವ್ಯಾಪಾರದಲ್ಲಿ ಒಳಸಂಚುಗಳು, ಆಕ್ರಮಣಗಳು ಅಪ್ರಾಮಾಣಿಕತೆಗಳು, ದರೋಡೆ ಪ್ರವೃತ್ತಿಗಳು ಅವರಿಗೆ ಮಾರಕವಾಗಿ ಪರಿಣಮಿಸಿದವು. ಸೈನಿಕರ ಅಧ್ಯಕ್ಷತೆ ಮತ್ತು ಹಣಕಾಸಿನ ಕೊರತೆ ಅವರ ಅವನತಿಗೆ ಕಾರಣವಾದವು.

### 3.12 ಪೋರ್ಚುಗೀಸರ ಕೊಡುಗೆಗಳು:

ಪೋರ್ಚುಗೀಸರು ಭಾರತಕ್ಕೆ ವ್ಯಾಪಾರ ದೃಷ್ಟಿಯಿಂದ ಬಂದರು. ಭಾರತದಲ್ಲಿ ತಮ್ಮದೇ ಆದ ಕೊಡುಗೆಗಳನ್ನು ನೀಡಿದರು. ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಆರ್ಥಿಕವಾಗಿ ಭಾರತದಲ್ಲಿ ಬಹಳಷ್ಟು ಬದಲಾವಣೆಗಳು ಉಂಟಾದವು. ಹೊಸಧರ್ಮದ ಪರಿಚಯದಿಂದಾಗಿ ಹಿಂದೂ ಧರ್ಮದಲ್ಲಿದ್ದ ನ್ಯೂನ್ಯತೆಗಳನ್ನು ಸರಿಪಡಿಸುವ ಪ್ರಯತ್ನಗಳು ನಡೆದವು. ಶೈಕ್ಷಣಿಕ ಕ್ಷೇತ್ರಗಳಲ್ಲಿ ಬಹಳಷ್ಟು ಸುಧಾರಣೆಗಳು ಕಂಡು ಬಂದವು. ಪೋರ್ಚುಗೀಸರು ಹೊಸ ಶಾಲಾ ಕಾಲೇಜುಗಳನ್ನು ಸ್ಥಾಪಿಸುವ ಮೂಲಕ ಶಿಕ್ಷಣದ ಪ್ರಸಾರವನ್ನು ಕೈಗೊಂಡರು. ಭಾರತದಲ್ಲಿ ಮೊಟ್ಟ ಮೊದಲ ಬಾರಿಗೆ ಮುದ್ರಣ ಯಂತ್ರವನ್ನು ಪರಿಚಯಿಸಲಾಯಿತು. ಇದರಿಂದಾಗಿ ಹೊಸ ವಿಚಾರಗಳ ವಿನಿಮಯಕ್ಕೆ

ಅವಕಾಶ ದೊರೆಯಿತು. ಉದಾರವಾದ ಕ್ರೈಸ್ತ ಧರ್ಮ ಹಾಗೂ ನೂತನ ಭಾವನೆಗಳು ಆಚಾರ ವಿಚಾರಗಳು ಹೊಸ ಚರ್ಚ್ ಕೋಟೆಗಳ ನಿರ್ಮಾಣ ಹೊಸ ಕಲೆಯ ಉಗಮ ಭಾರತೀಯ ಬಾಷೆಗಳ ಬೆಳವಣಿಗೆಗೆ ಅವಕಾಶ ಕಲ್ಪಿಸಿದ್ದು, ಪೋರ್ಚುಗೀಸರು ಭಾರತಕ್ಕೆ ನೀಡಿದ ಕೊಡುಗೆಗಳಾಗಿವೆ. [96]

ಹೀಗೆ ಪೋರ್ಚುಗೀಸರು ಭಾರತಕ್ಕೆ ಬಂದ ನಂತರ ತಮ್ಮ ವ್ಯಾಪಾರ ವಾಣಿಜ್ಯದೊಂದಿಗೆ ಸ್ಥಳೀಯರೊಂದಿಗೆ ರಾಜಕೀಯ, ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ದಾರ್ಮಿಕ ಕ್ಷೇತ್ರಗಳೊಂದಿಗೆ ತೊಡಗಿಸಿಕೊಂಡು ಭಾರತೀಯ ಸ್ಥಳೀಯ ಜನರೊಂದಿಗೆ ವೈವಾಹಿಕ ಸಂಬಂಧವನ್ನು ಏರ್ಪಡಿಸಿಕೊಂಡು ತಮ್ಮ ಜನಸಂಖ್ಯೆಯನ್ನು ಹೆಚ್ಚಿಸಿದರು. ಅವರು ಕಡಿಮೆ ಅವಧಿಯಲ್ಲಿ ಭಾರತದಲ್ಲಿ ಉಳಿದಿದ್ದರೂ ಸಹ ಅವರು ಆರ್ಥಿಕ ಕ್ಷೇತ್ರದಲ್ಲಿ ಬಹಳಷ್ಟು ಬದಲಾವಣೆಗಳನ್ನು ತಂದರು. ಪೋರ್ಚುಗೀಸರು ವಿಜಯನಗರ ಸಾಮ್ರಾಜ್ಯದ ನಡುವಿನ ಸಂಬಂಧ ಉತ್ತಮವಾಗಿದ್ದರಿಂದ ಅವರು ಹೆಚ್ಚು ಕಾಲ ಭಾರತದಲ್ಲಿ ವ್ಯಾಪಾರ ಏಕಸ್ವಾಮ್ಯವನ್ನು ಹೊಂದಲು ಸಾಧ್ಯವಾಯಿತು. ವಿಜಯನಗರ ಸಾಮ್ರಾಜ್ಯ ಮತ್ತಷ್ಟು ಕಾಲ ಅವನತಿ ಹೊಂದದೆ ಮುಂದುವರಿದು ಬಂದಿದ್ದರೆ ಪೋರ್ಚುಗೀಸರು ಮತ್ತಷ್ಟು ಕಾಲ ಭಾರತದಲ್ಲಿ ತಮ್ಮ ವ್ಯಾಪಾರ ಏಕಸ್ವಾಮ್ಯವನ್ನು ಮುಂದುವರಿಸಲು ಸಾಧ್ಯವಾಗುತ್ತಿತ್ತೆಂದು ಹೇಳಬಹುದು.

## ಗ್ರಂಥಸೂಚಿ


1. ರಾಬರ್ಟ್ ಸಿವಿಲ್, ಅನುವಾದ : ಸದಾನಂದ ಕನವಳ್ಳಿ, ಮರೆತುಹೋದ ಮಹಾ ಸಾಮ್ರಾಜ್ಯ ವಿಜಯನಗರ, P - 121
2. ಅದೇ, P- 121 – 122
3. Chaudhuri K.N Trade and civilization in the Indain ocean Trade, P-63
4. ರಾಬರ್ಟ್ ಸಿವಿಲ್, ಅನುವಾದ : ಸದಾನಂದ ಕನವಳ್ಳಿ, ಮರೆತು ಹೋದ ಮಹಾ ಸಾಮ್ರಾಜ್ಯ ವಿಜಯನಗರ, P–122
5. Panikar K.N. Maiabar and Portuguese, P-94
6. ಮಂಗಳೂರು ದರ್ಶನ, ಸಂಪುಟ–1, P-242
7. NIlakanta Sastri K.A., The third Dynasty of Vijayanagara, P-285
8. ರಾಬರ್ಟ್ ಸಿವೆಲ್, ಅನುವಾದ : ಸದಾನಂದ ಕನವಳ್ಳಿ ಮರೆತು ಹೋದ ಮಹಾ ಸಾಮ್ರಾಜ್ಯ. P-182
9. Danvers F.C Studies in Maritime History P-63
10. Mathew K.S. Studies in maritime History P-17
11. ರಾಬರ್ಟ್ ಸಿವೆಲ್, ಅನುವಾದ : ಸದಾನಂದ ಕನವಳ್ಳಿ, ಮರೆತು ಮಹಾ ಸಾಮ್ರಾಜ್ಯ ವಿಜಯನಗರ P - 190 -191
12. Shastry B.S., Commercial Policy of the Portuguese in coastral Karnataka, P-111
13. Chauadhuri K.N. Trade and civilization in the India ocean Trade.P – 66 – 67
14. ಅದೇ, P – 68 – 69
15. Padmanabha menon, History of Kerala, P - 315
16. ಸುನೀಲ್ ಕುಮಾರ್, ಹೆಚ್.ಎಂ. ವಿಜಯನಗರ ಇತಿಹಾಸ, P – 59
17. ಅದೇ, P – 60
18. Shastry B.S. Socio – Economic Retation Between Karnataka and Goa, P - 48 – 49

19. ರಾಬರ್ಟ್ ಸೆವೆಲ್, ಅನುವಾದ ಸದಾನಂದ ಕನವಳ್ಳಿ, ಮರೆತು ಹೋದ ಮಹಾಸಾಮ್ರಾಜ್ಯ ವಿಜಯನಗರ. P - 421
20. ಮಂಗಳೂರು ದರ್ಶನ ಸಂಪುಟ – 1. P - 165
21. Nilakanta Sastri K.A.The Third Dynasty of Vijayanagara, P – 286
22. ಅದೇ, P – 287
23. Krishana Swamy Aiyangar. S Sourecs of Vijayanagara History, P – 195
24. ಮಂಗಳೂರು ದರ್ಶನ ಸಂಪುಟ – I. P – 167
25. ಅದೇ, P – 167 – 168
26. ಸೂರ್ಯನಾಥ ಕಾಮತ್, ಕರ್ನಾಟಕದ ಪರಂಪರೆ. ಪೋರ್ಚುಗೀಸರು ಮತ್ತು ಕರ್ನಾಟಕ P – 180.
27. Shastry B.S., Commercial Policy of the Portuguese in coastral Karnataka, P-112
28. ವೆಂಕಟೇಶ್ ಜೋಯಿಸ್, ಕಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಕ.ಸಾ.ಪ.
29. ಅದೇ, P –81
30. Bombay Gazetteer, Kanara II, P – 115
31. ಮಂಗಳೂರು ದರ್ಶನ ಸಂಪುಟ – I, P – 169
32. ಅದೇ P – 169 – 170
33. ಅದೇ P – 170
34. ಅದೇ P – 171
35. ಅದೇ P – 171 – 172
36. ಅದೇ P – 172
37. ಅದೇ P – 172
38. White Way R.S. The Rise of Portuguese power in India, P – 173
39. ಮಂಗಳೂರು ದರ್ಶನ ಸಂಪುಟ – I, P – 172

40. ಅದೇ P – 173
41. ಕೆಳದಿ ಗುಂಡಾ ಜೋಯಿಸ್, ವಿಜಯನಗರ ಅಧ್ಯಯನ ಸಂಪುಟ III, ವಿಜಯನಗರ ಮತ್ತು ಪೋರ್ಚುಗೀಸರು, P – 132
42. ಅದೇ P – 133
43. Ramesh K.V. A History of South Kanara, P-28
44. ಸೂರ್ಯನಾಥ ಕಾಮತ್, ಕರ್ನಾಟಕದ ಪರಂಪರೆ. ಪೋರ್ಚುಗೀಸರು ಮತ್ತು ಕರ್ನಾಟಕ, P–15
45. Bombay Gazetteer, Kanara II, P – 115
46. ಕೆಳದಿ ಗುಂಡಾ ಜೋಯಿಸ್, ವಿಜಯನಗರ ಅಧ್ಯಯನ ಸಂಪುಟ III, ವಿಜಯನಗರ ಮತ್ತು ಪೋರ್ಚುಗೀಸರು, P – 134
47. ನಿರ್ಮಲರಾಜ್, ವಿಜಯನಗರ ಅಧ್ಯಯನ ಶ್ರೀಕೃಷ್ಣದೇವರಾಯ ಮತ್ತು ಪೋರ್ಚುಗೀಸ್‌ಗವರ್ನರ್ ಅಲ್ಫೆನೋ–ಡಿ–ಅಲ್ಬುಕರ್ಕ್‌ನ ನಡುವಣ ರಾಜತಾಂತ್ರಿಕ ಸಂಬಂಧಗಳು P – 118
48. ಅದೇ P – 119
49. ಅದೇ P – 119
50. ಅದೇ P – 120
51. ಕೆಳದಿ ಗುಂಡಾ ಜೋಯಿಸ್, ವಿಜಯನಗರ ಅಧ್ಯಯನ ಸಂಪುಟ III, ವಿಜಯನಗರ ಮತ್ತು ಪೋರ್ಚುಗೀಸರು, P – 134-135
52. ಅದೇ P – 136
53. ಅದೇ P – 136 – 137
54. ಅದೇ P – 137
55. Diwakar R.R. Karnataka Through the Ages. P - 557 -558
56. ಅದೇ P – 557
57. Foster. W the English factories in India P – 98 – 99
58. ಮಂಗಳೂರು ದರ್ಶನ, ಸಂಪುಟ– I P – 176

59. ಅದೇ P – 177

60. ಅದೇ P – 178 – 179

61. Chavdhuri K.N. Trade and civilization in the Indian ocean, P-68

62. Rao R.P. Portuguese rise in India, P-23-24

63. Panikkar K.M. History of Kerala P-27.

64. ಮಂಗಳೂರು ದರ್ಶನ, ಸಂಪುಟ– I P – 251

65. ಅದೇ, P – 252

66. ಅದೇ, P – 252 - 253

67. ಅದೇ, P – 252

68. ಅದೇ, P – 253

69. ಅಂತಪ್ಪ. ಐ, ಉತ್ತರ ಕರ್ನಾಟಕದಲ್ಲಿ ಕ್ರೈಸ್ತಧರ್ಮದ ಉಗಮ P - 25

70. ಅದೇ, P – 26

71. ಅದೇ, P – 166

72. ಅದೇ, P – 161

73. ಸೂರ್ಯನಾಥ ಕಾಮತ್, ಕರ್ನಾಟಕದ ರಾಜ್ಯ ಗೈಜಿಟಿಯರ್ ಉತ್ತರ ಕನ್ನಡ ಜಿಲ್ಲಾ ಗೈಜಿಟಿಯರ್, P – 2 – 3

74. ಅದೇ, P – 3

75. ಅದೇ, P – 11

76. ಜಯಪ್ಪಗೌಡ ಐ ಎನ್ ಕರ್ನಾಟಕದ ಕಡಲಾಚೆಯ ಸಂಪರ್ಕಗಳು P – 19

77. ಗುರುವ ಎನ್.ಆರ್. ಕಾರವಾರ ಜಿಲ್ಲೆಯ ಶಾಸನಗಳು, P – 17

78. ಭಟ್ಟ, ಗುರುರಾಜ. ಪಿ ತುಳುನಾಡು P – 16

79. ಪ್ರವಾಸಿ ಕಂಡ ಇಂಡಿಯಾ ಸಂಪುಟ – I, P – 62

80. ರಮೇಶ್ ಕೆ.ವಿ. ತುಳುನಾಡಿನ ಶಾಸನಗಳು, P – 87

81. ರಮೇಶ್ ಕೆ.ವಿ. ಶರ್ಮಾ, ಎಮ್ ಜಿ. ತುಳುನಾಡಿನ ಅರಸು ಮನೆತನಗಳು, P – 87

82. ಪ್ರವಾಸಿ ಕಂಡ ಇಂಡಿಯಾ ಭಾಗ–1, P–17
83. Durate Barbos : A Description of te coast of East Africa and Malabar I.P.-189
84. Hursain: The Relha of Ibn Batuta, P – 185
85. Purchas. S Hakivytus posthumus X, P – 101
86. South Indian Inscriptions, II 58, Lines, 39 – 42
87. Marco polo Travels II, P – 389 – 90, Barbosa, I, P - 23,-31,-34.
88. Epigraphia Karnataka, VI. Tk, 69, P-118, XII. Si, 31, P_93, X . K1, 73, p -19 – 20
89. Barbosa, An Account, II, P – 184
90. Marco polo, Travels II, P- 389
91. Mathew K S and Pius Malekandathil , Kerala Economy and Europe, P-38
92. Barbosa, An Account, Vol – 1 P-127 – 128
93. Barbosa, An Account, I, P – 23
94. ಅದೇ P – 195, 196
95. Roteiro de vasco –de-Gama, P – 94.
96. Danvers F.C. The Portuguese in India, P - 250

# ಅಧ್ಯಾಯ – 04

## ವಿಜಯನಗರ ಸಾಮ್ರಾಜ್ಯ ಮತ್ತು ಇತರೆ ಏಷ್ಯಾ ರಾಷ್ಟ್ರಗಳೊಂದಿಗಿನ ಸಂಬಂಧಗಳು

ವಿಜಯನಗರ ಸಾಮ್ರಾಜ್ಯವು ಯುರೋಪ್, ಆಫ್ರಿಕಾ ಮತ್ತು ಅರಬ್‌ನ ದೇಶಗಳೊಂದಿಗೆ ಮಾತ್ರವೇ ವ್ಯಾಪಾರ ವಾಣಿಜ್ಯ ಸಂಬಂಧವನ್ನು ಹೊಂದಿರಲಿಲ್ಲ ಅಲದೇ ಏಷ್ಯಾದ ಇತರ ರಾಷ್ಟ್ರಗಳು ಕೂಡ ವಿಜಯನಗರ ಸಾಮ್ರಾಜ್ಯದೊಂದಿಗಿನ ವ್ಯಾಪಾರ ವಾಣಿಜ್ಯ ಸಂಬಂಧಗಳನ್ನು ಹೊಂದಿದ್ದವು. ನಮ್ಮ ಅಧ್ಯಯನಕ್ಕೆ ಸಂಬಂಧಿಸಿದಂತೆ ಏಷ್ಯಾದ ಇತರ ರಾಷ್ಟ್ರಗಳಾದ, ಚೀನಾ, ಶ್ರೀಲಂಕಾ, ಬರ್ಮಾ, ಮಲಯಾ ರಾಷ್ಟ್ರಗಳೊಂದಿಗೆ ವಿಜಯನಗರ ಸಾಮ್ರಾಜ್ಯ ಹೊಂದಿದ್ದ ಸಂಬಂಧವನ್ನು ಮುಖ್ಯವಾಗಿ ನಾನು ಈ ಘಟಕದಲ್ಲಿ ಅಧ್ಯಯನ ಮಾಡುತ್ತಿದ್ದೇನೆ. ವಿಜಯನಗರ ಸಾಮ್ರಾಜ್ಯ ಈ ಮೇಲ್ಕಂಡ ಏಷ್ಯಾ ರಾಷ್ಟ್ರಗಳೊಂದಿಗೆ ಪ್ರಾರಂಭದಲ್ಲಿ ನೇರವಾದ ಸಂಕರ್ಪವನ್ನು ಹೊಂದಿತ್ತು. ಭಾರತಕ್ಕೆ ಯುರೋಪಿಯನ್ನರ ಆಗಮನದ ನಂತರ ಪೋರ್ಚುಗೀಸರು ವಿಜಯನಗರ ಮತ್ತು ಇತರ ಏಷ್ಯಾ ರಾಷ್ಟ್ರಗಳೊಂದಿಗೆ ನೇರವಾದ ಸಂಬಂಧವನ್ನು ಬೆಳೆಸಿದರು. ಅಂದರೆ ಇವರು ಈ ರಾಷ್ಟ್ರಗಳ ನಡುವೆ ಮಧ್ಯವರ್ತಿಗಳಾಗಿ ಕಾರ್ಯನಿರ್ವಹಿಸುತ್ತಿದ್ದು ಕೂಡ ಹಲವಾರು ದಾಖಲೆಗಳು ಸ್ಪಷ್ಟಪಡಿಸುತ್ತವೆ.

### 4.1 ವಿಜಯನಗರ ಸಾಮ್ರಾಜ್ಯ ಮತ್ತು ಚೀನಾ

ಏಷ್ಯಾದ ಸಾಂಸ್ಕೃತಿಕ ಕಣಜ ಎಂದೇ ಪ್ರಸಿದ್ಧಿಯಾಗಿರುವ ಚೀನಾ ಸುಮಾರು 38 ಲಕ್ಷ ಚದರ ಮೈಲಿ ವಿಸ್ತೀರ್ಣದಿಂದ ಕೂಡಿದೆ. ಇದು ಜಗತ್ತಿನಲ್ಲೇ ಅತಿ ಹೆಚ್ಚು ಜನಸಂಖ್ಯೆಯನ್ನು ಹೊಂದಿರುವ ದೇಶ. ಪ್ರಸ್ತುತ ಇದರ ಜನಸಂಖ್ಯೆ 150 ಕೋಟಿಗಳಷ್ಟಿದೆ. ಕ್ರಿ.ಶ. 21ನೇ ಶತಮಾನದಲ್ಲಿ ಜಗತ್ತಿನಲ್ಲಿ ಅಮೇರಿಕಾವನ್ನು ಬಿಟ್ಟರೆ. ಎರಡನೇ ಅತ್ಯಂತ ಪ್ರಬಲರಾಷ್ಟ್ರವಾಗಿ ಹೊರ ಹೊಮ್ಮಿರುವ ಚೀನಾ, ಆರ್ಥಿಕವಾಗಿ, ತಾಂತ್ರಿಕವಾಗಿ, ವೈಜ್ಞಾನಿಕವಾಗಿ ಮತ್ತು ಕೈಗಾರಿಕಾ ರಂಗದಲ್ಲಿ ಅದ್ಭುತವಾದ ಪ್ರಗತಿ ಸಾಧಿಸಿ ಮೊದಲನೇ ಸ್ಥಾನದತ್ತ ಮುನ್ನಡೆಯುತ್ತಿದೆ. ಒಂದು ಕಾಲದಲ್ಲಿ ಆರ್ಥಿಕ ಮುಗ್ಗಟ್ಟು ಆಹಾರದ ಸಮಸ್ಯೆ, ಬಡತನ ಹಾಗೂ ಜನಸಂಖ್ಯೆಯ ಭಾರದಿಂದ ನರಳುತ್ತಿದ್ದ ದೇಶ. ಇಂದು ಸಾಧಿಸಿರುವ ಅಗಾಧವಾದ ಪ್ರಗತಿಯನ್ನು ಕಂಡು ಇಡೀ ವಿಶ್ವವೇ ಆಶ್ಚರ್ಯಚಕಿತಗೊಂಡಿದೆ. ಕೃಷಿ ಆಧಾರಿತ ರಾಷ್ಟ್ರವಾಗಿದ್ದ ಚೀನಾ ಈಗ ಕೈಗಾರೀಕರಣಗೊಂಡಿದೆ.

ಚೀನಾದಲ್ಲಿ ಫಲವತ್ತಾದ ನದಿ ಬಯಲು ಉತ್ತಮವಾದ ಹವಾಗುಣ ಸದಾಕಾಲ ತುಂಬಿ ಹರಿಯುವ ನದಿಗಳು ಬೆಟ್ಟಗುಡ್ಡಗಳು ಮೊದಲಾದ ಭೌಗೋಳಿಕ ಲಕ್ಷಣಗಳು ಅಲ್ಲಿಯ ಜನರ ಶ್ರೀಮಂತಿಕೆಗೆ ಆಧಾರವಾಗಿದೆ. ಹ್ವಾಂಗ್ ಹೋ ನದಿ ಬಯಲು ಯಾಂಗ್ ಸಿಕಿಯಾಂಗ್ ನದಿ ಬಯಲು ಮತ್ತು ಸಿಕಿಯಾಂಗ್ ನದಿಬಯಲು ಚೀನಾದ ಮೂರು ಪ್ರಾಕೃತಿಕ ವಿಬಾಗಗಳು. ಚೀನಿ ಭಾಷೆಯಲ್ಲಿ ಕಿಯಾಂಗ್ ಎಂದರೆ ನದಿ ಎಂದರ್ಥ. ಹ್ವಾಂಗ್ ಹೋ ನದಿಯನ್ನು ಚೀನಾದ ದುಃಖನದಿ ಹಾಗೂ ಹಳದಿ ನದಿ ಎಂದು ಕರೆಯುತ್ತಾರೆ. ಈ ನದಿಗೆ ಪ್ರವಾಹ ಬಂದಾಗ ಸಾವಿರಾರು ಜನರು ಸಾವಿಗೀಡಾಗುತ್ತಾರೆ. ಈ ನದಿಯ ದಂಡೆಯ ಮೇಲೆ ಚೀನಾ ಪ್ರಮುಖ ವಾಣಿಜ್ಯನಗರವಾದ ಷಾಂಘೈ ನೆಲೆಸಿದೆ. ಟೀನ್‌ಟ್ಸಿನ್ ಪರ್ವತಾವಳಿಯು ಈ ದೇಶವನ್ನು ಉತ್ತರ ಮತ್ತು ದಕ್ಷಿಣ ಚೀನಾಗಳನ್ನಾಗಿ ವಿಭಾಗಿಸಿದೆ. ಚೀನಾದ ಪೂರ್ವಕ್ಕೆ ಪೆಸಿಫಿಕ್ ಮಹಾನಗರ, ಉತ್ತರಕ್ಕೆ ಮಂಗೋಲಿಯಾದ ಮರುಭೂಮಿ, ಪಶ್ಚಿಮಕ್ಕೆ ಟಿಬೆಟ್ ಪ್ರಸ್ಥಭೂಮಿ ದಕ್ಷಿಣಕ್ಕೆ ಹಿಮಾಲಯ ಪರ್ವತ ಶ್ರೇಣಿ ಹಾಗೂ ಬರ್ಮಾದ ಅರಣ್ಯಗಳು ಭೌಗೋಳಿಕ ಮೇರೆಗಳಾಗಿವೆ. ಚೀನಿಯರು ಮಂಗೋಲಿಯನ್ ಬುಡಕಟ್ಟಿಗೆ ಸೇರಿದ ಹಳದಿ ವರ್ಣದ ಜನರು, ಪ್ರಾಚೀನ ಕಾಲದಿಂದಲೂ ಕೃಷಿ ಜನರ ಮುಖ್ಯ ಉದ್ಯೋಗವಾಗಿತ್ತು. ಭತ್ತ ಅವರ ಮುಖ್ಯ ಬೆಳೆ ಮತ್ತು ಆಹಾರ.

ಪುರಾತನ ಕಾಲದಿಂದಲೂ ಚೀನಾ ತನ್ನದೇ ಆದ ನಾಗರೀಕತೆ ಮತ್ತು ಸಂಸ್ಕೃತಿಯನ್ನು ಹೊಂದಿದೆ. ಗ್ರೀಕ್, ರೋಮ್, ಮೊದಲಾದ ಪಾಶ್ಚಿಮಾತ್ಯ ದೇಶಗಳು ಇನ್ನೂ ಅನಾಗರೀಕರಾಗಿದ್ದ ಕಾಲದಲ್ಲೇ ಚೀನಿಯರು ತಮ್ಮದೇಯಾದ ವಿಶಿಷ್ಟ ಸಂಸ್ಕೃತಿಯನ್ನು ಕಟ್ಟಿ ಬೆಳೆಸಿದ್ದರು. ಪ್ರಾಚೀನ ಚೀನಿ ನಾಗರೀಕತೆ ಉತ್ತರದ ಹ್ವಾಂಗ್–ಹೋ ಮತ್ತು ಮಧ್ಯ ಚೀನಾದ ಯಾಂಗ್–ಸಿಕಿಯಾಂಗ್ ನದಿ ಬಯಲುಗಳಲ್ಲಿ ಅಭಿವೃದ್ಧಿ ಹೊಂದಿತ್ತು. ಪುರಾತನ ಕಾಲದಿಂದಲೂ ಚೀನಿಯರು ಪರಕೀಯ ರಿಂದ ಪ್ರಭಾವಿತರಾಗದೇ ತಮ್ಮದೇಯಾದ ವೈಭವಯುತವಾದ ಸಂಸ್ಕೃತಿಯನ್ನು ರೂಡಿಸಿ ಕೊಂಡಿ ದ್ದರು. ತಮ್ಮ ಸಂಸ್ಕೃತಿಯ ಶ್ರೇಷ್ಠತೆಯ ಬಗ್ಗೆ ಅವರು ಹೆಮ್ಮೆ ಪಟ್ಟು ಕೊಳ್ಳುತ್ತಿದ್ದರು. ಭೌಗೋಳಿಕ ವಿಭಾಗಗಳಿಂದಾಗಿ ಚೀನಾ ದೇಶ ತನ್ನ ನೆರೆಹೊರೆಯ ದೇಶಗಳಿಂದಲೂ ವಿಭಾಗಿಸಲ್ಪಟ್ಟು ಒಂದು ರೀತಿಯ ಏಕಾಂತ ವಾಸವನ್ನು ಅನುಭವಿಸುತ್ತಿತ್ತು. ಇಂತಹ ಏಕಾಂತ ವಾಸದಿಂದಲೇ ಚೀನಿಯರು ತಾವು ಉಳಿದ ಎಲ್ಲಾ ರಾಷ್ಟ್ರಗಳ ಜನರಿಗಿಂತ ಹೆಚ್ಚು ಸುಸಂಸ್ಕೃತರು, ನಾಗರೀಕರು ಎಂಬ ಭಾವನೆ ಹೊಂದಿದ್ದರು. ಇಂತಹ ಭಾವನೆ ಪಾಶ್ಚಿಮಾತ್ಯರ ಆಗಮನವರೆಗೂ ಮುಂದುವರಿಯಿತು.

ಭಾರತ ಮತ್ತು ಚೀನಾ ಪ್ರಾಚೀನ ಕಾಲದಿಂದಲೂ ವಾಣಿಜ್ಯ ಮತ್ತು ರಾಜತಾಂತ್ರಿಕ ಸಂಬಂಧವನ್ನು ಹೊಂದಿದ್ದವು. ಭಾರತದಲ್ಲಿ ಬೆಳವಣಿಗೆ ಹೊಂದಿದ್ದ ಬೌದ್ಧ ಧರ್ಮವು ಚೀನಾ ದೇಶಕ್ಕೆ ಪಾದಾರ್ಪಣೆಯಾಯಿತು. ಭಾರತ ಮತ್ತು ಚೀನಾದ ನಡುವೆ ಮುಖ್ಯವಾಗಿ ರೇಷ್ಮೆ ಮಾರ್ಗವು ಬಹಳಷ್ಟು ಬೆಳವಣಿಗೆ ಪಡೆದಿತ್ತು. ಚೀನಾದ ರೇಷ್ಮೆಗೆ ಇಡೀ ವಿಶ್ವದಾದ್ಯಂತ ಬೇಡಿಕೆ ಇದ್ದು ಅದರ ಪರವಾಗಿ ಚೀನಾ ಬೇರೆ ದೇಶಗಳೊಂದಿಗೆ ಹೊಂದಿದ್ದ ವ್ಯಾಪಾರ ಮತ್ತು ವಾಣಿಜ್ಯದ ಮಾರ್ಗವನ್ನು ಮುಖ್ಯವಾಗಿ ರೇಷ್ಮೆಮಾರ್ಗವೆಂದೇ ಕರಯಲಾಗತ್ತಿತ್ತು. ಉದಾ:- ಚೀನಾದಿಂದ ನೇರವಾಗಿ ಉತ್ತರ ಭಾರತದ ಗುಜರಾತಿನ ಬಂದರಿನವರೆಗೆ ನೇರವಾದ ಮಾರ್ಗವಿತ್ತು. ನಂತರ ಚೀನಾದಿಂದ ಪರ್ಷಿಯಾ ಮಾರ್ಗವಾಗಿ ಯುರೋಪಿನ ದೇಶಗಳಿಗೆ, ಚೀನಾದಿಂದ ಭಾರತದ ಗುಜರಾತ್ ಮಾರ್ಗವಾಗಿ ಅರೇಬೀಯಾ ಈಜಿಪ್ಟ್ ಮತ್ತು ಸೋಮಾಲಿಯಾ ದೇಶಗಳಿಗೆ ನೇರವಾದ ಸಂಕರ್ಪವಿತ್ತು. ಹಾಗೆಯೇ ಚೀನಾದಿಂದ ನೇರವಾಗಿ ಭಾರತದ ಪೂರ್ವ ಬಂದರುಗಳ ಮಾರ್ಗವಾಗಿ ನೇರವಾದ ವ್ಯಾಪಾರ ಸಂಪರ್ಕವಿತ್ತು. ನಂತರ ಚೀನಾದಿಂದ ಬರ್ಮಾ ಮತ್ತು ಜಾವಾದ ಮಾರ್ಗವಾಗಿ ಶ್ರೀಲಂಕಾವನ್ನು ಒಳಗೊಂಡಂತೆ ಪಶ್ಚಿಮದ ಬಂದರುಗಳಿಗೆ ಚೀನಾ ದೇಶವು ನೇರವಾದ ವ್ಯಾಪಾರ ಮಾರ್ಗವನ್ನು ಹೊಂದಿತ್ತು. ಹೀಗೆ ಚೀನಾದ ವ್ಯಾಪಾರ ಮಾರ್ಗವು ಎಲ್ಲಾ ದಿಕ್ಕುಗಳಿಂದಲೂ ಭಾರತದ ಮಾರ್ಗವಾಗಿಯೇ ಹಾದು ಹೋಗಿದುದರಿಂದಾಗಿ ಭಾರತ ಮತ್ತು ಚೀನಾದ ನಡುವೆ ಸಾಮಾನ್ಯವಾಗಿ ಉತ್ತಮ ಸಂಬಂಧ ಬೆಳವಣಿಗೆ ಹೊಂದಿತ್ತೆಂದು ಹೇಳಬಹುದು. ಈ ಮಾರ್ಗವು ಕೇವಲ ವ್ಯಾಪಾರ ಮಾರ್ಗವಾಗಿರಲಿಲ್ಲ. ಜೊತೆಗೆ ಇದು ಸಂಸ್ಕೃತಿಯ ವಿನಿಮಯ, ಸರಕುಗಳ ವಿನಿಮಯ, ವ್ಯಕ್ತಿಗಳ ವಿನಿಮಯ, ವಿಚಾರಗಳ ವಿನಿಮಯ ಮತ್ತು ಅನ್ವೇಷಣೆಗಳ ವಿನಿಮಯದ ಭಾಗವಾಗಿತ್ತು.[1]

ಕ್ರಿ.ಶ.1368ರಲ್ಲಿ ಮಿಂಗ್ ಸಾಮ್ರಾಜ್ಯ ಚೀನಾದಲ್ಲಿ ಸ್ಥಾಪನೆಯಾದ ನಂತರ ಈ ಸಾಮ್ರಾಜ್ಯದ ಅರಸರು ಸುತ್ತಮುತ್ತಲಿನ ರಾಷ್ಟ್ರಗಳೊಂದಿಗೆ ಉತ್ತಮವಾದ ಸಂಬಂಧವನ್ನು ಸ್ಥಾಪಿಸಲು ಪ್ರಯತ್ನಿಸಿದರು ಈ ಸಾಮ್ರಾಜ್ಯವು ವಿಜಯನಗರ ಸಾಮ್ರಾಜ್ಯದ ಸಮಕಾಲೀನ ವಾದುದಾಗಿತ್ತು. ಈ ಕಾಲದಲ್ಲಿ ವಿಜಯನಗರ ಮತ್ತು ಚೀನಾದ ನಡುವೆ ಉತ್ತಮವಾದ ವ್ಯಾಪಾರ ಮತ್ತು ವಾಣಿಜ್ಯ ಬೆಳವಣಿಗೆಗಳು ಉಂಟಾದವು. ದಕ್ಷಿಣ ಭಾರತ ಮತ್ತು ಚೀನಾದ ಪ್ರಾರಂಭದ ಸಮುದ್ರಯಾನ ಪರಸ್ಪರ ಸಾಮ್ರಾಜ್ಯಗಳ ನಡುವೆ ಕಪ್ಪಕಾಣಿಕೆಗಳನ್ನು ಕೊಡುವುದು ಮತ್ತು ಬಹುಮಾನ ಅಥವಾ ಕೊಡುಗೆಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳು ವುದಾಗಿತ್ತು. ಭಾರತದೊಂದಿಗಿನ ವೈದ್ಯಕೀಯ ಸಂಶೋಧನೆ ಸಮುದ್ರಯಾನಕ್ಕೆ ಮತ್ತೊಂದು ಕಾರಣವಾಗಿತ್ತು.

**ಮೊದಲ ಸಮುದ್ರಯಾನ 1405 – 1406**

ಕ್ರಿ.ಶ. 1405–1406 ರ ಸಂದರ್ಭದಲ್ಲಿ ಮೊದಲ ಸಮುದ್ರಯಾನವನ್ನು ಜೀಯಂಗ್ ಪ್ರಾರಂಭಿಸಿದನು. ಇವನು ತನ್ನ ಸೈನ್ಯಕ್ಕೆ ಆಜ್ಞೆಮಾಡಿ ಸುಮಾರು ಮೂರುನೂರ ಹದಿನೇಳು ನೌಕೆಗಳೊಂದಿಗೆ ಭಾರತಕ್ಕೆ ಬಂದನು. ಸಾಮಾನ್ಯವಾಗಿ ನೌಕೆಗಳು ನಾಲ್ಕುನೂರು ಅಡಿ ಉದ್ದ ಮತ್ತು ನೂರ ಅರವತ್ತು ಅಡಿ ಅಗಲವಾಗಿದ್ದವು. ಈ ಮೊದಲನೇ ಸಮುದ್ರಯಾನವು ವಿಯಟ್ನಾಂ ಜಾವ, ಸುಮಾತ್ರ ಶ್ರೀಲಂಕಾ ಮಾರ್ಗವಾಗಿ ಕ್ಯಾಲಿಕಟ್‌ಗೆ ಬಂದು ತಲುಪಿತು. ಈ ಸಂದರ್ಬದಲ್ಲಿ ಕಡಲ್ಗಳರ ಜೊತೆ ಸಂಘರ್ಷವು ಉಂಟಾಗಿ ಕೆಲವು ಕಡಲ್ಗಳರನ್ನು ಸದೆ ಬಡಿದುದರ ಬಗ್ಗೆ ಉಲ್ಲೇಖಗಳಿವೆ.

**ಎರಡನೇ ಸಮುದ್ರಯಾನ 1407–1409**

ಕ್ರಿ.ಶ. 1407 – 1409 ರವರೆಗೆ ಎರಡನೇ ಸಮುದ್ರಯಾನ ಚೀನಾದಿಂದ ಭಾರತಕ್ಕೆ ನಡೆಯಿತು. ಈ ಸಂದರ್ಬದಲ್ಲಿ ಜೀಯಂಗ್ ಬರಲಿಲ್ಲ ಇವನು ತನ್ನ ಬದಲಗೆ ಮತ್ತೊಬ್ಬರನ್ನು ಕಳುಹಿಸಿದನು. ಈ ಸಂದರ್ಭದಲ್ಲಿ ವ್ಯಾಪಾರ ಉದ್ದೇಶವನ್ನು ಇಟ್ಟುಕೊಂಡು ವಿಯೆಟ್ನಾಂ, ಜಾವಾ, ಸುಮಾತ್ರ, ಸಿಲೋನ್ ಮಾರ್ಗವಾಗಿ ಕ್ಯಾಲಿಕಟ್ ತಲುಪಿದರು.

**ಮೂರನೇ ಸಮುದ್ರಯಾನ 1409 –1411**

ಚೀನಾವು ಮೂರನೇ ಸಮುದ್ರಯಾನದಲ್ಲಿ ಮುಖ್ಯವಾಗಿ ವ್ಯಾಪಾರ ಮತ್ತು ವಾಣಿಜ್ಯಕ್ಕಿಂತ ಕೆಲವು ರಾಜಕೀಯ ಹಿತಾಶಕ್ತಿಗಳನ್ನು ಬೆಳೆಸಿಕೊಳ್ಳುವ ಪ್ರಯತ್ನವನ್ನು ಮಾಡಿತ್ತು. ಮಲಕ್ಕಾದ ಮೇಲೆ ದಾಳಿಮಾಡಿ ಅಲ್ಲಿನ ರಾಜನ ಮೇಲೆ ಮಲಕ್ಕಾವು ಚೀನಾದ ಸಾಮಂತ ರಾಜ್ಯವೆಂದು ಘೋಷಿಸಬೇಕೆಂದು ಆಜ್ಞೆ ಹೊರಡಿಸಿತು. ಮಲಕ್ಕಾದ ಮೇಲೆ ಹಿಡಿತ ಹೊಂದಿದರೆ ಜಾವಾ, ಸುಮಾತ್ರ, ಸಿಲೋನ್ ಮತ್ತು ಭಾರತದ ಬಂದರುಗಳ ಮೇಲೆ ಹಿಡಿತ ಸಾಧಿಸಲು ಸುಲಭವಾಗಬಹುದೆಂಬ ಉದ್ದೇಶ ಅವರದಾಗಿತ್ತು.

**ನಾಲ್ಕನೇ ಸಮುದ್ರಯಾನ 1414– 1415**

ಕ್ರಿ.ಶ.1414–1415ರ ಸಂದರ್ಭದಲ್ಲಿ ಚೀನಾವು ನಾಲ್ಕನೇ ಸಮುದ್ರಯಾನವನ್ನು ಮಾಡಿದರು. ಈ ಸಮುದ್ರಯಾನದಲ್ಲಿ ಚೀನಾವು ಮುಖ್ಯವಾಗಿ ಭಾರತದ ಮಾರ್ಗವಾಗಿ

ಪರ್ಷಿಯನ್ ಕೊಲ್ಲಿ ಮತ್ತು ಓರ್ಮಜ್‌ಗೆ ತಲುಪುವ ಉದ್ದೇಶ ಹೊಂದಿದ್ದರು. ಈ ಸಂದರ್ಭದಲ್ಲಿ ಭಾರತದ ಬಂದರುಗಳಿಗೆ ಬಂದು ಅಲ್ಲಿಂದ ಪರ್ಷಿಯನ್ ಕೊಲ್ಲಿಗೆ ಸಮುದ್ರಯಾನವನ್ನು ಕೈಗೊಂಡರು.

**ಐದನೇ ಸಮುದ್ರಯಾನ 1417–1419**

ಕ್ರಿ.ಶ. 1417–1419 ರಲ್ಲಿ ಐದನೇ ಸಮುದ್ರಯಾನದಲ್ಲಿ ಚೀನಾದವರು ಕೈಗೊಂಡರು. ಸುಮಾರು ಹತ್ತೊಂಬತ್ತು ರಾಯಭಾರಿಗಳೊಂದಿಗೆ ತಮ್ಮ ಯಾತ್ರೆ ಆರಂಭಿಸಿದ ಅವರು ಸುಮಾತ್ರ, ಮಲಯಾ, ಮಲಕ್ಕಾ, ಮಾಲ್ಡೀವ್ಸ್, ಸಿಲೋನ್, ಕೊಚ್ಚಿನ್ ಮಾರ್ಗವಾಗಿ ಅವರು ಕ್ಯಾಲಿಕಟ್‌ಗೆ ಬಂದು ತಲುಪಿದರು. ಈ ಸಂದರ್ಭದಲ್ಲಿ ಭಾರತದ ಬಂದರುಗಳೊಂದಿಗೆ ಉತ್ತಮವಾದ ವ್ಯಾಪಾರ ಮತ್ತು ವಾಣಿಜ್ಯ ಸಂಪರ್ಕವನ್ನು ಬೆಳೆಸಲು ಪ್ರಾರಂಭಿಸಿದರು. ಭಾರತದ ಬಂದರುಗಳಿಂದ ಅರೇಬಿಯಾ, ಪರ್ಷಿಯಾ ಮತ್ತು ಆಫ್ರಿಕಾದೊಂದಿಗೆ ವ್ಯಾಪಾರ ವಹಿವಾಟು ನಡೆಸಲು ಪ್ರಾರಂಭಿಸಿದರು.

**ಆರನೇ ಸಮುದ್ರಯಾನ : 1421 – 1422**

ಆರನೇ ಸಮುದ್ರಯಾನವು ಮುಖ್ಯವಾಗಿ ಆಫ್ರಿಕಾದ ಯಾನೆಯಾಗಿತ್ತು. ಆಫ್ರಿಕಾಕ್ಕೆ ತಲುಪುವ ಮುನ್ನ ಚೀನಾದ ಹಡಗುಗಳು ಭಾರತದ ಬಂದರುಗಳ ಮೇಲೆ ಹಾದು ಹೋಗಬೇಕಿತ್ತು. ಈ ಸಂದರ್ಭದಲ್ಲಿ ಭಾರತದ ಬಂದರುಗಳಲ್ಲಿ ವ್ಯಾಪಾರವನ್ನು ಕೈಗೊಂಡು ಅಲ್ಲಿಂದ ಆಫ್ರಿಕಾಗಳಿಗೆ ಯಾನವನ್ನು ಕೈಗೊಳ್ಳುತ್ತಿದ್ದರು.

**ಏಳನೇ ಸಮುದ್ರಯಾನ 1431–1433**

ಕ್ರಿ.ಶ. 1431–1433 ರ ಸಂದರ್ಭದಲ್ಲಿ ಸುಮಾರು ಮುನ್ನೂರು ಹಡಗುಗಳು ಜಾವಾ. ಮಲಕ್ಕಾ, ಸಿಲೋನ್, ಮಾರ್ಗವಾಗಿ ಕ್ಯಾಲಿಕಟ್‌ಗ್ ತಲುಪಿದವು. ಇಲ್ಲಿಂದ ಪೂರ್ವ ಆಫ್ರಿಕಾ, ಕೆಂಪು ಸಮುದ್ರ ಮತ್ತು ಅರಬ್ ರಾಷ್ಟ್ರಗಳೊಂದಿಗೆ ವ್ಯಾಪಾರ ಉದ್ದೇಶವನ್ನು ಹೊಂದಿದ್ದರು. ಅರೇಬಿಯಾಕ್ಕೆ ಹೋದ ಚೀನಿಯರು ಮಲಕ್ಕಾಗೆ ಭೇಟಿ ನೀಡಿದ್ದರ ಬಗ್ಗೆ ಉಲ್ಲೇಖಗಳಿವೆ. ಈ ಸಂದರ್ಭದಲ್ಲಿ ಚೀನಿಯರು ಅರಬ್ಬರೊಂದಿಗೆ ಉತ್ತಮವಾದ ಸಂಬಂಧವನ್ನು ಬೆಳಸಿಕೊಂಡು ತಮ್ಮ ವ್ಯಾಪಾರವನ್ನು ಅಭಿವೃದ್ಧಿಪಡಿಸಿಕೊಳ್ಳುವ ಪ್ರಯತ್ನ ಮಾಡಿದರು. ಕಾರಣ ಅರಬ್ಬರು ಭಾರತದೊಂದಿಗೆ ಉತ್ತಮವಾದ ವ್ಯಾಪಾರ ಮತ್ತು ವಾಣಿಜ್ಯ ಸಂಪರ್ಕವನ್ನು ಹೊಂದಿದ್ದು

ಅವರೊಂದಿಗೆ ಉತ್ತಮವಾದ ಸಂಪರ್ಕವನ್ನು ವ್ಯಾಪಾರದ ಅಭಿವೃದ್ಧಿ ಸಾಧ್ಯವೆಂದು ಚೀನಿಯರು ಅರಬ್ಬರೊಂದಿಗೆ ಉತ್ತಮ ವ್ಯಾಪಾರ ವಾಣಿಜ್ಯವನ್ನು ಬೆಳೆಸಿಕೊಂಡರು.[2]

**ವಿಜಯನಗರ ಸಾಮ್ರಾಜ್ಯ ಮತ್ತು ಚೀನಾದ ನಡುವೆ ವ್ಯಾಪಾರ ಮತ್ತು ವಾಣಿಜ್ಯ ಸಂಬಂಧಗಳು**

ಭಾರತ ಮತ್ತು ಚೀನಾದ ನಡುವಿನ ವ್ಯಾಪಾರದ ವ್ಯಾಪಾಕವು ಪ್ರಾಚೀನ ಕಾಲದಿಂದಲೂ ಬೆಳವಣಿಗೆ ಹೊಂದಿದ್ದರು ಕೂಡ ಮದ್ಯಕಾಲೀನ ಭಾರತದಲ್ಲಿ ಬಹಳಷ್ಟು ಪ್ರಾಮುಖ್ಯತೆಯನ್ನು ಪಡೆದುಕೊಂಡಿತ್ತು. ಮಧ್ಯಕಾಲೀನ ಯುಗದಲ್ಲಿ ಭಾರತವು ತನ್ನ ಸುತ್ತಮುತ್ತಲಿನ ರಾಜ್ಯಗಳೊಂದಿಗೆ ಉತ್ತಮವಾದ ವ್ಯಾಪಾರ ಸಂಬಂಧವನ್ನು ಬೆಳೆಸಿಕೊಂಡಿತ್ತು. ಭಾರತಕ್ಕೆ ಅರಬ್ಬರ ಆಗಮನವು ಭಾರತದ ವಿವಿಧ ರಾಜ್ಯಗಳೊಂದಿಗೆ ವ್ಯಾಪಾರ ಹೊಂದಲು ಪ್ರಮುಖ ಕಾರಣವಾಯಿತು. ಭಾರತ ಮತ್ತು ಚೀನಾದ ನಡುವೆ ಎಂಟನೇ ಶತಮಾನದ ನಂತರ ಚುರುಕಾದ ವ್ಯಾಪಾರ ನಡೆಯಲು ಪ್ರಾರಂಭವಾಯಿತು. ಶತಮಾನದಿಂದ ಸುಮಾರು ಹದಿನಾಲ್ಕನೇ ಶತಮಾನದವರೆಗೆ ಈ ಚುರಕಾದ ವ್ಯಾಪಾರ ನಡೆಯಿತು. ಆದರೇ ಹದಿನಾಲ್ಕನೇಯ ಶತಮಾನದ ನಂತರ ಅರಬ್ಬರು, ಇಂಡೋನೇಷಿಯನ್ನರು ಭಾರತದೊಂದಿಗೆ ವ್ಯಾಪಾರದ ಪೈಪೋಟಿಯಿಂದಾಗಿ ಚೀನಾದ ವ್ಯಾಪಾರವು ಭಾರತದೊಂದಿಗೆ ತಮ್ಮ ಚುರುಕಾದ ವ್ಯಾಪಾರವನ್ನು ಕಳೆದುಕೊಳ್ಳಬೇಕಾಯಿತು. ಕ್ರಿ.ಶ. ಹತ್ತನೇ ಶತಮಾನದಿಂದ ಹದಿನಾಲ್ಕನೇ ಶತಮಾನದವರೆಗೆ ಭಾರತದ ವ್ಯಾಪಾರಿ ಸಂಘಗಳು ಮುಖ್ಯವಾಗಿ ಚೋಳ ಸಾಮ್ರಾಜ್ಯದ ಮತ್ತು ವಿಜಯನಗರ ಸಾಮ್ರಾಜ್ಯದ ವ್ಯಾಪಾರ ಸಂಘಗಳು ವ್ಯಾಪಾರಿ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸಿದ್ದವು. ಮಧ್ಯಕಾಲೀನ ಭಾರತದಲ್ಲಿ ಮನಿಗ್ರಾಮಮ್ ಮತ್ತು ಐಹೊಳೆ 500 ಕೋರಮಂಡಲ ಮತ್ತು ಮಲಬಾರ್ ತೀರ ಪ್ರದೇಶಗಳಲ್ಲಿ ವ್ಯಾಪಾರದ ಮೇಲೆ ನಿಯಂತ್ರಣ ಹೊಂದಿದ್ದ ಪ್ರಮುಖ ವ್ಯಾಪಾರಿ ಸಂಘಗಳಾಗಿದ್ದವು.

ವಿಜಯನಗರ ಸಾಮ್ರಾಜ್ಯ ಮತ್ತು ಚೀನಾ ವ್ಯಾಪಾರದ ಬೆಳವಣಿಗೆಗೆ ಮುಖ್ಯವಾಗಿ ಬೌದ್ಧ ಸಂತರು ಕೂಡ ಪ್ರಮುಖ ಪಾತ್ರವಹಿಸಿದರು. ಬೌದ್ಧಧರ್ಮದ ಆಚರಣೆಗಳಿಗೆ ಅವಶ್ಯಕವಾಗಿದ್ದ ಪರಿಕರಗಳು ಅಥವಾ ಸರಕುಗಳ ಬೇಡಿಕೆ ಭಾರತ ಮತ್ತು ಚೀನಾದ ನಡುವೆ ವ್ಯಾಪಾರದ ಅಭಿವೃದ್ಧಿಗೆ ಪ್ರಮುಖವಾಗಿ ಕಾರಣವಾಯಿತು. ಭಾರತ ಮತ್ತು ಚೀನಾದ ವ್ಯಾಪಾರ ಮತ್ತು ವಾಣಿಜ್ಯ ಸಂಬಂಧವನ್ನು ಪ್ರಮುಖವಾಗಿ ಮೂರು ಹಂತಗಳಾಗಿ ವಿಂಗಡಿಸಲಾಗಿದೆ. ಮೊದಲನೆಯ ಹಂತ ಏಳನೇ ಶತಮಾನದಿಂದ ಒಂಭತ್ತನೆ ಶತಮಾನದವರೆಗಿನ ಕಾಲ, ಈ ಕಾಲದಲ್ಲಿ ಬೌದ್ಧ ಸಿದ್ಧಾಂತಗಳು, ಸಾಂಸ್ಕೃತಿಕ ರಾಜತಾಂತ್ರಿಕ ಮತ್ತು ವಾಣಿಜ್ಯ ಸಂಬಂಧಗಳು ಬೆಳವಣಿಗೆ ಹೊಂದಿದ್ದವು. ಎರಡನೇ ಹಂತ ಒಂಭತ್ತನೇ ಶತಮಾನದಿಂದ ಹತ್ತನೇ

ಶತಮಾನದವರೆಗಿನ ಕಾಲವಾಗಿದೆ. ಈ ಕಾಲದಲ್ಲಿ ಚೀನಾ ಮತ್ತು ಭಾರತದ ನಡುವೆ ಬಾಗಷಃ ವ್ಯಾಪಾರ ಮತ್ತು ವಾಣಿಜ್ಯದ ಕುಂಠಿತ ಆರಂಭವಾಯಿತು. ಬೌದ್ಧ ಬಿಕ್ಷುಗಳು ಈ ಕಾಲದಲ್ಲಿ ವ್ಯಾಪಾರ ವಾಣಿಜ್ಯದ ಬೆಳವಣಿಗೆಗೆ ಸಾಕಷ್ಟು ಪ್ರಯತ್ನಿಸಿದರು ಸಾಧ್ಯವಾಗಲಿಲ್ಲ. ಕಾರಣ ಮದ್ಯ ಏಪ್ಯಾ ಮತ್ತು ಮಯಾನ್‌ಮಾರ್‌ನಲ್ಲಿ ಆದ ರಾಜಕೀಯ ಬೆಳವಣಿಗೆಗಳು ಭಾರತದೊಂದಿಗೆ ವ್ಯಾಪಾರ ವಾಣಿಜ್ಯದ ಬೆಳವಣಿಗೆಗೆ ಸಹಕರಿಸಿದವು.[3] ಮೂರನೇ ಹಂತ ಹತ್ತನೇ ಶತಮಾನದ ನಂತರದ ಕಾಲವಾಗಿದ್ದು ಈ ಕಾಲದಲ್ಲಿ ಮತ್ತೆ ವ್ಯಾಪಾರ ಮತ್ತು ವಾಣಿಜ್ಯದಲ್ಲಿ ಬೆಳವಣಿಗೆಗೆಗಳು ಕಂಡು ಬಂದವು. ಚೀನಾದ ರೇಷ್ಮೆಯು ಭಾರತಕ್ಕೆ ಅಪಾರವಾಗಿ ರಫ್ತಾಗುತ್ತಿತ್ತು. ಭಾರತದ ಶ್ರೀಮಂತರು, ರಾಜರು ವಿವಿಧ ಬಗೆಯ ಚೀನಾದ ರೇಷ್ಮೆಯನ್ನು ಬಳಸುತ್ತಿದ್ದರು. ಭಾರತದ ರಾಜರಿಗೆ ರೇಷ್ಮೆಯನ್ನು ಕೆಲವೊಂದು ಬಾರಿ ಕಾಣಿಕೆಯಾಗಿ ಚೀನಾದ ರಾಜತಾಂತ್ರಿಕ ಅಧಿಕಾರಿಗಳು ತಂದು ಕೊಡುತ್ತಿದ್ದರು. ಚೀನಾದ ರೇಷ್ಮೆಯು ವಿಶೇಷವಾಗಿ ಬಹಳಷ್ಟು ಬೇಡಿಕೆಯನ್ನು ಪಡೆದುಕೊಳ್ಳತೊಡಗಿತು. ಕೆಲವು ಬೌದ್ಧ ಸನ್ಯಾಸಿಗಳು ಭಾರತಕ್ಕೆ ಬರುವಾಗ ತಮ್ಮ ಬಳಿ ರೇಷ್ಮೆ ಬಟ್ಟೆಗಳನ್ನು ತಂದು ಭಾರತದ ಬೌದ್ಧ ಸನ್ಯಾಸಿಗಳಿಗೆ ಮತ್ತು ಸ್ತೂಪಗಳಿಗೆ ನೀಡುತ್ತಿದ್ದರು. ಹನ್ನೊಂದನೆ ಶತಮಾನದ ನಂತರ ಚೀನಾದ ರೇಷ್ಮೆ ವ್ಯಾಪಾರ ಭಾರತದಲ್ಲಿ ಅವನತಿ ಹೊಂದಿತ್ತು. ಈ ಅವನತಿಗೆ ಮುಖ್ಯ ಕಾರಣ ಭಾರತದಲ್ಲಿ ಅರಬ್ಬರು ರೇಷ್ಮೆ ಮತ್ತು ರೇಷ್ಮೆ ಕೃಷಿಯನ್ನು ಆರಂಭಿಸಿದರು. ಇದು ಭಾರತಕ್ಕೆ ರಫ್ತಾಗುತ್ತಿದ್ದ ಚೀನಾದ ರೇಷ್ಮೆಯ ಮೇಲೆ ಒಡೆತನವನ್ನು ನೀಡಿತು. ಈ ರೇಷ್ಮೆ ವ್ಯಾಪಾರವನ್ನು ಪಿಂಗಾಣಿ ವ್ಯಾಪಾರವು ಪುನರ್‌ಸ್ಥಾಪಿಸಿತ್ತು, ಮತ್ತು ಇದು ಭಾರತ ಮತ್ತು ಚೀನಾದ ನಡುವೆ ಪ್ರಮುಖ ವ್ಯಾಪಾರದ ಸರಕಾಯಿತು. ಪಿಂಗಾಣಿ ವ್ಯಾಪಾರವು ಭಾರತದಲ್ಲಿ ಅಷ್ಟೇನೂ ಪ್ರಾಮುಖ್ಯತೆಗಳಿಸಿರಲಿಲ್ಲ. ಕೇವಲ ಶ್ರೀಮಂತರು, ರಾಜರು ಈ ಸರಕುಗಳನ್ನು ಬಳಸುತ್ತಿದ್ದರು.

ಭಾರತೀಯ ವ್ಯಾಪಾರಿಗಳು ಚೀನಾದಿಂದ ಪಿಂಗಾಣಿಯನ್ನು ಆಮದು ಮಾಡಿಕೊಂಡು ಅದನ್ನು ಮುಸ್ಲಿಂ ಮಾರುಕಟ್ಟೆಗಳಿಗೆ ರಫ್ತು ಮಾಡುತ್ತಿದ್ದರು. ಪರ್ಷಿಯನ್ ಕೊಲ್ಲಿ, ಕೆಂಪು ಸಮುದ್ರ ಮಾರುಕಟ್ಟೆಗಳಲ್ಲಿ ಈ ಪದಾರ್ಥಗಳಿಗೆ ಬಹಳಷ್ಟು ಬೇಡಿಕೆ ಇತ್ತು. ಇದನ್ನು ಮನಗಂಡ ಭಾರತೀಯ ವರ್ತಕರು ರಫ್ತು ಪ್ರಕ್ರಿಯೆ ಕೈಗೊಂಡರು. ಈ ಸರಕುಗಳಲ್ಲದೆ, ಚೀನಿ ತೊಗಟು, ಸಿಂಧೂರ ಬಣ್ಣ (ಕುಂಕುಮ), ಹಣ್ಣುಗಳು ಕರ್ಪೂರ, ಪಾದರಸ, ಮೆರಗು, ಚಿನ್ನ. ಬೆಳ್ಳಿ ಮತ್ತು ತಾಮ್ರ ಚೀನಾದಿಂದ ವಿಜಯನಗರ ಸಾಮ್ರಾಜ್ಯಕ್ಕೆ ರಫ್ತಾಗುತ್ತಿದ್ದವು.[4]

ಕ್ರಿ.ಶ. ಹತ್ತು ಮತ್ತು ಹನ್ನೊಂದನೆ ಶತಮಾನದಲ್ಲಿ ಸುಮಾರು ಎಂಬತ್ತು ಭಾರತದ ಬೌದ್ಧ ಬಿಕ್ಷುಗಳು ಚೀನಾಗೆ ಭೇಟಿ ನೀಡಿದರು. ಇದೇ ಕಾಲದಲ್ಲಿ ಸುಮಾರು ನೂರ ಮೂವತ್ತೆಂಟು ಚೀನಾದ ಬೌದ್ಧ ಭಿಕ್ಷುಗಳು ಭಾರತಕ್ಕೆ ಭೇಟಿ ನೀಡಿದ್ದರು. ಈ ಕಾಲದಲ್ಲಿ ಸುಮಾರು ಒಂದು ಸಾವಿರದ ಇಪ್ಪತ್ತೆಂಟು ಭಾರತದ ಸಾಹಿತ್ಯ ಮತ್ತು ಐದನೂರ ಅರವತ್ತನಾಲ್ಕು ಬೌದ್ಧ ಸೂತ್ರಗಳು ಚೀನಿ ಭಾಷೆಗೆ ಭಾಷಾಂತರವಾದವು. ಕ್ರಿ.ಶ. 1021 ರ ಹೊತ್ತಿಗೆ ಮೂರು ಲಕ್ಷದ ತೊಂಬತ್ತೇಳು ಸಾವಿರದ ಆರುನೂರ ಹದಿನೈದು ಬೌದ್ಧಬಿಕ್ಷುಗಳು ಮತ್ತು ಆರವತ್ತೊಂದು ಸಾವಿರದ ಇನ್ನೂರ ನಲವತ್ತು ಸನ್ಯಾಸಿನಿಯರು ಭಾರತದೊಂದಿಗೆ ಸಂಬಂಧವನ್ನು ಬೆಳೆಸಿ ಭಾರತ ಮತ್ತು ಚೀನಾದ ನಡುವೆ ಬೌದ್ಧ ಧರ್ಮದ ಬೆಳವಣಿಗೆಗೆ ಕಾರಣರಾದರು.

**ಚೀನಾ ಮತ್ತು ಮಲಬಾರ್ ನೊಂದಿಗಿನ ಸಂಬಂಧಗಳು**

ಮಧ್ಯಕಾಲೀನ ಭಾರತದ ಮಲಬಾರ್ ನೊಂದಿಗೆ ಚೀನಾವು ನೇರವಾದ ವ್ಯಾಪಾರ ಸಂಪರ್ಕವನ್ನು ಹೊಂದಿತ್ತು. ಈ ಕಾಲದಲ್ಲಿ ಚೀನಾ ಮತ್ತು ಮಲಬಾರ್ ನಡುವೆ ಉತ್ತಮ ಸಂಬಂಧಗಳು ಏರ್ಪಟ್ಟು, ದಕ್ಷಿಣ ಭಾರತದ ಪ್ರಮುಖ ರಾಜಮನೆತನಗಳಾದ, ವಿಜಯನಗರ ಸಾಮ್ರಾಜ್ಯ, ಕ್ಯಾಲಿಕಟ್‌ನ ಜಾಮಾರಿನ್‌ನ ಸಾಮ್ರಾಜ್ಯದೊಂದಿಗೆ ಉತ್ತಮವಾದ ವ್ಯಾಪಾರ ಸಂಪರ್ಕವನ್ನು ಅಭಿವೃದ್ಧಿಪಡಿಸಿಕೊಂಡರು. ಚೀನಾದವರು ದಕ್ಷಿಣಭಾರತದೊಂದಿಗೆ ಕೇವಲ ರಾಜತಾಂತ್ರಿಕ ಮತ್ತು ವಾಣಿಜ್ಯ ಸಂಬಂಧವಲ್ಲದೆ ಸಂಸ್ಕೃತಿ ಮತ್ತು ವಿಚಾರಧಾರೆಗಳ ವಿನಿಮಯವದಲ್ಲೂ ಪ್ರಮುಖ ಪಾತ್ರವನ್ನು ನಿರ್ವಹಿದರು. ಭಾರತಕ್ಕೆ ಮುಸ್ಲಿಂ ಆಗಮನದ ನಂತರ ಭಾರತದ ಸಮುದ್ರಗಳು ಮತ್ತು ಚೀನಾದ ನಡುವಿನ ವ್ಯಾಪಾರ ಮತ್ತು ವಾಣಿಜ್ಯದ ಸಂಬಂಧಗಳ ಬಗ್ಗೆ ಸಮಕಾಲೀನ ದಾಖಲೆಗಳು ಪ್ರಮುಖವಾದ ಮಾಹಿತಿಯನ್ನು ನೀಡುತ್ತವೆ. ಚೀನಾದ ವರ್ತಕರು, ಕ್ಯಾಲಿಕಟ್, ಕೊಲ್ಲಂ ಮತ್ತು ದೈಬುಲ್ ಬಂದರುಗಳಲ್ಲಿ ವ್ಯಾಪಾರ ಮತ್ತು ವಾಣಿಜ್ಯವನ್ನು ಕೈಗೊಂಡಿದ್ದರು.[5]

ಚೀನಾದ ಸಮಕಾಲೀನ ವೃತ್ತಾಂತಗಳು ಕ್ರಿ.ಶ. 13 ಮತ್ತು 14ನೇ ಶತಮಾನದಲ್ಲಿ ಭಾರತದ ಮತ್ತು ಸಿಲೋನಿನ ಸರಕುಗಳನ್ನು ಅರೇಬಿಯಾ, ಆಫ್ರಿಕಾ ಮತ್ತು ಪರ್ಷಿಯಾ ಸರಕುಗಳಾಗಿ ಕ್ರಮಬದ್ಧವಾಗಿ ವಿಂಗಡಿಸಿ ದಕ್ಷಿಣ ಭಾರತದ ಬಂದರುಗಳಿಂದ ಚೀನಾಕ್ಕೆ ಸರಕುಗಳನ್ನು ರಫ್ತು ಮಾಡಲಾಗುತ್ತಿತ್ತು. ಚೀನಾದ ಹಡಗುಗಳ ನಿಯಮಿತವಾಗಿ ಮಲಯಾ, ಸುಮಾತ್ರ, ಸಿಲೂನ್ ಮಾರ್ಗವಾಗಿ ಭಾರತಕ್ಕೆ ಬಂದು ಇಲ್ಲಿ ವಿದೇಶಿ ಮತ್ತು ಭಾರತದ ದೇಶೀಯ ಸರಕುಗಳನ್ನು ಖರೀದಿಸಿ ಚೀನಾಕ್ಕೆ ವಾಪಸ್ಸಾಗುತ್ತಿದ್ದರು. ಕ್ರಿ.ಶ. 12ನೇ ಶತಮಾನದಿಂದ ಕ್ರಿ.ಶ. 15ನೇ

ಶತಮಾನದವರೆಗೆ ಚೀನಾದ ಹಡಗುಗಳು ಭಾರತದ ಪಶ್ಚಿಮ ಬಂದರುಗಳಿಗೆ ಮತ್ತೆ ಮತ್ತೆ ಭೇಟಿ ನೀಡುತ್ತಿದ್ದರು. ಸಿರಪ್ ಎಂಬುದು ಪರ್ಷಿಯನ್ ಕೊಲ್ಲಿಯ ಪ್ರಮುಖವಾದ ಬಂದರಾಗಿತ್ತು. ಈ ಬಂದರಿಗೆ ಚೀನಾ, ಜಾವ, ಮಲಯಾ ಮತ್ತು ಭಾರತದ ಶ್ರೀಮಂತ ವರ್ತಕರು ಭೇಟಿ ನೀಡಿ ವ್ಯಾಪಾರ ನಡೆಸುತ್ತಿದ್ದರು. ಈ ಬಂದರಿನಲ್ಲಿ ಮುಖ್ಯವಾಗಿ ಕತ್ತಾಳೆಯ ಗಿಡ, ಶಿಲಾರಾಳ, ಕರ್ಪೂರ, ಅಮೂಲ್ಯ ರತ್ನಗಳು ಬಿದಿರು, ದಂತ, ಕಾಗದ, ಗಂಧದ ಮರ, ಭಾರತದ ಸುಗಂದದ್ರವ್ಯ, ಗಿಡ ಮೂಲಿಕೆಗಳು ಮತ್ತು ಮಸಾಲೆ ಪದಾರ್ಥಗಳು ಮುಖ್ಯವಾಗಿ ರಫ್ತಾಗುತ್ತಿದ್ದವು.[6]

ಅರಬ್ ಪ್ರವಾಸಿಗರ ದಾಖಲೆಗಳು ಪುರಾತತ್ವ ಆಧಾರಗಳು ಹಾಗೂ ಸಾಹಿತ್ಯ ದಾಖಲೆಗಳು ಉಲ್ಲೇಖಿಸಿರುವ ಪ್ರಕಾರ ಚೀನಾದ ಪಿಂಗಾಣಿಗಳು ಮಲಬಾರ್‌ನ ಪ್ರಮುಖ ಬಂದರುಗಳಾದ ಬಲಿಪಟ್ನಂ, ಕಣ್ಣನೂರು, ಧರ್ಮಾದಂ, ಪಂತಲಯಾನಿ ಕೊಲ್ಲಂ, ಕೊಡನೊಗಲ್ಲೂರ್‌ನಲ್ಲಿ ಅತಿ ಹೆಚ್ಚಾಗಿ ಮಾರಾಟವಾಗುತ್ತಿದ್ದವು. ಇದಕ್ಕೆ ಸಾಕ್ಷಿ ಎಂಬಂತೆ ಚೀನಾದ ಪಿಂಗಾಣಿ ಪಾತ್ರೆಗಳು ಮಡಿಕೆಗಳು ಇಲ್ಲಿ ದೊರಕಿವೆ. ಚೀನಾದ ದೊರೆ ಜೊ ಕೋಪಿಸ್‌ನ ಆಡಳಿತ ಅವಧಿಯಲ್ಲಿ ಮಲಬಾರ್ ಬಂದರುಗಳೊಂದಿಗೆ ಉತ್ತಮವಾದ ಸಂಬಂಧವನ್ನು ಬೆಳೆಸಿದನು. ಚೀನಾದ ಕ್ಯಾಂಟನ್ ಬಂದರಿನಿಂದ ಗಂಗ್‌ಜೂನಿಂದ ಹೊರಟ ಹಡಗುಗಳು ಲ್ಯಾಂಬ್ರಿ ನಗರವನ್ನು ತಲುಪಲು ನಲವತ್ತೈದು ದಿನಗಳನ್ನು ತೆಗೆದುಕೊಳ್ಳುತ್ತಿದ್ದವು. ಚಳಿಗಾಲದಲ್ಲಿ ಈ ಬಂದರಿನಲ್ಲಿ ಉಳಿಯುತ್ತಿದ್ದ ಚೀನಿ ವರ್ತಕರು ನಂತರ ಅಲ್ಲಿಂದ ಮಲಬಾರ್ ಬಂದರುಗಳಿಗೆ ತಲುಪಲು ಸುಮಾರು ಒಂದು ತಿಂಗಳ ಸಮಯ ತೆಗೆದುಕೊಳ್ಳುತ್ತಿದ್ದರು. ಇಲ್ಲಿಂದ ಅರೇಬಿಯಾ ತಲುಪಲು ಸಣ್ಣ ಹಡಗುಗಳನ್ನು ಬಳಸಿ ಚೀನಿ ವರ್ತಕರು ಸಮುದ್ರಯಾನ ಮಾಡುತ್ತಿದ್ದರು. ಈ ಸಂದರ್ಭದಲ್ಲಿ ಯಹೂದಿ ವರ್ತಕರು ಚೀನಾಗೆ ಭೇಟಿ ನೀಡುತ್ತಿದ್ದರು ಈ ಸಂದರ್ಭದಲ್ಲಿ ಅವರು ಅಲ್ಲಿಂದ ಹಿಂದುರಿಗುವಾಗ ಕಸ್ತೂರಿ, ಕತ್ತಾಳೆಯ ಗಿಡ, ಕರ್ಪೂರ, ದಾಲ್ಚಿನ್ನಿ ಮುಂತಾದ ಸರಕುಗಳನ್ನು ಪೂರ್ವದೇಶಗಳಿಗೆ ತಂದು ಮಾರಾಟ ಮಾಡುತ್ತಿದ್ದರು.[7]

ಚೀನಿಯರು ಹಡಗುಗಳ ನಿರ್ಮಾಣದ ಕಲೆಯಲ್ಲಿ ಪ್ರಾವಿಣ್ಯತೆಗಳಿಸಿದ್ದರು. ಚೀನಾದ ಹಡಗುಗಳನ್ನು ಮೂರು ಭಾಗಗಳಾಗಿ ಅಥವಾ ವಿಧಗಳಾಗಿ ವಿಂಗಡಿಸಲಾಗಿತ್ತು. ಮೊದಲನೆಯದು ಚಂಕ್ಸ್ ಅಂದರೆ ದೊಡ್ಡ ಹಡಗುಗಳು ಎರಡನೇಯದು ಜಾವ್ಸ್ ಅಂದರೆ ಮಧ್ಯಮ ಹಡಗುಗಳು ಮೂರನೇಯದು ಕಾಕಮ್ಸ್ ಸಣ್ಣ ಹಡಗುಗಳು ಕ್ರಿ.ಶ. 13ನೇ ಶತಮಾನದಿಂದ 16ನೇ ಶತಮಾನದ ವರೆಗಿನ ಸ್ಥಳೀಯ ಮಲಯಾಲಂ ಸಾಹಿತ್ಯವು ಚೀನಾ ಮತ್ತು ಮಲಬಾರಿನ ಸಂಬಂಧವನ್ನು

ಕುರಿತು ಮಾಹಿತಿ ನೀಡುತ್ತದೆ. ಚೀನಿ ವ್ಯಾಪಾರಿಗಳು ಮತ್ತು ತತ್ವರಹಿತ ಅಧಿಕಾರಿಗಳು ವಿದೇಶೀ ವ್ಯಾಪಾರಕ್ಕಾಗಿ ದೊಡ್ಡ ದೊಡ್ಡ ಬಂದರುಗಳನ್ನು ನಿರ್ಮಾಣಮಾಡಿ ವ್ಯಾಪಾರ ಮತ್ತು ವಾಣಿಜ್ಯದ ಮೇಲೆ ಬಂಡವಾಳವನ್ನು ಹೂಡಿದರು. ಚೀನಾದ ಬಂದರು ಪ್ರದೇಶಗಳ ಜನರು ಹಡಗು ನಿರ್ಮಾಣ ಹತ್ತಿಯ ವ್ಯಾಪಾರ, ಕಾಗದ ಮತ್ತು ಬಟ್ಟೆ ತಯಾರಿಸಿ ವ್ಯಾಪಾರ ಕೈಗೊಂಡರು.[8]

ಮಲಬಾರಿನ ಕೊಲ್ಲಂ ಬಂದರು ಚೀನಿಗರಿಗೆ ಅತ್ಯಂತ ಹತ್ತಿರವಾದ ಬಂದರಾಗಿದ್ದು ಈ ಕಾರಣದಿಂದ ಹಲವಾರು ಚೀನಿ ವರ್ತಕರು ಈ ಬಂದರಿಗೆ ಭೇಟಿ ನೀಡುತ್ತಿದ್ದರು. ಈ ಬಂದರಿನಿಂದ ಚೀನಾಕ್ಕೆ ಹಲವಾರು ಸರಕುಗಳನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು. ಪ್ರಮುಖ ಸರಕುಗಳಾದ ಸಿದ್ಧ ಉಡುಪುಗಳು, ಹತ್ತಿಬಟೆಗಳು, ಸಾಂಬಾರ ಪದಾರ್ಥಗಳು, ಗಿಡಮೂಲಿಕೆಗಳು, ಆಭರಣಗಳು, ಮುತ್ತುರತ್ನಗಳು, ದಂತ, ಘೇಂಡಾಮೃಗದ ಕೊಂಬು, ಶಿಲಾರಾಳ, ಕಷಾಯ ಮತ್ತು ಸುಗಂಧ ದ್ರವ್ಯಗಳು ಮುಖ್ಯವಾದವುಗಳಾಗಿದ್ದವು.[9]

ಚೀನಾದಾದ್ಯಂತ ಭಾರತದ ಸರಕುಗಳಿಗೆ ಬಹಳಷ್ಟು ಬೇಡಿಕೆ ಇತ್ತು. ಸಪಾಂಗ್ ಮರ, ನೀಲಿ, ಶುಂಠಿ ಮತ್ತು ಸಾಂಬಾರ ಪದಾರ್ಥಗಳು ರಫ್ತಾಗುತ್ತಿದ್ದವು. ಚೀನಾದ ಒಂದು ದೊಡ್ಡ ನಗರವಾದ ಕುಯ್ಸೆ ಪ್ರತಿದಿನ ಸುಮಾರು ನಲವತ್ತಮೂರು ಲೋಡ್ ಸಾಂಬಾರವನ್ನು ಬಳಸುತ್ತಿತ್ತು. ಒಂದು ಲೋಡ್ ಸಾಂಬಾರವೆಂದರೆ ಸುಮಾರು ಇನ್ನೂರು ಪೌಂಡೆಗಳಷ್ಟಿತ್ತು. ಅಂದರೆ ಎಂಟು ಸಾವಿರದ ಆರುನೂರು ಪೌಂಡ್‌ನಷ್ಟು ಸಾಂಬಾರವನ್ನು ಬಳಕೆ ಮಾಡಲಾಗುತ್ತಿತ್ತು. ಈ ಸಾಂಬಾರ ವ್ಯಾಪಾರದಿಂದ ವರ್ತಕರು ಅತಿಹೆಚ್ಚು ಲಾಭವನ್ನು ಪಡೆಯುತ್ತಿದ್ದರು. ಚೀನಾದ ಹಡಗುಗಳು ಭಾರತಕ್ಕೆ ಬರುವ ಮಾರ್ಗದಲ್ಲಿ ಮೊದಲು ಮಲಬಾರ್‌ನ ಪ್ರಮುಖ ಬಂದರಾದ ಕೊಲ್ಲಂ ಬಂದವರಿಗೆ ಬಂದು ತಲುಪುತ್ತಿದ್ದರು.

ವಿಜಯನಗರ ಕಾಲಕ್ಕೆ ಮುಂಚೆ ದಕ್ಷಿಣ ಭಾರತದ ಪ್ರಮುಖ ರಾಜಮನೆತನವಾದ ಚೋಳ ಸಾಮ್ರಾಜ್ಯವು ಕೂಡ ಚೀನಾ ದೇಶದೊಂದಿಗೆ ಉತ್ತಮವಾದ ಸಂಬಂಧ ಹೊಂದಿರುವುದರ ಬಗ್ಗೆ ನಮಗೆ ಬಹಳಷ್ಟು ಮಾಹಿತಿಗಳಿವೆ. ಹತ್ತನೆ ಶತಮಾನದ ಕೊನೆಯ ಭಾಗದಲ್ಲಿ ಚೀನಾದ ಸುಂಗ್ ಮನೆತನವು ವಿದೇಶೀ ವ್ಯಾಪಾರಕ್ಕೆ ಬಹಳಷ್ಟು ಆಸಕ್ತಿವಹಿಸಿತ್ತು. ಚೋಳ ದೊರೆಗಳು ಚೀನಾಕ್ಕೆ ರಾಯಬಾರಿಗಳನ್ನು ಕಳುಹಿಸಿದ್ದರು. ಒಂದನೇ ರಾಜರಾಜಚೋಳನು 16 ಅಕ್ಟೋಬರ್ 1015ರಲ್ಲಿ ಒಂದು ನಿಯೋಗವನ್ನು ಚೀನಾಕ್ಕೆ ಕಳುಹಿಸಿದರ ಬಗ್ಗೆ ಉಲ್ಲೇಖಗಳಿವೆ.[10] ಇವನು ನಿಯೋಗದ ಜೊತೆ ಎಂಟುನೂರು ಕೆ.ಜಿ. ಮುತ್ತುಗಳು, 60 ದಂತಗಳು, ಆರವತ್ತು ಪೌಂಡ್‌ನಷ್ಟು

ಸುಗಂದದ್ರವ್ಯವನ್ನು ಈ ನಿಯೋಗದ ಜೊತೆ ತೆಗೆದುಕೊಂಡು ಹೋಗಿ ಸುಂಗ್ ರಾಜ್ಯದ ಸಾಮ್ರಾಟನಿಗೆ ಕಾಣಿಕೆಯಾಗಿ ಕೊಡಲಾಗಿತ್ತೆಂದು ದಾಖಲೆಗಳು ತಿಳಿಸುತ್ತವೆ.

ಚೀನಾದಲ್ಲಿ ಭಾರತದ ಸರಕುಗಳಾದ ಸಾಂಬಾರ, ತೆಂಗಿನಕಾಯಿ ಮತ್ತು ಅಡಿಕೆ ಬಹಳಷ್ಟು ಬೇಡಿಕೆ ಹೊಂದಿದ್ದವು. ಅದೇ ರೀತಿ ವಿಜಯಗರ ಸಾಮ್ರಾಜ್ಯದ ಅವಧಿಯಲ್ಲಿ ಚೀನಾದ ಪ್ರಮುಖ ಸರಕುಗಳು ಭಾರತದಲ್ಲಿ ಬಹಳಷ್ಟು ಬೇಡಿಕೆ ಹೊಂದಿದ್ದವು. ಅಂತಹ ಪ್ರಮುಖ ಸರಕುಗಳೆಂದರೆ ರೇಷ್ಮೆ, ಪಿಂಗಾಣಿ, ತಾಮ್ರ, ಬೆಳ್ಳಿ, ತವರ ಮುಂತಾದವು ಚೀನಾದ ಪಿಂಗಾಣಿ ವಸ್ತುಗಳಿಗೆ ವಿಜಯನಗರ ಸಾಮ್ರಾಜ್ಯದಾದ್ಯಂತ ಬಹಳಷ್ಟು ಬೇಡಿಕೆ ಇತ್ತು. ಇದಕ್ಕೆ ಸಾಕ್ಷಿ ಎಂಬಂತೆ ವಿಜಯನಗರದ ಬಜಾರುಗಳಲ್ಲಿ ಇತ್ತೀಚಿನ ಉತ್ಕನನದಿಂದಾಗಿ ಪಿಂಗಾಣಿ ಚೂರುಗಳು ಸಾಕಷ್ಟು ದೊರೆತಿವೆ.

ವಿಜಯನಗರ ಮತ್ತು ಚೀನಾದ ನಡುವೆ ನಡೆಯುತ್ತಿದ್ದ ವ್ಯಾಪಾರ ಮತ್ತು ವಾಣಿಜ್ಯದ ವಿನಿಮಯ ಪದ್ಧತಿಯು ಚಿನ್ನ, ಬೆಳ್ಳಿ ಮತ್ತು ತಾಮ್ರದ ನಾಣ್ಯಗಳ ಬಳಕೆ ಮುಖ್ಯವಾಗಿತ್ತು. ರೇಷ್ಮೆ, ಪಿಂಗಾಣಿಗಳನ್ನು ಬಳಸಿ ವಿನಮಯ ಕಾರ್ಯವು ನಡೆಯುತ್ತಿತ್ತು. ಚಿನ್ನ, ಬೆಳ್ಳಿ, ತಾಮ್ರದ ನಾಣ್ಯಗಳಿಗಿಂತ ಈ ಸರಕುಗಳ ವಿನಿಮಯ ಪದ್ಧತಿ ಜಾರಿಗೆ ಬರಲು ಪ್ರಮುಖ ಕಾರಣವಂದರೆ ಅಮೂಲ್ಯವಾದ ಈ ಲೋಹಗಳನ್ನು ಸಂರಕ್ಷಣೆ ಮಾಡಲು ಸಂರಕ್ಷಣೆ ಮಾಡುವುದು ಮತ್ತು ಅವು ಹೊರ ಹೋಗದಂತೆ ತಡೆಯುವುದಾಗಿತ್ತು. ಇದರೊಂದಿಗೆ ದಂತ ಮತ್ತು ಸಾಂಬಾರವು ಕೂಡ ವಿನಿಮಯದ ಸಾಧನವಾಗಿತ್ತು.

ಕ್ರಿ.ಶ. 14ನೇ ಶತಮಾನದ ಚೀನಿ ದಾಖಲೆಗಳು ಉಲ್ಲೇಖಿಸುವ ಪ್ರಕಾರ ಮಲಬಾರ್ ತೀರ ಪ್ರದೇಶದ ಕೊಲ್ಲಂ, ಕ್ಯಾಲಿಕಟ್, ಮಂಗಳೂರು ಹೊನ್ನಾವರ ಹಾಗೂ ಮುಂತಾದ ಬಂದರುಗಳೊಂದಿಗೆ ಚೀನಾದ ವರ್ತಕರು ಉತ್ತಮವಾದ ವ್ಯಾಪಾರ ಮತ್ತು ವಾಣಿಜ್ಯ ಸಂಪರ್ಕವನ್ನು ಅಭಿವೃದ್ಧಿ ಪಡಿಸಿಕೊಂಡಿದ್ದರು. ಅವರ ದಾಖಲೆಗಳ ಪ್ರಕಾರ ಸಾಂಬಾರ, ಒಣ ಅಡಿಕೆ ಚೂರುಗಳು, ಹಲವಿನಹಣ್ಣು, ಬಣ್ಣದ ಹತ್ತಿಯ ಬಟ್ಟೆಗಳನ್ನು ಚೀನಿಯರು ಖರೀದಿಸುತ್ತಿದ್ದರು. ಹಾಗೆಯೇ ಮುತ್ತುರತ್ನಗಳು, ಮಲ್ಲಿಗೆ ಹೂವು, ಧೂಪ ಅಥವಾ ಸಾಂಬ್ರಾಣಿಯನ್ನು ಮಲಬಾರ್ ಬಂದರುಗಳಿಗೆ ತಂದು ಮಾರಾಟ ಮಾಡುತ್ತಿದ್ದರು.[11]

ಪ್ರಮುಖ ಚೀನಾದ ಬರಹಗಾರರಾದ ವಾಂಗ್–ಟಾ–ಯುಹಾನ್ ಕ್ರಿ.ಶ. 1349 ಮಾ–ಹೂನ್ ಕ್ರಿ.ಶ. 1425–1432, ಫೈಹಿನ್ ಕ್ರಿ.ಶ. 1436, ಹೊಂಗ್–ಷಾನ್–ತೇಸಿಂಗ್ ಕ್ರಿ.ಶ. 1520

ಇವರ ಎಲ್ಲಾ ದಾಖಲೆಗಳು ಚೀನಾದ ವರ್ತಕರು ಮಲಬಾರ್ ತೀರ ಪ್ರದೇಶದೊಂದಿಗೆ ಹೊಂದಿದ್ದ ವ್ಯಾಪಾರ ವಾಣಿಜ್ಯ ಸಂಬಂಧವನ್ನು ತಮ್ಮ ದಾಖಲೆಗಳಲ್ಲಿ ಉಲ್ಲೇಖಿಸಿದ್ದಾರೆ. ಇವರ ಪ್ರಕಾರ ವ್ಯಾಪಾರ ಮತ್ತು ವಾಣಿಜ್ಯದಲ್ಲಿ ಚಿನ್ನದ ನಾಣ್ಯದ ಬಳಕೆ ಇತ್ತೆಂದು ವಿವರಿಸಿದ್ದಾರೆ ಮಲಬಾರ್ ತೀರ ಪ್ರದೇಶಗಳಲ್ಲಿ ಮುಖ್ಯವಾಗಿ ಚೀನಾದ ಹೆಸರುಗಳನ್ನು ಸಾಮಾನ್ಯವಾಗಿ ಬಳಸಲಾಗುತಿತ್ತು. ಅವುಗಳೆಂದರೆ ಸೀನ ಕಟ್ಟಿ, ಸೀನವಾಲಾ ಮತ್ತು ಸೀನಾವೇದಿ ಎಂಬ ಕೆಲವು ಹೆಸರುಗಳು ಬಹಳ ದೀರ್ಘಕಾಲದವರೆಗೆ ಬಳಕೆಯಲ್ಲಿದ್ದವು.[12]

ವಿಜಯನಗರಕ್ಕೆ ಭೇಟಿ ನೀಡಿದ ಚೀನಾದ ಧರ್ಮಪ್ರಚಾರಕ ಮಂಡಲಿಗಳು

ಕ್ರಿ.ಶ 1407 ಜೈಯೋಗೇಲಿನ್

ಕ್ರಿ.ಶ. 1409 ಜೈಯೋ ಜುನಾನ್

ಕ್ರಿ.ಶ. 1431 –33 ಜೈಯೋ ಗೇಲಿನ್

**ವಿಜಯನಗರ ಸಾಮ್ರಾಜ್ಯ ಮತ್ತು ಚೀನಾದ ನಡುವೆ ಆಮದು ಮತ್ತು ರಫ್ತು**

ವಿಜಯನಗರ ಸಾಮ್ರಾಜ್ಯವು ವಿಶ್ವದ ವಿವಿಧ ಭಾಗಗಳೊಂದಿಗೆ ವ್ಯಾಪಾರ ವಾಣಿಜ್ಯ ಸಂಬಂಧ ಹೊಂದಿದ್ದು ಆಮದು ಮತ್ತು ರಫ್ತು ಪ್ರಕ್ರಿಯೆಗಳು ಬಹಳಷ್ಟು ಪ್ರಾಮುಖ್ಯತೆಗಳಿಸಿದ್ದವು. ಹಾಗೆಯೇ ಚೀನಾದೊಂದಿಗೆ ವ್ಯಾಪಾರ ಸಂಪರ್ಕವನ್ನು ಹೊಂದಿದ್ದ ವಿಜಯನಗರ ಕೆಲವು ಅವಶ್ಯಕವಾದ ಸರಕುಗಳನ್ನು ಆಮದು ಮತ್ತು ರಫ್ತು ಪ್ರಕ್ರಿಯೆ ಮೂಲಕ ವಿನಿಮಯ ಮಾಡಿಕೊಳ್ಳುತ್ತಿದ್ದರು. ಚೀನಾದಲ್ಲಿ ಮುಖ್ಯವಾಗಿ ಹತ್ತಿಯ ಬಟ್ಟೆಗಳಿಗೆ ಬಹಳಷ್ಟು ಬೇಡಿಕೆ ಇತ್ತು. ಚೀನಾದಲ್ಲಿ ಕ್ರಿ.ಶ. 15ನೇ ಶತಮಾನದವರೆಗೆ ಹತ್ತಿ ಬಟ್ಟೆಗಳು ಉತ್ಪಾದನೆ ಕಡಿಮೆ ಇತ್ತು. ಇಬನ್ ಬತೂತನ ದಾಖಲೆಗಳ ಪ್ರಕಾರ ಚೀನಾದ ನಗರಗಳಲ್ಲಿ ರೇಷ್ಮೆ ಬಟ್ಟೆಗಳಿಗಿಂತ ಹತ್ತಿ ಬಟ್ಟೆಗಳು ಹೆಚ್ಚು ಬೆಲೆ ಹೊಂದಿದವು ಎಂದು ತಿಳಿಸಿದ್ದಾರೆ. ಭಾರತದ ಪ್ರಮುಖ ಮೂರು ಭಾಗಗಳಿಂದ ಅಂದರೆ ಕೋರಮಂಡಲ ಬಂಗಾಳ ಮತ್ತು ಕೊಂಕಣದ ಮಲಬಾರ್ ತೀರ ಪ್ರದೇಶಗಳಿಂದ ಅತಿ ಹೆಚ್ಚಿನ ಹತ್ತಿ ಉತ್ಪನ್ನಗಳು ರಫ್ತಾಗುತ್ತಿದ್ದವು. ಬಾರ್ಬೋಸನ ಪ್ರಕಾರ ಭಾರತದ ಸಾಂಬಾರ ಪದಾರ್ಥಗಳಿಗೆ ಚೀನಾದಲ್ಲಿ ಬಹಳಷ್ಟು ಬೇಡಿಕೆ ಇತ್ತೆಂದು ಹೇಳಿದ್ದಾನೆ.

ಚೀನಾದ ವರ್ತಕರು ಭಾರತದ ಪಶ್ಚಿಮ ಬಂದರುಗಳೊಂದಿಗೆ ಅಥವಾ ಇತರ ಭಾಗಗಳೊಂದಿಗೆ ವ್ಯಾಪಾರ ನಡೆಸುವಾಗ ಅವರೊಂದಿಗೆ ಸೈನ್ಯವನ್ನು ಸಹ ಕರೆದುಕೊಂಡು

ಬರುತ್ತಿದ್ದರು. ಹಡಗಿನಲ್ಲಿ ಬರುತ್ತಿದ್ದ ಒಂದು ಸಾವಿರ ಸಿಬ್ಬಂದಿಯಲ್ಲಿ ಆರುನೂರು ಮಂದಿ ನಾವಿಕರಾಗಿದ್ದು ನಾಲ್ಕು ನೂರು ಮಂದಿ ಸೈನಿಕರಾಗಿದ್ದರು. ಇವರಲ್ಲಿ ಬಿಲ್ಲುಗಾರರು, ಗುರಣಿದಾರಕರು, ಅಡ್ಡಬಿಲ್ಲುಗಾರರು ಮತ್ತು ನಾಪ್ರಾಕ್ಷಿಪಣಿಗಳನ್ನು ಹೊಡೆಯುವ ವರ್ಗಗಳಿದ್ದವು. ಈ ಮಾಹಿತಿಯನ್ನು ಇಟನ್ ಬತೂನನು ಕೂಡ ಉಲ್ಲೇಖಿಸಿದ್ದಾನೆ. ಇವನು ಕ್ಯಾಂಬೆ ಕಡಲತೀರದಿಂದ ಪರ್ಷಿಯನ್ ಕೊಲ್ಲಿಗೆ ಪ್ರಯಾಣ ಬೆಳೆಸಿದ್ದಾಗ ಇವನ ಜೊತೆ ಐವತ್ತು ಬಿಲ್ಲುಗಾರರು ಆ ಹಡಗಿನ ರಕ್ಷಣೆಗೆ ಸಹಕರಿಸಿದರೆಂದು ತಿಳಿಸಿದ್ದಾನೆ. ಎಲ್ಲಾ ವರ್ತಕರು ತಮ್ಮ ಜೊತೆ ಸೈನ್ಯವನ್ನು ತೆಗೆದುಕೊಂಡು ಹೋಗಲು ಕಾರಣ ಕಡಲ್ಗಳ್ಳರಿಂದ ರಕ್ಷಣೆ ಪಡೆದು ಕೊಳ್ಳುವುದಾಗಿತ್ತೆಂದು ಹೇಳಬಹುದು. ಭಾರತ ಮತ್ತು ಚೀನಾದ ನಡುವೆ ನಡೆಯುತ್ತಿದ್ದ ಮತ್ತೊಂದು ಪ್ರಮುಖ ವ್ಯಾಪಾರ ಅದು ತೇಗೆದ ಮರದ ವ್ಯಾಪಾರವಾಗಿತ್ತು.[13]

ಭಾರತ ಮತ್ತು ಚೀನಾದ ನಡುವೆ ನಡೆಯುತ್ತಿದ್ದ ಆಮದು ಮತ್ತು ರಫ್ತುಗಳಲ್ಲಿ ಎರಡು ಸರಕುಗಳು ಪ್ರಮುಖವಾದವುಗಳಾಗಿದ್ದವು. ತೇಗದ ಮರಗಳು ಮತ್ತು ಪಿಂಗಾಣಿ ವಸ್ತುಗಳು, ಕೊಲ್ಲಂ ಬಂದರುಗಳು ಹಾಗೂ ಕ್ಯಾಲಿಕಟ್ ಬಂದರುಗಳಲ್ಲಿ ನಾವು ಅತಿಹೆಚ್ಚಾಗಿ ಮರದ ಮನೆಗಳನ್ನು ಕಾಣುತ್ತೇವೆ ಹಾಗೂ ಈ ಮರಗಳಿಗೂ ಚೀನಾದ ನೌಕೆಗಳಿಗೂ ಬಳಸಿರುವ ಮರಗಳ ನಡುವೆ ಬಹಳಷ್ಟು ಹೋಲಿಕೆ ಇದ್ದು ತೇಗೆದ ಮರದ ವ್ಯಾಪಾರ ಬಹಳಷ್ಟು ಪ್ರಾಮುಖ್ಯತೆ ಗಳಿಸಿತ್ತೆಂದು ತಿಳಿಯಬಹುದು. ಹಾಗೆಯೇ ಇಂದಿಗೂ ಕೂಡ ಮಲಬಾರ್ ಕಡಲ ತೀರಗಳಲ್ಲಿ ಬಹಳಷ್ಟು ಚೀನಾದ ಪಿಂಗಾಣಿ ವಸ್ತುಗಳ ಚೂರುಗಳು ದೊರೆತಿದ್ದು ನೀಲಿ ಬಣ್ಣದ ಮತ್ತು ಬಿಳಿ ಬಣ್ಣದ ಪಿಂಗಾಣಿ ಪಾತ್ರೆಗಳು ಮತ್ತು ಅವುಗಳ ಚೂರುಗಳು ಇಂದಿಗೂ ದೊರೆತಿದ್ದು ಇವು ಚೀನಾದ ವಸ್ತುಗಳೆಂದೇ ಧೃಡಪಡಿಸಲಾಗಿದೆ. ಹೀಗೆ ಈ ರೀತಿ ಆಮದು ಮತ್ತು ರಫ್ತು ನಡೆಯುತ್ತಿತ್ತು. ಪ್ರಮುಖ ಆಮದು ಮತ್ತು ರಫ್ತಿನ ಸರಕುಗಳನ್ನು ಈ ಕೆಳಗೆ ಪಟ್ಟಿ ಮಾಡಲಾಗಿದೆ.

**ಪ್ರಮುಖ ರಫ್ತಾಗುತ್ತಿದ್ದ ಸರಕುಗಳು :** ಸಾಂಬಾರ, ವೀಳ್ಯೆದೆಲೆ ಮತ್ತು ಅಡಿಕೆ, ಒಣ ಮೀನು, ಆಭರಣಗಳು, ಛತ್ರಿಗಳು, ಹತ್ತಿಬಟ್ಟೆಗಳು ಮತ್ತು ಮಖಮಲ್ ಬಟ್ಟೆಗಳಾಗಿದ್ದವು. ಇವುಗಳ ಸಂಕ್ಷಿಪ್ತ ವಿವರಣೆ ಈ ಕೆಳಕಂಡತಿವೆ.

**ಸಾಂಬಾರ ಪದಾರ್ಥಗಳು:** ಚೀನಾಕ್ಕೆ ರಫ್ತಾಗುತ್ತಿದ್ದ ಪ್ರಮುಖ ಸರಕುಗಳಲ್ಲಿ ಸಾಂಬಾರ ಪದಾರ್ಥಗಳು ಅಗ್ರಸ್ಥಾನ ಪಡೆದಿದ್ದವು. ಪ್ರಮುಖ ಸಾಂಬಾರ ಪದಾರ್ಥಗಳಾದ ಏಲಕ್ಕಿ, ಮಣಸು, ಡಾಲ್ಫಿನ್ನಿ, ಚಕ್ಕೆ, ಏಲಕ್ಕಿ ಪ್ರಮುಖವಾದವುಗಳು ಈ ವಸ್ತುಗಳನ್ನು ಚೀನಿ ವರ್ತಕರು ಪಶ್ಚಿಮ

ಬಂದರುಗಳಲ್ಲಿ ಖರೀದಿಸಿಕೊಂಡು ತಮ್ಮ ದೇಶಕ್ಕೆ ಹೋಗುತ್ತಿದ್ದರು. ಇವರೊಂದಿಗೆ ಮುಸ್ಲಿಂ ವರ್ತಕರು ಕೂಡ ಇವರಿಗೆ ಸಹಾಯಕರಾಗಿದ್ದರು.

**ವೀಳ್ಯೆದೆಲೆ ಮತ್ತು ಅಡಿಕೆ :** ಚೀನಾಕ್ಕೆ ರಫ್ತಾಗುತ್ತಿದ್ದ ಸರಕುಗಳಲ್ಲಿ ವೀಳೆದೆಲೆ ಮತ್ತು ಅಡಿಕೆಯು ಪ್ರಮುಖವಾದುದಾಗಿತ್ತು. ಭಾರತದ ದಕ್ಷಿಣಭಾಗ ಕರಾವಳಿ ಮತ್ತು ಪಶ್ಚಿಮ ಘಟ್ಟ ಪ್ರದೇಶಗಳಲ್ಲಿ ಅತಿ ಹೆಚ್ಚಾಗಿ ವಿಳ್ಯೆದೆಲೆ ಮತ್ತು ಅಡಿಕೆಯನ್ನು ಬೆಳೆಯಲಾಗುತಿತ್ತು. ಸಾಮಾನ್ಯವಾಗಿ ವಿಳ್ಯೆದೆಲೆ ಮತ್ತು ಅಡಿಕೆಯನ್ನು ಊಟದ ನಂತರ ಸೇವಿಸುತ್ತಿದ್ದರು ಹಾಗೂ ಆಯುರ್ವೇದ ಕ್ರಮಗಳಲ್ಲಿ ಔಷಧಿಯಾಗಿಯೂ ಬಳಸಲಾಗುತ್ತಿದ್ದುದರಿಂದ ಸಾಮಾನ್ಯವಾಗಿ ಬೇಡಿಕೆ ಇತ್ತು.

**ಒಣಮೀನು:** ಭಾರತದ ಪಶ್ಚಿಮ ಕರಾವಳಿ ತೀರ ಪ್ರದೇಶವು ಮೀನುಗಾರಿಕೆಗೆ ಹೆಸರುವಾಸಿಯಾಗಿತ್ತು. ಮೀನುಗಾರಿಕೆ ಮಾಡಿದ ನಂತರ ಆ ಮೀನುಗಳನ್ನು ಒಣಗಿಸಿ ವಿವಿಧ ಭಾಗಗಳಿಗೆ ರಫ್ತು ಮಾಡುವ ಪ್ರಕ್ರಿಯೆಯು ಕೂಡ ನಡೆಯುತ್ತಿತ್ತು. ಅದರಲ್ಲಿ ಮುಖ್ಯವಾಗಿ ಚೀನಾಕ್ಕೆ ಇವು ರಫ್ತಾಗುತ್ತಿದ್ದವು.

**ಆಭರಣಗಳು:** ಚೀನಾಕ್ಕೆ ರಫ್ತಾಗುತ್ತಿದ್ದ ಸರಕುಗಳಲ್ಲಿ ಛತ್ರಿಗಳು ಕೂಡ ಮುಖ್ಯವಾದವುಗಳಾಗಿದ್ದವು. ಛತ್ರಿಗಳನ್ನು ಸಿದ್ಧಪಡಿಸಿ ಅವುಗಳನ್ನು ವಿದೇಶಗಳಿಗೆ ರಫ್ತು ಮಾಡಲಾಗುತ್ತಿತ್ತು. ಛತ್ರಿಗಳನ್ನು ಹೇಗೆ ಯಾವ ಮಾದರಿಯಲ್ಲಿ ತಯಾರಿಸಲಾಗುತ್ತಿತ್ತು ಎಂಬುದರ ಬಗ್ಗೆ ನಮಗೆ ಸ್ಪಷ್ಟವಾದ ಮಾಹಿತಿಗಳು ಸಿಗುವುದಿಲ್ಲ. ಆದರೂ ಕೂಡ ಛತ್ರಿಗಳು ರಫ್ತಾಗುತ್ತಿದುದರ ಬಗ್ಗೆ ಉಲ್ಲೇಖಗಳಿವೆ.

**ಹತ್ತಿಬಟ್ಟೆಗಳು ಮತ್ತು ಮಖಮಲ್ ಬಟ್ಟೆಗಳು:** ಚೀನಾಕ್ಕೆ ರಫ್ತಾಗುತ್ತಿದ್ದ ಸರಕುಗಳಲ್ಲಿ ಹತ್ತಿಬಟ್ಟೆ ಮತ್ತು ಮಖಮಲ್ ಬಟ್ಟೆಗಳು ಕೂಡ ಪ್ರಮುಖವಾದವುಗಳಾಗಿದ್ದವು. ಈಗಾಗಲೇ ಹಿಂದೆ ಚರ್ಚಿಸಿರುವಂತೆ ಕ್ರಿ.ಶ. 15ನೇ ಶತಮಾನದವರೆಗೆ ಚೀನಾದಲ್ಲಿ ಯಾವುದೇ ರೀತಿಯ ಹತ್ತಿಬಟ್ಟೆಗಳ ಬಳಕೆ ಮತ್ತು ಉತ್ಪಾದನೆಯ ಮಟ್ಟ ಬಹಳ ಕಡಿಮೆ ಇತ್ತು. ಇದರಿಂದಾಗಿಯೇ ರೇಷ್ಮೆ ಬಟ್ಟೆಗಳಿಗಿಂತ ಅಲ್ಲಿ ಹತ್ತಿ ಬಟ್ಟೆಗಳಿಗೆ ಹೆಚ್ಚು ಬೇಡಿಕೆ ಇತ್ತು. ಎಂಬುದರ ಬಗ್ಗೆ ಇಬನ್ ಬತೂತ ಉಲ್ಲೇಖಿಸಿದಾನೆ.[14]

ಹೀಗೆ ಈ ಮೇಲ್ಕಂಡ ಮುಖ್ಯ ಸರಕುಗಳು ಭಾರತದ ಪಶ್ಚಿಮ ಕರಾವಳಿ ತೀರ ಪ್ರದೇಶಗಳಿಂದ ಚೀನಾಕ್ಕೆ ರಫ್ತಾಗುತ್ತಿದ್ದವು.

**ಪ್ರಮುಖ ಆಮದಾಗುತ್ತಿದ್ದ ಸರಕುಗಳು :** ಚೀನಾದಿಂದ ಭಾರತದ ಪಶ್ಚಿಮ ಕರಾವಳಿ ಬಂದರುಗಳಿಗೆ ಆಮದಾಗುತ್ತಿದ್ದ ಪ್ರಮುಖ ಸರಕಗಳೆಂದರೆ ಚಿನ್ನ, ಕಬ್ಬಿಣ, ಬಿಳಿ ಮತ್ತು ನೀಲಿಬಣ್ಣದ ಪಿಂಗಾಣಿ ವಸ್ತುಗಳು, ಕಸ್ತೂರಿ, ಬೆಳ್ಳಿ, ತಾಮ್ರ ತೇಗದ ಮರ ಮುಂತಾದವು ಗಳಾಗಿದ್ದವು. ಇವುಗಳ ಸಂಕ್ಷಿಪ್ತ ವಿವರಣೆಯನ್ನು ಈ ಕೆಳಗೆ ವಿವರಿಸಲಾಗಿದೆ.

**ಚಿನ್ನ:** ಚೀನಾದಿಂದ ಭಾರತಕ್ಕೆ ಚಿನ್ನವನ್ನು ಆಮದುಮಾಡಿಕೊಳ್ಳಲಾಗುತಿತ್ತು. ಭಾರತದಲ್ಲೇ ಯೆಥೇಚ್ಛವಾಗಿ ಚಿನ್ನ ದೊರೆಯುತ್ತಿದರು. ಚೀನಾದಿಂದ ಆಮದು ಮಾಡಿಕೊಳ್ಳುತ್ತಿದ್ದ ಕಾರಣ ಸ್ಪಷ್ಟವಾಗಿ ತಿಳಿದು ಬಂದಿಲ್ಲ. ಪ್ರಮುಖವಾದ ಕಾರಣಗಳಲ್ಲಿ ಭಾರತದ ಜನರು ಆಭರಣ ಪ್ರಿಯ ರಾಗಿದ್ದು ಈ ಆಭರಣವನ್ನು ತಯಾರಿಸಲು ಚಿನ್ನದ ಕೊರತೆ ಇದ್ದಿರಬಹುದು ಹಾಗೂ ಭಾರತದ ಚಿನ್ನಕ್ಕಿಂತ ಚೀನಾದ ಚಿನ್ನವು ಉತ್ತಮವಾಗಿರಲೂಬಹುದು. ಕಾರಣಗಳು ಸ್ಪಷ್ಟವಲ್ಲದಿದ್ದರೂ ಚಿನ್ನ ಆಮದಾಗುತ್ತಿದುದ್ದು ಸ್ಪಷ್ಟವಾಗಿದೆ.

**ಕಬ್ಬಿಣ:** ಚೀನಾದಿಂದ ಆಮದಾಗುತ್ತಿದ್ದ ಸರಕುಗಳಲ್ಲಿ ಕಬ್ಬಿಣ ಮತ್ತು ಕಬ್ಬಿಣದ ವಸ್ತುಗಳು ಕಬ್ಬಿಣದ ಪ್ರಮುಖ ವಸ್ತುಗಳಾದ ಭರ್ಜಿಗಳು, ಖಡ್ಗಗಳು, ಗುರಾಣಿಗಳು ತಯಾರಾಗುತ್ತಿದ್ದವು. ಇವುಗಳ ತಯಾರಿಕೆಗೆ ಮುಖ್ಯವಾಗಿ ಕಬ್ಬಿಣದ ಅವಶ್ಯಕತೆ ಇತ್ತು. ಭಾರತದ ಎಲ್ಲಾ ಪ್ರಮುಖ ಸಾಮ್ರಾಜ್ಯಗಳು ಯುದ್ಧದಲ್ಲಿ ತೊಡಗಿಸಿಕೊಂಡಿದ್ದರಿಂದ ಯುದ್ಧಾಸ್ತ್ರಗಳ ತಯಾರಿಕೆಗೆ ಕಬ್ಬಿಣವನ್ನು ಬಳಸುತ್ತಿದ್ದರು.

**ಬಿಳಿ ಮತ್ತು ನೀಲಿಬಣ್ಣದ ಪಿಂಗಾಣಿ ವಸ್ತುಗಳು:** ಚೀನಾದ ಸರಕುಗಳಲ್ಲಿ ಮುಖ್ಯವಾಗಿ ಭಾರತಕ್ಕೆ ಆಮದಾಗುತ್ತಿದ್ದ ಸರಕುಗಳೆಂದರೆ ಪಿಂಗಾಣಿ ವಸ್ತುಗಳು. ಈ ಪಿಂಗಾಣಿ ವಸ್ತುಗಳಲ್ಲಿ ಎರಡು ವಿಧ. ಬಿಳಿಬಣ್ಣದ ಪಿಂಗಾಣಿ ವಸ್ತುಗಳು ಮತ್ತು ನೀಲಿಬಣ್ಣದ ಪಿಂಗಾಣಿ ವಸ್ತುಗಳು. ಇವು ಬಹಳಷ್ಟು ಆಕರ್ಷಣೀಯವಾಗಿದ್ದು ಇವುಗಳ ಬಳಕೆ ಸಾಮಾನ್ಯವಾಗಿ ಮಲಬಾರ್ ಪ್ರದೇಶಗಳಲ್ಲಿ ಹೆಚ್ಚಾಗಿತ್ತು. ಮಲಬಾರ್‌ನ ಪ್ರತಿ ಶ್ರೀಮಂತ ಮನೆಗಳಲ್ಲಿ ಈ ಪಿಂಗಾಣಿ ವಸ್ತುಗಳು ಭೋಗದ ವಸ್ತುಗಳಾಗಿ ಬಳಸ ತೊಡಗಿದವು. ಇವು ಭಾರತಕ್ಕೆ ಆಮದಾಗುತ್ತಿದ್ದವು. ಈಗಲೂ ಕೂಡ ಈ ವಸ್ತುಗಳ ಅವಶೇಷಗಳು ಮತ್ತು ಕೆಲವು ಸುಭದ್ರ ವಸ್ತುಗಳು ಮಲಬಾರ್ ಭಾಗಗಳಲ್ಲಿ ದೊರೆತಿವೆ. ವಿಜಯನಗರ ಕಾಲದ ಹಂಪೆಯ ಬಜಾರುಗಳಲ್ಲಿ ಇವುಗಳಿಗೆ ಸಾಕಷ್ಟು ಬೇಡಿಕೆ ಇತ್ತು. ಈ ವಸ್ತುಗಳು ಅವಶೇಷಗಳು ಅಲ್ಲಿ ದೊರೆತಿರುವುದು ಈ ಸರಕುಗಳ ಪ್ರಾಮುಖ್ಯತೆ ತಿಳಿಸುತ್ತದೆ.

**ಬೆಳ್ಳಿ :** ಆಮದುಗಳಲ್ಲಿ ಮತ್ತೊಂದು ಪ್ರಮುಖವಾದ ಸರಕು ಅದುವೇ ಬೆಳ್ಳಿಯಾಗಿತ್ತು. ಆಭರಣಗಳ ತಯಾರಿಕೆಯಲ್ಲಿ ಬೆಳ್ಳಿ ಪ್ರಮುಖ ಪಾತ್ರವಹಿಸಿತ್ತು. ಬೆಳ್ಳಿಯಿಂದ ಗೃಹ ಬಳಕೆಯ ಮತ್ತು ಭೋಜನದ ಪಾತ್ರೆಗಳನ್ನು ತಯಾರಿಸಲಾಗುತ್ತಿತ್ತು. ಕೆಲವು ಶ್ರೀಮಂತ ಸರದಾರರು, ಸಾಮ್ರಾಟರು ಮತ್ತು ಶ್ರೀಮಂತ ವರ್ತಕರು ಮುಖ್ಯವಾಗಿ ಬೆಳ್ಳಿಯ ಪದಾರ್ಥಗಳನ್ನು ಬಳಸುತ್ತಿದರು. ಇವುಗಳ ತಯಾರಿಕೆಗೆ ಸಾಮಾನ್ಯವಾಗಿ ಬೆಳ್ಳಿಯ ಅವಶ್ಯಕತೆ ಇದ್ದುದ್ದರಿಂದ ಬೆಳ್ಳಿ ಆಮದು ಪ್ರಕ್ರಿಯೆ ನಡೆಯುತ್ತಿತ್ತು.

**ತಾಮ್ರ :** ಭಾರತದ ಪ್ರಮುಖ ಆಮದು ಸರಕುಗಳಲ್ಲಿ ತಾಮ್ರ ಕೂಡ ಒಂದಾಗಿದೆ. ತಾಮ್ರವು ಮುಖ್ಯವಾಗಿ ಗೃಹ ಬಳಕೆಯ ಸರಕುಗಳನ್ನು ತಯಾರಿಸಲು ಬಳಸಲಾಗುತಿತ್ತು. ತಾಮ್ರದ ಪಾತ್ರೆಗಳಿಂದ ಅಡಿಗೆ ಮಾಡುವುದು ಆರೋಗ್ಯಕ್ಕೆ ಒಳ್ಳೆಯದು ಕೂಡ ಆಗಿತ್ತು. ಆದುದರಿಂದಾಗಿ ಭಾರತಕ್ಕೆ ತಾಮ್ರದ ಸರಕುಗಳು ಆಮದಾಗುತ್ತಿದ್ದವು.

**ತೇಗದ ಮರ :** ಭಾರತದ ಮಲಬಾರ್ ಬಂದರುಗಳಿಗೆ ಆಮದಾಗುತ್ತಿದ್ದ ಮತ್ತೊಂದು ಪ್ರಮುಖ ಸರಕು ತೇಗದ ಮರಗಳಾಗಿದ್ದವು. ತೇಗದ ಮರಗಳನ್ನು ಬಳಸಿ ಕೊಲ್ಲಂ, ಕ್ಯಾಲಿಕಟ್ ಭಾಗಗಳಲ್ಲಿ ಮನೆಗಳನ್ನು ನಿರ್ಮಾಣ ಮಾಡಲಾಗುತಿತ್ತು. ಈ ತೇಗದ ಮರಗಳಿಂದ ಹಡಗುಗಳನ್ನು ನಿರ್ಮಾಣ ಮಾಡುವ ಪ್ರಕ್ರಿಯೆ ಪ್ರಾರಂಭವಾಯಿತು. ಇದರಿಂದಾಗಿ ತೇಗದ ಮರಗಳು ಹೆಚ್ಚಾಗಿ ಆಮದಾಗುತ್ತಿದ್ದವು.

ಹೀಗೆ ಈ ಮೇಲ್ಕಂಡ ಸರಕುಗಳು ವಿಜಯನಗರ ಸಾಮ್ರಾಜ್ಯ ಮತ್ತು ಚೀನಾದ ನಡುವೆ ಆಮದು ಮತ್ತು ರಫ್ತಾಗುತ್ತಿದ್ದ ವಸ್ತುಗಳು.

**ವಿಜಯನಗರ ಸಾಮ್ರಾಜ್ಯ ಮತ್ತು ಚೀನಾದ ನಡುವಿನ ವ್ಯಾಪಾರ ಮಾರ್ಗಗಳು.**

ಭಾರತ ಮತ್ತು ಚೀನಾದ ನಡುವೆ ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಗೆ ಹಾಗೂ ಸಂಸ್ಕೃತಿಯ ವಿನಿಮಯಕ್ಕೆ ಎರಡು ಪ್ರಮುಖವಾದ ಮಾರ್ಗಗಳು ಬೆಳವಣಿಗೆ ಹೊಂದಿದ್ದವು. ಭೂಮಾರ್ಗ ಮತ್ತು ಜಲಮಾರ್ಗಗಳು ಪ್ರಮುಖವಾಗಿ ಬೆಳವಣಿಗೆ ಹೊಂದುವ ಮೂಲಕ ಭಾರತ ಮತ್ತು ಚೀನಾದ ನಡುವೆ ಸಂಬಂಧಗಳು ಬೆಳವಣಿಗೆ ಹೊಂದಲು ಕಾರಣವಾದವು.

**ಭೂಮಾರ್ಗ :** ಭಾರತ ಮತ್ತು ಚೀನಾದ ನಡುವೆ ಉತ್ತಮವಾದಂತಹ ಭೂ ಮಾರ್ಗವಿತ್ತು. ಈ ಮಾರ್ಗವನ್ನು ಸಾಮಾನ್ಯವಾಗಿ ರೇಷ್ಮೆ ಮಾರ್ಗವೆಂದೇ ಕರೆಯಲಾಗುವುದು

ಈ ಮಾರ್ಗದಿಂದಲೇ ಹಲವಾರು ಬೌದ್ಧ ಭಿಕ್ಷುಗಳು ಹಾಗೂ ವ್ಯಾಪಾರಿಗಳು ಭಾರತಕ್ಕೆ ಬಂದು ಇಲ್ಲಿಂದ ಅರೇಬಿಯಾ, ಪರ್ಷಿಯಾ ಭಾಗಗಳಿಗೆ ಭೇಟಿ ನೀಡುತ್ತಿದ್ದರು. ಚೀನಾದಿಂದ ಉತ್ತರಭಾರತದ ಲಡಾಕ್ ಭಾಗಕ್ಕೆ ಕೊಟ್ಟನ್, ಗಿಲ್ಗಿಟ್ ಮತ್ತು ಚಿಲಾನ್ ಮಾರ್ಗವಾಗಿ ಪ್ರಸ್ತುತದ ಲಡಾಕ್‌ಗೆ ಬಂದು ತಲುಪುತ್ತಿದ್ದರು. ಈ ಮಾರ್ಗವು ಪ್ರಮುಖವಾದುದಾಗಿದ್ದು ಬ್ರಿಟಿಷ್ ದಾಖಲೆಗಳ ಪ್ರಕಾರ ಈ ಮಾರ್ಗದಲ್ಲಿ ಅತಿ ಹೆಚ್ಚಾಗಿ ವ್ಯಾಪಾರಿಗಳು ಮತ್ತು ಭೌದ್ಧ ಸನ್ಯಾಸಿಗಳು ಭಾರತಕ್ಕೆ ಬರುತ್ತಿದ್ದರು. ಭಾರತ ಮತ್ತು ಚೀನಾದ ನಡುವೆ ಅತ್ಯಂತ ಹತ್ತಿರದ ಮಾರ್ಗವೆಂದರೆ, ಅದು ಟಿಬೆಟಿನ ಮಾರ್ಗವಾಗಿ ಭಾರತಕ್ಕೆ ಸಂಪರ್ಕ ಕಲ್ಪಿಸಿದ ಮಾರ್ಗ. ಈ ಮಾರ್ಗವಾಗಿ ಅಸ್ಸಾಂನಿಂದ ಉತ್ತರ ಭಾರತದ ಪ್ರಮುಖ ಭಾಗಗಳಿಗೆ ಸಂಪರ್ಕ ಕಲ್ಪಿಸಿದರು. ಅದೇ ಮಾರ್ಗವಾಗಿ ಬಿಹಾರದ ಪಾಟಲೀಪುತ್ರ ಮತ್ತು ಪಶ್ಚಿಮ ಬಂಗಾಳಕ್ಕೆ ಮಾರ್ಗವಿತ್ತು. ಮತ್ತೊಂದು ಮಾರ್ಗ ಚೀನಾದಿಂದ ಟಿಬೆಟ್ ಮಾರ್ಗವಾಗಿ ಉತ್ತರ ಭಾರತದ ಗುಜರಾತಿನ ಸೂರತ್‌ಗೆ ಕಲ್ಪಿಸಲಾಗಿತ್ತು. ಇಲ್ಲಿಂದ ಚೀನಾದ ವರ್ತಕರು ಅರಬ್, ಪರ್ಷಿಯಾ ಭಾಗಗಳೊಂದಿಗೆ ವ್ಯಾಪಾರ ನಡೆಸುತ್ತಿದ್ದರು. ಗುಜರಾತಿನ ಬಂದರಿನಿಂದ ಹಡಗುಗಳ ಮೂಲಕ ದಕ್ಷಿಣದ ಭಾಗಗಳಿಗೆ ಬರುತ್ತಿದ್ದರು. ಮಲಬಾರ್ ಬಂದರುಗಳ ಮೂಲಕ ಅವರು ದಕ್ಷಿಣ ಭಾರತದ ಸಾಮ್ರಾಜ್ಯ ದೊಂದಿಗೆ ಸಂಪರ್ಕ ಹೊಂದಿದ್ದರು.

**ಜಲಮಾರ್ಗ:** ಭಾರತ ಮತ್ತು ಚೀನಾದ ನಡುವೆ ಭೂ ಮಾರ್ಗಕ್ಕಿಂತ ಜಲಮಾರ್ಗವು ಕ್ರಿ.ಶ. 8ನೇ ಶತಮಾನದ ನಂತರ ಬಹಳಷ್ಟು ಪ್ರಾಮುಖ್ಯತೆ ಗಳಿಸಿತ್ತು. ಈ ಮಾರ್ಗ ಚೀನಾದಿಂದ ಅಂಡಮಾನ್ ನಿಕೋಬಾರ್ ಮಾರ್ಗವಾಗಿ ಬಂಗಾಳ ಕೊಲ್ಲಿಯಿಂದ ಸುಮಾತ್ರ, ಮಲಯಾ ಮಾರ್ಗವಾಗಿ ಭಾರತಕ್ಕೆ ತಲುಪುತಿತ್ತು. ಭಾರತ ಮತ್ತು ಚೀನಾದ ನಡುವಿನ ಜಲಮಾರ್ಗ ಬಹಳ ಹಿಂದೆಯೇ ಬೆಳವಣಿಗೆ ಹೊಂದಿತ್ತು. ಆದರೆ ಸಮುದ್ರಯಾನದಲ್ಲಿ ಪ್ರಾವೀಣ್ಯತೆ ಗಳಿಸಿದ ಮೇಲೆ ಮಾನ್ಸೂನ್ ಮಾರುತಗಳ ಅವಧಿಯ ಕಾಲ ಮತ್ತು ದಿಕ್ಸೂಚಿಗಳನ್ನು ಅಭಿವೃದ್ಧಿ ಪಡಿಸಿಕೊಂಡ ಮೇಲೆ ಜಲಮಾರ್ಗವು ಮತ್ತಷ್ಟು ಅಭಿವೃದ್ಧಿ ಪಡೆದುಕೊಂಡಿತ್ತು. ದಕ್ಷಿಣ ಚೀನಾ ಸಮುದ್ರದಿಂದ ಹಡಗುಗಳು ಭಾರತಕ್ಕೆ ಎರಡು ಮಾರ್ಗಗಳಲ್ಲಿ ಸಂಪರ್ಕವನ್ನು ಕಲ್ಪಸಿತ್ತು. ಒಂದನೇ ಮಾರ್ಗ, ಮಲಕ್ಕಾ, ಮಲಯಾ, ಸುಮಾತ್ರ ಮಾರ್ಗವಾಗಿ ಪುರ್ವದ ಕರಾವಳಿ ಬಂದರುಗಳಾದ ಬಂಗಾಳ ಮತ್ತು ನಾಗಪಟ್ನಂವರೆಗೆ ತಲುಪುತಿತ್ತು. ಎರಡನೇ ಮಾರ್ಗ ಮಲಕ್ಕಾ, ಮಲಯಾ, ಸುಮಾತ್ರ, ಅಂಡಮಾನ್ ಮತ್ತು ನಿಕೋಬಾರ್ ಮಾರ್ಗವಾಗಿ ಶ್ರೀಲಂಕಾವನ್ನು ಬಳಸಿಕೊಂಡು ಮಲಬಾರ್‌ನ

ಪ್ರಮುಖ ಬಂದರುಗಳಾದ ಕೊಲ್ಲಂ, ಕ್ಯಾಲಿಕಟ್, ಮಂಗಳೂರು ಮುಂತಾದ ಪ್ರಮುಖ ಬಂದರುಗಳಿಗೆ ಸಂಪರ್ಕ ಕಲ್ಪಸುತ್ತಿದ್ದವು.

ಹೀಗೆ ಭಾರತ ಮತ್ತು ಚೀನಾದ ನಡುವೆ ಪ್ರಾಚೀನ ಕಾಲದಿಂದಲೂ ವ್ಯಾಪಾರ ಮತ್ತು ವಾಣಿಜ್ಯ ಸಂಬಂಧಗಳು ಬೆಳವಣಿಗೆ ಹೊಂದಿದ್ದವು. ಭಾರತ ಮತ್ತು ಚೀನಾ ವಿಶ್ವದ ಅತ್ಯಂತ ಪ್ರಾಚೀನ ರಾಷ್ಟ್ರಗಳಾಗಿವೆ. ಸಂಸ್ಕೃತಿಯ ವಿನಿಮಯ ವ್ಯಾಪಾರ ಅಭಿವೃದ್ಧಿ, ಬೌದ್ಧಧರ್ಮದ ಬೆಳವಣಿಗೆ ಇವೆಲ್ಲವು ಕೂಡ ಮುಖ್ಯ ಬೆಳವಣಿಗೆಗಳು ಚೀನಾ ಮತ್ತು ಭಾರತದ ನಡುವಿನ ಸಂಬಂಧಗಳಲ್ಲಿ ಈ ಮೇಲ್ಕಂಡ ಅಂಶಗಳು ಪ್ರಮುಖ ಪಾತ್ರ ವಹಿಸಿದ್ದವು.

## 4.2 ವಿಜಯಗರ ಸಾಮ್ರಾಜ್ಯ ಮತ್ತು ಶ್ರೀಲಂಕಾ ಅಥವಾ ಸಿಲೋನ್ ನಡುವಿನ ಸಂಬಂಧಗಳು

ಶ್ರೀಲಂಕಾ ಅಥವಾ ಸಿಲೋನ್ ಭಾರತದ ದಕ್ಷಿಣ ಭಾಗದಲ್ಲಿ ಹಿಂದೂ ಮಹಾಸಾಗರದಲ್ಲಿ ಕಂಡು ಬರುವ ಒಂದು ಪುಟ್ಟ ದ್ವೀಪರಾಷ್ಟ್ರವಾಗಿದೆ. ಭಾರತ ಮತ್ತು ಶ್ರೀಲಂಕಾ ದೇಶಗಳ ನಡುವಿನ ಸಂಬಂಧವು ಪ್ರಾಚೀನವಾದುದಾಗಿದೆ. ಶ್ರೀಲಂಕಾದ ಪ್ರಮುಖ ಐತಿಹಾಸಿಕ ಇತಿಹಾಸವು ಕ್ರಿ.ಪೂ. 3ನೇ ಶತಮಾನದಲ್ಲಿ ಪ್ರಾರಂಭವಾಯಿತು. ಶ್ರೀಲಂಕಾದ ಪ್ರಮುಖ ಬೌದ್ಧ ಗ್ರಂಥಗಳಾದ ದೀಪಾವಂಶ ಮತ್ತು ಮಹಾವಂಶಗಳು ಮಾಹಿತಿ ನೀಡುತ್ತವೆ. ಶ್ರೀಲಂಕಾದ ಮೊಟ್ಟಮೊದಲ ಸಾಮ್ರಾಟ ಪಂದು ಕಭಯ ನೆಂದು ಗುರ್ತಿಸಲಾಗಿದ್ದು ಇವನು ಅನುರಾದ ಪುರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಡಳಿತ ನಡೆಸುತ್ತಿದ್ದನು. ಶ್ರೀಲಂಕಾದಲ್ಲಿ ಬೌದ್ಧಧರ್ಮವು ಅಶೋಕನ ಮಗನಾದ ಮಹೇಂದ್ರನಿಂದ ಕ್ರಿ.ಪೂ, 3ನೇ ಶತಮಾನದಲ್ಲಿ ಪರಿಚಯಿಸಲ್ಪಟ್ಟಿತ್ತು. ಕ್ರಿ.ಪೂ.2ನೇ ಶತಮಾನದಲ್ಲಿ ಚೋಳದ ದೊರೆ ಎಲ್ಲಾನ್ ಶ್ರೀಲಂಕಾದ ಮೇಲೆ ದಾಳಿಮಾಡಿ ವಶಪಡಿಸಿಕೊಂಡಿದುದರ ಬಗ್ಗೆ ಉಲ್ಲೇಖಗಳಿವೆ. ಹಾಗೂ ಅಲ್ಲಿಂದ ಸಾವಿರದ ಇನ್ನೂರು ಸೆರೆಯಾಳುಗಳನ್ನು ತಂದು ತಮಿಳುನಾಡಿನಲ್ಲಿ ಕಾವೇರಿ ನದಿಗೆ ಕಲ್ಯಾಣಿ ಎಂಬ ಅಣೆಕಟ್ಟನ್ನು ಕಟ್ಟಿಸಿದನು.[18]

ಶ್ರೀಲಂಕಾದಲ್ಲಿ ಹಲವಾರು ಯುರೋಪಿನ ರಾಷ್ಟ್ರಗಳು ತಮ್ಮ ವಸಾಹತುಗಳನ್ನು ಸ್ಥಾಪಿಸಿದರು. ಕ್ರಿ.ಶ. 1498ರಲ್ಲಿ ಭಾರತಕ್ಕೆ ಪೋರ್ಚುಗೀಸರ ಆಗಮನದ ನಂತರ ಇದೇ ಪೋರ್ಚುಗೀಸರು ಶ್ರೀಲಂಕಾದಲ್ಲಿ ತಮ್ಮ ನೆಲೆಗಳನ್ನು ಸ್ಥಾಪಿಸಿದರು. ಪೋರ್ಚುಗೀಸರು ಅಲ್ಫೆನೋ ಡಿ ಅಲ್ಮೇಡ ಕ್ರಿ.ಶ. 1505 ರಲ್ಲಿ ಮೊದಲ ಬಾರಿಗೆ ಶ್ರೀಲಂಕಾದಲ್ಲಿ ತಮ್ಮ ನೆಲೆಯನ್ನು ಸ್ಥಾಪಿಸಿದನು. ಕ್ರಿ.ಶ. 1517ರಲ್ಲಿ ಪೋರ್ಚುಗೀಸರು ಕೊಲಂಬೋ ಬಂದರಿನಲ್ಲಿ ಒಂದು ಕೋಟೆಯನ್ನು ಕಟ್ಟಿದರು.

ನಂತರ ಕರಾವಳಿ ತೀರದುದ್ದಕ್ಕೂ ತಮ್ಮ ಆಧಿಪತ್ಯವನ್ನು ಸ್ಥಾಪಿಸಿದರು. ಪೋರ್ಚುಗೀಸ್‌ರ ಕ್ರಿಶ್ಚಿಯನ್ ಮಿಷನರಿಗಳು ಮೂಲ ಶ್ರೀಲಂಕಾ ಪ್ರಜೆಗಳನ್ನು ಕ್ರಿಶ್ಚಿಯನ್ ಧರ್ಮಕ್ಕೆ ಮತಾಂತರಿಸಿದ್ದರು. ಸಿಲೋನಿನ ಬೌದ್ಧರು ಪೋರ್ಚುಗೀಸರನ್ನು ದ್ವೇಷಿಸಲು ಪ್ರಾರಂಭಿಸಿದರು. ಸಿನಾಲಿಸ್ ಅನುರಾದ ಪುರದಿಂದ ರಾಜಧಾನಿಯನ್ನು ಕ್ಯಾಂಡ್ ನಗರಕ್ಕೆ ವರ್ಗಾಯಿಸಿದನು. ಇದಕ್ಕೆ ಪ್ರಮುಖವಾದ ಕಾರಣವೆಂದರೆ ದಾಳಿಕೋರರಿಂದ ರಾಜಧಾನಿಯನ್ನು ರಕ್ಷಿಸಿ ಕೊಳ್ಳುವುದಾಗಿತ್ತು. ದಿನೇ ದಿನೇ ಪೋರ್ಚುಗೀಸರ ದಾಳಿಗಳಿಂದಾಗಿ ಮತ್ತು ಮತಾಂತರಗಳಿಂದಾಗಿ ಬೌದ್ಧ ಭಿಕ್ಷುಗಳು ಪೋರ್ಚುಗೀಸರನ್ನು ಹೊರಹಾಕಲು ಒಂದು ಪರ್ಯಾಯ ಶಕ್ತಿಗಾಗಿ ಕಾಯುತ್ತಿದ್ದರು. ಆಗ ಅವರಿಗೆ ಕಾಣಿಸಿದ್ದು ಡಚ್ಚರ ನಾವಿಕನಾದ ಜೋರಿಸ್ ವ್ಯಾನ್ ಸ್ಪಿಲ್‌ಬರ್ಗನ್ ಇವನು ಕ್ರಿ.ಶ. 1602ರಲ್ಲಿ ಸಿಲೋನಿಗೆ ಬಂದು ಇಳಿದನು. ಡಚ್ಚರು ಸಿಲೋನಿನಲ್ಲಿ ತಮ್ಮ ಹಿತಾಶಕ್ತಿಗಳನ್ನು ಸ್ಥಾಪಿಸಿದರು ಸಹ ಹೆಚ್ಚು ಕಾಲ ಅಲ್ಲಿ ಉಳಿಯಲಾಗಲಿಲ್ಲ. ಇವರ ನಂತರ ಬ್ರಿಟಿಷರು ಸಿಲೋನ್‌ಗೆ ಪಾದಾರ್ಪಣೆ ಮಾಡಿದರು.[19]

ಕ್ರಿ.ಶ.1669ರಲ್ಲಿ ಬ್ರಿಟಿಷ್ ನಾಯಕ ರಾಬರ್ಟ್ ನಾಕ್ಸ್ ಮೊದಲ ಬಾರಿಗೆ ಸಿಲೋನ್‌ಗೆ ಭೇಟಿ ನೀಡಿದನು. ಈ ಸಂದರ್ಭದಲ್ಲಿ ಅವನನ್ನು ಸಿಲೋನಿನ ಕ್ಯಾಂಡ್ ರಾಜ ಬಂದಿಸಿ ಜೈಲಿನಲ್ಲಿಟ್ಟನು. ಇವನು ಸುಮಾರು ಹತ್ತೊಂಬತ್ತು ವರ್ಷಗಳ ಜೈಲಿನಲ್ಲಿದ್ದ ಇವನು ನಂತರ ಅಲ್ಲಿಂದ ತಪ್ಪಿಸಿಕೊಂಡು ಹೋದನು ನಂತರ ಬ್ರಿಟಿಷರು ಸಿಲೋನ್‌ನಲ್ಲಿ ತಮ್ಮ ಹಿತಾಶಕ್ತಿಗಳನ್ನು ಸ್ಥಾಪಿಸುವ ಮೂಲಕ ಸಿಲೋನ್ ಸ್ವಾತಂತ್ರ ಪಡೆಯುವವರೆಗೂ ಅಲ್ಲಿ ತಮ್ಮ ನೆಲೆಗಳನ್ನು ಸ್ಥಾಪಿಸಿಕೊಂಡಿದ್ದರು. ಎರಡನೇ ಮಹಾಯುದ್ಧದ ಸಂದರ್ಭದಲ್ಲಿ ಬ್ರಿಟೀಷರಿಗೆ ಸಿಲೋನ್ ಬಹಳ ಪ್ರಮುಖವಾದ ಯುದ್ದ ನೆಲೆಯಾಗಿತ್ತು.

ಕ್ರಿ.ಶ. 14ನೇ ಶತಮಾನದಿಂದ 17ನೇ ಶತಮಾನದವರೆಗೆ ದಕ್ಷಿಣ ಭಾರತದಲ್ಲಿ ಏಕಮೇವ ಅದ್ವೀತಿಯ ಸಾಮ್ರಾಜ್ಯವಾಗಿ ಆಳ್ವಿಕೆ ಮಾಡಿತ್ತು ವಿಜಯನಗರ ಸಾಮ್ರಾಜ್ಯವು ತನ್ನ ಆಡಳಿತ ಅವಧಿಯಲ್ಲಿ ಉತ್ತಮವಾದ ಸಂಬಂಧವನ್ನು ಬೆಳಸಿಕೊಂಡಿತ್ತು. ದಕ್ಷಿಣ ಭಾರತದಲ್ಲಿ ಮುಸ್ಲಿಮರ ದಾಳಿಯಿಂದ ಹಿಂದೂ ಸಾಮ್ರಾಜ್ಯವನ್ನು ರಕ್ಷಿಸಿಕೊಳ್ಳಲು ತನ್ನ ಸಾಮ್ರಾಜ್ಯವನ್ನು ವಿಸ್ತರಿಸುವ ಸಂದರ್ಭದಲ್ಲಿ ವಿಜಯನಗರವು ಶ್ರೀಲಂಕಾದೊಂದಿಗೆ ಉತ್ತಮವಾದ ಸಂಬಂಧವನ್ನು ಬೆಳೆಸಿಕೊಳ್ಳಲು ಪ್ರಾರಂಭಿಸಿತು. ದಕ್ಷಿಣ ಭಾರತದಲ್ಲಿ ಸಾಮ್ರಾಜ್ಯ ವಿಸ್ತರಣಾ ಪ್ರಕ್ರಿಯೆ ಮೊದಲಬಾರಿಗೆ ಒಂದನೇ ಬುಕ್ಕನ ಮಗನಾದ ಕುಮಾರ ಕಪಣ್ಣನಿಂದ ಆರಂಭವಾಯಿತು. ಬಹಳ ಧೈರ್ಯಶಾಲಿ ಹಾಗೂ ಉತ್ತಮ ದಂಡನಾಯಕನಾಗಿದ್ದ ಇವನು ದಕ್ಷಿಣ ಭಾರತದಲ್ಲಿ

ವಿಜಯನಗರ ಸಾಮ್ರಾಜ್ಯವನ್ನು ವಿಸ್ತರಿಸುವ ಪ್ರಯತ್ನಮಾಡಿದನು. ಈ ಸಂದರ್ಭದಲ್ಲಿ ಇವನು ಮದುರೈ ಮತ್ತು ತಿರುವನಾಪಲ್ಲಿಯ ಮುಸ್ಲಿಮರನ್ನು ಸೋಲಿಸಿ ಅವರನ್ನು ತನ್ನ ನಿಯಂತ್ರಣಕ್ಕೆ ಪಡೆದುಕೊಂಡನು ನಂತರ ಪಾಂಡ್ಯರನ್ನು ಸೋಲಿಸಿದನು. ಈ ಎಲ್ಲಾ ಸಾಧನೆಗಳ ನಂತರ ಮೂಡುವ ಒಂದು ಪ್ರಮುಖ ಪ್ರಶ್ನೆಯೆಂದರೆ ಕುಮಾರ ಕಪಣ್ಣನು ಶ್ರೀಲಂಕಾದ ಮೇಲೆ ನಿಯಂತ್ರಣ ಹೊಂದಿದನೋ ಇಲ್ಲವೋ ಎಂಬುದಾಗಿದೆ.[20]

ಪೆರಿಸ್ತಾನ ಹೇಳಿಕೆಗಳ ಪ್ರಕಾರ ಕ್ರಿ.ಶ.1378 ರಲ್ಲಿಯ ವಿಜಯನಗರ ಸಾಮ್ರಾಜ್ಯದ ಸ್ಥಾನಮಾನದ ಬಗ್ಗೆ ವಿವರಿಸುವಾಗ, ದಕ್ಷಿಣ ಭಾರತದ ಮಲಬಾರ್ ರಾಜರು ಮತ್ತು ಶ್ರೀಲಂಕಾದ ರಾಜರು ವಿಜಯನಗರದ ಸಾಮ್ರಾಜ್ಯದಲ್ಲಿ ತಮ್ಮ ರಾಯಭಾರಿಗಳನ್ನು ಇರಿಸಿ ವಿಜಯನಗರದ ಅರಸರಿಗೆ ವಾರ್ಷಿಕ ಅಮೂಲ್ಯವಾದ ಕಾಣಿಕೆಗಳನ್ನು ಸಲ್ಲಿಸುತ್ತಿದ್ದರು. ಎಂದು ತಿಳಿಸಿದ್ದಾನೆ. ಶ್ರೀಲಂಕಾದ ರಾಜರು ವಾರ್ಷಿಕವಾಗಿ ಕಪ್ಪಕಾಣಿಕೆಗಳನ್ನು ಮತ್ತು ಕಾಣಿಕೆಗಳನ್ನು ಸಲ್ಲಿಸುತ್ತಿದ್ದುದು ಪ್ರಮುಖವಾಗಿ ಈ ಕಾಣಿಕೆಗಳನ್ನು ಸಲ್ಲಿಸಲು ಕಾರಣವೇನೆಂದರೆ, ಕುಮಾರ ಕಪಣ್ಣ ಶ್ರೀಲಂಕಾವನ್ನು ವಶಪಡಿಸಿಕೊಂಡಿದುದರಿಂದ ಶ್ರೀಲಂಕಾ ರಾಜರು ಕಪ್ಪಕಾಣಿಕೆ ಸಲ್ಲಿಸುತ್ತಿದ್ದರೆಂದು ಹೇಳಿದ್ದಾನೆ.[21]

**ವೀರಕುಮಾರ ಕಪ್ಪಣ ಮತ್ತು ಶ್ರೀಲಂಕಾದ ನಡುವಣ ಸಂಬಂಧ**

ವೀರಕುಮಾರ ಕಪಣ್ಣನ ಪತ್ನಿಯಾದ ಗಂಗಾದೇವಿಯು ರಚಿಸಿರುವ ಮಧುರ ವಿಜಯಂ ಕೃತಿಯು ವೀರ ಕುಮಾರ ಕಪಣ್ಣನ ಕುರಿತಾದ ಮಾಹಿತಿಯನ್ನು ನೀಡುತ್ತದೆ. ಆದರೆ ಈ ಗ್ರಂಥದಲ್ಲಿ ವೀರ ಕುಮಾರ ಕಪಣ್ಣನು ಶ್ರೀಲಂಕಾದ ಮೇಲೆ ದಾಳಿಮಾಡಿರುವ ಯಾವುದೇ ವಿಚಾರಗಳನ್ನು ಅವಳು ಉಲ್ಲೇಖಿಸಿಲ್ಲ. ಆದರೆ ಈ ಗ್ರಂಥದಲ್ಲಿರುವ 4ನೇ ಪರಿಚ್ಛೇದದಲ್ಲಿ 17 ರಿಂದ 35ನೇ ಸಾಲಿನವರೆಗೆ ವೀರಕುಮಾರ ಕಪಣ್ಣನು ಚೋಳ, ಚೇರ ಮತ್ತು ಪಾಂಡ್ಯರ ಸಹಾಯದಿಂದ ಸಂಭುವರಾಯ ದೇಶದ ಮೇಲೆ ಮಿಲಿಟರಿ ಕಾರ್ಯಚರಣೆ ಮಾಡಿದುದರ ಮೇಲೆ ಅವಳು ಉಲ್ಲೇಖಿಸಿದ್ದಾಳೆ.

ಗಂಗಾದೇವಿ ರಚಿಸಿರುವ ಮಧುರ ವಿಜಯಂ ಕೃತಿಯಲ್ಲಿರುವ ಐದನೇ ಪರಿಚ್ಛೇದದ ಒಂಭತ್ತನೆ ಚರಣದಲ್ಲಿ ಉಲ್ಲೇಖಿಸಿರುವಂತೆ, ಸಿಲೋನ್ ಅಥವಾ ಶ್ರೀಲಂಕಾವು ವಿಜಯನಗರ ಸಾಮ್ರಾಜ್ಯದ ಸಾಮಂತ ರಾಜ್ಯವಾಗಿದ್ದು ಮತ್ತು ಇದರೊಂದಿಗೆ ಮಗದ, ಮಾಳ್ವ, ಸೇವುಣ, ಕೇರಳ ರಾಜ್ಯಗಳು ಸಹ ವಿಜಯನಗರದ ಸಾಮಂತ ರಾಜ್ಯವಾಗಿದ್ದವೆಂದು ಮಾಹಿತಿ ನೀಡುತ್ತವೆ.[22] ಆದರೆ

ಬೇರೆಯಾವ ದಾಖಲೆಗಳು ವಿಜಯನಗರ ಸಾಮ್ರಾಜ್ಯ ಮಗದ ಮತ್ತು ಮಾಳ್ವಗಳ ಮೇಲೆ ನಿಯಂತ್ರಣ ಹೊಂದಿದುದರ ಬಗ್ಗೆ ಮಾಹಿತಿ ನೀಡುವುದಿಲ್ಲ. ಕುಮಾರ ಕಪಣ್ಣನ ಕಾಲದಲ್ಲಿ ಶ್ರೀಲಂಕಾ ವಿಜಯನಗರ ಸಾಮ್ರಾಜ್ಯದ ಅಧೀನಕ್ಕೆ ಒಳಪಟ್ಟಿತು. ಇಲ್ಲವೋ ಎಂಬುದರ ಬಗ್ಗೆ ದಾಖಲೆಗಳು ಸ್ಪಷ್ಟವಾಗಿ ಮಾಹಿತಿ ನೀಡದಿದ್ದರು ಕೂಡ, ಹರಿಹರನ (1377–1404) ಕಾಲದಲ್ಲಿ ಶ್ರೀಲಂಕಾ ಮತ್ತು ವಿಜಯನಗರ ಸಾಮ್ರಾಜ್ಯದ ನಡುವೆ ಉತ್ತಮವಾದ ಸಂಬಂಧವಿದ್ದುದರ ಬಗ್ಗೆ ಬಹಳಷ್ಟು ದಾಖಲೆಗಳು ನಮಗೆ ಮಾಹಿತಿ ನೀಡುತ್ತವೆ. ಎರಡನೇ ಹರಿಹರನು ತನ್ನ ಮಗನಾದ ಒಂದನೇ ವಿರೂಪಾಕ್ಷನನ್ನು ದಕ್ಷಿಣದ ರಾಜ್ಯಪಾಲನಾಗಿ ನೇಮಿಸಿದನು. ಇವನು ಚೋಳ, ಪಾಂಡ್ಯ, ಮತ್ತು ಶ್ರೀಲಂಕಾದ ಮೇಲೆ ಯಶಸ್ವಿ ದಂಡೆಯಾತ್ರೆಯನ್ನು ಕೈಗೊಂಡಿದ್ದನು. ಈ ದಂಡೆಯಾತ್ರೆಗೆ ಸಂಬಂದಿಸಿದಂತೆ ಇವನ ಹೊರಡಿಸುವ ಕ್ರಿ.ಶ. 1390ರ ಅರಿಯೂರು ಶಾಸನವು ಒಂದನೇ ವಿರೂಪಾಕ್ಷನು ಶ್ರೀಲಂಕಾದ ಮೇಲೆ ದಾಳಿ ಮಾಡಿದ ವಿಚಾರವನ್ನು ಈ ಶಾಸನದಲ್ಲಿ ಉಲ್ಲೇಖಿಸಿದ್ದಾನೆ. ಹೊರಡಿಸಿರುವ ಶ್ರೀಲಂಕಾದ ಮೇಲೆ ನಡೆದ ದಾಳಿಯು ಸುಮಾರು ಕ್ರಿ.ಶ. 1386 ರಿಂದ 1390ರ ಅವಧಿಯಲ್ಲಿ ನಡೆದಿರಬಹುದೆಂದು ಅಂದಾಜಿಸಲಾಗಿದೆ. ಇದೇ ವಿರೂಪಾಕ್ಷನಿಂದ ಕ್ರಿ.ಶ. 1386ರಲ್ಲಿ ಹೊರಡಿಸಿರುವ ಸೂರ್ಯೆಕಾವೂರ್ ಶಾಸನವು ಇವನು ಶ್ರೀಲಂಕಾದ ಮೇಲೆ ದಾಳಿ ಮಾಡಿರುವುದರ ಬಗ್ಗೆ ಯಾವುದೇ ಮಾಹಿತಿಗಳು ಅಲ್ಲಿ ದಾಖಲಾಗಿಲ್ಲ. ಆದರೆ ಇದೇ ಸೂರ್ಯೆಕಾವೂರ್ ಶಾಸನವು ಒಂದನೇ ವಿರೂಪಾಕ್ಷನು ಚೋಳ ಮತ್ತು ಪಾಂಡ್ಯ ರಾಜ್ಯದ ಮೇಲೆ ಸಂಪೂರ್ಣ ನಿಯಂತ್ರಣ ಹೊಂದಿದುದರ ಬಗ್ಗೆ ಮಾಹಿತಿಯನ್ನು ನೀಡುತ್ತದೆ.[23]

ಒಂದನೇ ವಿರೂಪಾಕ್ಷನು ರಾಮೇಶ್ವರಂನ ರಾಮನಾಥ ದೇವಾಲಯದಲ್ಲಿ ಚಿನ್ನದೊಂದಿಗೆ ತುಲಭಾರ ಮಾಡಿಸಿಕೊಂಡ ಬಗ್ಗೆ ಅರಿಯೂರು ಶಾಸನವು ನಮಗೆ ಮಾಹಿತಿ ನೀಡುತ್ತವೆ. ಕೆ.ಎ. ನೀಲಕಂಠ ಶಾಸ್ತ್ರೀಯವರ ಪ್ರಕಾರ ವಿರೂಪಾಕ್ಷನು ರಾಮೇಶ್ವರಂನ ರಾಮನಾಥ ದೇವರ ಮುಂದೆ ಚಿನ್ನದಿಂದ ತುಲಬಾರ ಮಾಡಿಸಿಕೊಂಡು ದೇವರಿಗೆ ಕೃತಜ್ಞತೆ ಪೂರ್ವಕವಾಗಿ ಭಕ್ತಿಯನ್ನು ಸಮರ್ಪಿಸಿದನು. ಈ ತುಲಬಾರದ ಬಹಳ ಪ್ರಮುಖ ಕಾರಣವೇ ವಿರೂಪಾಕ್ಷನು ಶ್ರೀಲಂಕಾದ ಮೇಲೆ ದಾಳಿ ಮಾಡಿ ವಿಜಯ ಸಾಧಿಸುವುದಕ್ಕೂ ಸ್ಥಿರವಾಗಿತ್ತೆಂದು ವಿವರಿಸಿದ್ದಾರೆ. ಮುಂದುವರಿದಂತೆ ವಿರೂಪಾಕ್ಷನು ಶ್ರೀಲಂಕಾದ ಉತ್ತರ ಭಾಗವನ್ನು ಮಾತ್ರವೇ ವಶಪಡಿಸಿ ಕೊಂಡಿದನೆಂದು ತಿಳಿಸಿದ್ದಾರೆ, ಉತ್ತರ ಭಾಗದ ಶ್ರೀಲಂಕಾವನ್ನು ವಶಪಡಿಸಿಕೊಂಡ ವಿಚಾರವನ್ನು ವಿರೂಪಾಕ್ಷ ರಚಿಸಿರುವ ನಾರಾಯಣವಿಲಾಸಂ ಕೂಡ ಉಲ್ಲೇಖಿಸಿದೆ.[24] ಶ್ರೀಲಂಕಾದ ಪ್ರಮುಖ

ಗ್ರಂಥವಾದ ರಾಜವಲ್ಲಿಯ ಪ್ರಕಾರ ವಿರೂಪಾಕ್ಷನು ಶ್ರೀಲಂಕಾದ ಜಾಪ್ನ ಮತ್ತು ಶ್ರೀಲಂಕಾದ ಉತ್ತರ ಭಾಗವನ್ನು ಆತ ವಶಪಡಿಸಿಕೊಂಡನು.

ವಿರೂಪಾಕ್ಷನ ಶ್ರೀಲಂಕಾದ ದಾಳಿಯ ನಂತರ ವಿಜಯನಗರ ಮತ್ತು ಶ್ರೀಲಂಕಾದ ನಡುವೆ ಕೆಲ ವರ್ಷಗಳ ಕಾಲ ಸಂಬಂಧಗಳು ಹೇಗಿದ್ದವು ಎಂಬುದರ ಬಗ್ಗೆ ಮಾಹಿತಿಗಳು ಲಭ್ಯವಿಲ್ಲ. ಕ್ರಿ.ಶ. 14ನೇ ಶತಮಾನದ ಕೊನೆಯ ಭಾಗದಲ್ಲಿ ಶ್ರೀಲಂಕಾ ಮತ್ತು ಜಾಪ್ನಾ ರಾಜ್ಯಗಳು ವಿಜಯನಗರ ಸಾಮ್ರಾಜ್ಯಕ್ಕೆ ಕಪ್ಪಕಾಣಿಕೆಗಳನ್ನು ಮಾತ್ರ ಚಾಚುತಪ್ಪದೇ ಸಲ್ಲಿಸುತ್ತಿದ್ದವೆಂದು ದಾಖಲೆಗಳು ಮಾಹಿತಿಯನ್ನು ನೀಡುತ್ತವೆ.

ಶ್ರೀಲಂಕಾ ಮತ್ತು ವಿಜಯನಗರ ಸಾಮ್ರಾಜ್ಯದ ನಡುವೆ ಧಾರ್ಮಿಕ ಸಂಬಂಧಗಳು ಬೆಳವಣಿಗೆ ಹೊಂದಿದುದರ ಬಗ್ಗೆ ನಮಗೆ ಬಹಳಷ್ಟು ದಾಖಲೆಗಳು ಮಾಹಿತಿ ನೀಡುತ್ತವೆ. ಕ್ರಿ.ಶ. 1414ರಲ್ಲಿ ಶ್ರೀಲಂಕಾದ ಜಾಪ್ನಾ ಸಾಮ್ರಾಜ್ಯದಲ್ಲಿ ಆಳ್ವಿಕೆ ನಡೆಸುತ್ತಿದ್ದ ಘರರಾಜಶೇಖರನು ಹೊರಡಿಸಿರುವ ಹಲವಾರು ಶಾಸನಗಳು ಶ್ರೀಲಂಕಾ ಮತ್ತು ವಿಜಯನಗರ ಸಾಮಾಜ್ಯದ ಧಾರ್ಮಿಕ ಸಂಬಂಧಗಳ ಬಗ್ಗೆ ಮಾಹಿತಿ ನೀಡುತ್ತದೆ ಹಾಗೂ ರಾಮೇಶ್ವರಂನಲ್ಲಿ ದೊರೆತಿರುವ ಶಾಸನಗಳು ಕೂಡ  ಉಲ್ಲೇಖಿಸುತ್ತವೆ. ಶ್ರೀಲಂಕಾದಿಂದ ತಂದ ಕಲ್ಲುಗಳನ್ನು ಬಳಸಿಕೊಂಡು ದೇವಾಲಯಗಳ ನಿರ್ಮಾಣ ಮಾಡಿದ ಕುರಿತು ಮಾಹಿತಿಗಳಿವೆ.

**ಎರಡನೇ ದೇವರಾಯ ಮತ್ತು ಶ್ರೀಲಂಕಾದ ನಡುವಿನ ಸಂಬಂಧ**

ವಿರೂಪಾಕ್ಷನ ನಂತರ ಶ್ರೀಲಂಕಾ ಮತ್ತು ವಿಜಯನಗರ ಸಾಮ್ರಾಜ್ಯದ ಸಂಬಂಧಗಳು ಬೆಳವಣಿಗೆ ಹೊಂದಿದ್ದು ಎರಡನೇ ದೇವರಾಯನ (1422–1440) ಕಾಲದಲ್ಲಿ. ಶ್ರೀಲಂಕಾದ ಮೇಲೆ ವಿಜಯನಗರ ಸಾಮ್ರಾಜ್ಯದ ದಾಳಿಯು ಆರನೇ ಪರಾಕ್ರಮ ಬಾಬುನ ಆಡಳಿತ ಅವಧಿಯಲ್ಲಿ ನಡೆಯಿತ್ತೆಂದು ಹೇಳಲಾಗಿದೆ. ಶ್ರೀಲಂಕಾದ ಪ್ರಮುಖ ದಾಖಲೆಗಳಾದ ಕುಲವಂಶ ಗ್ರಂಥ ಮತ್ತು ರಾಜವಳ್ಳಿಗಳು ಈ ದಾಳಿಯ ಕುರಿತು ಮಾಹಿತಿ ನೀಡುತ್ತವೆ. ಈ ಎರಡು ಗ್ರಂಥಗಳು ವಿಭಿನ್ನ ಅಭಿಪ್ರಾಯ ವ್ಯಕ್ತಪಡಿಸಿದ್ದು ಕ್ರಿ.ಶ. 1410ರಲ್ಲಿ ದಾಳಿ ಮಾಡಿದರೆಂದು ಕುಲವಂಶ ಹೇಳಿದೆ ಕ್ರಿ.ಶ. 1415ರಲ್ಲಿ ವಿಜಯನಗರ ಸಾಮ್ರಾಜ್ಯ ಶ್ರೀಲಂಕಾದ ಮೇಲೆ ದಾಳಿಮಾಡಿತ್ತೆಂದು ರಾಜವಳ್ಳಿ ಗ್ರಂಥವು ಮಾಹಿತಿ ನೀಡುತ್ತದೆ. ಸರಿಯಾದ ವರ್ಷವನ್ನು ಗುರ್ತಿಸುವುದು ಕಷ್ಟವಾಗಿದ್ದು ಹೆಚ್.ಸಿ.ಪಿ. ಬೆಲ್ ಮತ್ತು ರಸನಯಗಂ ಎಂಬುವವರು ರಾಜವಳ್ಳಿ ಗ್ರಂಥದ ಉಲ್ಲೇಖವನ್ನು ಒಪ್ಪಿದ್ದಾರೆ.

ಎರಡನೇ ದೇವರಾಯನ ದಂಡನಾಯಕನಾದ ಲಕ್ಕಣ್ಣ ದಂಡನಾಯಕ ಕ್ರಿ.ಶ. 1435ರಲ್ಲಿ ಮದುರೈ ಮಾರ್ಗವಾಗಿ ಶ್ರೀಲಂಕಾದ ಮೇಲೆ ದಂಡೆಯಾತ್ರೆ ಮಾಡಿ ಅಲ್ಲಿನ ಪ್ರಮುಖ ಪ್ರದೇಶಗಳ ವಶಪಡಿಸಿಕೊಳ್ಳುವ ಉದ್ದೇಶ ಹೊಂದಿದ್ದನು. ಅದರ ಫಲವಾಗಿ ಯಾಲಪನಾಂ, ನಾಪಟ್ಟಮನಂ ಮತ್ತು ಇಲಾಂಗಳನ್ನು ವಶಪಡಿಸಿಕೊಂಡಿರುವ ಬಗ್ಗೆ ಕ್ರಿ.ಶ. 1435ರಲ್ಲಿ ಹೊರಡಿಸಿದ ವಿಜಯನಗರ ಶಾಸನವು ಮಾಹಿತಿ ನೀಡುತ್ತದೆ. ವಿಜಯನಗರದ ಅಶ್ವದಳವು ಈ ಮೇಲಿನ ಪ್ರದೇಶಗಳ ಮೇಲೆ ದಾಳಿ ಮಾಡಿ ವಶಪಡಿಸಿಕೊಂಡರು. ಮುಂದವರೆದಂತೆ ಶ್ರೀಲಂಕಾದ ರಾಜರು ಸಮುದ್ರಯಾನ ದಾನವನ್ನು ನೀಡಿದ್ದರ ಬಗ್ಗೆಯೂ ಮಾಹಿತಿ ನೀಡುತ್ತದೆ. ಎರಡನೇ ದೇವರಾಯನು ತನ್ನ ಉದ್ದೇಶವಾದ 'ದಕ್ಷಿಣಾ ಸಮುದ್ರಾದಿಪತಿ' ಎಂಬ ಬಿರುದನ್ನು ಪಡೆದುಕೊಂಡನು. ಮತ್ತೊಂದು ಪ್ರಮುಖ ವಿಜಯನಗರ ಶಾಸನವು ಕ್ರಿ.ಶ. 1440ರಲ್ಲಿ ಎರಡನೇ ದೇವರಾಯನು ಇಲಾಂ ತಿರೈಯ್ ಕೊಂಡ ಎಂಬ ಬಿರುದನ್ನು ಪಡೆದುಕೊಂಡಿದುದರ ಬಗ್ಗೆ ಮಾಹಿತಿ ನೀಡುತ್ತದೆ. ನ್ಯೂನಿಚ್ ಪ್ರಕಾರ 'ಶ್ರೀಲಂಕಾದ ರಾಜನು ಎರಡನೇ ದೇವರಾಯನಿಗೆ ಕಪ್ಪಕಾಣಿಕೆಗಳನ್ನು ಸಲ್ಲಿಸುತ್ತಿದ್ದನು ಹಾಗೂ ಇಡೀ ಶ್ರೀಲಂಕಾ ಜಾಪ್ನಾವನ್ನು ಒಳಗೊಂಡಂತೆ ಲಕ್ಷಣ ದಂಡನಾಯಕನು ವಶಪಡಿಸಿಕೊಂಡನು. ಜಾಫ್ನಾದ ರಾಜನಾದ ಆರನೇ ಪರಾಕ್ರಮಬಾಬು ವಿಜಯನಗರದ ಸಾರ್ವಭೌಮವನ್ನು ಒಪ್ಪಿಕೊಂಡನು ಹಾಗೂ ಕಪ್ಪಕಾಣಿಕೆಗಳನ್ನು ಸಲ್ಲಿಸಿದನೆಂದು ಹೇಳುತ್ತಾನೆ.[25] ಆರನೇ ಪರಾಕ್ರಮ ಬಾಹುವು ಲಕ್ಷಣ ದಂಡನಾಯಕನ ದಾಳಿಯನ್ನು ಹಿಮ್ಮೆಟಿಸಲು ಶಕ್ತನಾಗಿದ್ದರು ಸಹ ಅವನು ಶರಣಾಗಿದುದರ ಬಗ್ಗೆ ಯಾವುದೇ ದಾಖಲೆಗಳಿಲ್ಲ.

ಲಕ್ಕಣ ದಂಡನಾಯಕನು ತನ್ನ ಎರಡನೇ ದಂಡಯಾತ್ರೆಯನ್ನು ಶ್ರೀಲಂಕಾದ ಮೇಲೆ ಕೈಗೊಂಡಿದುದರ ಬಗ್ಗೆ ಅಬ್ದುಲ್ ರಜಾಕನ ದಾಖಲೆಗಳಿಂದ ತಿಳಿಯುತ್ತದೆ. ಪರ್ಷಿಯಾದ ಪ್ರವಾಸಿಯಾದ ಅಬ್ದುಲ್ ರಜಾಕನು ಕ್ರಿ.ಶ. 1443ರಲ್ಲಿ ಎರಡನೇ ದೇವರಾಯನ ಆಸ್ಥಾನಕ್ಕೆ ಭೇಟಿ ನೀಡಿದನು. ಇವನು ತನ್ನ ದಾಖಲೆಗಳಲ್ಲಿ ಉಲ್ಲೇಖಿಸಿರುವಂತೆ ಲಕ್ಷಣ ದಂಡನಾಯಕನು ಕ್ರಿ.ಶ. 1442ರಲ್ಲಿ ಶ್ರೀಲಂಕಾದ ಮೇಲೆ ಎರಡನೇ ಬಾರಿಗೆ ದಂಡೆಯಾತ್ರೆಯನ್ನು ಕೈಗೊಂಡನೆಂದು ತಿಳಿಸಿದ್ದಾನೆ. ಆದರೆ ಎರಡನೇ ದಂಡಯಾತ್ರೆಗೆ ನಿರ್ದಿಷ್ಟವಾದ ಕಾರಣಗಳು ತಿಳಿದು ಬಂದಿಲ್ಲ. ಪ್ರಾಯಶಃ ವಿಜಯನಗರದ ಸಾರ್ವಭೌಮತೆಯ ವಿರುದ್ಧ ಶ್ರೀಲಂಕಾದ ರಾಜರು ದಂಡೆ ಎದ್ಧಿರಬಹುದು. ಮತ್ತೊಂದು ಕಾರಣ ಕಪ್ಪಕಾಣಿಕೆಯನ್ನು ಸಲ್ಲಿಸಲು ಉದಾಸೀನತೆ ಇರಬಹುದಾಗಿದೆ. ಈ ದಂಡೆಯಾತ್ರೆಯು ಶ್ರೀಲಂಕಾದ ಸೌಮ್ರಾಜ್ಯವಾದ ಜಾಪ್ನಾದ ಮೇಲೆ ನಡೆಸುವುದಾಗಿತ್ತು. ಅಬ್ದುಲ್ ರಜಾಕ್‌ನ ಪ್ರಕಾರ ಜಾಪ್ನಾದ ದೊರೆಯಾದ ಆರನೇ ಪರಾಕ್ರಮ

ಬಾಹು ಮೊದಲ ದಂಡೆಯಾತ್ರೆಯ ಸಂದರ್ಭದಲ್ಲಿ ಲಕ್ಷಣ ದಂಡನಾಯಕನಿಗೆ ಕೊಟ್ಟಿದ ಮಾತನ್ನು ಮುರಿದು ಕಪ್ಪಕಾಣಿಕೆಗಳನ್ನು ಕ್ರಮವಾಗಿ ಸಲ್ಲಿಸುತ್ತಿರಲಿಲ್ಲ. ಈ ಕಾರಣದಿಂದ ಎರಡನೇ ಬಾರಿಗೆ ದಂಡಯಾತ್ರೆ ಮಾಡಬೇಕಾಯಿತೆಂದು ದಾಖಲೆಗಳು ನಮಗೆ ಮಾಹಿತಿ ನೀಡುತ್ತವೆ.[26]

**ಶ್ರೀಕೃಷ್ಣದೇವರಾಯ ಮತ್ತು ಶ್ರೀಲಂಕಾದ ನಡುವಿನ ಸಂಬಂಧ**

ಕ್ರಿ.ಶ. 15ನೇ ಶತಮಾನದ ಮಧ್ಯಭಾಗದಲ್ಲಿ ಶ್ರೀಲಂಕಾ ಮತ್ತು ದಕ್ಷಿಣ ಭಾರತದ ನಡುವೆ ಕಲಹಗಳು ಮತ್ತೆ ಪ್ರಾರಂಭವಾದವು ಈಗಲೂ ವಿಜಯನಗರ ಸಾಮ್ರಾಜ್ಯವೇ ಆಳ್ವಿಕೆಯನ್ನು ನಡೆಸುತ್ತಿದ್ದು ಈ ಸಂದರ್ಭದಲ್ಲಿ ಮುಖ್ಯವಾಗಿ ತಂಜಾವೂರಿನ ಪಾಳೆಗಾರನಾಗಿದ್ದ ಮಾಳವರಾಯ ಮತ್ತು ಶ್ರೀಲಂಕಾದ ರಾಜನಾಗಿದ್ದ ಪರಾಕ್ರಮಬಾಬು ರವರ ನಡುವೆ ಕಲಹ ಏರ್ಪಟಿತು. ಈ ಕಲಹ ಏರ್ಪಡಲು ಪ್ರಮುಖ ಕಾರಣ, ಮಾಳವರಾಯನು ಅಕ್ರಮವಾಗಿ ಶ್ರೀಲಂಕಾದ ದಾಲ್ಫಿನ್ನಿ ತುಂಬಿದ ಹಡಗನ್ನು ಯಾವುದೇ ಕಾರಣವಿಲ್ಲದೇ ವಶಪಡಿಸಿಕೊಂಡನು. ಇದನ್ನು ತಿಳಿದ ಪರಾಕ್ರಮಬಾಬು ತಂಜಾವೂರಿನ ಬಂದರಾದ ಅತಿವೀರರಾಮ ಪಟ್ಟಣಕ್ಕೆ ತನ್ನ ಸೈನ್ಯವನ್ನು ದಂಡಯಾತ್ರೆಯಾಗಿ ಕಳುಹಿಸಿದನು. ಈ ವಿಚಾರವನ್ನು ಶ್ರೀಲಂಕಾದ ಪ್ರಮುಖ ಗ್ರಂಥವಾದ ರಾಜವಳ್ಳಿಯು ತಿಳಿಸುತ್ತದೆ. ಭಾರತದ ಮೇಲೆ ದಂಡೆತ್ತಿಬಂದ ಪರಾಕ್ರಮ ಬಾಬುವಿನ ಸೈನ್ಯವು ಅತಿವೀರರಾಮ ಪಟ್ಟಣದ ಮೇಲೆ ದಾಳಿ ಮಾಡಿ ಸುತ್ತಮುತ್ತಲಿನ ಪ್ರದೇಶಗಳನ್ನು ಲೂಟಿ ಮಾಡಿ ವಾರ್ಷಿಕ ಕಪ್ಪಕಾಣಿಕೆಗಳನ್ನು ಸಲ್ಲಿಸುವಂತೆ ಯಶಸ್ವಿಯಾದ ದಂಡಯಾತ್ರೆಯನ್ನು ಕೈಗೊಂಡಿತ್ತು. ಈ ಸಂದರ್ಭದಲ್ಲಿ ವಿಜಯನಗರ ಸಾಮ್ರಾಜ್ಯವು ಈ ಕಲಹದಲ್ಲಿ ಮಧ್ಯಪ್ರವೇಶಿಸಲಿಲ್ಲವೇಕೆ ಎಂಬುದಕ್ಕೆ ಎಲ್ಲೂ ಕೂಡ ಸ್ಪಷ್ಟ ದಾಖಲೆಗಳು ನಮಗೆ ದೊರಕುವುದಿಲ್ಲ.

ಹಲವಾರು ವಿಜಯನಗರ ಕಾಲದ ಅರಸರು ಶ್ರೀಲಂಕಾವನ್ನು ತಮ್ಮ ನಿಯಂತ್ರಣಕ್ಕೆ ಪಡೆದುಕೊಂಡಿದುದರ ಬಗ್ಗೆ ದಾಖಲೆಗಳಿವೆ. ಕೃಷ್ಣದೇವರಾಯನು (ಕ್ರಿ.ಶ. 1509–1530) ವಿಜಯನಗರ ಸಾಮ್ರಾಜ್ಯದ ಒಬ್ಬ ಪ್ರಸಿದ್ಧ ಸಾಮ್ರಾಟನಾಗಿದ್ದು ಇವನ ಕಾಲದಲ್ಲೂ ಕೂಡ ಶ್ರೀಲಂಕಾದ ಮೇಲೆ ದಂಡೆಯಾತ್ರೆಗಳು ನಡೆದುದರ ಬಗ್ಗೆ ಉಲ್ಲೇಖಗಳಿವೆ. ಕ್ರಿ.ಶ. 1528ರ ಕೃಷ್ಣದೇವರಾಯನ ಪೆರನ್ ಮಲ್ಯೆಯ್ ಶಾಸನವು ಶ್ರೀಲಂಕಾದ ಮೇಲೆ ದಂಡಯಾತ್ರೆಗಳು ನಡೆದುದರ ಬಗ್ಗೆ ಮಾಹಿತಿ ನೀಡುತ್ತದೆ.[27] ಕೃಷ್ಣದೇವರಾಯನ ನಂತರ ಅಧಿಕಾರಕ್ಕೆ ಬಂದ ಅಚ್ಯುತರಾಯನು (ಕ್ರಿ.ಶ. 1530–1542) ಶ್ರೀಲಂಕಾದ ಮೇಲೆ ದಂಡಯಾತ್ರೆ ಮಾಡಿಸಿದುದರ ಬಗ್ಗೆ ಉಲ್ಲೇಖಗಳಿವೆ. ಕ್ರಿ.ಶ. 1539ರ ಅಚ್ಯುತರಾಯನ ರಾಜಗೋಪಾಲ ಪೆರುಮಾಲ್ ದೇವಸ್ಥಾನ ತಂಜಾವೂರ್‌ನಲ್ಲಿ ದೋರೆತಿರುವ ಶಾಸನವು ಅಚ್ಯುತರಾಯನು ಶ್ರೀಲಂಕಾವನ್ನು ವಶಪಡಿಸಿಕೊಂಡ

ಬಗ್ಗೆ ಮಾಹಿತಿ ನೀಡುತ್ತದೆ. ಕೃಷ್ಣದೇವರಾಯ ಮತ್ತು ಅಚ್ಯುತರಾಯರು ಸ್ವತಃ ತಾವೇ ಶ್ರೀಲಂಕಾದ ಮೇಲೆ ದಾಳಿ ಮಾಡಿದರೂ ಅಥವಾ ಸೈನ್ಯವನ್ನು ಕಳುಹಿಸಿದರೂ ಎಂಬುದಕ್ಕೆ ಸ್ಪಷ್ಟ ದಾಖಲೆಗಳಿಲ್ಲ. ಆದರೆ ಶ್ರೀಲಂಕಾದ ರಾಜರು ಮಾತ್ರ ಕ್ರಮವಾಗಿ ವಿಜಯನಗರದ ಅರಸರಿಗೆ ಕಪ್ಪಕಾಣಿಕೆಗಳನ್ನು ಸಲ್ಲಿಸುತ್ತಿದ್ದರು. ಸದಾಶಿವರಾಯ (ಕ್ರಿ.ಶ. 1542–1565)ನ ಕಾಲದಲ್ಲಿ ಸಂಪೂರ್ಣವಾಗಿ ಇಡೀ ಶ್ರೀಲಂಕಾವನ್ನು ವಶಪಡಿಸಿಕೊಂಡ ಬಗ್ಗೆ ಇವನು ತನ್ನ ಶಾಸನಗಳಲ್ಲಿ ಬರೆದುಕೊಂಡಿದ್ದಾನೆ.

**ಒಂದನೇ ಕೃಷ್ಣಪ್ಪನಾಯಕ ಮತ್ತು ಶ್ರೀಲಂಕಾದ ನಡುವಿನ ಸಂಬಂಧ**

ಶ್ರೀ ಕೃಷ್ಣದೇವರಾಯನ ಮರಣದ ನಂತರ ಹಲವಾರು ನಾಯಕ ಮನೆತನಗಳು ಸ್ಥಾಪನೆಯಾದವು ಅವುಗಳಲ್ಲಿ ಮುಖ್ಯವಾದುದು ಮಧುರೈ ನಾಯಕರು, ವಿಶ್ವನಾಥ ನಾಯಕ ಈ ಮಧುರೈ ಸಂತತಿಯನ್ನು ಸ್ಥಾಪಿಸಿದನು. ಇವನ ಮಗನಾದ ಒಂದನೇ ಕೃಷ್ಣಪ್ಪನಾಯಕನು (1564–1572) ಸಿಲೋನಿನ ಮೇಲೆ ದಾಳಿ ಮಾಡಿದನು. ಸಿಲೋನಿನ ಪ್ರಮುಖ ಸಾಮ್ರಾಜ್ಯವಾದ ಕ್ಯಾಂಡೆಯ ಮೇಲೆ ದಾಳಿ ಮಾಡಿ ವಶಪಡಿಸಿಕೊಳ್ಳುವುದು ಅವನ ಉದ್ದೇಶವಾಗಿತ್ತು. ಕ್ಯಾಂಡೆ ಶ್ರೀಲಂಕಾದ ಮಧ್ಯ ಪ್ರಾಂತ್ಯದಲ್ಲಿ ಕಂಡು ಬರುವ ಒಂದು ಸಾಮ್ರಾಜ್ಯವಾಗಿತ್ತು. ಈ ದಂಡೆಯಾತ್ರೆಗೆ ಸಂಬಂಧಿಸಿದಂತೆ ಪ್ರಮುಖ ತೆಲುಗು ಭಾಷೆಯ ಗ್ರಂಥವಾದ ಸಿಂಹಳದೇವಿಯ ಕಥಾವು ಮಾಹಿತಿ ನೀಡುತ್ತದೆ. ಈ ಗ್ರಂಥದ ಪ್ರಕಾರ ಕ್ಯಾಂಡೆಯ ರಾಜನು ಕೃಷ್ಣಪ್ಪನಾಯಕನಿಗೆ ಹೀನಾಯವಾಗಿ ಮಾತನಾಡಿ ಅವನ ಆಕ್ರೋಶಕ್ಕೆ ಕಾರಣನಾದನು. ಹಾಗೆಯೇ ಕ್ಯಾಂಡೆಯ ರಾಜನು ಕೃಷ್ಣಪ್ಪನಾಯಕನ ಶತ್ರುವಾದ ತುಂಬಿಚಿ ನಾಯಕನ ಮಿತ್ರನಾಗಿದನು. ಈ ತುಂಬಿಚಿ ನಾಯಕನು ಕೃಷ್ಣಪ್ಪನಾಯಕನ ವಿರುದ್ಧ ದಂಗೆ ಎದ್ದಿದನು. ಈ ದಂಗೆಗೆ ಕ್ಯಾಂಡೆಯ ರಾಜನ ಸಹಾಯವು ಕೂಡ ಇದ್ದಿತ್ತು. ಈ ಕಾರಣದಿಂದಾಗಿ ಕೃಷ್ಣಪ್ಪನಾಯಕ ಶ್ರೀಲಂಕಾದ ವಿರುದ್ಧ ದಂಡೆಯಾತ್ರೆ ಕೈಗೊಂಡನು.[28]

ಕೃಷ್ಣಪ್ಪನಾಯಕನು ಪಾಳೇಗಾರರನ್ನು ಒಟ್ಟುಗೂಡಿಸಿ ಅವರ ಸಹಾಯದಿಂದ ಶ್ರೀಲಂಕಾದ ಮೇಲೆ ದಾಳಿ ಮಾಡಿದನು. ದಾಳಿ ಮಾಡಿದ ನಂತರ ಕ್ಯಾಂಡೆಯ ರಾಜನು ಸತ್ಕಾರ ಮಾಡುವಂತೆ ಸಂದೇಶವನ್ನು ಕಳುಹಿಸಿದನು. ಕ್ಯಾಂಡೆ ರಾಜನು ಈ ದಾಳಿಯನ್ನು ನಿರೀಕ್ಷಿಸಿರಲಿಲ್ಲವಾದರಿಂದ ಇವನು ಯಾವುದೇ ಪೂರ್ವ ಸಿದ್ಧತೆಗಳನ್ನು ಮಾಡಿಕೊಂಡಿರಲಿಲ್ಲವಾದರೂ ಇಬ್ಬರ ನಡುವೆ ಯುದ್ಧ ಸಂಭವಿಸಿತು. ಇದರಲ್ಲಿ ಕ್ಯಾಂಡೆರಾಜನು ಸೋಲನ್ನು ಅನುಭವಿಸಬೇಕಾಯಿತು. ಸೋತರು ಸಹ ಕ್ಯಾಂಡೆ ರಾಜನು ಯುದ್ದವನ್ನು ಮುಂದುವರಿಸಿದನು. ಕೃಷ್ಣಪ್ಪನಾಯಕನು ಕ್ಯಾಂಡೆ

ರಾಜನನ್ನು ಜೀವಂತವಾಗಿ ಹಿಡಿಯಲು ಪ್ರಯತ್ನಿಸಿದನು. ಆದರೆ ಅವನು ಯುದ್ಧ ಮಾಡುತ್ತಿದ್ದಾಗಲೇ ಮರಣಹೊಂದಿದ್ದನು. ನಂತರ ಒಂದನೇ ಕೃಷ್ಣಪ್ಪನಾಯಕನು ಅಭೂತಪೂರ್ವವಾದ ವಿಷಯವನ್ನು ಸಾಧಿಸಿದ ಮೇಲೆ ಆ ಪ್ರಾಂತ್ಯದ ಆಡಳಿತಕ್ಕೋಸ್ಕರ ಅವನ ಬಾಮೈದನಾದ ವಿಜಯಗೋಪಾಲ ನಾಯಕನನ್ನು ರಾಜ್ಯಪಾಲನಾಗಿ ನೇಮಿಸಿದನು, ಮತ್ತು ಕ್ರಮವಾಗಿ ಕಪ್ಪಕಾಣಿಕೆಗಳನ್ನು ಸಲ್ಲಿಸುವಂತೆ ಆಜ್ಞೆ ಹೊರಡಿಸಿ ಮಧುರೈಗೆ ವಾಪಸ್ಸಾದನು.

ಒಂದನೇ ಕೃಷ್ಣಪ್ಪನಾಯಕನ ವಿಜಯದ ಮಾಹಿತಿಯು ಒಂದು ಕಡೆಯ ದಾಖಲೆಗಳಾಗಿದ್ದು ಈ ಇತಿಹಾಸ ಒಂದನೇ ಕೃಷ್ಣಪ್ಪನಾಯಕನ ಆಸ್ಥಾನಿಕನಿಂದ ಬರೆಯಲ್ಪಟ್ಟಿದೆ. ಆದರೆ ಶ್ರೀಲಂಕಾದ ದಾಖಲೆಗಳು ಇದನ್ನು ಸ್ಪಷ್ಟಪಡಿಸುವುದಿಲ್ಲ. ಶ್ರೀಲಂಕಾದ ಅರಸರು ಭಾರತದ ರಾಜರಿಗೆ ಕಪ್ಪಕಾಣಿಕೆಗಳನ್ನು ಸಲ್ಲಿಸುತ್ತಿದ್ದುದು ಸತ್ಯವೇ ಆದರೆ ಈ ಯುದ್ಧದ ಕುರಿತು ಮಾಹಿತಿಗಳು ನಮಗೆ ಅಸ್ಪಷ್ಟಾಗಿವೆ.

**ವಿಜಯನಗರ ಕಾಲದ ಪ್ರಮುಖ ಸಿಲೋನಿನ ನೌಕಾ ಯುದ್ಧಗಳು**

ನೌಕಾಪಡೆಯು ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ಅಸ್ತಿತ್ವದಲ್ಲಿದ್ದುದು ಪುರಾತತ್ವ ಹಾಗೂ ಸಾಹಿತ್ಯ ಆಕರಗಳಿಂದ ವ್ಯಕ್ತಗೊಳ್ಳುತ್ತದೆ. ವಿಜಯನಗರ ಸಾಮ್ರಾಜ್ಯದಲ್ಲಿ ರಚಿಸಿರುವ ಹಲವಾರು ವೀರಗಲ್ಲುಗಳು ದೋಣಿಯ ಚಿತ್ರಗಳನ್ನು ಹೊಂದಿವೆ. ಇದಕ್ಕೆ ಸಂಬಂಧಿಸಿದಂತೆ ಕರ್ನಾಟಕ ವಿಶ್ವವಿದ್ಯಾನಿಲಯದ ಕನ್ನಡ ಸಂಶೋಧನಾ ಸಂಸ್ಥೆಯಲ್ಲಿ ಇರುವ ಒಂದು ವೀರಗಲ್ಲು ಇದ್ದು ಇದರಲ್ಲಿ ಸೈನಿಕ ನೋರ್ವನು ನೌಕಯುದ್ಧದಲ್ಲಿ ಹೋರಾಡಿ ಮಡಿದ ವಿವರವಿದೆ ಹಾಗೂ ದೋಣಿ, ಉಬ್ಬುಗಳ, ಚಿತ್ರಣವೂ ಇದರಲ್ಲಿ ಸ್ಪಷ್ಟವಾಗಿದೆ. ಕರ್ನಾಟಕದ ಅರಸರು ಸಮುದ್ರದಾಚೆಯ ಪ್ರದೇಶಗಳ ಮೇಲೆ ಗಮಗಹರಿಸಿದುದು ದೃಢಪಡಿಸುತ್ತದೆ. ವಿಜಯನಗರ ಕಾಲದಲ್ಲೂ ನೌಕಪಡೆಗೆ ಸಂಬಂದಿಸಿದ ಕೆಲವೊಂದು ದಾಖಲೆಗಳು ನಮಗೆ ಮಾಹಿತಿ ನೀಡುತ್ತವೆ. ಶಾಸನಗಳು, ದೇಶೀಯ ಸಾಹಿತ್ಯ ಮತ್ತು ಪ್ರವಾಸಿಗರ ವರದಿಗಳಿಂದ ನೌಕಾಯುದ್ಧದ ಬಗ್ಗೆ ಕೆಲವೊಂದು ಮಾಹಿತಿಗಳು ದೊರಕುತ್ತವೆ ಅವುಗಳ ವಿವರಣೆಯನ್ನು ಈ ಕೆಳಕಂಡಂತೆ ನೋಡೋಣ.

ಅಬ್ದುಲ್ ರಜಾಕ್ ತನ್ನ ದಾಖಲೆಗಳಲ್ಲಿ ವಿಜಯನಗರದ ವಿಸ್ತಾರವನ್ನು ಕುರಿತು "ಸಿಂಹಳದ ಗಡಿಯಿಂದ ಗುಲ್ಬರ್ಗಾದ ಕೊಟ್ಟ ಕೊನೆಯವರೆಗೆ ಸಾವಿರ ಪರಸಾಂಗುಗಳಷ್ಟು ವಿಸ್ತರಿಸಿದೆ" ಎಂದು ವಿವರಿಸಿದ್ದಾನೆ, ಈ ದೇಶದಲ್ಲಿ ಮುನ್ನೂರು ಬಂದರುಗಳಿವೆ ಎನ್ನುತ್ತಾನೆ. ಈ

ಅಂಶಗಳು ವಿಜಯನಗರವು ಸಮುದ್ರ ವ್ಯಾಪಾರದಲ್ಲಿ ಸಾಧಿಸಿದ ಹಿಡಿತವನ್ನು ಸಮರ್ಥಿಸುತ್ತವೆ. ವಿಜಯನಗರ ಕಾಲದ ನೌಕಾಪಡೆಯು ಶ್ರೀಲಂಕಾದ ಮೇಲೆ ವೀರ ಕಪಣರಾಯನ ನೇತೃತ್ವದಲ್ಲಿ ದಂಡೆತ್ತಿ ಹೋದುದಾಗಿ ನೀಲಕಂಠಶಾಸ್ತ್ರೀಯವರು ಹೇಳುತ್ತಾರೆ. ಕ್ರಿ.ಶ. 1378ರಲ್ಲಿ ವಿಜಯನಗರವನ್ನು ಪೆರಿಸ್ತಾ ವರ್ಣಿಸುತ್ತಾ "ಮಲಬಾರ್ ಸಿಲೋನ್ ಮತ್ತು ಇತರ ದ್ವೀಪಗಳ ರಾಜರು ಒಂದನೇ ಬುಕ್ಕನ ದರ್ಬಾರಿನಲ್ಲಿ ರಾಯಭಾರಿಗಳನ್ನು ಇಟ್ಟಿದ್ದರು ಮತ್ತು ಪ್ರತಿವರ್ಷ ಕಾಣಿಕೆ ಸಲ್ಲಿಸುತ್ತಿದ್ದರು ಎಂದು ವರ್ಣಿಸಿದ್ದಾರೆ.[29]

ವಿಜಯನಗರ ಆರಂಭದ ಅರಸರಲ್ಲಿ ಹರಿಹರನು ಪೂರ್ವಪಶ್ಚಿಮ ಸಮುದ್ರಾಧಿಪತಿ ಯೆಂದು ಬುಕ್ಕರಾಯನು ಚತುಸಮುದ್ರಾಧಿಪತಿ ಎಂದು ಕರೆದು ಕೊಂಡಿದ್ದಾರೆ. ಒಂದನೇಯ ದೇವರಾಯನು 'ಪೂರ್ವಪಶ್ಚಿಮ ದಕ್ಷಿಣೋತ್ತರ ಚತುರ್ಮುದ್ರಾದಿಪತಿ' ಎಂಬ ಬಿರುದ್ದನ್ನು ಧರಿಸಿದ್ದದು ಶಾಸನದಿಂದ ತಿಳಿದುಬರುವುದು ಈ ಬಿರುದುಗಳು ವಿಜಯನಗರ ಆರಂಭದ ಅರಸರು ಸಮುದ್ರದ ಮೇಲೆ ಸಾಧಿಸಿದ ಹಿಡಿತ ಸಂಕೇತಗಳೇನೋ ನಿಜ. ಆದರೆ ಅವುಗಳನ್ನು ಯಾರೊಂದಿಗೆ ಮತ್ತು ಯಾವಾಗ ಯುದ್ಧ ಕೈಗೊಂಡರೆಂಬ ವಿವರ ತಿಳಿದು ಬರುತ್ತಿಲ್ಲ. ಲಕ್ಕಣ್ಣ ದಂಡೇಶನು ಶ್ರೀಲಂಕಾದ ಮೇಲೆ ದಂಡಯಾತ್ರೆ ಕೈಗೊಂಡ ವಿವರವನ್ನು ಈ ಮೇಲಿನ ಶಾಸನಗಳು ಸ್ಪಷ್ಟವಾಗಿ ನಮೂದಿಸುವುದಲ್ಲದೆ ಕಾಲವನ್ನು ಕ್ರಿ.ಶ. 1435 ಎಂದು ಹೇಳುತ್ತವೆ. ಆದರೆ ಸಿ. ಹಯವದನರಾವ್‌ರು ಶ್ರೀಲಂಕಾ ದಂಡೆಯಾತ್ರೆಯು ಕ್ರಿ..ಶ. 1442ರ ನವೆಂಬರ್ ಮತ್ತು 1443ರ ಏಪ್ರಿಲ್ ತಿಂಗಳ ನಡುವೆ ನಡೆಯುತ್ತೆನ್ನುವರು. ಆದರೆ ಇವನ ಅಭಿಪ್ರಾಯವು ಶಾಸನಗಳ ಹಿನ್ನೆಲೆಯಲ್ಲಿ ಲಕ್ಕಣ ದಂಡೇಶನು ಕೈಗೊಂಡ  ಎರಡನೆಯ ದಂಡಯಾತ್ರೆಯಿರ ಬಹುದೇನೋ ನ್ಯೂನಿಚ್ ಎರಡನೆಯ ದೇವರಾಯನಿಗೆ ಕೈಲಾನ್, ಸಿಲೋನ್, ಪುಲಿಕಾಟ್, ಪೆಗು, ತನಸರಿ ಮತ್ತು ಇತರ ರಾಜರುಗಳು ಕಪ್ಪಕಾಣಿಕೆಗಳನ್ನು ಕೊಡುತ್ತಿದ್ದರು ಎಂದು ಹೇಳಿದ್ದಾನೆ. ಇದು ವಿಜಯನಗರ ಅರಸರು ಶ್ರೀಲಂಕಾವನ್ನಲ್ಲದೆ ಸಮುದ್ರದಾಚೆಯ ಹಲವು ದ್ವೀಪಗಳನ್ನು ನೌಕಾಪಡೆಯ ಮೂಲಕ ಯಶಸ್ಸು ಸಾಧಿಸಿದ್ದುದರ ಸಮರ್ಥನೆಯಾಗಿದೆ.

ಎರಡನೆಯ ದೇವರಾಯನ ನಂತರ ಸಿಗುವ ಆಕರ ವಾರ್ಥಮಾನ ವರದಿ. ಇವನು ಕ್ರಿ.ಶ. 1503 ರಿಂದ 1508ರಿಂದ ಅವಧಿಯ ವಿಜಯನಗರವನ್ನು ಕುರಿತು ಹೇಳುವಾಗ ಈ ಸಾಮ್ರಾಜ್ಯವು ಶ್ರೀಲಂಕಾದವರೆಗೂ ವಿಸ್ತರಿಸಿತ್ತು ಎನ್ನುತ್ತಾನೆ. ಇದರಿಂದ ಎರಡನೆಯ ಆಳ್ವಿಕೆಯಲ್ಲಿ ಶ್ರೀಲಂಕಾವು ಅಧೀನದಲ್ಲಿದ್ದ ಕಾರಣ ಕಪ್ಪ ಕಾಣಿಕೆಗಳನ್ನು ನೀಡುವುದನ್ನು ಶ್ರೀಲಂಕಾದ ರಾಜರು ಮುಂದುವರಿಸಿದ್ದುದನ್ನು ಕಾಣಬಹುದು, ಇದು ಕ್ರಿಶ. 1522 ರವರೆಗೂ ಮುಂದುವರೆಯಿ

ತೆನ್ನಬಹುದು. ಕ್ರಿ.ಶ. 1522 ರಲ್ಲಿ ಕೃಷ್ಣದೇವರಾಯನು ಶ್ರೀಲಂಕಾದಲ್ಲಾದ ಗಲಭೆಯನ್ನು ಹತ್ತಿಕ್ಕಿದ್ದುದು ಪಿರಾನ್ ಮಲ್ಯೆ ಶಾಸನದಿಂದ ತಿಳಿದು ಬರುತ್ತದೆ. ಕೊಪ್ಪಳ ತಾಲ್ಲೋಕಿನ ಕಿಡಿದಾಳು ಗ್ರಾಮದ ಶಾಸನದಲ್ಲಿ ಕೃಷ್ಣದೇವರಾಯ ಅಂಗ, ವಂಗ, ಕಳಿಂಗ, ಗೂರ್ಜರ, ಮಗಧ, ಲಾಟ, ಕರ್ನಾಟ, ಗೌಳ, ಮಾಳವ, ರೇವಣ, ಕೊಂಕಣ, ಬಡಗಣ, ಮೂಢಣ, ಪಾಂಚಾಳ ಕೇರಳ, ಹಮ್ಮೀರ ಮತ್ತು ಸಿಂಹಳವನ್ನು ಗೆದ್ದುದಾಗಿಯೂ ಹೇಳಲಾಗಿದೆ. ಶಾಸನದಲ್ಲಿ ಸಿಂಹಳವನ್ನು ಸಿಂಹಲಾಳ ಎಂದು ಕರೆದಿದೆ.[30]

ಕೃಷ್ಣದೇವರಾಯನ ಕಾಲದಲ್ಲಿ ಇಬ್ಬರು ನಾವಿಕ ಮುಖಂಡರಿದ್ದುದನ್ನು ಬಾರ್ಬೋಸಾ ಹೇಳುತ್ತಾನೆ. ಕೃಷ್ಣದೇವರಾಯನ ಆಶ್ರಯದಲ್ಲಿ ಇಬ್ಬರು ಕಡಲುಗಳ್ಳ ನಾಯಕರಿದ್ದರು. ಒಬ್ಬರ ಹೆಸರು ತಿಮ್ಮೋಜ ಮತ್ತೊಬ್ಬನ ಹೆಸರು ರಾವ್‌ಜಿ ಅಥವಾ ಮಾಧವರಾವ್ ಪ್ರತಿಯೊಬ್ಬರ ಬಳಿಯಲ್ಲಿ ಸುಸಜ್ಜಿತವಾದ ಐದಾರು ಹಡಗುಗಳಿರುತ್ತಿದ್ದವು. ಇವರು ಸಮುದ್ರದ ಮೇಲೆ ಹೂಗಿ ಮಲಬಾರ್ ಹಡಗುಗಳನ್ನು ಬಿಟ್ಟು ಉಳಿದೆಲ್ಲ ಹಡಗುಗಳನ್ನು ಕೊಳ್ಳ ಹೊಡೆಯುತ್ತಿದ್ದರು. ಇವರಿಬ್ಬರು ತಿಮ್ಮೋಜ ಮತ್ತು ರಾವ್ ಜಿ ಕಡಲುಗಳ್ಳರ ನಾಯಕರೆಂದೂ ಹೇಳಿದ್ದಾರೆ. ಇಲ್ಲಿ ವ್ಯಕ್ತಗೊಳ್ಳುವ ಸುಸಜ್ಜಿತ ಹಡಗು ಪಡೆಗಳಿದ್ದುದನ್ನು ಗಮನಿಸಬೇಕು. ಇದು ವಿಜಯನಗರ ಕಾಲದಲ್ಲಿ ಸಮುದ್ರದಾಚೆಯ ಪ್ರದೇಶಗಳನ್ನು ವಶಪಡಿಸಿಕೊಳ್ಳಲು ಬೇಕಾದ ಸೇನೆಯನ್ನು ಕೊಂಡೊಯ್ಯಲು ಸಾಕಷ್ಟು ಹಡಗುಗಳನ್ನು ಬಳಸಿಕೊಂಡಿದ್ದರೆಂದು ಹೇಳಬಹುದು.[31]

ಅಚ್ಯುತರಾಯ ಮತ್ತು ಸದಾಶಿವರಾಯರ ಕಾಲದಲ್ಲೂ ವಿಜಯನಗರದ ಸೇನೆ ಶ್ರೀಲಂಕಾದ ಮೇಲೆ ದಂಡೆತ್ತಿ ಹೋಗಿದ್ದದು ತಿಳಿದು ಬರುತ್ತದೆ. ಕ್ರಿ.ಶ. 1539ರಲ್ಲಿ ಅಚ್ಯುತ ರಾಯರು ಶ್ರೀಲಂಕಾದ ಮೇಲೆ ಜಯ ಸಾಧಿಸಿದುದಾಗಿ ತಂಜಾವೂರಿನ ರಾಜಗೋಪಾಲ ಪೆರುಮಾಳ್ ದೇವಾಲಯದ ಶಾಸನವು ಹೇಳುತ್ತದೆ. ಒಟ್ಟಿನಲ್ಲಿ ಪ್ರಾರಂಭದಿಂದ ಕೊನೆಯ ಹಂತದವರೆಗೂ ವಿಜಯನಗರ ಅರಸರು ಹಡಗುಗಳ ಮೂಲಕ ಸೈನ್ಯವನ್ನು ಕೊಂಡೊಯ್ದು ನೌಕಾಯುದ್ಧಗಳನ್ನು ಕೈಗೊಂಡಿದುದು ಮತ್ತು ಅವುಗಳ ಮೂಲಕ ಜಯವನ್ನು ಸಾಧಿಸಿದ್ದು ಕೂಡ ಹಲವಾರು ಶಾಸನಗಳು ಸ್ಪಷ್ಟಗೊಳಿಸುವ ಮೂಲಕ ವಿಜಯನಗರ ಸಾಮ್ರಾಜ್ಯದ ಒಡೆತನದ ಮೇಲಿನ ಸಂಪೂರ್ಣ ಸಾರ್ವಭೌಮವನ್ನು ಕುರಿತು ಹಲವಾರು ಶಾಸನಗಳು ನಮಗೆ ಸ್ಪಷ್ಟವಾದ ಮಾಹಿತಿಯನ್ನು ನೀಡುತ್ತವೆ.

**ವಿಜಯನಗರ ಸಾಮ್ರಾಜ್ಯ ಮತ್ತು ಶ್ರೀಲಂಕಾದ ನಡುವಿನ ಆಮದು ಮತ್ತು ರಫ್ತು ಪ್ರಕ್ರಿಯೆಗಳು**

ವಿಜಯನಗರ ಆಡಳಿತದ ಅವಧಿಯಲ್ಲಿ ಶ್ರೀಲಂಕಾದೊಂದಿಗೆ ಉತ್ತಮವಾದ ವ್ಯಾಪಾರ ಸಂಪರ್ಕವನ್ನು ಬೆಳೆಸಿಕೊಂಡಿತ್ತು. ಆಮದು ಮತ್ತು ರಫ್ತು ಪ್ರಕ್ರಿಯೆಗಳು ಎರಡು ರಾಷ್ಟ್ರಗಳ ನಡುವೆ ಸಮರ್ಪಕವಾಗಿ ಆಯೋಜನೆಗೊಂಡಿದ್ದವು. ಪ್ರಮುಖವಾಗಿ ಶ್ರೀಲಂಕಾವು ಭಾರತದ ದಕ್ಷಿಣ ಭಾಗದ ದ್ವೀಪ ರಾಷ್ಟ್ರವಾಗಿದ್ದು ಭಾರತದೊಂದಿಗೆ ನಿಕಟ ಸಂಪರ್ಕವನ್ನು ಹೊಂದಿತ್ತು. ಎರಡು ರಾಷ್ಟ್ರಗಳು ತಮಗೆ ಅವಶ್ಯಕವಾಗಿದ್ದ ಸರಕುಗಳನ್ನು ಪರಸ್ಪರ ಆಮದು ಮತ್ತು ರಫ್ತಿನ ಮೂಲಕ ವಿನಿಮಯ ಮಾಡಿಕೊಂಡು ತಮ್ಮ ಅಗತ್ಯತೆಗಳನ್ನು ಪೂರೈಸಿಕೊಳ್ಳುತ್ತಿದ್ದವು.

**ಆಮದು**

ವಿಜಯನಗರ ಮತ್ತು ಶ್ರೀಲಂಕಾದ ನಡುವೆ ವ್ಯಾಪಾರದಲ್ಲಿ ವಿಜಯನಗರ ಸಾಮ್ರಾಜ್ಯವು ಶ್ರೀಲಂಕಾದಿಂದ ಹಲವಾರು ವಸ್ತುಗಳನ್ನು ಆಮದುಮಾಡಿಕೊಳ್ಳುತ್ತಿತ್ತು. ವಿಜಯನಗರ ಕಾಲದಲ್ಲಿ ಶ್ರೀಲಂಕಾದಿಂದ ಆಮದಾಗುತ್ತಿದ್ದ ಪ್ರಮುಖ ಸರಕುಗಳನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿತ್ತು. ಅವುಗಳೆಂದರೆ, 1. ಸರ್ಕಾರದ ಅವಶ್ಯಕ ಸರಕುಗಳು 2. ಕಚ್ಚಾವಸ್ತುಗಳು 3. ಐಷರಾಮಿ ವಸ್ತುಗಳು. ಇವುಗಳ ವಿವರಣೆಯನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

1. **ಸರ್ಕಾರದ ಅವಶ್ಯಕ ವಸ್ತುಗಳು:**

ವಿಜಯಗರ ಸಾಮಾಜ್ಯದಲ್ಲಿ ಸರ್ಕಾರಕ್ಕೆ ಅವಶ್ಯಕವಾಗಿದ್ದ ವಸ್ತುಗಳೆಂದರೆ ಪ್ರಮುಖವಾಗಿ ಆನೆಗಳು ಮತ್ತು ಕುದುರೆಗಳು, ವಿಜಯನಗರ ಸಾಮ್ರಾಜ್ಯದ ಸೈನಿಕ ಬಲವನ್ನು ಉತ್ತಮಪಡಿಸಿಕೊಳ್ಳುವ ಉದ್ದೇಶದಿಂದ ಕುದುರೆಗಳು ಮತ್ತು ಆನೆಗಳನ್ನು ವಿದೇಶಗಳಿಂದ ಆಮದು ಮಾಡಿಕೊಳ್ಳುತ್ತಿತ್ತು. ಕುದುರೆಗಳನ್ನು ಅರೇಬಿಯಾ ಮತ್ತು ಪರ್ಷಿಯಾದಿಂದ ಆಮದು ಮಾಡಿಕೊಳ್ಳುತ್ತಿತ್ತು. ಶ್ರೀಲಂಕಾದ ರಾಜನು ಆನೆಗಳ ವ್ಯಾಪಾರದ ಏಕಸ್ವಾಮ್ಯವನ್ನು ಹೊಂದಿದ್ದನು. ಶ್ರೀಲಂಕಾದ ವ್ಯಾಪಾರಿಗಳು ನೇರವಾಗಿ ಮಲಬಾರ್ ಮತ್ತು ಕೋರಮಂಡಲ ಬಂದರುಗಳಿಗೆ ಆನೆಗಳನ್ನು ತಂದು ಮಾರಾಟ ಮಾಡುತ್ತಿದ್ದರು. ಇಲ್ಲಿನ ಸ್ಥಳೀಯ ವ್ಯಾಪಾರಿಗಳು ಕೊಂಡು ಕೊಂಡು ಅವುಗಳನ್ನು ಸಾಮ್ರಾಜ್ಯದ ರಾಜರಿಗೆ ಮಾರಾಟ ಮಾಡುತ್ತಿದ್ದರು. ಇಲಿಯಟ್‌ನ ಪ್ರಕಾರ ಉತ್ತಮ ತರಬೇತಿ ಹೊಂದಿದ್ದ ಆನೆಗಳು ಅತಿ ಹೆಚ್ಚು ಹಣಕ್ಕೆ ಮಾರಾಟವಾಗುತ್ತಿದ್ದವು. ಅಬ್ದುಲ್ ರಜಾಕ್‌ನ ಪ್ರಕಾರ ಎರಡನೇ ದೇವರಾಯನ ಸಾವಿರಾರು ಕುದುರೆಗಳನ್ನು ಆಮದು ಮಾಡಿಕೊಳ್ಳುತ್ತಿದ್ದನು. ಪಯಾಸ್‌ನ ಪ್ರಕಾರ ಕೃಷ್ಣದೇವರಾಯನು ಒಂದೇ ಬಾರಿ ಎಂಟುನೂರು

ಆನೆಗಳನ್ನು ಆಮದು ಮಾಡಿಕೊಳ್ಳುತ್ತಿದ್ದೆನೆಂದು ಹೇಳಿದ್ದಾನೆ. ಆನೆಗಳು ಉತ್ತರ ಭಾರತದಲ್ಲಿ ಯಥೇಚ್ಛವಾಗಿ ದೊರಕುತ್ತಿದ್ದರು ಸಹ ಶ್ರೀಲಂಕಾದ ಆನೆಗಳಿಗೆ ವಿಜಯನಗರ ಸಾಮ್ರಾಜ್ಯದಲ್ಲಿ ಬೇಡಿಕೆ ಇದ್ದುದರ ಬಗ್ಗೆ ಗೊಂದಲ ಉಂಟಾಗುತ್ತದೆ. ಇದಕ್ಕೆ ಪ್ರಮುಖವಾಗಿ ಎರಡು ಕಾರಣಗಳಿದ್ದವು. ಶ್ರೀಲಂಕಾದ ಆನೆಗಳು ಸಂತಾನೋತ್ಪತ್ತಿಗೆ ಉತ್ತಮವಾಗಿದ್ದವು. ಎರಡನೇ ಕಾರಣ ಉತ್ತರಭಾಗದಲ್ಲಿ ಆಳ್ವಿಕೆ ಮಾಡುತ್ತಿದ್ದ ಬಹುಮನಿ ಸುಲ್ತಾನರು ಉತ್ತರ ಭಾರತದ ಆನೆಗಳನ್ನು ವಿಜಯನಗರ ಸಾಮ್ರಾಜ್ಯಕ್ಕೆ ತರವುದನ್ನು ತಡೆದಿದ್ದಿರಬಹುದಾಗಿದೆ. ಅಬ್ದುಲ್ ರಜಾಕ್‌ನ ಪ್ರಕಾರ ವಿಜಯನಗರದಲ್ಲಿ ಆನೆಗಳ ಸಂತಾನೋತ್ಪತ್ತಿ ಪ್ರಕ್ರಿಯೆ ನಡೆಯಿತ್ತೆಂದು ತಿಳಿಸಿದ್ದಾನೆ.[32]

**ಕಚ್ಚಾವಸ್ತುಗಳು:**

ವಿಜಯನಗರ ಸಾಮ್ರಾಜ್ಯಕ್ಕೆ ಭೇಟಿ ನೀಡಿದ ಬಾರ್ಬೋಸನು ತನ್ನ ದಾಖಲೆಗಳಲ್ಲಿ ವಿವರಿಸಿರುವಂತೆ ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಶ್ರೀಲಂಕಾದಿಂದ ಮುಖ್ಯವಾಗಿ ಕೆಲವು ಕಚ್ಚಾ ಪದಾರ್ಥಗಳು ಮತ್ತು ಸಿದ್ಧಪಡಿಸಿದ ವಸ್ತುಗಳು ಅಮದಾಗುತ್ತಿದ್ದ ಬಗ್ಗೆ ಉಲ್ಲೇಖಿಸಿದ್ದಾನೆ. ಲವಂಗ, ಏಲಕ್ಕಿ, ಮತ್ತು ದಾಲ್ಚಿನ್ನಿ ಕಚ್ಚಾವಸ್ತುಗಳು ಮುಖ್ಯವಾಗಿ ಆಮದಾಗುತ್ತಿದ್ದವು. ಇವು ಸ್ಥಳೀಯ ಪದಾರ್ಥಗಳಿಗೆ ಹೋಲಿಸಿದರೆ ಹೆಚ್ಚು ಗುಣಮಟ್ಟವುಳ್ಳವಾಗಿದ್ದವು.

**ಐಷರಾಮಿ ವಸ್ತುಗಳು:**

ವಿಜಯನಗರ ಸಾಮ್ರಾಜ್ಯದಲ್ಲಿ ಐಷರಾಮಿ ವಸ್ತುಗಳ ಬೇಡಿಕೆ ಅಧಿಕವಾಗಿತ್ತು. ಶ್ರೀಲಂಕಾದ ಅಮೂಲ್ಯವಾದ ಮುತ್ತು ರತ್ನಗಳಿಗೆ ಇಡೀ ವಿಜಯನಗರ ಸಾಮ್ರಾಜ್ಯದಾದ್ಯಂತ ಬೇಡಿಕೆ ಇತ್ತು. ಈ ಮುತ್ತು ರತ್ನಗಳು ಅತಿ ಹೆಚ್ಚು ಗುಣಮಟ್ಟದವುಗಳಾಗಿದ್ದವು. ಮುಖ್ಯ ಅಮೂಲ್ಯವಾದ ಮುತ್ತು ರತ್ನಗಳೆಂದರೆ, ರೂಬಿಗಳು, ರತ್ನಗಳು, ಮುತ್ತುಗಳು, ನೀಲಮಣಿ ಮುಖ್ಯವಾದವುಗಳಾಗಿದ್ದವು. ಈ ವಸ್ತುಗಳು ಆಮದು ಪ್ರಕ್ರಿಯೆಗಳಿಂದ ನೊಬಲರು ಶ್ರೀಮಂತವರ್ಗ ಮತ್ತು ರಾಜ ರಾಣಿಯರು ಹಲವಾರು ಚಿನ್ನಾಭರಣಗಳನ್ನು ಹಾಕಿಕೊಂಡು ತಮ್ಮ ಶ್ರೀಮಂತಿಕೆಯ ತೋರ್ಪಡಿಕೆ ಮಾಡಿಕೊಳ್ಳುತ್ತಿದ್ದರು.

**ರಫ್ತು**

ವಿದೇಶಿ ಪ್ರವಾಸಿಗರು ವಿಜಯನಗರ ಸಾಮ್ರಾಜ್ಯಕ್ಕೆ ಭೇಟಿ ನೀಡಿದ್ದ ಸಂದರ್ಭದಲ್ಲಿ ವಿಜಯನಗರಕ್ಕೆ ಆಮದಾಗುತ್ತಿದ್ದ ಬಹುತೇಕ ವಸ್ತುಗಳು ಇಲ್ಲಿಂದ ವಿದೇಶಗಳಿಗೆ ಪುನರ್ ರಫ್ತಾಗುತ್ತಿದ್ದವೆಂದು ತಿಳಿಸಿದ್ದಾರೆ. ಪರ್ಷಿಯಾ, ಅರೇಬಿಯಾ, ಚೀನಾ, ಆಫ್ರಿಕಾ ದೇಶಗಳಿಗೆ

ಬಹಳಷ್ಟು ಸರಕುಗಳು ರಫ್ತಾಗುತ್ತಿದ್ದವು. ಇವುಗಳಲ್ಲಿ ವಿಜಯನಗರ ಸಾಮ್ರಾಜ್ಯದ ಸ್ಥಳೀಯ ಸರಕುಗಳು ಸಹ ಸೇರಿದ್ದವು. ಪ್ರಮುಖವಾಗಿ ರಫ್ತಾಗುತ್ತಿದ್ದ ಸರಕುಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಲಾಗಿದೆ, ಅವುಗಳೆಂದರೆ,

1. ಆಹಾರ ಪದಾರ್ಥಗಳು
2. ಲೋಹಗಳು
3. ಸಿದ್ಧಪಡಿಸಿದ ಸರಕುಗಳು

**ಆಹಾರ ಪದಾರ್ಥಗಳು ಸಾಂಬಾರ ಮತ್ತು ಔಷಧಿ :** ವಿಜಯನಗರ ಸಾಮಾಜ್ಯದಿಂದ ರಫ್ತಾಗುತ್ತಿದ್ದ ಪ್ರಮುಖ ಆಹಾರ ಪದಾರ್ಥಗಳಲ್ಲಿ ಕಪ್ಪು ಅಕ್ಕಿ ಪ್ರಮುಖವಾಗಿತ್ತು. ಭಾರತದಲ್ಲಿ ಉತ್ತಮ ತಳಿಯ ಅಕ್ಕಿಯನ್ನು ಬೆಳೆಯಲಾಗುತಿತ್ತು. ಈ ಉತ್ತಮವಾದ ಅಕ್ಕಿಗೆ ಇಡೀ ವಿಶ್ವದಾದ್ಯಂತ ಬೇಡಿಕೆ ಇತ್ತು. ಶ್ರೀಲಂಕಾವು ಕೂಡ ಈ ಬೇಡಿಕೆಯಿಂದ ಹೊರತಾಗಿರಲಿಲ್ಲ. ಬಾರ್ಬೋಸನ ಪ್ರಕಾರ ಮಲಬಾರ್ ಬಂದರುಗಳಿಂದ ಅತಿಹೆಚ್ಚು ಪ್ರಮಾಣದ ಅಕ್ಕಿಯನ್ನು ರಫ್ತು ಮಾಡಲಾಗುತಿತ್ತು. ಹಲವಾರು ಹಡಗುಗಳು ಅಪಾರ ಪ್ರಮಾಣದ ಅಕ್ಕಿಯನ್ನು ರಫ್ತು ಮಾಡಲಾಗುತಿತ್ತು. ಹಲವಾರು ಹಡಗುಗಳು ಅಪಾರ ಪ್ರಮಾಣದ ಅಕ್ಕಿಯನ್ನು ಹೊತ್ತು ಅವುಗಳನ್ನು ವಿದೇಶಗಳಿಗೆ ತಲುಪಿಸುತ್ತಿದ್ದವು. ಅಕ್ಕಿಯನ್ನು ಸಿಪ್ಪೆಸುಲಿದು, ಮೂಟೆಕಟ್ಟಿ ತಕ್ಷಣವೇ ಬಳಸಲು ಸಾಧ್ಯವಾಗುವಂತೆ ಅದನ್ನು ತಯಾರು ಮಾಲಾಗುತಿತ್ತು. ಅಕ್ಕಿಯೊಂದಿಗೆ ಗೊಧಿ ಮತ್ತು ಸಾಸಿವೆ ರಫ್ತಾಗುತ್ತಿದ್ದವು. ಮತ್ತೊಂದು ಮುಖ್ಯವಾದದು ಸಕ್ಕರೆಯಾಗಿತ್ತು.

**ಲೋಹಗಳು:** ವಿಜಯನಗರ ಸಾಮ್ರಾಜ್ಯದಲ್ಲಿ ಅಪಾರ ಪ್ರಮಾಣದ ಲೋಹಗಳು ದೊರೆಯುತ್ತಿದ್ದು ಈ ಲೋಹಗಳನ್ನು ವಿಶ್ವದ ವಿವಿಧ ಭಾಗಗಳಿಗೆ ರಫ್ತು ಮಾಡಲಾಗುತ್ತಿತ್ತು. ಕಬ್ಬಿಣ, ತಾಮ್ರ, ಹಾಗೂ ಮುಂತಾದ ಲೋಹಗಳು ರಫ್ತಾಗುತ್ತಿದ್ದವು. ಶ್ರೀಲಂಕಾಕ್ಕೆ ಈ ಲೋಹಗಳು ರಪ್ತಾಗುತ್ತಿದುದರ ಬಗ್ಗೆ ಬಾರ್ಬೋನ ತನ್ನ ದಾಖಲೆಗಳಲ್ಲಿ ಉಲ್ಲೇಖಿಸಿದ್ದಾನೆ. ಪ್ರಮುಖವಾಗಿ ಈ ಲೋಹಗಳು ವಿಶ್ವದ ಭಾಗಗಳಲ್ಲಿ ಅಪಾರ ಪ್ರಮಾಣದ ಬೇಡಿಕೆ ಹೊಂದಿದ್ದವು. ಈ ಬೇಡಿಕೆಯ ಅನುಸಾರವಾಗಿ ವಿಜಯನಗರ ಸಾಮ್ರಾಜ್ಯದಲ್ಲಿ ಅವುಗಳನ್ನು ತಯಾರಿಸಿ ರಫ್ತು ಮಾಡಲಾಗುತಿತ್ತೆಂದು ಹೇಳಬಹುದು.

**ಸಿದ್ಧ ಪಡಿಸಿದ ಸರಕುಗಳು :** ವಿಜಯನಗರ ಸಾಮ್ರಾಜ್ಯದಲ್ಲಿ ಹಲವಾರು ಸಿದ್ಧ ಪಡಿಸಿದ ಸರಕುಗಳು ತಯಾರಾಗುತ್ತಿದ್ದವು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಬಟ್ಟೆಗಳು ವಿಜಯನಗರ ಕಾಲದಲ್ಲಿ ದಪ್ಪ ಬಿಳಿ ಬಟ್ಟೆಗಳು ತಯಾರಾಗುತ್ತಿದ್ದವು. ಅವುಗಳೊಂದಿಗೆ, ರೇಷ್ಮೆಬಟ್ಟೆಗಳು, ಕಪ್ಪು ಮತ್ತು

ಕೆಂಪು ಬಟ್ಟೆಗಳು ಮುಂತಾದ ವಿವಿಧ ಬಗೆಯ ಬಟ್ಟೆಗಳು ರಫ್ತಾಗುತ್ತಿದ್ದವು. ಇವುಗಳು ಸಿಲೋನ್, ಚೀನಾ, ಸುಮಾತ್ರ, ಪರ್ಷಿಯಾ ದೇಶಗಳಿಗೆ ರಫ್ತಾಗುತ್ತಿದ್ದವು.[33]

ಹೀಗೆ ಈ ಮೇಲ್ಕಂಡ ಸರಕುಗಳು ಮುಖ್ಯವಾಗಿ ಆಮದು ಮತ್ತು ರಫ್ತು ಪ್ರಕ್ರಿಯೆಗಳನ್ನು ಒಳಗೊಂಡಿದ್ದು ವಿಜಯನಗರ ಸಾಮ್ರಾಜ್ಯ ಮತ್ತು ಶ್ರೀಲಂಕಾದ ನಡುವೆ ಉತ್ತಮವಾದ ಸಂಬಂಧವನ್ನು ಬಳಸಲು ಕಾರಣವಾಗಿದ್ದವು. ತಮಗೆ ಅವಶ್ಯಕವಿದ್ದ ವಸ್ತುಗಳನ್ನು ವಿನಿಮಯ ಮಾಡಿಕೊಳ್ಳುವ ಮೂಲಕ ಎರಡು ರಾಷ್ಟ್ರಗಳು ಪರಸ್ಪರ ವ್ಯಾಪಾರ ಮತ್ತು ವಾಣಿಜ್ಯದ ಅಭಿವೃದ್ಧಿ ಬೆಳವಣಿಗೆಗೆ ಕಾರಣರಾಗಿದ್ದರು.

**ವಿಜಯನಗರ ಸಾಮ್ರಾಜ್ಯ ಮತ್ತು ಶ್ರೀಲಂಕಾ ನಡುವಿನ ವ್ಯಾಪಾರಿ ಮಾರ್ಗಗಳು**

ವಿಜಯನಗರ ಸಾಮ್ರಾಜ್ಯ ಮತ್ತು ಶ್ರೀಲಂಕಾದ ನಡುವೆ ಉತ್ತಮವಾದ ಮತ್ತು ನೇರವಾದ ಸಮುದ್ರ ಮಾರ್ಗವಿತ್ತು. ಇಟನ್ ಬತೂತ ತನ್ನ ದಾಖಲೆಗಳಲ್ಲಿ ಉಲ್ಲೇಖಿಸಿರುವಂತೆ, ಸ್ವತಹ ಇವನೇ ಮಲಬಾರ್ ಬಂದರುಗಳಿಂದ ನೇರವಾಗಿ ಹಡಗಿನ ಮೂಲಕ ಶ್ರೀಲಂಕಾ ತಲುಪಿದುದ್ದರ ಬಗ್ಗೆ ಉಲ್ಲೇಖಿಸಿದ್ದಾನೆ. ಶ್ರೀಲಂಕಾದ ದಕ್ಷಿಣಭಾಗದ ಮುಖ್ಯ ಬಂದರಾದ ಗ್ಯಾಲಿ ನೇರವಾಗಿ ಭಾರತದೊಂದಿಗೆ ಸಂಪರ್ಕವನ್ನು ಹೊಂದಿತ್ತು. ಆ ನಂತರ ಕೊಲಂಬೋದಲ್ಲಿ ಒಂದು ಕೃತಕವಾದ ಬಂದರನ್ನು ನಿರ್ಮಿಸಿ ಕೊಲಂಬೋದಿಂದ ನೇರವಾದ ಸಂಪರ್ಕವನ್ನು ಭಾರತದೊಂದಿಗೆ ಉತ್ತಮಗೊಳಿಸಲಾಯಿತು. ಭಾರತಕ್ಕೆ ಕ್ರಿ.ಶ.1488ರಲ್ಲಿ ಬಂದ ಪೋರ್ಚುಗೀಸರು ಕ್ರಿ.ಶ. 1505ರಲ್ಲಿ ಅಲ್ಮೇಡಾನ ನೇತೃತ್ವದಲ್ಲಿ ಶ್ರೀಲಂಕಾಕ್ಕೆ ಜಲಪರ್ಯಟನೆ ನಡೆಸಿದನು. ಇವನು ಭಾರತದಿಂದ ನೇರವಾಗಿ ಶ್ರೀಲಂಕಾಕ್ಕೆ ತಲುಪಿದನು. ಭಾರತದಿಂದ ಶ್ರೀಲಂಕಾಕ್ಕೆ ಎರಡು ಜಲಮಾರ್ಗಗಳಿದ್ದವು ಅವುಗಳೆಂದರೆ ಒಂದು ಪಶ್ಚಿಮ ಬಂದರುಗಳಿಂದ ಶ್ರೀಲಂಕಾಕ್ಕೆ ಬಂದು ಅಲ್ಲಿಂದ ಜಾವಾ, ಸುಮಾತ್ರ, ಮಾರ್ಗವಾಗಿ ಚೀನಾಕ್ಕೆ ಹೋಗುತ್ತಿದ್ದ ಮಾರ್ಗ, ಮತ್ತೊಂದು ಪೂರ್ವ ಬಂದರುಗಳಿಂದ ಶ್ರೀಲಂಕಾಕ್ಕೆ ಬಂದು ಅಲ್ಲಿಂದ ಪಶ್ಚಿಮ ಬಂದರುಗಳನ್ನು ತಲುಪಿ ಮತ್ತೆ ಅಲ್ಲಿಂದ ಯುರೋಪಿಯನ್ ದೇಶಗಳಿಗೆ ಹೋಗುತ್ತಿದ್ದ ಮಾರ್ಗವಾಗಿತ್ತು.[34] ಭಾರತ ಮತ್ತು ಶ್ರೀಲಂಕಾದ ನಡುವೆ ಕೇವಲ ಜಲಮಾರ್ಗವಿತ್ತು. ಕಾರಣ ಶ್ರೀಲಂಕಾವು ಒಂದು ದ್ವೀಪ ವಾಗಿರುವುದರಿಂದ ಅಲ್ಲಿಗೆ ಯಾವುದೇ ಭೂಮಾರ್ಗ ಗಳಿರಲಿಲ್ಲವೆಂದು ಹೇಳಬಹುದು.

### 4.3 ವಿಜಯನಗರ ಸಾಮ್ರಾಜ್ಯ ಮತ್ತು ಬರ್ಮಾ ಅಥವಾ ಮಯನ್ಮಾರ್ ನಡುವಿನ ಸಂಬಂಧಗಳು

ಬರ್ಮಾ ಅಥವಾ ಮಯನ್ಮಾರ್ ಭಾರತದ ನೆರೆಯ ರಾಷ್ಟ್ರವಾಗಿದ್ದು ಭಾರತ ಮತ್ತು ಬರ್ಮಾದ ನಡುವೆ ಪ್ರಾಚೀನ ಕಾಲದಿಂದಲೂ ಉತ್ತಮವಾದ ಸಂಬಂಧವನ್ನು ಏರ್ಪಡಿಸಿಕೊಳ್ಳಲಾಗಿತ್ತು. ಬರ್ಮಾ ಅಥವಾ ಮಯನ್ಮಾರ್ ಮತ್ತು ಭಾರತದ ನಡುವೆ ವ್ಯಾಪಾರಿ ಸಂಬಂಧಗಳು ಮತ್ತು ಸಾಂಸ್ಕೃತಿಕ ಸಂಬಂಧಗಳು ಬೆಳವಣಿಗೆ ಹೊಂದಿದ್ದವು. ಭಾರತದಿಂದ ಬರ್ಮಾವನ್ನು ತಲುಪಲು ಎರಡು ಪ್ರಮುಖ ಮಾರ್ಗಗಳಿದ್ದವು. ಒಂದು ಉತ್ತರಭಾರತದ ಅಸ್ಸಾಂ ಟಿಬೆಟ್ ಮಾರ್ಗವಾಗಿ ಬರ್ಮಾ ತಲುಪುವ ಭೂಮಾರ್ಗವಾಗಿತ್ತು. ಮತ್ತೊಂದು ಮಾರ್ಗ ದಕ್ಷಿಣಭಾರತದ ಕೋರಮಂಡಲತೀರ ಪ್ರದೇಶದಿಂದ ಬರ್ಮಾಕ್ಕೆ ತಲುಪುತ್ತಿದ ಜಲಮಾರ್ಗವಾಗಿತ್ತು.

ಬರ್ಮಾವನ್ನು ಮಯನ್ಮಾರ್ ಎಂದು ಕರೆಯಲಾಗುವುದು. ಈ ದೇಶದಲ್ಲಿ ಸುಮಾರು ಹದಿಮೂರು ಸಾವಿರ ವರ್ಷಗಳಷ್ಟು ಹಿಂದೆ ಮಾನವನು ನೆಲೆಸುವ ಪ್ರಕ್ರಿಯೆ ಆರಂಭವಾಯಿತು. ಕ್ರಿ.ಶ. 9ನೇ ಶತಮಾನದಲ್ಲಿ ಬಾಮಾರ್ ಎಂಬ ಸಮುದಾಯವು ಅಲ್ಲಿ ಹೆಚ್ಚು ಪ್ರಾಮುಖ್ಯತೆ ಹೊಂದಿದ್ದ ಜನಾಂಗವಾಗಿತ್ತು. ಕ್ರಿ.ಶ. 1044–1287ರ ವರೆಗೆ ಬಾಗನ್ ಎಂಬ ರಾಜಧಾನಿಯನ್ನು ಸ್ಥಾಪಿಸಿ ಆಡಳಿತವನ್ನು ಪ್ರಾರಂಭಿಸಿದರು. ಈ ಸಾಮಾಜ್ಯವು ಪ್ರಥಮಬಾರಿಗೆ ಏಕೀಕರಣವನ್ನು ಸಾಧಿಸುವ ಪ್ರಯತ್ನ ಮಾಡಿತು. ಬರ್ಮಿನ್ ಭಾಷೆ ಮತ್ತು ಬಾಮರ್ ಸಂಸ್ಕೃತಿಯು ಮೊದಲಬಾರಿಗೆ ಏಕೀರಣವನ್ನು ಸಾಧಿಸುವ ಪ್ರಯತ್ನ ಮಾಡಿತು. ಬರ್ಮಿನ್ ಭಾಷೆ ಮತ್ತು ಬಾಮರ್ ಸಂಸ್ಕೃತಿಯು ಮೊದಲಬಾರಿಗೆ ಏಕೀಕರಣವಾಗ ತೊಡಗಿತು. ಕ್ರಿ.ಶ. 1287ರಲ್ಲಿ ಬರ್ಮಾದ ಮೇಲೆ ಮಂಗೋಲರ ದಾಳಿಯ ನಂತರ ಬರ್ಮಾದಲ್ಲಿ ಸಣ್ಣ ಪುಟ್ಟ ಸಂಸ್ಥಾನಗಳು ಬೆಳವಣಿಗೆ ಹೊಂದಿದ್ದವು. ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಅವಾ, ಹಂತವಾಡಿ, ಮಾಕೋ ಮತ್ತು ಷಾನ್ ಸಂಸ್ಥಾನಗಳು, ಹದಿನಾರನೆ ಶತಮಾನದ ದ್ವೀತಿಯಾರ್ಧದಲ್ಲಿ ತನುಂಗೋ ಸಾಮ್ರಾಜ್ಯ (1510–1752)ವು ಬರ್ಮಾದಲ್ಲಿ ಮತ್ತೆ ಏಕೀಕರಣ ಪ್ರಕ್ರಿಯೆಯನ್ನು ಆರಂಭಿಸಿತು. ಅತಿ ಕಡಿಮೆ ಅವಧಿಯಲ್ಲಿ ಆಗ್ನೇಯ ಏಷ್ಯಾ ರಾಷ್ಟ್ರಗಳಲ್ಲಿ ಅತಿ ವಿಸ್ತಾರವಾದ ಸಾಮ್ರಾಜ್ಯ ಸ್ಥಾಪಿಸಿದ ಕೀರ್ತಿ ತನುಂಗೋ ಸಂತತಿಯವರಿಗೆ ಸಲ್ಲುತ್ತದೆ. ಈ ಸಾಮ್ರಾಜ್ಯವು ಉತ್ತಮವಾದ ಆಡಳಿತ ಮತ್ತು ಆರ್ಥಿಕ ಸುಧಾರಣೆಗಳನ್ನು ಜಾರಿಗೊಳಿಸಿ ಉತ್ತಮ ರಾಷ್ಟ್ರವಾಗಿ ನಿರ್ಮಾಣ ಮಾಡುವಲ್ಲಿ ಪ್ರಮುಖವಾದ ಪಾತ್ರವನ್ನು ನಿರ್ವಹಿಸಿತು.

ಕ್ರಿ.ಶ. 18ನೇ ಶತಮಾನದ ದ್ವಿತೀಯಾರ್ಧದಲ್ಲಿ ಬರ್ಮಾದಲ್ಲಿ ಮತ್ತೊಂದು ಸಾಮ್ರಾಜ್ಯ ಬೆಳವಣಿಗೆ ಪಡೆದಿತ್ತು. ಕಾನ್‌ಬಾಂಗ್ ಸಾಮ್ರಾಜ್ಯ (1752–1885)ವು ಬರ್ಮಾವನ್ನು ಏಕೀಕರಣಗೊಳಿಸಿ ತನುಂಗೋ ಸಾಮ್ರಾಜ್ಯದ ಸುಧಾರಣೆಗಳನ್ನು ಮುಂದುವರೆಸಿತು. ಈ ಸಾಮ್ರಾಜ್ಯವು ಏಷ್ಯಾದಲ್ಲೇ ಬರ್ಮಾವನ್ನು ಒಂದು ಪ್ರಮುಖ ಅಕ್ಷರಸ್ಥ ರಾಷ್ಟ್ರವಾಗಿ ನಿರ್ಮಿಸಿದರು. ಈ ಸಾಮ್ರಾಜ್ಯವು ಸ್ಥಳೀಯ ರಾಷ್ಟ್ರಗಳೊಂದಿಗೆ ಯುದ್ಧವನ್ನು ಕೈಗೊಂಡರು. ಇದರ ಫಲವಾಗಿ ಆಂಗ್ಲೋ–ಬರ್ಮಾ(1824–85) ರವರೆಗೆ ನಡೆದು ಕೊನೆಗೆ ಬರ್ಮಾವು ಬ್ರಿಟಿಷರ ಒಂದು ವಸಾಹತುಷಾಹಿ ರಾಜ್ಯವಾಗಿ ಬೆಳವಣಿಗೆ ಪಡೆಯಿತು. ಬ್ರಿಟಿಷ್ ಸರ್ಕಾರವು ಬರ್ಮಾದಲ್ಲಿ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಮತ್ತು ಆಡಳಿತಾತ್ಮಕ ಸುಧಾರಣೆಗಳನ್ನು ಜಾರಿಗೆ ತಂದು ಬರ್ಮಾದಲ್ಲಿ ಸಾಕಷ್ಟು ಬದಲಾವಣೆಗಳನ್ನುಂಟು ಮಾಡಿತು. ಕ್ರಿ.ಶ. 1948ರವರೆಗೆ ಸ್ವಾತಂತ್ರ ಪಡೆಯುವರೆಗೂ ಬರ್ಮಾವು ಬ್ರಿಟಿಷರ ಅಧೀನದಲ್ಲಿತ್ತು. ಕ್ರಿ.ಶ. 1962 ರಿಂದ 2010ರವರೆಗೆ ಮಿಲಿಟರಿ ಸರ್ಕಾರವು ಅಲ್ಲಿ ಆಳ್ವಿಕೆಯನ್ನು ನಡೆಸುತ್ತಿತ್ತು.

ವಿಜಯನಗರ ಸಾಮ್ರಾಜ್ಯ ಮತ್ತು ಬರ್ಮಾದ ನಡುವೆ ನೇರವಾದ ಸಂಪರ್ಕವನ್ನು ದಾಖಲೆಗಳು ಸ್ಪಷ್ಟಪಡಿಸದಿದ್ದರೂ, ವಿಜಯನಗರ ಸಾಮ್ರಾಜ್ಯ ಮತ್ತು ಬರ್ಮಾದ ನಡುವಿನ ಸಂಬಂಧವು ಚೀನಾ ಸಂಬಂಧದೊಂದಿಗೆ ತಳುಕುಹಾಕಿ ಕೊಂಡಿದೆ ಹಾಗೂ ಉತ್ತರ ಭಾರತದ ಅಸ್ಸಾಂ ಮಾರ್ಗವಾಗಿ ಭಾರತ ಮತ್ತು ಬರ್ಮಾ ನೇರವಾದ ಸಂಪರ್ಕ ಹೊಂದಿದ್ದವು.

ವಿಜಯನಗರ ಸಾಮ್ರಾಜ್ಯದ ಅವದಿಯಲ್ಲಿ ಬರ್ಮಾ ಮತ್ತು ಭಾರತದ ನಡುವೆ ಹಲವಾರು ಮಾರ್ಗಗಳು ಬೆಳವಣಿಗೆ ಹೊಂದಿದ್ದವು. ಮೊದಲ ಮಾರ್ಗ ದೈಹೊಂಗ್ ಬ್ರಹ್ಮಪುತ್ರ ನದಿ ಮಾರ್ಗವಾಗಿ ಟಿಬೆಟಿನ ನದಿ ಮಾರ್ಗವಾಗಿ ಟಿಬೆಟಿನ ಮಾಲೂಗೆ ತಲುಪಿ ಅಲ್ಲಿಂದ ಬರ್ಮಾವನ್ನು ತಲುಪುತ್ತಿತ್ತು ಎರಡನೇ ಮಾರ್ಗ ಮಿಸೆಮ ಮಾರ್ಗವಾಗಿದ್ದು, ಈ ಮಾರ್ಗಗಳ ಮೂಲಕವಾಗಿ ಬರ್ಮಾಕ್ಕೆ ತಲುಪಬಹುದಾಗಿತ್ತು.

ವಿಜಯನಗರ ಸಾಮ್ರಾಜ್ಯದ ಅವದಿಯಲ್ಲಿ ಭಾರತ ಮತ್ತು ಬರ್ಮಾದ ನಡುವೆ ವಾಣಿಜ್ಯ ಮತ್ತು ರಾಜತಾಂತ್ರಿಕ ಸಂಬಂಧಗಳು ಬೆಳವಣಿಗೆ ಹೊಂದಿದ್ದವು. ಭಾರತವು ಪ್ರಾಚೀನ ಕಾಲದಿಂದಲೂ ಬರ್ಮಾದೊಂದಿಗೆ ಕ್ರಮಬದ್ಧವಾದ ಸಂಬಂಧವನ್ನು ಒಳಗೊಂಡಿತ್ತು. ಚೀನಾ ಮತ್ತು ಭಾರತದ ಸಂಬಂಧ ಉತ್ತಮವಾಗಿ ಬೆಳವಣಿಗೆ ಹೊಂದಲು ಬರ್ಮಾವು ಕೂಡ ಸಹಕಾರಿಯಾಯಿತು. ಭಾರತ ಮತ್ತು ಚೀನಾದ ನಡುವೆ ಕಂಡು ಬರುವ ಬರ್ಮಾವು ಚೀನಾ ಭಾರತವನ್ನು ತಲುಪಲು ಬರ್ಮಾದ ಮಾರ್ಗವಾಗಿ ಬಂದು ಬಂಗಾಳ ಮತ್ತು ಅಸ್ಸಾಂ

ಭಾಗಗಳಿಗೆ ತಲುಪುತ್ತಿತ್ತು. ಚೀನಾದಿಂದ ಬರುವ ಪ್ರತಿಯೊಂದು ಹಡಗುಗಳು ಕೂಡ ಮಲಯಾ, ಸುಮಾತ್ರ ಮತ್ತು ಬರ್ಮಾದ ಮಾರ್ಗವಾಗಿ ಭಾರತವನ್ನು ತಲುಪುತ್ತಿದ್ದವು. ಈ ಕಾಲದಲ್ಲಿ ಭಾರತದ ಮತ್ತು ಬರ್ಮಾದ ನಡುವಿನ ಸಂಬಂಧಗಳ ಬೆಳವಣಿಗೆಯಲ್ಲಿ ಮುಖ್ಯವಾಗಿ ಕೊರಮಂಡಲ ಬಂದರುಗಳು ಉತ್ತಮವಾದ ಪಾತ್ರವನ್ನು ನಿರ್ವಹಿಸಿದವು.

**ಆಮದು ಮತ್ತು ರಫ್ತು ಪ್ರಕ್ರಿಯೆಗಳು**

ವಿಜಯನಗರ ಕಾಲದಲ್ಲಿ ಬರ್ಮಾ ಮತ್ತು ಭಾರತದ ನಡುವೆ ಉತ್ತಮವಾದ ಸಂಬಂಧಗಳ ಬೆಳವಣಿಗೆಯಲ್ಲಿ ಬಾಮೊ ಮತ್ತು ಮೈತೆಕಿಯನ ಪ್ರದೇಶಗಳು ಭಾರತದೊಂದಿಗೆ ಉತ್ತಮವಾದ ಉತ್ತಮವಾದ ವ್ಯಾಪಾರ ವಾಣಿಜ್ಯ ಸಂಪರ್ಕವನ್ನು ಹೊಂದಿದ್ದವು. ಭಾರತದೊಂದಿಗಿನ ವ್ಯಾಪಾರದಲ್ಲಿ ಬ್ರಹ್ಮಪುತ್ರ ನದಿಯ ಭಾಗವು ಅವರಿಗೆ ಉತ್ತಮ ಅವಕಾಶವನ್ನು ಕಲ್ಪಿಸಿತ್ತು. ಪ್ರಾರಂಭದಲ್ಲಿ ಕುದುರೆಗಳನ್ನು ಆಗ್ನೇಯ ಏಷ್ಯಾ ರಾಷ್ಟ್ರಗಳಿಂದ ಭಾರತ ಆಮದು ಮಾಡಿಕೊಳ್ಳುತಿತ್ತು. ಮುಸ್ಲಿಂ ವರ್ತಕರ ದಾಖಲೆಗಳ ಪ್ರಕಾರ ಕುದುರೆ ಮತ್ತು ರೇಷ್ಮೆ ವ್ಯಾಪಾರದ ಬೆಳವಣಿಗೆ ಭಾರತ ಮತ್ತು ಬರ್ಮಾದ ನಡುವೆ ಬೆಳವಣಿಗೆ ಹೊಂದಿತ್ತು. ಬರ್ಮಾದಿಂದ ಹಾಗೂ ಆಗ್ನೇಯ ಏಷ್ಯಾ ರಾಷ್ಟ್ರಗಳೊಂದಿಗೆ ರೇಷ್ಮೆಬಟ್ಟೆ, ದಂತದ ವಸ್ತುಗಳು ಭಾರತಕ್ಕೆ ಆಮದಾಗುತ್ತಿದ್ದವು. ಭಾರತ ಮತ್ತು ಬರ್ಮಾದ ನಡುವಿನ ಗಡಿಭಾಗಗಳಲ್ಲಿ ಅಂತರರಾಷ್ಟ್ರೀಯ ವ್ಯಾಪಾರ ನಡೆಯುತ್ತಿತ್ತು. ಈ ವ್ಯಾಪಾರವು ಕೆಲವೊಂದು ಬಾರಿ ಆಕ್ರಮ ಮತ್ತು ಕಾನೂನು ಬಾಹಿರವು ಆಗಿತ್ತು. ವ್ಯಾಪಾರ ಮತ್ತು ವಾಣಿಜ್ಯದಲ್ಲಿ ಮುಖ್ಯವಾಗಿ ವಸ್ತುಗಳ ವಿನಿಮಯ ಪದ್ಧತಿಯ ಬಳಕೆಯಲ್ಲಿತ್ತು. ವ್ಯಾಪಾರವನ್ನು ಮಾಡುವಾಗ ಸ್ಥಳೀಯ ಸರಕುಗಳನ್ನು ಅವರ ಸರಕುಗಳೊಂದಿಗೆ ವಿನಿಮಯ ಮಾಡಿಕೊಳ್ಳುತ್ತಿದ್ದರು. ಅಂತಹ ಪ್ರಮುಖವಾದ ಸರಕುಗಳೆಂದರೆ, ಶೈತ್ಯ, ಉಣ್ಣೆಬಟ್ಟೆಗಳು, ಕಚ್ಛಾಉಣ್ಣೆ, ಉಪ್ಪು, ಕಬ್ಬಿಣ ಮತ್ತು ಮನೆಬಳಕೆಯ ಪಾತ್ರೆಗಳಾಗಿದ್ದವು.

ಅಸ್ಸಾಂನಲ್ಲಿ ದೊರಕಿರುವ ಕೆಲವು ಅಹೋಂ ರಾಜರ ದಾಖಲೆಗಳು ಬರ್ಮಾ ಮತ್ತು ಭಾರತದ ನಡುವಿನ ರಾಜತಾಂತ್ರಿಕ ಸಂಬಂಧವನ್ನು ಕುರಿತು ಮಾಹಿತಿ ನೀಡುತ್ತವೆ. ವಿಜಯನಗರ ಸಾಮ್ರಾಜ್ಯದ ಸಮಕಾಲೀನ ಸಾಮ್ರಾಜ್ಯವಾದ ಅಹೋಂ ಸಾಮ್ರಾಜ್ಯದ ರಾಜನಾದ ಸಿಯೋ–ಡಾಂಗ್–ಫಾ(1398–1407) ಇವನು ಯಾವುದೇ ರಕ್ತಪಾತಗಳಿಲ್ಲದೆ ಉತ್ತಮ ಸಂಬಂಧ ಹೊಂದಿದುದರ ಬಗ್ಗೆ ಮಾಹಿತಿ ಇದೆ. ಬರ್ಮಾದ ಶಾನ್ ದೊರೆಗಳ ಕಾಲದಲ್ಲೂ ಅವರು

ಭಾರತದೊಂದಿಗೆ ಉತ್ತಮವಾದ ವೈವಾಹಿಕ ಸಂಬಂಧವನ್ನು ಹೊಂದಿದುದರ ಬಗ್ಗೆ ನಮಗೆ ಉಲ್ಲೇಖಗಳು ಸಿಗುತ್ತವೆ.

ಅಸ್ಸಾಂನಲ್ಲಿ ಅಹೋಂ ರಾಜ್ಯದ ಆಡಳಿತವಿದ್ದ ಸಂದರ್ಭದಲ್ಲಿ ಬರ್ಮಾದವರು ಭಾರತಕ್ಕೆ ಬಂದು ಅಸ್ಸಾಂ ಮಾರ್ಗವಾಗಿ ಪಶ್ಚಿಮ ಬಂದರುಗಳಿಗೆ ತಲುಪಿ ಅಲ್ಲಿಂದ ದಕ್ಷಿಣ ಭಾರತಕ್ಕೆ ಬರುತ್ತಿದ್ದರು. ಈ ಸಂದರ್ಬದಲ್ಲಿ ಅವರು ಭಾರತಕ್ಕೆ ಹಲವಾರು ಸರಕುಗಳೊಂದಿಗೆ ಭೇಟಿ ನೀಡುತ್ತಿದ್ದರು. ಅವುಗಳೆಂದರೆ, ಚೀನಾದ ರೇಷ್ಮೆ, ಪ್ಯಾಡೆಡ್ ಜಾಕೆಟ್‌ಗಳು, ಬಣ್ಣದ ಬಟ್ಟೆಗಳು, ಒಣಹಣ್ಣುಗಳು, ಇಟ್ಟಿಗೆ, ಚಹಾ, ಬೆಳ್ಳಿ, ಭಾರತಕ್ಕೆ ಪ್ರಮುಖವಾಗಿ ಆಮದಾಗುತ್ತಿದ್ದವು.

ಬರ್ಮಾ ಮತ್ತು ವಿಜಯನಗರ ನಡುವಿನ ವ್ಯಾಪಾರದಲ್ಲಿ ಮರದ ವ್ಯಾಪಾರ ಪ್ರಾಮುಖ್ಯತೆಗಳಿಸಿತ್ತು. ಬರ್ಮಾದಲ್ಲಿ ದೊರೆಯುತ್ತಿದ್ದಂತಹ ಮರಗಳು ವ್ಯಾಪಾರಿಗಳನ್ನು ಆಕರ್ಷಿಸಿದವು. ಇವುಗಳಲ್ಲದೆ ಭಾರತದಿಂದ ಅಕ್ಕಿ, ಕಲ್ಲಿದ್ದಲು, ಚಿನ್ನ, ಅಂಬರು ಪ್ರಮುಖವಾಗಿ ರಫ್ತಾಗುತ್ತಿದ್ದವು. ಬರ್ಮಾದ ಹೋಕಾಂಗ್ ಕಣವೆ ಭಾಗಗಳಲ್ಲಿ ಅತಿಹೆಚ್ಚಾಗಿ ರಬ್ಬರ್ ಉತ್ಪನ್ನಗಳಿಗೆ ಹೆಸರುವಾಸಿಯಾಗಿತ್ತು. ಬರ್ಮಾದಲ್ಲಿ ಭಾರತೀಯ ಮತ್ತು ಚೀನಾದ ವ್ಯಾಪಾರಿಗಳು ಇವುಗಳನ್ನು ಕೊಂಡುಕೊಳ್ಳುತ್ತಿದ್ದರು. ಈ ರಬ್ಬರಿಗೆ ಚೀನಾದವರು ಅತಿ ಕಡಿಮೆ ಬೆಲೆ ಕೊಡುತ್ತಿದ್ದರು. ಭಾರತೀಯರು ಅದಕ್ಕೆ ಸಮನಾದ ಬೆಲೆಗಳನ್ನು ನೀಡಿ ಕೊಂಡು ಕೊಳ್ಳುತ್ತಿದ್ದರು.[36]

ಬರ್ಮಾದಲ್ಲಿ ಸಾಮಾನ್ಯವಾಗಿ ತಂಬಾಕು ಮತ್ತು ಅಫೀಮನ್ನು ಕೂಡ ಬೆಳೆಯುತ್ತಿದ್ದರು. ಈ ತಂಬಾಕು ಮತ್ತು ಅಫೀಮನು ಚೀನಿಯರು ಕೊಂಡುಕೊಂಡು ಬಂದು ಭಾರತದಲ್ಲಿ ಮಾರಾಟಮಾಡುತ್ತಿದ್ದರು. ಬರ್ಮಾದ ಜನರು ಅರಣ್ಯದಲ್ಲಿನ ಆನೆಗಳನ್ನು ಕೊಂದು ಅವುಗಳಿಂದ ದಂತವನ್ನು ಪಡೆದುಕೊಂಡು ಅವುಗಳನ್ನು ಭಾರತಕ್ಕೆ ರಫ್ತು ಮಾಡುತ್ತಿದ್ದರು.

ಹೀಗೆ ಬರ್ಮಾ ಮತ್ತು ವಿಜಯನಗರ ಸಾಮ್ರಾಜ್ಯದ ನಡುವೆ ಉತ್ತಮವಾದ ಸಂಬಂಧ ಏರ್ಪಟಿತ್ತು. ಬರ್ಮಾವು ನೇರವಾಗಿ ವಿಜಯ ನಗರದೊಂದಿಗೆ ರಾಜತಾಂತ್ರಿಕ ಸಂಬಂಧ ಹೊಂದಿಲ್ಲದಿದ್ದರೂ ಕೂಡ ಹಲವಾರು ಸಂದರ್ಭಗಳಲ್ಲಿ ವ್ಯಾಪಾರ ಮತ್ತು ವಾಣಿಜ್ಯದ ಸಂಬಂಧಗಳು ಬೆಳವಣಿಗೆ ಹೊಂದಿದ್ದವು. ಚೀನಾದ ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯಲ್ಲಿ ಮುಖ್ಯವಾಗಿ ಬರ್ಮಾದ ಪಾತ್ರವನ್ನು ಕಡೆಗಣಿಸುವಂತಿಲ್ಲ. ಚೀನಾ, ಭಾರತ ಮತ್ತು ಬರ್ಮಾಗಳು ಪರಸ್ಪರ ನೆರೆಹೊರೆಯ ದೇಶಗಳಾಗಿದ್ದು ಉತ್ತಮವಾದ ಸಂಪರ್ಕವನ್ನು ಹೊಂದಿದ್ದವು. ಚೀನಾದವರು ಭಾರತವನ್ನು ತಲುಪಲು ಮುಖ್ಯವಾಗಿ ಬರ್ಮಾದ ಮಾರ್ಗವಾಗಿ

ಬರುತ್ತಿದ್ದರು. ಅವರು ಅಭಿವೃದ್ಧಿಪಡಿಸಿದ ರೇಷ್ಮೆ ಮಾರ್ಗವು ಭಾರತ ಮತ್ತು ಚೀನಾದ ವ್ಯಾಪಾರ ಬಳವಣಿಗೆಗೆ ಪ್ರಮುಖವಾದ ಕಾರಣವಾಯಿತು. ಬರ್ಮಾದ ಸರಕುಗಳನ್ನು ಭಾರತಕ್ಕೆ ಚೀನಿಯರು ತರುತ್ತಿದ್ದರು. ಚೀನಿಯರು ಭಾರತ ಮತ್ತು ಬರ್ಮಾದ ನಡುವಿನ ವ್ಯಾಪಾರ ಬೆಳವಣಿಗೆಯಲ್ಲಿ ಪ್ರಮುಖಪಾತ್ರ ವಹಿಸಿದರು. ವಿಜಯನಗರ ಸಾಮ್ರಾಜ್ಯವು ತನ್ನ ಆಡಳಿತ ಅವಧಿಯಲ್ಲಿ ಹೊಂದಿದ್ದ ಉತ್ತಮವಾದ ಸಾಗರ ವ್ಯಾಪಾರವು ಬರ್ಮಾವು ಭಾರತದೊಂದಿಗೆ ವ್ಯಾಪಾರ ನಡೆಸಲು ಪ್ರಮುಖ ಕಾರಣವಾಯಿತು. ಶ್ರೀಲಂಕಾ, ಚೀನಾ, ಅರೇಬಿಯಾ, ಪರ್ಷಿಯಾ, ಯುರೋಪ್ ಮುಂತಾದ ರಾಷ್ಟ್ರಗಳೊಂದಿಗೆ ಹೊಂದಿದಷ್ಟು ನೇರವಾದ ಮತ್ತು ಪ್ರಮುಖವಾದ ವ್ಯಾಪಾರ ವಹಿವಾಟನ್ನು ಹೊಂದಿರಲಿಲ್ಲದಿದ್ದರು ಕೂಡ ಉತ್ತಮವಾದ ಒಂದು ವ್ಯಾಪಾರ ಮತ್ತು ವಾಣಿಜ್ಯದ ಸಂಬಂಧ ಎರಡು ರಾಷ್ಟ್ರಗಳ ಬೆಳವಣಿಗೆಗೆ ಕಾರಣವಾಯಿತು.

### 4.4 ವಿಜಯನಗರ ಸಾಮ್ರಾಜ್ಯ ಮತ್ತು ಮಲಯಾ ನಡುವಿನ ಸಂಬಂಧಗಳು

ವಿಜಯನಗರ ಸಾಮ್ರಾಜ್ಯದ ಆಡಳಿತ ಅವಧಿಯಲ್ಲಿ ಆಗ್ನೇಯ ಏಷ್ಯಾ ರಾಷ್ಟ್ರಗಳೊಂದಿಗೆ ಉತ್ತಮವಾದ ಸಂಬಂಧವನ್ನು ಬೆಳೆಸಿಕೊಂಡಿತ್ತು. ಆ ಆಗ್ನೇಯ ಏಷ್ಯಾ ರಾಷ್ಟ್ರಗಳಲ್ಲಿ ಮಲಯಾವು ಕೂಡ ಒಂದಾಗಿತ್ತು. ಈ ರಾಷ್ಟ್ರಗಳಲ್ಲಿ ಮಲಯಾವು ಕೂಡ ಒಂದಾಗಿದು ಈ ರಾಷ್ಟ್ರವು ಕೂಡ ಉತ್ತಮವಾದ ವ್ಯಾಪಾರ ಮತ್ತು ವಾಣಿಜ್ಯವನ್ನು ಬೆಳೆಸಿಕೊಂಡಿತ್ತು. ಮಲಯಾದಲ್ಲಿ ಆಳ್ವಿಕೆ ಮಾಡುತ್ತಿದ್ದ ಶ್ರೀವಿಜಯನ ಸಾಮ್ರಾಜ್ಯದ ಕಾಲದಲ್ಲಿ ಮಲಯಾ ಮತ್ತು ಭಾರತದೊಂದಿಗೆ ರಾಜತಾಂತ್ರಿಕ ಮತ್ತು ವಾಣಿಜ್ಯ ಸಂಬಂಧಗಳು ಅತಿ ಹೆಚ್ಚಾಗಿ ಬೆಳವಣಿಗೆ ಹೊಂದಿದವು. ಈ ಸಂಬಂದವು ಹೆಚ್ಚಾಗಿ ಆರ್ಥಿಕವಾದ ಸಂಬಂಧವನ್ನು ಹೊಂದಿತ್ತು. ಶ್ರೀ ವಿಜಯನ ಸಾಮ್ರಾಜ್ಯವು ಮೂಲಭೂತವಾಗಿ ವ್ಯಾಪಾರಿ ಸಂಬಂಧಗಳನ್ನು ಬೆಳೆಸಿಕೊಂಡಿತ್ತು. ಮಲಯಾದ ಸುತ್ತಮುತ್ತಲಿನ ರಾಜ್ಯಗಳು ಕೂಡ ಮಲಯದೊಂದಿಗೆ ಉತ್ತಮವಾದ ಸಂಬಂಧವನ್ನು ಬೆಳೆಸಿಕೊಂಡಿದ್ದವು. ಮಲಯಾದ ಬಂದರುಗಳು ಮುಖ್ಯವಾಗಿ ಎಲ್ಲಾ ಸಂಬಂಧಗಳ ಬೆಳವಣಿಗೆಗೆ ಸಾಕ್ಷಿಯಾಗಿದ್ದವು.

ಮಲಯಾವನ್ನು ಪ್ರಸ್ತುತ ಮಲೇಷಿಯಾವೆಂದು ಕರೆಯಲಾಗುತ್ತದೆ. ಮಲಯಾದ ಬಂದರುಗಳು ಆಂತರರಾಷ್ಟ್ರೀಯ ವ್ಯಾಪಾರ ಮತ್ತು ಸಂಸ್ಕೃತಿಯ ಬೆಳವಣಿಗೆಗೆ ಕಾರಣವಾದವು. ಹಿಂದೂ ಮತ್ತು ಬೌದ್ಧ ಧರ್ಮಗಳು ಪ್ರಾರಂಭದಲ್ಲಿ ಅಲ್ಲಿ ತಮ್ಮ ಪ್ರಭಾವವನ್ನು ಬೀರಿದ್ದವು. ಕ್ರಿ.ಶ.7ನೇ ಶತಮಾನದಲ್ಲಿ ಸ್ಥಾಪನೆಯಾದ ಬೌದ್ಧ ಶ್ರೀ ವಿಜಯನ ಸಾಮ್ರಾಜ್ಯವು ಮಲಯಾದ ಸಂಸ್ಕೃತಿ ಮತ್ತು ಇತಿಹಾಸವನ್ನು ಉನ್ನತಿಕರಿಸಿತು. ಕ್ರಿ.ಶ. 10ನೇ ಶತಮಾನದ ಸಂದರ್ಭದಲ್ಲಿ ಮಲಯಾಕ್ಕೆ ಇಸ್ಲಾಂ ಧರ್ಮವು ಪರಿಚಯಿಸ್ಪಟ್ಟಿತ್ತು. ಕ್ರಿ.ಶ. 14ನೇ ಶತಮಾನದ ನಂತರ ಇಸ್ಲಾಂ

ಧರ್ಮವು ಜನರ ಪ್ರಭಾವಕ್ಕೆ ಒಳಪಟ್ಟು ಒಂದು ದೊಡ್ಡ ಧರ್ಮವಾಗಿ ಬೆಳವಣಿಗೆ ಪಡೆಯಿತು. ಕ್ರಿ.ಶ.1511 ರಲ್ಲಿ ಪೋರ್ಚುಗೀಸರು ಮೊಟ್ಟ ಮೊದಲ ಯುರೋಪಿಯನ್ನರಾಗಿ ಮಲಯಾಕ್ಕೆ ಭೇಟಿ ನೀಡಿದರು. ನಂತರ ಡಚ್ಚರು, ಇಂಗ್ಲೀಷರು ಮಲಯಾದತ್ತ ತಮ್ಮ ಗಮನವನ್ನು ಹರಿಸಿದರು. ಮಲಯಾ ದೇಶವು ಅತ್ಯಂತ ಪುರಾತನ ದೇಶವಾಗಿದ್ದು ಇತ್ತೀಚಿನ ಸಂಶೋದನೆಗಳಲ್ಲಿ ನಲವತ್ತು ಸಾವಿರ ವರ್ಷದ ಮಾನವನ ಬುರುಡೆಗಳು ಪತ್ತೆಯಾಗಿವೆ.

ಮಲಯಾವು ಒಂದು ಪುಟ್ಟ ರಾಷ್ಟ್ರವಾಗಿದ್ದರೂ ಇದೊಂದು ಪ್ರಮುಖವಾದ ದ್ವೀಪಕಲ್ಪವಾಗಿ ಬೆಳವಣಿಗೆ ಹೊಂದಿ ಭಾರತದ ಸಂಸ್ಕೃತಿಯಿಂದ ಪ್ರಭಾವಿತಗೊಂಡಿತ್ತು. ಭಾರತ ಮತ್ತು ಮಲಯಾದ ನಡುವಿನ ಸಂಬಂದವು ಕ್ರಿ.ಪೂ. 3ನೇ ಶತಮಾನಕ್ಕೆ ಹೋಗುತ್ತದೆ. ಕ್ರಿ.ಶ. 4 ಮತ್ತು 5ನೇ ಶತಮಾನದಲ್ಲಿ ದಕ್ಷಿಣ ಭಾರತದ ಪಲ್ಲವ ಸಾಮ್ರಾಜ್ಯವು ಆಗ್ನೇಯ ಏಷ್ಯಾ ರಾಷ್ಟ್ರಗಳಲ್ಲಿ ದಕ್ಷಿಣ ಭಾರತದ ಸಂಸ್ಕೃತಿಯನ್ನು ಪ್ರಚಾರ ಮಾಡಿದರು. ಭಾರತದ ಪ್ರಾಚೀನ ಗ್ರಂಥಗಳು ಮಲಯಾವನ್ನು 'ಸುವರ್ಣ ದ್ವೀಪ' ವೆಂದು ಕರೆದಿವೆ. ರಾಮಾಯಣ ಮತ್ತು ವಾಯು ಪುರಾಣದಲ್ಲಿ ಮಲಯಾದ ಬಗ್ಗೆ ಮಾಹಿತಿಯನ್ನು ವಿವರಿಸಲಾಗಿದೆ. ಇದನ್ನು ಸುವರ್ಣದ್ವೀಪವೆಂದು ಕರೆಯಲು ಮುಖ್ಯಕಾರಣ ಮಲಯಾದಲ್ಲಿನ ಪ್ರಮುಖ ಚಿನ್ನದ ಗಣಿಗಳಿರಬಹುದೆಂದು ಅಂದಾಜಿಸಲಾಗಿದೆ. ಮಲಯಾದ ಪೂರ್ವ ಭಾಗದಲ್ಲಿ ಹಲವಾರು ಸಾಮ್ರಾಜ್ಯಗಳು ಬೆಳವಣಿಗೆ ಹೊಂದಿದವು. ಮಲಯಾದ ಅತ್ಯಂತ ಪ್ರಾಮುಖ್ಯತೆ ಗಳಿಸಿದ ಸಾಮ್ಯ್ರಾಜ್ಯವೆಂದರೆ ಅದು ಶ್ರೀವಿಜಯ ಸಾಮ್ಯ್ರಾಜ್ಯವಾಗಿತ್ತು. ಸುಮಾರು ಆರು ಶತಮಾನಗಳ ಆಳ್ವಿಕೆ ನಡೆಸಿದ ಶ್ರೀವಿಜಯ ಸಾಮ್ರಾಜ್ಯವು ಭಾರತದೊಂದಿಗೆ ಉತ್ತಮ ಸಂಬಂಧವನ್ನು ಬೆಳೆಸಿಕೊಂಡಿತ್ತು. ಶ್ರೀವಿಜಯ ಸಾಮ್ರಾಜ್ಯದ ಸಂದರ್ಭದಲ್ಲಿ ಚೋಳ ಸಾಮ್ರಾಜ್ಯ ಉತ್ತಮವಾದ ಸಂಬಂಧವನ್ನು ಹೊಂದಿದ್ದ ಮಲಯಾ ಮತ್ತು ಭಾರತ ಒಂದನೇ ರಾಜೇಂದ್ರ ಚೋಳನ ಕಾಲದಲ್ಲಿ ಮಲಯಾದ ನಗರಗಳ ಮೇಲೆ ದಾಳಿ ಮಾಡಲಾಯಿತು. ಈ ಚೋಳ ಆಡಳಿತದ ಅವಧಿಯಲ್ಲಿ ಎರಡನೇ ಭಾರಿ ದಾಳಿ ಮಾಡಲಾಯಿತು. ಈ ಚೋಳ ಸಾಮ್ರಾಜ್ಯದ ದಾಳಿಯು ಮಲಯಾ ಜನರ ಮೇಲೆ ಪ್ರಭಾವವನ್ನು ಬೀರಿತು. ನಂತರ ಮಲಯಾವನ್ನು ಆಳ್ವಿಕೆ ಮಾಡಿದ ರಾಜರ ಹೆಸರುಗಳು ಚೋಳನ್ ಅಥವಾ ಚುಲನ್ ಎಂಬ ಹೆಸರಿನಿಂದ ಕೊನೆಗೊಳ್ಳುತ್ತಿದ್ದವು.

**ವಿಜಯನಗರ ಸಾಮ್ರಾಜ್ಯ ಮತ್ತು ಮಲಯಾದ ನಡುವೆ ವ್ಯಾಪಾರ ಸಂಬಂಧಗಳು**

ವಿಜಯನಗರ ಸಾಮ್ರಾಜ್ಯದಲ್ಲಿ ಮಲಯಾ ಮತ್ತು ಭಾರತದೊಂದಿಗೆ ಉತ್ತಮವಾದ ವ್ಯಾಪಾರ ಸಂಪರ್ಕ ಬೆಳವಣಿಗೆ ಹೊಂದಿತ್ತು. ವಿದೇಶೀ ವ್ಯಾಪಾರಕ್ಕಾಗಿಯೇ ಮಲಯಾದ ಜನರು

ಕಠಿಣ ಮತ್ತು ಮೃದು ಮರಗಳನ್ನು ಸಂಗ್ರಹಿಸುತ್ತಿದ್ದರು. ಮತ್ತು ಲೋಹಗಳನ್ನು ಸಂಗ್ರಹಿಸಿ ಅವುಗಳನ್ನು ರಫ್ತು ಮಾಡುವ ಮೂಲಕ ಅಂತರಾಷ್ಟ್ರೀಯ ವ್ಯಾಪಾರದ ಬೆಳವಣಿಗೆಗೆ ಪ್ರಾಮುಖ್ಯತೆ ನೀಡಿದರು. ಮಲಯಾದೊಂದಿಗೆ ಭಾರತವಲ್ಲದೆ, ಚೀನಿಯರು, ಅರಬ್ಬರು ಮತ್ತು ಪರ್ಷಿಯನ್ನರು ಮಲಯಾ ದ್ವೀಪಕಲ್ಪದ ಬಂದರುಗಳಲ್ಲಿ ನೆಲೆಸಿ ವ್ಯಾಪಾರ ಮತ್ತು ವಾಣಿಜ್ಯವನ್ನು ಅಭಿವೃದ್ಧಿ ಪಡಿಸಿದರು. ಅಂತರರಾಷ್ಟ್ರೀಯ ವ್ಯಾಪಾರವನ್ನು ಅಭಿವೃದ್ಧಿ ಪಡಿಸುವಲ್ಲಿ ಮಲಯಾವು ತನ್ನ ನೆರೆಯ ರಾಜ್ಯಗಳಿಗೆ ರಾಜಧೂತರನ್ನು ಕಳುಹಿಸುತ್ತಿತ್ತು ಮತ್ತು ಬೇರೆ ರಾಜ್ಯದ ರಾಜಧೂತರನ್ನು ತನ್ನ ಆಸ್ಥಾನದಲ್ಲಿ ಇಟ್ಟುಕೊಂಡಿದುದರ ಬಗ್ಗೆ ಮಾಹಿತಿಗಳಿವೆ.

ಪ್ರಾರಂಭದ ದಿನಗಳಿಂದಲ್ಲೂ ಮಲಯಾದ ದ್ವೀಪಕಲ್ಪದಲ್ಲಿ ವ್ಯಾಪಾರಿಗಳನ್ನು ಉತ್ತೇಜನಗೊಳಿಸಲಾಗುತಿತ್ತು. ಮಲಯಾದ ಪಶ್ಚಿಮ ಬಂದರುಗಳು ಪ್ರಮುಖಪಾತ್ರವಹಿಸಿದ್ದವು. ಮುಖ್ಯವಾಗಿ ಅರಬ್ ಮತ್ತು ವಾಣಿಜ್ಯವನ್ನು ಅಭಿವೃದ್ಧಿಪಡಿಸಿದರು. ಮುಖ್ಯವಾಗಿ ಭಾರತ ನಡುವೆ ವ್ಯಾಪಾರ ಮತ್ತು ವಾಣಿಜ್ಯವನ್ನು ಅಭಿವೃದ್ಧಿಪಡಿಸಿದರು. ಮುಖ್ಯವಾಗಿ ಭಾರತ ಮತ್ತು ಮಲಯಾದ ನಡುವೆ ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಸುಗಂಧದ ಮರಗಳು, ದಂತ ಮತ್ತು ಘೇಂಡಾಮೃಗದ ಕೊಂಬು ವ್ಯಾಪಾರ ಅತಿ ಹೆಚ್ಚಾಗಿ ನಡೆಯುತ್ತಿತ್ತು.[37]

ಮಲಯಾದ ಪೂರ್ವ ಬಂದರಾದ ಬೆರನಾಂಗ್ ಭಾರತದೊಂದಿಗೆ ವ್ಯಾಪಾರದ ಮತ್ತು ವಾಣಿಜ್ಯದ ಬೆಳವಣಿಗೆಯಲ್ಲಿ ಪ್ರಮುಖವಾದ ಪಾತ್ರವನ್ನು ನಿರ್ವಹಿಸಿತ್ತು. ಹಲವಾರು ಭಾರತೀಯ ದಾಖಲೆಗಳು ಸ್ಪಷ್ಟಪಡಿಸುವಂತೆ ತಕೋಲಾ ಪ್ರಮುಖವಾದ ಒಂದು ವ್ಯಾಪಾರ ಕೇಂದ್ರವಾಗಿತ್ತು. ಹಾಗೂ ತಂಜವೂರಿನಲ್ಲಿ ದೊರಕಿರುವ ಶಾಸನಗಳು ಕೂಡ ತಕೋಲಾ ಭಾರತ ಮತ್ತು ಮಲಯಾದ ನಡುವಿನ ವ್ಯಾಪಾರದ ಬೆಳವಣಿಗೆಗೆ ಕಾರಣವಾಯಿತ್ತೆಂದು ನಮಗೆ ಸ್ಪಷ್ಟಪಡಿಸುತ್ತವೆ. ಭಾರತದ ಸಮುದ್ರಗಳೊಂದಿಗೆ ಮಲಯಾದ ಪಶ್ಚಿಮ ಬಂದರುಗಳು ಕೂಡ ನೇರವಾದ ವ್ಯಾಪಾರ ಮತ್ತು ವಾಣಿಜ್ಯ ಸಂಪರ್ಕವನ್ನು ಹೊಂದಿದ್ದವು. ಹಲವಾರು ಅರಬ್ ವ್ಯಾಪಾರಿಗಳು ಕೂಡ ತಕೋಲಾ ವ್ಯಾಪಾರ ಕೇಂದ್ರದ ಬಗ್ಗೆ ಉಲ್ಲೇಖಿಸಿದ್ದಾರೆ. ಇಬನ್ ಬತೂತ್‌ನ ಪ್ರಕಾರ ವಿಜಯನಗರದ ಮತ್ತು ಮಲಯಾದ ನಡುವೆ ನೇರವಾದ ವ್ಯಾಪಾರ ಮತ್ತು ವಾಣಜ್ಯ ಸಂಪರ್ಕವಿತ್ತೆಂದು ತನ್ನ ದಾಖಲೆಗಳಲ್ಲಿ ಉಲ್ಲೇಖಿಸಿದ್ದಾನೆ. ಹಾಗೂ ಮುಂದುವರೆದಂತೆ ತಕೋಲಾ ನಗರವು ಉತ್ತಮವಾದ ನಗರವಾಗಿದ್ದು ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯಲ್ಲಿ ಉತ್ತಮವಾದ ಪಾತ್ರನಿರ್ವಹಿಸಿತ್ತೆಂದು ವಿನಂತಿಸಿದ್ದಾನೆ.

ಸಬರಾ ಎಂಬುದು ಪಶ್ಚಿಮ ಮಲಯಾದ ಮತ್ತೊಂದು ಪ್ರಮುಖವಾದ ಬಂದರಾಗಿತ್ತು. ಮತ್ತೊಂದು ಪ್ರಮುಖ ಬಂದರಾದ ಕೇಡವು ಮಲಯಾದಲ್ಲಿ ಕಂಡು ಬರುತ್ತಿದ್ದು ಮತ್ತು ಭಾರತದ ಮಾರ್ಗ ಮಧ್ಯದಲ್ಲಿ ಎರಡು ದೇಶಗಳಿಗೆ ಸಂಪರ್ಕವನ್ನು ಕಲ್ಪಿಸುತ್ತಿತ್ತು. ಈ ಬಂದರಿನಿಂದಲ್ಲೇ ಭಾರತಕ್ಕೆ ಹಡಗುಗಳು ನಿರ್ಗಮಿಸಿ ಬಂಗಾಳಕೊಲ್ಲಿ ಮತ್ತು ಮಲಬಾರ್ ಬಂದರುಗಳಿಗೆ ಬರುತ್ತಿದ್ದವು.[38] ಕೇಡದ ದಕ್ಷಿಣ ಭಾಗದಲ್ಲಿ ಹಿಂದೂಗಳ ಮತ್ತು ಭೌದ್ಧರ ನೆಲೆಗಳು ಪತ್ತೆಯಾಗಿವೆ. ಇದರಿಂದಾಗಿ ಮಲಯಾದಲ್ಲಿ ಹಿಂದೂಗಳ ಒಡನಾಟದ ಬಗ್ಗೆ ತಿಳಿಯಬಹುದಾಗಿದೆ. ಮಲಯಾ ದ್ವೀಪಕಲ್ಪವು ಮುಖ್ಯವಾಗಿ ಎಲ್ಲಾ ತರಹದ ಸರಕುಗಳು ಮತ್ತು ಸಾಂಬಾರ ಪದಾರ್ಥಗಳ ಉಗ್ರಾಣವಾಗಿತ್ತು. ಮುಖ್ಯವಾಗಿ ವ್ಯಾಪಾರದಲ್ಲಿ ತೊಡಗಿಸಿಕೊಂಡಿದ್ದ ಪ್ರಮುಖ ಸರಕುಗಳೆಂದರೆ, ದೂಪ, ಕರ್ಪೂರ, ಆನೆಯ ದಂತಗಳೂ, ಘೇಂಡಾಮೃಗದ ಕೊಂಬುಗಳು ಗಂಧದಮರ, ಕಸೂತಿ, ಘಾತ, ರೇಷ್ಮೆ, ಅಕ್ಕಿ, ಸಕ್ಕರೆ, ಕಬ್ಬಿಣ ಮುಂತಾದ ಸರಕುಗಳು ಪ್ರಮುಖ ವಾದವುಗಳಾಗಿದ್ದವು.

ಮಲಯಾದ ಅಂತರರಾಷ್ಟ್ರೀಯ ವ್ಯಾಪಾರ ವೃದ್ಧಿಗೊಳಿಸುವಲ್ಲಿ ಕಬ್ಬಿಣದ ವ್ಯಾಪಾರ ಮಹತ್ವ ಪಡೆದುಕೊಂಡಿತ್ತು. ಕಾರ್ಮಿಕರ ಕೊರತೆಯಿಂದಾಗಿ ಅಲ್ಲಿ ಹೆಚ್ಚು ಸರಕುಗಳ ಉತ್ಪಾದನೆ ಸಾಧ್ಯವಾಗಲಿಲ್ಲ ಅದರಿಂದಾಗಿ ಮಲಯಾವು ಅತಿ ಹೆಚ್ಚಾಗಿ ನೆರೆ ಹೊರೆಯ ದೇಶಗಳೊಂದಿಗೆ ವ್ಯಾಪಾರ ವಹಿವಾಟಿನಲ್ಲಿ ತೊಡಗಿಸಿಕೊಂಡಿತ್ತು. ಚೀನಾ, ಜಾವಾ ಸುಮಾತ್ರ ಭಾರತಗಳೊಂದಿಗೆ ವ್ಯಾಪಾರ ವಹಿವಾಟಿನಲ್ಲಿ ತೊಡಗಿಸಿಕೊಂಡಿತ್ತು. ಮಲಯಾವು ಭಾರತ ಮತ್ತು ಜಾವಾದಿಂದ ಅಕ್ಕಿಯನ್ನು ಆಮದುಮಾಡಿಕೊಳ್ಳುತ್ತಿತ್ತು. ಮಲಯಾದ ಕೆಲವು ಕಾಡುಗಳಲ್ಲಿ ದೊರೆಯುತ್ತಿದ್ದ ಅಪಾರವಾದ ಸರಕುಗಳು ತವರ, ಚಿನ್ನ, ಬೆಳ್ಳಿ ಪ್ರಮುಖವಾಗಿ ಉತ್ಪಾದನೆಯಾಗುತ್ತಿದ್ದವು.

ಆಂತರಿಕ ಮತ್ತು ಬಾಹ್ಯ ವ್ಯಾಪಾರ ಮಲಯಾ ದ್ವೀಪಕಲ್ಪದ ಬೆಳವಣಿಗೆಗೆ ಪ್ರಮುಖ ಪಾತ್ರವನ್ನು ನಿರ್ವಹಿಸಿದ್ದವು. ಆಂತರಿಕ ವ್ಯಾಪಾರವು ರಾಜಕೀಯದ ಬೆಳವಣಿಗೆಗೆ ಪೂರಕ ವಾಯಿತು. ಈ ಬಲಿಷ್ಠವಾದ ವ್ಯಾಪಾರ ಮತ್ತು ರಾಜಕೀಯ ಮಲಯಾದ ರಾಜ್ಯವಿಸ್ತರಣೆಯಲ್ಲೂ ಪ್ರಮುಖವಾದ ಪಾತ್ರವನ್ನು ನಿರ್ವಹಿಸಿತು. ಬಾಹ್ಯ ವ್ಯಾಪಾರವು ಮಲಯಾವು ಭಾರತದೊಂದಿಗೆ ಉತ್ತಮವಾದ ಸಂಪರ್ಕವನ್ನು ಬೆಳೆಸಿಕೊಳ್ಳಲು ಸಾಧ್ಯವಾಯಿತು. ಭಾರತದ ಕೋರಮಂಡಲ ತೀರದ ಹಲವಾರು ವ್ಯಾಪಾರಿಗಳು ಮಲಯಾಕ್ಕೆ ಹೋಗಿ ಅಲ್ಲಿ ವ್ಯಾಪಾರ ಮತ್ತು ವಾಣಿಜ್ಯದ ಪ್ರಕ್ರಿಯೆಯಲ್ಲಿ ತೊಡಗಿದ್ದರು.

ಮಲಯಾ ಮತ್ತು ಭಾರತದ ಸಂಬಂದಗಳಲ್ಲಿ ಬಹಳ ಮುಖ್ಯವಾಗಿ ಚೀನಾದ ಪ್ರಭಾವನ್ನು ನಾವು ಕಾಣಬಹುದಾಗಿದೆ. ಮಲಯಾವು ಕೆಲವೊಂದು ಸಂದರ್ಭ ನೇರ ಸಂಬಂಧವನ್ನು ಹೊಂದಿತ್ತೆಂದು ಹೇಳಬಹುದು. ಚೀನಾದಿಂದ ಬರುತ್ತಿದ್ದ ಎಲ್ಲಾ ಹಡಗುಗಳು ಮಲಯಾವನ್ನು ಸಂದರ್ಶಿಸಿಯೇ ಬರುತ್ತಿದ್ದವು. ಇದರಿಂದಾಗಿ ಚೀನಾ ಮತ್ತು ಮಲಯಾದ ನಡುವೆ ನೇರವಾದ ವ್ಯಾಪಾರ ಸಂಪರ್ಕವಿತ್ತು. ಚೀನಾದ ವರ್ತಕರು ಮಲಯಾದಿಂದ ಸರಕುಗಳನ್ನು ಕೊಂಡುಕೊಂಡು ಬಂದು ಭಾರತದ ಕರಾವಳಿ ಭಾಗಗಳಲ್ಲಿ ಮಾರಾಟ ಮಾಡಿ ಇಲ್ಲಿಂದ ಸರಕುಗಳನ್ನು ತುಂಬಿಕೊಂಡು ಮಲಯಾ ಮತ್ತು ಚೀನಾದಲ್ಲಿ ಮಾರಾಟ ಮಾಡುತ್ತಿದ್ದರು. ಇದೇ ರೀತಿ ಭಾರತದಲ್ಲಿ ವ್ಯಾಪಾರದೊಂದಿಗೆ ಅರಬ್ಬರು ಮತ್ತು ಪರ್ಷಿಯನ್ನರು ಮಲಯಾದವವರೆಗೂ ಹೋಗಿ ಅಲ್ಲಿಂದ ಸರಕುಗಳನ್ನು ಕೊಂಡುಕೊಂಡು ಬಂದು ಮತ್ತೆ ಅಲ್ಲಿಂದ ಅವುಗಳನ್ನು ಅರಬ್ ಮತ್ತು ಯುರೋಪಿನ ದೇಶಗಳಿಗೆ ಅವರು ಮಾರಾಟ ಮಾಡುತ್ತಿದ್ದರು.[39]

ಹೀಗೆ ಮಲಯಾ ಮತ್ತು ವಿಜಯನಗರ ಸಾಮ್ರಾಜ್ಯದೊಂದಿಗೆ ಸಂಬಂದ ಏರ್ಪಟಿತ್ತು ಈ ಎರಡು ದೇಶಗಳ ನಡುವಿನ ಬೆಳವಣಿಗೆಯಲ್ಲಿ ವಿಜಯನಗರ ಸಾಮ್ರಾಜ್ಯ ಮತ್ತು ಶ್ರೀ ವಿಜಯ ಸಾಮ್ರಾಜ್ಯಗಳು ತಮ್ಮ ಪರಸ್ಪರ ರಾಜತಾಂತ್ರಿಕ ಮತ್ತು ವಾಣಿಜ್ಯದ ಸಂಬಂಧಗಳ ಮೂಲಕ ತಮ್ಮ ಸ್ನೇಹ ಸಂಬಂಧವನ್ನು ಗಟ್ಟಿಗೊಳಿಸಿಕೊಂಡಿದ್ದವು ಎಂದು ಹೇಳಬಹುದು. ಒಟ್ಟಿನಲ್ಲಿ ಹೇಳುವುದಾದರೆ ಮಲಯಾ ಮತ್ತು ವಿಜಯನಗರ ಸಾಮ್ರಾಜ್ಯದ ನಡುವಿನ ಸಂಬಂಧಗಳ ನಡುವಿನ ಅಧ್ಯಯನಕ್ಕೆ ಕೆಲವೊಂದು ದಾಖಲೆಗಳ ಕೊರತೆ ಕಂಡು ಬಂದರು ಕೂಡ ಚೀನಾ ಮತ್ತು ಅರಬ್ಬರ ದಾಖಲೆಗಳು ನಮಗೆ ಕೆಲವೊಂದು ಮಾಹಿತಿಯನ್ನು ನೀಡಿ ಅಧ್ಯಯನಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟಿವೆ. ಹೀಗಾಗಿ ಈ ಎರಡು ದೇಶಗಳ ನಡುವಿನ ಸಂಬಂಧವನ್ನು ಮೇಲ್ಕಂಡ ರೀತಿಯಲ್ಲಿ ವಿವರಿಸಲಾಗಿದೆ.

## ಗ್ರಂಥಸೂಚಿ

1. Heras, South India under vijayanagara Empire, P-20
2. Louise Levathes, when china vied the seas, P-35 – 45
3. John king fairbank Trade and Diplomacy on the china coast the opening of Treaty ports, P-40
4. Chaudhari K.N. Trade and ciilisation in the Indian ocean, P – 51
5. Nilakanta sastri, k.A. History of South India P-333.
6. ಅದೇ P – 335
7. Gibb, H.A.R. Ibn Battuta, Travels is in Asia and Africa, P – 235
8. ಅದೇ P – 235 - 236
9. Gibb, H.A.R. Ibn Battuta, Travels is in Asia and Africa, P – 238
10. Neelakanta sasri, K.A. A History of South India, P-333
11. Haraprasad Ray, Historical contacts between quilon and china, P-394– 395
12. Mathew K.S. Indo – Portuguese Trade and the fuggens of Germany, P – 43
13. Hariprasad Ray, Trade between South India and the China of P – 40
14. ಅದೇ P – 40, 41, 42
15. ಅದೇ P – 45
16. Chaudhuri K.N. Trade and civilization in the Indian ocean, P-154
17. ಅದೇ, P – 155
18. Pillay K.K. South India and srilanka, P – 112
19. ಅದೇ P – 106
20. Pillay K.K.South India and Srilanka, P – 105
21. Nilakanta Sastri K.A. History of Ceylon. P- 686
22. Pillay, K.K. South India and Srilanka, P – 106

23. ಅದೇ P – 107
24. Epigraphica Indica Vol, Viii, P – 300 – 301
25. Pillay K.K. South India and Srilanka, P- 108
26. S.I.I. Vol. VII No. 778
27. S.I.I. Vol No VII, No, 428
28. Indian, Ant, Vol, Xiii, P - 45
29. ಪ್ರವಾಸಿ ಕಂಡ ಇಂಡಿಯಾ, ಸಂಪುಟ–2, P – 154
30. ಕನ್ನಡ ವಿಶ್ವವಿದ್ಯಾನಿಲಯ ಶಾಸನ ಸಂಪುಟ – 2, ಸಂಖ್ಯೆ – 138, P – 138
31. ಪ್ರವಾಸಿ ಕಂಡ ಇಂಡಿಯಾ, ಸಂಪುಟ–3, ಬಾರ್ಬೋಸಾ, P – 281
32. Elliot, History of India as told by it's own Historens, IV, P – 109
33. ರಾಬರ್ಟ್ ಸಿವೆಲ್, ಸದಾನಂದ ಕನವಳ್ಳಿ, ಮರೆತು ಹೋದ ಮಹಾಸಾಮ್ರಾಜ್ಯ ವಿಜಯನಗರ, P – 257
34. Pillay K.K. South India and Srilanka, P- 112
35. OM prakash, manohar, Bullion for Goods European and Indian Merchants in the Indian ocean Trade, 1500 – 1800, P -177.
36. Ray, H.P. Trade and Trade Routes between India an china, P – 75
37. ಅದೇ P – 85
38. Wolters O.W. The fall of Srivijaya in Malaya, P -150
39. ಅದೇ P – 155

# ಅಧ್ಯಾಯ– 5

# ವಿಜಯನಗರ ಸಾಮ್ರಾಜ್ಯ ಮತ್ತು ಆಫ್ರಿಕಾ ಹಾಗೂ ಈಜಿಪ್ಟ್ ರಾಷ್ಟ್ರಗಳೊಂದಿಗಿನ ಸಂಬಂಧಗಳು

ಈಗಾಗಲೇ ಎರಡು, ಮೂರು ಮತ್ತು ನಾಲ್ಕನೇ ಘಟಕಗಳಲ್ಲಿ ವಿಜಯನಗರ ಸಾಮ್ರಾಜ್ಯವು ವಿಶ್ವದ ವಿವಿಧ ಭಾಗಗಳೊಂದಿಗೆ ಹೊಂದಿದ್ದ ವ್ಯಾಪಾರ, ವಾಣಿಜ್ಯ ಮತ್ತು ಸಾಂಸ್ಕೃತಿಕ ಸಂಬಂಧಗಳನ್ನು ಬಹಳ ಸವಿಸ್ತಾರವಾಗಿ ಚರ್ಚಿಸಿದ್ದೇನೆ. ಹಾಗೆಯೇ ವಿಜಯನಗರ ಸಾಮ್ರಾಜ್ಯವು ಆಫ್ರಿಕಾ ದೇಶಗಳೊಂದಿನ ಮತ್ತು ಈಜಿಪ್ಟ್‌ನೊಂದಿಗೆ ಕೂಡ ಉತ್ತಮವಾದ ಸಂಬಂಧವನ್ನು ಹೊಂದಿತ್ತು, ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಆಫ್ರಿಕಾ ಮತ್ತು ಭಾರತದೊಂದಿಗೆ ನಡೆಯುತ್ತಿದ್ದ ಪ್ರಮುಖ ವ್ಯಾಪಾರಗಳಲ್ಲಿ ಗುಲಾಮರ ವ್ಯಾಪಾರ ಪ್ರಾಮುಖ್ಯ ತೆಗಳಿಸಿತ್ತು. ಅರಬ್ಬರು ಮತ್ತು ಯುರೋಪಿಯನ್ನರು ಆಫ್ರಿಕಾದ ವ್ಯಾಪಾರದ ಮೇಲೆ ಏಕಸ್ವಾಮ್ಯ ವನ್ನು ಹೊಂದಿದ್ದರು. ಭಾರತದೊಂದಿಗೆ ಸಂಬಂಧ ಹೊಂದಿದ್ದ ಅರಬ್ಬರು ಮತ್ತು ಯುರೋಪಿ ಯನ್ನರು ಭಾರತ ಮತ್ತು ಆಫ್ರಿಕಾ ನಡುವೆ ವ್ಯಾಪಾರದ ಮಧ್ಯವರ್ತಿಗಳಾಗಿ ವರ್ತಿಸಿದರೆಂದು ಹೇಳಿದರೆ ತಪ್ಪಾಗಲಾರದು.

ಆಫ್ರಿಕಾದ ಇತಿಹಾಸವು ಸುಮಾರು 5 ರಿಂದ 7 ಮಿಲಿಯನ್ ವರ್ಷಗಳ ಹಿಂದಿನದಾಗಿದೆ. ಮದ್ಯಕಾಲೀನ ಆಫ್ರಿಕಾವು ವಿಶ್ವದ ವಿವಿಧ ಭಾಗಗಳೊಂದಿಗೆ ಮುಖ್ಯವಾಗಿ ಭಾರತ, ಅರೇಬಿಯಾ ಮತ್ತು ಯುರೋಪಿಯನ್ ದೇಶಗಳೊಂದಿಗೆ ಉತ್ತಮವಾದ ಸಂಬಂಧವನ್ನು ಬೆಳೆಸಿಕೊಂಡಿತ್ತು. ಸಾವೋ ನಾಗರೀಕತೆಯು ಸುಮಾರು ಕ್ರಿ.ಶ. ಆರನೇ ಶತಮಾನದಿಂದ ಹದಿನಾರನೇ ಶತಮಾನವರೆಗೆ ಮಧ್ಯ ಆಫ್ರಿಕಾದಲ್ಲಿ ಬೆಳವಣಿಗೆ ಹೊಂದಿತ್ತು. ನಂತರ ಕನಿಮ್ ಸಾಮ್ರಾಜ್ಯ, ಬೋನ್ರ್ರೋ ಸಾಮ್ರಾಜ್ಯ, ಶಿಲುಕೂ ಸಾಮ್ರಾಜ್ಯ, ವಾದಾಯಿಸಾಮ್ರಾಜ್ಯ, ಕೊಂಗೋ ಸಾಮ್ರಾಜ್ಯ ಲೂಡ ಸಾಮ್ರಾಜ್ಯ ಆಫ್ರಿಕಾದಲ್ಲಿ ಆಳ್ವಿಕೆ ಮಾಡಿದವು. ಉತ್ತರ ಆಫ್ರಿಕಾವು ಕ್ರಿ.ಶ. 711ರಲ್ಲಿ ಉಮಾದ್ ಖಲೀಪನ ಆಳ್ವಿಕೆಗೆ ಒಳಪಟ್ಟಿತ್ತು. ಸುಮಾರು ಕ್ರಿ.ಶ. 10ನೇ ಶತಮಾನದ ವೇಳೆಗೆ ಈ ಭಾಗದಲ್ಲಿ ಮುಸ್ಲಿಂ ಜನಸಂಖ್ಯೆ ಬೆಳವಣಿಗೆ ಹೊಂದಿತ್ತು.

ಆಫ್ರಿಕಾದಲ್ಲಿ ಪೂರ್ವ ಆಫ್ರಿಕಾವು ಪ್ರಾರಂಭದಲ್ಲಿ ಭಾರತದ ಸಮುದ್ರಗಳೊಂದಿಗೆ ಉತ್ತಮವಾದ ವ್ಯಾಪಾರ ಸಂಪರ್ಕವನ್ನು ಅಭಿವೃದ್ಧಿಪಡಿಸಿಕೊಂಡಿತ್ತು. ಆಫ್ರಿಕಾದ ಪ್ರಮುಖ ಪ್ರಾಂತ್ಯಗಳಾದ ಸೋಮಾಲಿಯಾ, ಕೀನ್ಯಾ, ತಾಂಜೇನಿಯಾ ಹಾಗೂ ಮಡಗಾಸ್ಕರ್ ದ್ವೀಪಗಳು ನೇರವಾಗಿ ಭಾರತದ ಪಶ್ಚಿಮ ಬಂದರುಗಳೊಂದಿಗೆ ನೇರವಾದ ವ್ಯಾಪಾರ ಸಂಪರ್ಕವನ್ನು

ಹೊಂದಿದ್ದವು. ಆಫ್ರಿಕಾ ಮತ್ತು ಭಾರತದ ನಡುವಿನ ಸಂಬಂದವು ಮುಖ್ಯವಾಗಿ ಬೆಳವಣಿಗೆ ಹೊಂದಲು ಅರಬ್ಬರು ಮತ್ತು ಯುರೋಪಿಯನ್ನರ ವ್ಯಾಪಾರವು ಸಹಾಯಕವಾಗಿತ್ತು.

**5.1 ವಿಜಯನಗರ ಸಾಮ್ರಾಜ್ಯ ಮತ್ತು ಆಫ್ರಿಕಾ**

ವಿಜಯನಗರ ಸಾಮ್ರಾಜ್ಯ ಮತ್ತು ಆಫ್ರಿಕಾದೊಂದಿಗೆ ಉತ್ತಮವಾದ ವ್ಯಾಪಾರ ಮತ್ತು ವಾಣಿಜ್ಯ ಸಂಪರ್ಕಗಳು ಬೆಳವಣಿಗೆ ಹೊಂದಿದ್ದವು. ಒಂದು ಉಲ್ಲೇಖದ ಪ್ರಕಾರ ಒಬ್ಬ ವ್ಯಕ್ತಿ ಸ್ವತಹ ತಾನು 25 ಕೆ.ಜಿ. ಸರಕನ್ನು ಸಾಗಿಸಬಲ್ಲ ಅದೇ ವ್ಯಕ್ತಿ ರಸ್ತೆಯ ಮೇಲೆ ಸಾಧನಗಳ ಮೂಲಕ 250 ಕೆ.ಜಿ. ಯಷ್ಟು ಸರಕನ್ನು ಸಾಧಿಸಬಲ್ಲ ಅದೇ ವ್ಯಕ್ತಿ ಸುಮಾರು 2,500 ಕೆ.ಜಿ ಯಷ್ಟು ಸರಕನ್ನು ರೈಲಿನಲ್ಲಿ ಸಾಗಿಸಬಲ್ಲ ಆದರೆ ಅದೇ ವ್ಯಕ್ತಿ ಹಡಗುಗಳ ಮೂಲಕ ಸುಮಾರು 25,000 ಕೆ.ಜಿ.ಯಷ್ಟು ಸರಕುಗಳನ್ನು ಸಾಗಿಸಬಲ್ಲ, ಭಾರತದ ದೊಡ್ಡ ಕರಾವಳಿ ತೀರಪ್ರದೇಶವು ವಿಶ್ವದ ವಿವಿಧ ಭಾಗಗಳೊಂದಿಗೆ ವ್ಯಾಪಾರ ಮತ್ತು ವಾಣಿಜ್ಯದ ಸಂಪರ್ಕವನ್ನು ಹೊಂದಿತ್ತು. ಪರ್ಷಿಯನ್ ಕೊಲ್ಲಿ ಮತ್ತು ಓಮನ್ ದೇಶದ ಬಂದರುಗಳು ಪೂರ್ವದ ವ್ಯಾಪಾರದಲ್ಲಿ ಪ್ರಮುಖ ಪಾತ್ರವಹಿಸಿದ್ದವು. ಪಾಶ್ಚಿಮಾತ್ಯ ವ್ಯಾಪಾರವು ಪೂರ್ವದೊಂದಿಗೆ ಈ ಬಂದರುಗಳ ಮೂಲಕವೇ ನಡೆಯುತಿತ್ತು. ಆಫ್ರಿಕಾದ ವ್ಯಾಪಾರದಲ್ಲಿ ದಕ್ಷಿಣ ಅರೇಬಿಯಾದ ಬಂದರುಗಳಾದ ಅದೇನ್, ಮೊಕ್ಕಾ ಮುಖ್ಯ ಬಂದರುಗಳಾಗಿದ್ದವು.[1]

ಸೋಮಾಲಿ ಬಂದರು ಪೂರ್ವ ಆಫ್ರಿಕಾದಲ್ಲಿ ಬೆಳವಣಿಗೆ ಹೊಂದಿದ್ದ ಪ್ರಥಮ ಮತ್ತು ಪ್ರಮುಖ ಬಂದರಾಗಿತ್ತು. ಮೊದಲ ಇಸ್ಲಾಂ ಪ್ರಚಾರವು ಕೂಡ ಸೋಮಾಲಿಯಲ್ಲಾಯಿತು. ಮುಸ್ಲಿಂ ಧರ್ಮವು ತನ್ನ ನೆಲೆಯನ್ನು ಸೋಮಾಲಿಯಾದಲ್ಲಿ ಕಂಡುಕೊಂಡ ಮೇಲೆ ಹಲವಾರು ಮುಸ್ಲಿಂ ವ್ಯಾಪಾರಿಗಳು ಹಾಗೂ ಧರ್ಮಪ್ರಚಾರಕರು ಸೋಮಾಲಿಯಾದಲ್ಲಿ ಬಂದು ನೆಲೆಸಲು ಪ್ರಾರಂಭಿಸಿದರು. ನಂತರ ಅಲ್ಲಿನ ವ್ಯಾಪಾರದ ಮೇಲೆ ಪೂರ್ಣ ನಿಯಂತ್ರಣವನ್ನು ಪಡೆದುಕೊಂಡರು. ಆಫ್ರಿಕಾದ ಸ್ವಾಭಾವಿಕ ಸರಕುಗಳು ವಿಶ್ವದ ವಿವಿಧ ಭಾಗಗಳಿಗೆ ರಫ್ತಾಗುತ್ತಿದ್ದವು. ಮುಖ್ಯವಾಗಿ ವ್ಯಾಪಾರದ ಎಲ್ಲಾ ಕಾಲದಲ್ಲೂ ಆನೆದಂತವು ಇಥಿಯೋಪಿಯಾ ಮತ್ತು ಅದುಲಿಸ್ ಬಂದರುಗಳಿಂದ ರಫ್ತಾಗುತ್ತಿದ್ದವು. ಪೂರ್ವ ಆಫ್ರಿಕಾದ ತಾಂಜೇನಿಯಾದಲ್ಲಿರುವ ಕಿಲ್ವಾ ಬಂದರು ಪ್ರಮುಖ ಬಂದರಾಗಿದ್ದು ಈ ಬಂದರಿನಿಂದ ಚಿನ್ನವು ಅತ್ಯಂತ ಪ್ರಮುಖವಾದ ಲೋಹವು ಇಲ್ಲಿಂದ ರಫ್ತಾಗುತಿತ್ತು. ಇತ್ತೀಚಿನ ಸಂಶೋಧನೆಗಳ ಪ್ರಕಾರ ಕಿಲ್ವಾ ಬಂದರಿನಿಂದ ಅಕ್ಕಿಯು ಕೂಡ ರಫ್ತಾಗುತಿತ್ತು.[2]

ಆಫ್ರಿಕಾದ ಮತ್ತೊಂದು ಪ್ರಮುಖ ಬಂದರಾದ ಮಡಗಸ್ಕರ್‌ನಿಂದ ಹಲವಾರು ಸರಕುಗಳ ಭಾರತಕ್ಕೆ ರಫ್ತಾಗುತ್ತಿದ್ದವು. ಅಂತಹ ಸರಕುಗಳಲ್ಲಿ ಕಬ್ಬಿಣವು ಪ್ರಮುಖವಾದುದಾಗಿತ್ತು. ಭಾರತದಲ್ಲಿ ಸಾಮ್ರಾಜ್ಯಗಳು ಬೆಳವಣಿಗೆ ಹೊಂದಿದಂತೆಲ್ಲ ಅವು ತಮ್ಮ ಸಾಮ್ರಾಜ್ಯ ವಿಸ್ತರಣೆಯಲ್ಲಿ ತೊಡಗಿಸಿಕೊಂಡಿದ್ದವು. ಸೈನಿಕರ ದಕ್ಷತೆಯನ್ನು ಹೆಚ್ಚಿಸಲು ಅವರಿಗೆ ಖಡ್ಗವನ್ನು ನೀಡುತ್ತಿದ್ದರು. ಮತ್ತು ಭರ್ಜಿಗಳನ್ನು ತಯಾರಿಸುತ್ತಿದ್ದರು. ಈ ಕಾರ್ಯಗಳಲ್ಲಿ ವಿಜಯನಗರ ಸಾಮ್ರಾಜ್ಯವು ಕೂಡ ಹೊರತಾಗಿರಲಿಲ್ಲ ವಿಜಯನಗರದ ಅರಸರು ಉತ್ತಮ ಸೈನ್ಯವನ್ನು ನಿರ್ಮಾಣ ಮಾಡುವಲ್ಲಿ ಕುದುರೆಗಳನ್ನು ಮತ್ತು ಕಬ್ಬಿಣವನ್ನು ಆಮದು ಮಾಡಿಕೊಳ್ಳುತ್ತಿದ್ದರು. ದಕ್ಷಿಣ ಭಾರತದಲ್ಲಿ ಬಹುಮನಿ ಸಾಮ್ರಾಜ್ಯ ಮತ್ತು ವಿಜಯನಗರ ಸಾಮ್ರಾಜ್ಯದ ನಡುವೆ ಯಾವಾಗಲೂ ಯುದ್ಧಗಳು ಸಂಭವಿಸುತ್ತಿದ್ದವು. ಯುದ್ಧ ಮಾಡಲು ಅವಶ್ಯಕವಾಗಿದ್ದ ಖಡ್ಗಗಳನ್ನು ತಯಾರಿಸಲು ಪೂರ್ವ ಆಫ್ರಿಕಾದ ಕಿಲ್ವಾದಿಂದ ಅತಿ ಹೆಚ್ಚಾಗಿ ಕಬ್ಬಿಣ ಭಾರತಕ್ಕೆ ರಫ್ತಾಗುತಿತ್ತು. ಈ ಕಬ್ಬಿಣದಿಂದ ಅತಿ ಬಲಿಷ್ಟವಾದ ಖಡ್ಗಗಳನ್ನು ತಯಾರಿಸಲಾಗುತಿತ್ತು.

ವಿಶ್ವದ ವಿವಿಧ ಮೂಲಗಳಿಂದ ಪೂರ್ವ ಆಫ್ರಿಕಾಕ್ಕೆ ಹಲವಾರು ಸರಕುಗಳು ಅಮದಾಗುತ್ತಿದ್ದವು. ಚೀನಾದ ಪಿಂಗಾಣಿಗಳು, ಭಾರತದಿಂದ ಬಟ್ಟೆ ಮುಖ್ಯವಾದ ಸರಕುಗಳಾಗುತ್ತಿದ್ದವು. ಚೀನಾದಿಂದ ರೇಷ್ಮೆ, ಕೂಡ ಆಫ್ರಿಕಾಕ್ಕೆ ಆಮದಾಗುತಿತ್ತು. ಭಾರತದಿಂದ ಅಮದಾಗುತ್ತಿದ್ದ ಮತ್ತೊಂದು ಪ್ರಮುಖ ಸರಕು ದಾಲ್ಚಿನ್ನಿ ಚೆಕ್ಕೆಯಾಗಿತು. ಮಧ್ಯ ಆಫ್ರಿಕಾದಲ್ಲಿ ಅತಿ ಹೆಚ್ಚಾಗಿ ದೊರಕುತ್ತಿದ್ದ ತಾಮ್ರವು ದಿನಬಳಕೆಯ ಸಾಮಾಗ್ರಿಗಳನ್ನು ತಯಾರು ಮಾಡಲು ಭಾರತಕ್ಕೆ ರಫ್ತಾಗುತ್ತಿದ್ದವು. ಆಫ್ರಿಕಾದ ಬಂದರುಗಳ ವಿದೇಶೀ ವ್ಯಾಪಾರವು ಸಂಪೂರ್ಣವಾಗಿ ಅರಬ್ಬರ ಕೈಯಲಿತ್ತು.[3]

ಆಫ್ರಿಕಾದ ಉತ್ತಮ ವ್ಯಾಪಾರದಲ್ಲಿ ತೈರ್ ಮತು ಸಿರಿಯಾ ವ್ಯಾಪಾರಿಗಳು ಭಾರತೀಯ ವ್ಯಾಪಾರಿಗಳನ್ನು ಜೊತೆಯಲ್ಲಿ ಕರೆದುಕೊಂಡು ಹೋಗಿ ಆಫ್ರಿಕಾದ ಬಂದರುಗಳಲ್ಲಿ ಭಾರತೀಯ ವ್ಯಾಪಾರಿಗಳ ವ್ಯಾಪಾರದ ಏಜೆನ್ಸಿಯನ್ನು ಸ್ಥಾಪಿಸಿದರು. ಆಫ್ರಿಕಾ ಮತ್ತು ಭಾರತದ ನಡುವಿನ ವಾಣಿಜ್ಯ ಸಂಬಂಧವನ್ನು ದಿ ಪೆರಿಪ್ಲಸ್–ಆಫ್–ದಿ–ಎರಿತ್ರಿಯನ್–ಸೀ ಎಂಬ ಗ್ರಂಥದಲ್ಲೇ ಉಲ್ಲೇಖ ಮಾಡಲಾಗಿದೆ. ಆಫ್ರಿಕಾದಿಂದ ಬರುತ್ತಿದ ಸರಕುಗಳು ಮುಖ್ಯವಾಗಿ ಅರಬ್ಬರಿಂದ ಭಾರತದ ಪ್ರಮುಖ ಬಂದರುಗಳಾದ ಮಲಬಾರ್, ಕೊಚ್ಚಿನ್, ಮತ್ತು ಕ್ಯಾಲಿಕಟ್‌ಗೆ ಬಂದು ತಲುಪುತ್ತಿದ್ದವು.

ಪೋರ್ಚುಗೀಸರೊಂದಿಗೆ ಉತ್ತರ ಆಫ್ರಿಕಾ ಮಾರ್ಗವಾಗಿ ಬಂದ ಪ್ರಾರಂಭದ ಪ್ರವಾಸಿಗರು ತಮ್ಮ ದಾಖಲೆಗಳಲ್ಲಿ ಉಲ್ಲೇಖಿಸಿರುವಂತೆ ಪೂರ್ವ ಆಫ್ರಿಕಾದ ಪ್ರತಿಯೊಂದು ಬಂದರುಗಳಲ್ಲಿ ಭಾರತದ ವ್ಯಾಪಾರಿಗಳು ಸರಕುಗಳನ್ನು ಕೊಂಡುಕೊಳ್ಳುತ್ತಿದುದರ ಬಗ್ಗೆ ಮಾಹಿತಿ ನೀಡಿದ್ದಾರೆ. ಭಾರತೀಯರು ಮುಖ್ಯವಾಗಿ ತಮ್ಮ ಹಡಗುಗಳೊಂದಿಗೆ ನೇರವಾಗಿ ಆಫ್ರಿಕಾದ ಬಂದರುಗಳನ್ನು ತಲುಪುತ್ತಿದ್ದರು. ಪ್ರತಿ ಹಡಗುಗಳು ಮಾನ್ಸೂನ್ ಮಾರುತಗಳನ್ನು ಅವಲಂಬಿಸಿ ತಮ್ಮ ಯಾನವನ್ನು ಆರಂಭಿಸುತ್ತಿದ್ದವು. ಇದೇ ವ್ಯಾಪಾರದಲ್ಲಿ ಭಾರತೀಯರಲ್ಲದೇ ಅರಬ್ಬರು ಮತ್ತು ಪರ್ಷಿಯನ್ನರು ಕೂಡ ಸರಕುಗಳನ್ನು ಸಾಗಿಸುತ್ತಿದ್ದರು. ಪ್ರಾರಂಭದಲ್ಲಿ ಅರಬ್ಬರು ನಂತರ ಯುರೋಪಿಯನ್ನರು ಭಾರತದ ವ್ಯಾಪಾರವನ್ನು ಉನ್ನತ್ತಿಗೊಳಿಸಿದರು. ಭಾರತದ ಸಮುದ್ರವು ಎಲ್ಲಾ ವ್ಯಾಪಾರಕ್ಕೂ ಸುಭದ್ರವಾಗಿರಲಿಲ್ಲ ಕೆಲವೊಂದು ಸಂದರ್ಭಗಳಲ್ಲಿ ಹಡಗುಗಳನ್ನು ಲೂಟಿ ಮಾಡಲಾಗುತ್ತಿತ್ತು. ಆಫ್ರಿಕಾದಿಂದ ಬರುತ್ತಿದ್ದ ಸರಕುಗಳು ವಸ್ತು ವಿನಮಯದ ಮೂಲಕ ವ್ಯಾಪಾರ ನಡೆಸುತ್ತಿದ್ದವು.[4] ಆಫ್ರಿಕಾದಿಂದ ಆನೆಯದಂತವನ್ನು ತಂದು ಅದನ್ನು ಭಾರತದ ನೀಲಿ ಹತ್ತಿಯ ಬಟ್ಟೆಗಳೊಂದಿಗೆ ವಿನಿಮಯ ಮಾಡಿಕೊಳ್ಳುತ್ತಿದ್ದರು. ಹಾಗೂ ಮುಖ್ಯವಾಗಿ ಲೋಹಗಳು ಮತ್ತು ಗಾಜಿನ ಮಣಿಗಳು ಆಫ್ರಿಕಾದಲ್ಲಿ ಅತಿ ಹೆಚ್ಚಿನ ಬೇಡಿಕೆಗಳನ್ನು ಹೊಂದಿದವು. ಈ ವಸ್ತುಗಳೊಂದಿಗೆ ಆಫ್ರಿಕಾ ವಸ್ತುಗಳು ವಿನಿಮಯವಿತ್ತು.

ಮಡಗಸ್ಕರ್ ಪ್ರಾರಂಭದಲ್ಲಿ ಆಫ್ರಿಕಾದಿಂದ ಬೇರ್ಪಟ್ಟು ನಂತರ ಹಲವಾರು ಆಫ್ರಿಕನ್ನರು ಮಡಗಸ್ಕರ್‌ನಲ್ಲಿ ನೆಲೆಸಲು ಪ್ರಾರಂಭಿಸಿದರು. ನಂತರ ಇದು ಕೂಡ ಒಂದು ಪ್ರಮುಖ ಆಫ್ರಿಕಾದ ಪ್ರದೇಶವಾಯಿತು. ಮಡಗಸ್ಕರ್ ಒಂದು ದ್ವೀಪವಾಗಿದ್ದು ಸ್ವತಂತ್ರವಾದ ಭೌಗೋಳಿಕ ಲಕ್ಷಣವನ್ನು ಹೊಂದಿದೆ. ಆಫ್ರಿಕನ್ನರು ಹಡಗುಗಳ ನಿರ್ಮಾಣ ಮತ್ತು ಯಾನದ ತಂತ್ರಗಾರಿಕೆಯನ್ನು ಭಾರತೀಯರಿಂದ ಭಾರತದ ಸಮುದ್ರಯಾನದಿಂದ ಕಲಿತರೆಂದು, ಹೆಚ್ ದೇಶ್ ಚಂಪಸ್ ತಿಳಿಸಿದ್ದಾರೆ. ಆಫ್ರಿಕಾವು ಭಾರತದೊಂದಿಗಿನ ಸಂಬಂಧವನ್ನು ಅಭಿವೃದ್ಧಿಪಡಿಸಿ ಕೊಳ್ಳುವುದರ ಮೂಲಕ ಸಂಸ್ಕ್ಥತಿಯ ಬದಲಾವಣೆ ಕೂಡ ಕಂಡು ಬಂತು. ಭಾರತದ ಪ್ರಮುಖ ಹಿಂದೂಧರ್ಮದ ತತ್ವಗಳು, ಬೌದ್ಧಧರ್ಮದ ಸಿದ್ಧಾಂತಗಳು ಮತ್ತು ಇಸ್ಲಾಂ ತತ್ವಗಳು ಕೂಡ ಆಫ್ರಿಕಾದಲ್ಲಿ ಬೆಳವಣಿಗೆ ಹೊಂದಿದ್ದವು. ಈ ತತ್ವಗಳ ಬೆಳವಣಿಗೆಯಿಂದಾಗಿ ಆಫ್ರಿಕಾದಲ್ಲಿ ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಮತ್ತು ರಾಜಕೀಯ ಬದಲಾವಣೆಗಳುಂಟಾದವು.

ಭಾರತದ ಪ್ರಭಾವದಿಂದಾಗಿ ಆಫ್ರಿಕಾದಲ್ಲಿ ಅಕ್ಕಿ ಬೆಳೆಯುವ ಪ್ರಕ್ರಿಯೆಯ ಪ್ರಾರಂಭವಾಯಿತು. ಈ ಸಂದರ್ಭದಲ್ಲಿ ಕಾಡುಗಳನ್ನು ನಾಶಮಾಡಿ ಆ ಭೂಮಿಯನ್ನು ಕೃಷಿ

ಭೂಮಿಯಾಗಿ ಪರಿವರ್ತಿಸಲಾಯಿತು. ಭೂಮಿಯನ್ನು ಹದಗೊಳಿಸಿ ಅದನ್ನು ಪರೀಕ್ಷಿಸಿ ಮತ್ತು ಯಾವುದೇ ಪ್ರವಾಹ ಬರದಂತೆ ಅದನ್ನು ಸುಭದ್ರಗೊಳಿಸಿ ಬೆಳೆಗಳನ್ನು ಬೆಳೆಯುವ ಪ್ರಕ್ರಿಯೆ ಆರಂಭಗೊಂಡಿತ್ತು. ಆಪ್ರಿಕಾದಲ್ಲಿ ಮೂರು ಪ್ರಮುಖ ಬಗೆಯ ಅಕ್ಕಿಗಳನ್ನು ಬೆಳೆಯಲಾಗುತಿತ್ತು. ಈ ಅಕ್ಕಿಯು ಮುಖ್ಯವಾಗಿ ದಕ್ಷಿಣ ಭಾರತದಿಂದ ರಫ್ತಾಗುತಿತ್ತು.

**ಜಲಸಂಚಾರ ಮತ್ತು ಸಮುದ್ರಯಾನ ತಂತ್ರಗಾರಿಕೆ**

ಭೌಗೋಳಿಕ ಲಕ್ಷಣಗಳು ಜಲಸಂಚಾರದ ಮೇಲೆ ಪ್ರಭಾವ ಬೀರಿದ್ದವು. ಚಳಿಗಾಲ ಮತ್ತು ಬೇಸಿಗೆ ಕಾಲಕ್ಕೆ ಸಂಬಧಿಸಿದಂತೆ ಭಾರತದ ಮಾನ್ಸೂನ್ ಮಾರುತಗಳ ಆಧಾರದ ಮೇಲೆ ಜಲಸಂಚಾರ ಮತ್ತು ಸಮುದ್ರಯಾನವು ನಡೆಯುತಿತ್ತು. ಸುಮಾರು ಹದಿನೆಂಟನೆ ಶತಮಾನದ ವರೆಗೆ ಯುರೋಪಿನ ನೌಕೆಗಳು ಭಾರತದ ಪಶ್ಚಿಮ ಸಮುದ್ರದ ಪಶ್ಚಿಮ ಗಾಳಿಯನ್ನು ಬಹಳ ಸಮರ್ಪಕವಾಗಿ ಬಳಸಿಕೊಳ್ಳಲಿಲ್ಲ. ಅರಬ್ಬರು ಈ ಒಂದು ತಂತ್ರಗಾರಿಕೆಯನ್ನು ಪ್ರಾರಂಭದಿಂದಲೂ ಸಮರ್ಪಕವಾಗಿ ಅಭಿವೃದ್ಧಿಪಡಿಸಿಕೊಂಡು ಬಂದರು. ಉದಾ: ಭಾರತದಿಂದ ನೌಕೆಗಳು ಆಪ್ರಿಕಾದ ಬಂದರಿನ ಕಡೆಗೆ ನವಂಬರ್ ಮತ್ತು ಪೆಭ್ರವರಿ ಕಾಲದವರೆಗೆ ಸಂಚಾರ ಮಾಡುತ್ತಿದ್ದವು ಮತ್ತು ಆಫ್ರಿಕಾ ಮತ್ತು ಪರ್ಷಿಯನ್ ಕೊಲ್ಲಿಯಿಂದ ಸಾಮಾನ್ಯವಾಗಿ ಏಪ್ರಿಲ್ ಮತ್ತು ಸೆಪ್ಟೆಂಬರ್ ತಿಂಗಳುಗಳಲ್ಲಿ ಭಾರತದ ಪಶ್ಚಿಮ ಬಂದರುಗಳಿಗೆ ಬಂದು ತಲುಪಿತ್ತಿದ್ದವು. ಸಾಮಾನ್ಯ ಉಲೇಖಗಳ ಪ್ರಕಾರ ಒಂದು ಹಡಗು ಪರ್ಷಿಯನ್ ಕೊಲ್ಲಿ ಮತ್ತು ಆಪ್ರಿಕಾದ ಬಂದರುಗಳಿಂದ ಭಾರತವನ್ನು ತಲುಪಿ ಮತ್ತೆ ತಮ್ಮ ಪೂರ್ವ ನೆಲೆಗಳಿಗೆ ತಲುಪಲು ಅವು ಕನಿಷ್ಟ ಸುಮಾರು ಹನ್ನೆರಡು ತಿಂಗಳುಗಳನ್ನು ತೆಗೆದುಕೊಳ್ಳುತ್ತಿದ್ದವು.[5]

ಹಡಗುಗಳ ನಿರ್ಮಾಣ ಪ್ರಕ್ರಿಯೆಯ ಎಲ್ಲಾ ದೇಶಗಳಲ್ಲಿಯೂ ಕೂಡ ಸಾಮಾನ್ಯಾಗಿ ನಡೆಯುತಿತ್ತು. ಹಾಗೇಯೇ ಆಪ್ರಿಕಾದ ಬಂದರುಗಳಲ್ಲಿಯೂ ಕೂಡ ಹಡಗುಗಳ ನಿರ್ಮಾಣ ಕಾರ್ಯ ಪ್ರಮುಖವಾಗಿ ನಡೆಯುತ್ತಿತ್ತು. ಈ ಹಡಗುಗಳ ನಿರ್ಮಾಣಕ್ಕೆ ಭಾರತದ ವಸ್ತುಗಳು ಪೂರಕವಾಗಿದ್ದವು. ಕೊವೆಮರ, ಹುಟ್ಟುಗೋಲು, ಮೇಲಂತಸ್ತು ಮತ್ತು ಹಲ್ಸ್‌ಗಳ ರಚನೆಗೆ ಭಾರತದಿಂದ ಮರಗಳು ಅಲ್ಲಿಗೆ ರವಾನೆಯಾಗುತ್ತಿದ್ದವು. ಮೇಲಂತಸ್ತು ಸೋರಿಕೆಯಾಗದಂತೆ ಮುಚ್ಚಲು ಅವರು ಭಾರತದ ಮರಗಳನ್ನು ಬಳಸಿ ವಿಶೇಷ ತಂತ್ರದೊಂದಿಗೆ ನೀರು ಸೋರದಂತೆ ಹಡಗುಗಳನ್ನು ನಿರ್ಮಾಣ ಮಾಡುತ್ತಿದ್ದರು. ಈ ರೀತಿಯ ತಂತ್ರಗಾರಿಕೆಯನ್ನು ನಮಗೆ ಅರಬಿಕ್ ಭಾಷೆಯ ರೊಬ್-ಬುಕ್ಸ್ ಗ್ರಂಥಗಳಿಂದ ಹೆಚ್ಚಾಗಿ ತಿಳಿದುಕೊಳ್ಳಬಹುದಾಗಿದೆ. ಆಪ್ರಿಕಾದ ಕಿಲ್ವಾದಲ್ಲಿರುವ ಬಂದರುಗಳು ಅಧಿಕವಾಗಿ ಹಡಗುಗಳ ನಿರ್ಮಾಣ ಕಾರ್ಯದಲ್ಲಿ

ತೊಡಗಿಸಿಕೊಂಡಿದ್ದವು. ಕಿಲ್ವಾದಲ್ಲಿ ದೊರೆತಿರುವ ಕೆಲವೊಂದು ದಾಖಲೆಗಳ ಪ್ರಕಾರ ಏಪ್ಯಾ ಮತ್ತು ಆಫ್ರಿಕಾವನ್ನು ಒಂದು ಸುತ್ತು ಹಾಕಲು ಕನಿಷ್ಟ ಹನ್ನೆರಡು ತಿಂಗಳುಗಳ ಕಾಲದ ಅವಶ್ಯಕತೆ ಇದೆ ಎಂಬುದನ್ನು ಮಾಹಿತಿ ನೀಡುತ್ತವೆ. ಸೋಮಾಲಿ ಬಂದರು ಪ್ರಮುಖ ಬಂದರಾಗಿದು ಈ ಬಂದರಿನ ಮೂಲಕ ಭಾರತೀಯ ಬಂದರುಗಳೊಂದಿಗೆ ಉತ್ತಮವಾದ ವ್ಯಾಪಾರವು ನಡೆಯುತಿತ್ತು.

ಆಫ್ರಿಕಾ ಮತ್ತು ಭಾರತದ ನಡುವಿನ ವ್ಯಾಪಾರದಲ್ಲಿ ಮುಖ್ಯವಾಗಿ ದಂತ, ಚಿನ್ನ, ಮರ ಮತ್ತು ಕಬ್ಬಿಣವಾಗಿತ್ತು. ಇದರೊಂದಿಗೆ ಗಾಜಿನ ಮಣಿಗಳು ಕೂಡ ಆಫ್ರಿಕಾದಿಂದ ಭಾರತಕ್ಕೆ ರಫ್ತಾಗುತ್ತಿದ್ದವು. ಭಾರತ ಮತ್ತು ಆಫ್ರಿಕಾದ ನಡುವಿನ ವ್ಯಾಪಾರಗಳಲ್ಲಿ ಮಡಿಕೆ ವ್ಯಾಪಾರವು ಪ್ರಾಮುಖ್ಯತೆಗಳಿಸಿತ್ತು. ಭಾರತದ ಮಡಿಕೆಗಳು ಮತ್ತು ಪಿಂಗಾಣಿ ಪಾತ್ರೆಗಳಿಗೆ ಬಹಳಷ್ಟು ಬೇಡಿಕೆ ಆಫ್ರಿಕಾದಲ್ಲಿತ್ತು. ಆದರೆ ಭಾರತದ ಮಡಿಕೆ ಮತ್ತು ಪಿಂಗಾಣಿಯು ಆಫ್ರಿಕಾಕ್ಕೆ ಅರಬ್ಬರಿಂದ ತಲುಪುತಿತ್ತು. ಅಥವಾ ಚೀನಿಯವರಿಂದ ತಲುಪುತಿತೋ ಎಂಬುದರ ಬಗ್ಗೆ ಯಾವುದೇ ಸ್ಪಷ್ಟ ದಾಖಲೆಗಳು ಸಿಗುವುದಿಲ್ಲ. ಆದರೆ ಕೆಲವು ಚೀನಾದ ದಾಖಲೆಗಳು ತಿಳಿಸಿರುವಂತೆ ಭಾರತದಲ್ಲಿ ಚೀನಾದ ಪಿಂಗಾಣಿ ಪಾತ್ರೆಗಳಿಗೆ ಅಪಾರವಾದ ಬೇಡಿಕೆ ಇತ್ತು. ಈ ಪಿಂಗಾಣಿ ಪಾತ್ರೆಗಳನ್ನು ಭಾರತಕ್ಕೆ ತರುತ್ತಿದ್ದ ಚೀನಿಯರು ಭಾರತದಲ್ಲಿ ಅವುಗಳನ್ನು ಇಳಿಸಿ ಮತ್ತೆ ಭಾರತದಿಂದ ಕೆಲವೊದು ಸರಕುಗಳನ್ನು ತುಂಬಿಕೊಂಡು ಆಫ್ರಿಕಾ ಬಂದರುಗಳಿಗೆ ಹೋಗುತ್ತಿದ್ದರು. ಇದೇ ರೀತಿ ಅರಬ್ಬರು ಭಾರತದೊಂದಿಗೆ ನೇರವಾದ ಸಂಬಂಧವನ್ನು ಹೊಂದಿ ಆಫ್ರಿಕಾ ಮತ್ತು ಪರ್ಷಿಯಾಗಳಿಗೆ ಸರಕುಗಳನ್ನು ಸರಬರಾಜು ಮಾಡುತ್ತಿದ್ದರು. ಇಬ್ಬರಲ್ಲಿ ಯಾರು ಆಫ್ರಿಕಾಕ್ಕೆ ಭಾರತದ ಮಡಿಕೆಗಳನ್ನು ಹೊಯ್ಯುತ್ತಿದ್ದರೆಂಬುದು ಸ್ಪಷ್ಟವಾಗಿ ತಿಳಿದು ಬರುತ್ತಿಲ್ಲ. ಈ ಒಂದು ಮಡಿಕೆ ಮತ್ತು ಪಿಂಗಾಣಿ ವ್ಯಾಪಾರವು ಭಾರತ, ಪರ್ಷಿಯನ್‌ಕೊಲ್ಲಿ, ಮಡಗಸ್‌ಕರ್‌ಗಳ ನಡುವೆ ಉತ್ತಮವಾದಂತಹ ಸಂಬಂಧವನ್ನು ಬೆಳೆಸಲು ಪ್ರಮುಖ ಕಾರಣವಾದವೆಂದು ಹೇಳಬಹುದು.[6]

ಭಾರತ ಮತ್ತು ಆಫ್ರಿಕಾದ ನಡುವೆ ನಡೆಯುತ್ತಿದ್ದ ವ್ಯಾಪಾರದಲ್ಲಿ ಎರಡು ಖಂಡಗಳ ನಡುವಿನ ವ್ಯಾಪಾರದ ಮಾರ್ಗವನ್ನು ತಿಳಿಯುವುದು ಕೂಡ ಸೂಕ್ತವಾಗಿದೆ. ಆಫ್ರಿಕಾದ ಸರಕುಗಳು ಭಾರತವನ್ನು ತಲುಪಲು ಮತ್ತು ಭಾರತದ ಸರಕುಗಳು ಆಫ್ರಿಕಾವನ್ನು ತಲುಪಲು ಮುಖ್ಯವಾಗಿ ಅದೇನ್ ಮತ್ತು ದಕ್ಷಿಣ ಅರೇಬಿಯಾದ ಮಾರ್ಗಗಳು ಪ್ರಮುಖವಾದವುಗಳಾಗಿದ್ದವು. ಇಲ್ಲಿಂದ ಅಂದರೆ ಪರ್ಷಿಯನ್ ಕೊಲ್ಲಿಯ, ಕೆಂಪುಸಮುದ್ರ ಮತ್ತು ಆಫ್ರಿಕಾಗಳಿಂದ ಮುಖ್ಯವಾಗಿ ಆಫ್ರಿಕಾದ

ಕಿಲ್ವಾದಿಂದ ಮಾನ್ಸೂನ್ ಮಾರುತಗಳ ಆಧಾರದ ಮೇಲೆ ನೌಕಾಯಾನವನ್ನು ಪ್ರಾರಂಭಿಸಲಾಗುತಿತ್ತು.

**ಗುಲಾಮರ ವ್ಯಾಪಾರ**

ಭಾರತ ಮತ್ತು ಆಫ್ರಿಕಾದ ಬಹಳ ಪ್ರಮುಖವಾದ ವ್ಯಾಪಾರಗಳಲ್ಲಿ ಗುಲಾಮರ ವ್ಯಾಪಾರವು ಕೂಡ ಒಂದಾಗಿತ್ತು. ಪ್ರಾರಂಭದಲ್ಲಿ ಗುಲಾಮರ ವ್ಯಾಪಾರ ಅರಬ್ಬರ ಕೈಯಲಿದ್ದರು ಅವರು ಭಾರತಕ್ಕೆ ಅಷ್ಟೇನೂ ಗುಲಾಮರನ್ನು ಮಾರಾಟ ಮಾಡುತ್ತಿರಲಿಲ್ಲ. ಅವರು ಟರ್ಕಿ ಮತ್ತು ಅಫ್ಘಾನ್ ಗುಲಾಮರನ್ನು ಹೆಚ್ಚಾಗಿ ಉತ್ತರ ಭಾರತಕ್ಕೆ ಮಾರಾಟ ಮಾಡುತ್ತಿದ್ದರು. ಆದರೆ ಕ್ರಿ.ಶ 15ನೇ ಶತಮಾನದ ಮಧ್ಯಭಾಗದಲ್ಲಿ ಭಾರತ ಮತ್ತು ಆಫ್ರಿಕಾದ ನಡುವೆ ದೊಡ್ಡ ಪ್ರಮಾಣದ ಗುಲಾಮರ ವ್ಯಾಪಾರ ಪ್ರಾರಂಭವಾಯಿತು. ಬಹಳ ಗಟ್ಟಿಮುಟ್ಟಾಗಿದ್ದ ಬಲಿಷ್ಟ ಮತ್ತು ನಿಷ್ಠಾವಂತ ಗುಲಾಮರನ್ನು ಆಫ್ರಿಕಾದಿಂದ ಕರೆದುಕೊಂಡು ಬಂದು ಭಾರತಕ್ಕೆ ಮಾರಾಟ ಮಾಡಿದವರು ಪೋರ್ಚುಗೀಸರು. ಕೆಲವೊಂದು ದಾಖಲೆಗಳ ಪ್ರಕಾರ ವಾರ್ಷಿಕ 500–800 ಮಂದಿ ಗುಲಾಮರನ್ನು ಭಾರತಕ್ಕೆ ತಂದುಮಾರಾಟ ಮಾಡಲಾಗುತಿತ್ತು. ಗೋವಾದ ಪೋರ್ಚುಗೀಸ್ ನೆಲೆಗಳಲ್ಲಿ ಅತಿ ಹೆಚ್ಚು ಗುಲಾಮರ ವ್ಯಾಪಾರ ನಡೆಯುತಿತ್ತು. ಈ ವ್ಯಾಪಾರ ಕ್ರಿ.ಶ 19ನೇ ಶತಮಾನದವರೆಗೂ ನಡೆಯುತಿತ್ತು. ಪೋರ್ಚುಗೀಸರ ನಂತರ ಬ್ರಿಟೀಷರು ಈ ವ್ಯಾಪಾರವನ್ನು ಮುಂದುವರೆಸಿದರು. ನನ್ನ ಸಂಶೋದನೆಯ ಹೊರತಾಗಿ ಒಂದು ಅಪರೂಪದ ವಿಚಾರವನ್ನು ಇಲ್ಲಿ ಮಂಡಿಸಲು ಇಚ್ಛಿಸುತ್ತೇನೆ. ಕ್ರಿ.ಶ. 1814ರ ಬಾಂಬೆ ಸರ್ಕಾರದ ದಾಖಲೆಗಳ ಪ್ರಕಾರ (ಭಾರತದ ಪತ್ರಗಾರ ಇಲಾಖೆ ನವದೆಹಲಿ) ಮಸ್ಕಟಿನ ವ್ಯಾಪಾರಿಗಳು ಹಡುಗುಗಳ ಮೂಲಕ ನಿಗ್ರೋ ಗುಲಾಮರನ್ನು ಆಫ್ರಿಕಾದಿಂದ ಭಾರತಕ್ಕೆ ತಂದು ಇಲ್ಲಿಂದ ಹಿಂದೂ ಮಹಿಳೆಯರನ್ನು ಜನ್ಜಿಬಾರ್‌ನಲ್ಲಿ ಮಾರಾಟ ಮಾಡುತ್ತಿದ್ದರು. ಎಂಬುದನ್ನು ಬ್ರಿಟೀಷರ ದಾಖಲೆಗಳು ನಮಗೆ ಮಾಹಿತಿಯನ್ನು ನೀಡುತ್ತವೆ.[7] ಹೀಗೆ ಭಾರತಕ್ಕೆ ಬಂದ ಆಪ್ರಿಕಾ ಗುಲಾಮರನ್ನು ಬಾಂಬೆ ಆಫ್ರಿಕನ್ ಎಂದು ಕರೆಯಲಾಗುತಿತ್ತು. ಗುಲಾಮರಾಗಿ ಭಾರತಕ್ಕೆ ಬಂದ ಆಫ್ರಿಕನ್ನರು ಸೈನ್ಯಗಳಲ್ಲಿ ಸೇವೆ ಸಲ್ಲಿಸುತ್ತ ಹಾಗೂ ಶ್ರೀಮಂತರ ಸರದಾರರ ಮನೆಗಳಲ್ಲಿ ಜೀತದಾಳುಗಳಾಗಿ ದುಡಿಯುತ್ತ ತಮ್ಮ ಜೀವನ ನಿರ್ವಹಿಸುತ್ತಿದ್ದರು. ಮಾನವನ ಮಾರಾಟವು ಅಂದಿನ ವ್ಯಾಪಾರದ ಒಂದು ಭಾಗವಾಗಿದ್ದು ಇದು ಮಾನವನ ಮನುಕುಲಕ್ಕೆ ಕೆಟ್ಟ ಪರಿಣಾಮವನ್ನುಂಟು ಮಾಡಿತು ನಂತರದ ದಿನಗಳಲ್ಲಿ ಬ್ರಿಟಿಷರು ಈ ವ್ಯಾಪಾರವನ್ನು ಸಂಪೂರ್ಣವಾಗಿ ರದ್ದುಗೊಳಿಸಿದರು.

ಆಫ್ರಿಕಾ ಮತ್ತು ಭಾರತದ ನಡುವಿನ ವ್ಯಾಪಾರದಲ್ಲಿ ಅರಬ್ಬರು ಈಜಿಪ್ಟಿಯನ್ನರು, ಪರ್ಷಿಯನ್ನರು ಮತ್ತು ಪೋರ್ಚುಗೀಸರು ತಮ್ಮ ಸಂಪೂರ್ಣ ನಿಯಂತ್ರಣವನ್ನು ಪಡೆದಿದ್ದರು. ಆಫ್ರಿಕಾ ಮತ್ತು ಭಾರತದ ನಡುವಿನ ವ್ಯಾಪಾರದಲ್ಲಿ ಮುಖ್ಯವಾಗಿ ವಸ್ತುಗಳ ವಿನಿಯಮ ಪದ್ಧತಿ ರೂಡಿಯಲ್ಲಿತ್ತು. ಭಾರತದ ವಸ್ತುಗಳಾದ ರೇಷ್ಮೆ, ಸಿದ್ಧ ಉಡುಪುಗಳು ಮತ್ತು ಸಾಂಬಾರ ಪದಾರ್ಥಗಳು ಆಫ್ರಿಕಾದ ಸರಕುಗಳಾದ ಗುಲಾಮರು, ದಂತ, ಪ್ರಾಣಿ ಚರ್ಮ ಮತ್ತು ಚಿನ್ನದೊಂದಿಗೆ ವಿನಿಮಯವಾಗುತ್ತಿದ್ದವು. ಆಫ್ರಿಕಾದ ವ್ಯಾಪಾರದಲ್ಲಿ ಬಂಟು ಜನಾಂಗ ಬಹಳ ಪ್ರಮುಖವಾದ ಪಾತ್ರವನ್ನು ನಿರ್ವಹಿಸಿತ್ತು. ಆಫ್ರಿಕಾದ ಬಂದರುಗಳಿಂದ ಆಫ್ರಿಕಾದ ಒಳಾಂಗಣ ಪ್ರದೇಶಗಳೊಂದಿಗೆ ಬಂಟು ಜನಾಂಗ ಅಂತರಿಕ ವ್ಯಾಪಾರದ ನಿಯಂತ್ರಣವನ್ನು ಹೊಂದಿತ್ತು. ಭಾರತಕ್ಕೆ ರಫ್ತಾಗುತ್ತಿದ್ದ ಪ್ರಮುಖ ಸರಕುಗಳಾದ ಚಿನ್ನ, ದಂತ, ಗುಲಾಮರು, ಪ್ರಾಣಿಚರ್ಮ, ಘೇಂಡಾಮೃಗದ ಕೊಂಬು, ತಾಮ್ರ ಮತ್ತು ಕಬ್ಬಿಣವು ಮಧ್ಯ ಆಫ್ರಿಕಾದಿಂದ ಮುಖ್ಯವಾಗಿ ಬಂದರಿಗೆ ತಂದು ಅಲ್ಲಿಂದ ಭಾರತಕ್ಕೆ ಮತ್ತು ವಿವಿಧ ಭಾಗಗಳಿಗೆ ರಫ್ತು ಮಾಡಲಾಗುತಿತ್ತು.[8] ಮುಖ್ಯವಾಗಿ ದಕ್ಷಿಣ ಭಾರತದ ಮಲಬಾರ್ ಬಂದರುಗಳು, ಕೆಂಪು ಸಮುದ್ರ ಮತ್ತು ಮೆಡಿಟೇರಿನಿಯನ್ ಸಮುದ್ರಗಳೊಂದಿಗೆ ಉತ್ತಮ ವ್ಯಾಪಾರ ಸಂಪರ್ಕವನ್ನು ಏರ್ಪಡಿಸಿ ಕೊಂಡಿದ್ದರು.

ಆಫ್ರಿಕಾದಿಂದ ಭಾರತಕ್ಕೆ ಮುಖ್ಯವಾಗಿ ದಂತವು ರಫ್ತಾಗುತ್ತಿದ್ದು ಈ ದಂತಗಳಿಂದ ಭಾರತದಲ್ಲಿ ಬಳೆಗಳನ್ನು, ಆಭರಣಗಳನ್ನು ಆಲಂಕಾರಗಳನ್ನು ಮಾಡಲು ಮತ್ತು ಪಿಠೋಪಕರಣಗಳನ್ನು ತಯಾರಿಸಲು ಬಳಸುತಿದ್ದರು. ಈ ದಂತವು ಮುಖ್ಯವಾಗಿ ಆಫ್ರಿಕಾದ ಸೋಮಾಲಿ ಬಂದರಿನಿಂದ ಭಾರತದ ಬಂದರುಗಳಿಗೆ ರಫ್ತಾಗುತ್ತಿದ್ದವು. ದಂತದೊಂದಿಗೆ ಭಾರತಕ್ಕೆ ಗುಲಾಮರು ರಫ್ತಾಗುತ್ತಿದ್ದರು ಇವರು ಸೇವಕರಾಗಿ, ಸೈನಿಕರಾಗಿ ಮತ್ತು ಗಣಿಗಳಲ್ಲಿ ದುಡಿಯುವ ಕಾರ್ಮಿಕರಾಗಿ ಭಾರತದಲ್ಲಿ ಸೇವೆ ಸಲ್ಲಿಸುತ್ತಿದ್ದರು. ಅದೇ ರೀತಿ ಆಫ್ರಿಕಾಕ್ಕೆ ಸಾಂಬಾರ, ಬಟ್ಟೆಗಳು ಭಾರತದಿಂದ ಆಮದಾಗುತಿದ್ದವು. ಈಗಾಗಲೇ ಮೇಲೆ ಉಲ್ಲೇಖಿಸಿರುವಂತೆ ಭಾರತ ಮತ್ತು ಆಫ್ರಿಕಾದ ನಡುವೆ ವ್ಯಾಪಾರ ವಿನಿಯಮ ಮಾದರಿ ಅಸ್ತಿತ್ವದಲ್ಲಿತು. ಸರಕುಗಳಿಗೆ ಮತ್ತೊಂದು ಸರಕುಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದರು. ಪ್ರಾರಂಭದಲ್ಲಿ ಆಫ್ರಿಕನ್ನರು ಕವಡೆಗಳನ್ನು (cowrie-shells) ಬಳಸಿ ವ್ಯಾಪಾರ ಮಾಡುತ್ತಿದ್ದರು. ನಂತರ ಕಿಲ್ವಾ ಮತ್ತು ಜನ್ಜಿಬಾರ್ ನಗರಗಳಲ್ಲಿ ನಾಣ್ಯಗಳನ್ನು ಟಂಕಿಸುವ ಪ್ರಕ್ರಿಯೆ ಆರಂಭವಾಯಿತು. ವ್ಯಾಪಾರ ಮತ್ತು ವಾಣಿಜ್ಯವನ್ನು ಬೆಸೆಯುವ ಸಂದರ್ಭದಲ್ಲಿ ಕಿಸ್ವಾಹಿಲಿ ಭಾಷೆಯ ಬೆಳವಣಿಗೆ ಹೊಂದಿತ್ತು. ಸ್ವಾವಿಲಿ ಸಂಸ್ಕೃತಿಯ ಬೆಳವಣಿಗೆ ಹೊಂದಿದಂತೆಲ್ಲ ಈ ಭಾಷೆಯು ಬೆಳವಣಿಗೆ ಪಡೆಯಿತು. ಈ

ಭಾಷೆಯನ್ನು ಹಲವಾರು ಜನ ಕಲಿತು ವ್ಯಾಪಾರದಲ್ಲಿ ತೊಡಗಿಸಿಕೊಂಡಿದ್ದರು. ಕೆಲವೊಂದು ಸಂದರ್ಭಗಳಲ್ಲಿ ವ್ಯಾಪಾರವು ಮುಕ್ತವಾಗಿ ಮತ್ತು ಮೌನವಾಗಿ ನಡೆಯುತಿತ್ತು.[9]

ಆಫ್ರಿಕಾದಿಂದ ರಫ್ತು ಮಾಡುತ್ತಿದ್ದ ಸರಕುಗಳು ಮುಖ್ಯವಾಗಿ ಆಫ್ರಿಕಾದ ಮಧ್ಯಭಾಗದಿಂದ ಬರುತ್ತಿದ್ದವು. ಉದಾಹರಣೆಗೆ ಚಿನ್ನವು ಮೆನೋಮಟಪ ರಾಜ್ಯದಿಂದ ಮತ್ತು ಸಪೋಲ ಮತ್ತು ಕೆಲ್ವಾದಿಂದ ಬರುತ್ತಿದ್ದವು. ಮಧ್ಯ ಆಫ್ರಿಕ ಮತ್ತು ಪೂರ್ವ ಆಫ್ರಿಕಾದಿಂದ ದಂತವು ಬರುತಿತ್ತು. ಅಲ್ಲಿ ದೊರೆಯುತ್ತಿದ್ದ ಆನೆಗಳನ್ನು ಹಿಡಿದು ದಂತವನ್ನು ತೆಗೆದುಕೊಂಡು ನಂತರ ಬಂದರುಗಳಿಗೆ ರವಾನಿಸುತ್ತಿದ್ದರು. ಹಾಗೆಯೇ ಗುಲಾಮರನ್ನು ದಾಳಿ ಮಾಡಿ ಹಿಡಿದು ಅವರನ್ನು ಕೂಡ ರಫ್ತು ಮಾಡಲಾಗುತಿತ್ತು. ಎಲ್ಲಾ ಸರಕುಗಳ ಒಬ್ಬರಿಂದ ಮತ್ತೊಬರ ಕೈಗಳಿಂದ ಬಂದರು ಮಾರುಕಟ್ಟೆಗಳಿಗೆ ರವಾನೆಯಾಗುತ್ತಿದ್ದವು. ಸರಕುಗಳು ಒಂದು ಜನಾಂಗದಿಂದ ಮತ್ತೊಂದು ಜನಾಂಗದೊಂದಿಗೆ ಬದಲಾವಣೆಯಾಗಿ ಬರುತ್ತಿದ್ದವು ಯಾವುದೇ ಒಂದು ಪ್ರತ್ಯೇಕ ಜನಾಂಗ ಯಾವುದೋ ದೂರ ಆಫ್ರಿಕಾದ ಭಾಗದಿಂದ ಬಂದು ಮಾರುಕಟ್ಟಗೆ ಬರುತ್ತಿರಲಿಲ್ಲ ಸರಕುಗಳು ಸಾಗಾಣಿಕೆ ಒಬ್ಬರಿಂದ ಮತ್ತೊಬ್ಬರಿಗೆ ರವಾನೆಯಾಗಿ ಅದರ ಮೂಲಕ ಬಂದರು ಮಾರುಕಟ್ಟೆಗೆ ತಲುಪುತ್ತಿದ್ದವು.

ಆಫ್ರಿಕಾದ ಅಂತರಿಕ ವ್ಯಾಪಾರದ ಸರಕುಗಳ ಸಾಗಾಣಿಕೆಯು ಮುಖ್ಯವಾಗಿ ಎರಡು ಪ್ರಬಲ ವರ್ಗಗಳಾದ ನ್ಯೆಯ್ಕು ಮತ್ತು ಮಕರಂಗ ಎಂಬ ವರ್ಗಗಳಿಂದ ನಡೆಯುತ್ತಿತ್ತು. ಈ ಎರಡು ವರ್ಗಗಳು ಆಫ್ರಿಕಾದ ಒಳನಾಡುಗಳಿಗೆ ಮತ್ತು ಅಂತರರಾಷ್ಟ್ರೀಯ ವ್ಯಾಪಾರಿಗಳ ನಡುವೆ ಮಧ್ಯವರ್ತಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದರು. ವಸ್ತುಗಳ ಸಾಗಣಿಕೆಯ ಕೂಲಿ ಆಳುಗಳ ಮೂಲಕ ಬಂದರುಗಳಿಗೆ ರವಾನೆಯಾಗುತ್ತಿದ್ದವು. ವಿದೇಶಿ ವ್ಯಾಪಾರಿಗಳು ಆಫ್ರಿಕಾದ ಒಳಪ್ರದೇಶಗಳಿಗೆ ಭೇಟಿ ನೀಡುತ್ತಿರಲಿಲ್ಲ ಇದಕ್ಕೆ ಹಲವಾರು ಕಾರಣಗಳಿದ್ದವು. ಕೆಲವು ಬುಡಕಟ್ಟು ಜನಾಂಗದವರ ಕಾದಾಟದ ಭಯದಿಂದಾಗಿ, ಪ್ರಾಣಿಗಳ ಭಯದಿಂದಾಗಿ ಮತ್ತು ಕೆಲವು ರೋಗಗಳು ಹರಡುವ ಉದ್ದೇಶದಿಂದ ವಿದೇಶಿ ವ್ಯಾಪಾರಿಗಳು ಕೇವಲ ಬಂದರುಗಳಲ್ಲಿ ಸರಕುಗಳನ್ನು ಕೊಂಡುಕೊಳ್ಳುತ್ತಿದ್ದರು. ವ್ಯಾಪಾರವು ಶ್ರೀಮಂತ ಅರಬ್ಬರಿಂದ ಭಾರತೀಯ ಬನ್‌ಯಾನ್ಸ್‌ನಿಂದ ಮತ್ತು ಕೆಲವು ಆಫ್ರಿಕನ್ ಮುಸ್ಲಿಮರಿಂದ ಅತಿ ಹೆಚ್ಚು ಉತ್ತೇಜನಕ್ಕೆ ಒಳಪಟ್ಟಿತ್ತು. ಕೆಲವು ಅರಬ್ ವ್ಯಾಪಾರಿಗಳು ಅರೇಬಿಯಾ ಮತ್ತು ಪರ್ಷಿಯಾದಿಂದ ಬಂದು ಆಫ್ರಿಕಾದ ಬಂದರುಗಳಲ್ಲಿ ಬಂದು ಉಳಿದುಕೊಂಡು ವ್ಯಾಪಾರ ನಡೆಸುತ್ತಿದ್ದರು. ವ್ಯಾಪಾರವು ಮುಖ್ಯವಾಗಿ ಕಿಲ್ವಾ ಮಲಿಂದಿ, ಸೋಪಾಲ, ಮೊಂಬಾಸ ಮತ್ತು ಜನ್ಜಿಬಾರ್ ನಗರಗಳಲ್ಲಿ

ನಡೆಯುತಿತ್ತು ಮತ್ತು ಅಲ್ಲಿ ಉತ್ತಮ ಮಾರುಕಟ್ಟೆಗಳು ನಿರ್ಮಾಣವಾಗಿದ್ದವು. ಅಲ್ಲಿಯ ಪ್ರಮುಖವಾದ ಬಂದುರಗಳೆಂದರೆ ಯಮನ್, ಹದ್ರನಂಬ್, ಓಮನ್ ಮತ್ತು ಓರ್ಮಜ್ ಗಳಾಗಿದ್ದವು.[10]

ಆಫ್ರಿಕಾ ಮತ್ತು ಭಾರತದ ನಡುವಿನ ಗುಲಾಮ ವ್ಯಾಪಾರವು ಮೊದಲು ಬೆಳವಣಿಗೆ ಹೊಂದಿದ್ದು, ಸಹರಾ ಮರುಭೂಮಿಯ ಮಾರ್ಗವಾಗಿತ್ತು. ಸಹರಾ ಮಾರ್ಗವಾಗಿ ನಡೆಯುತ್ತಿದ್ದ ಗುಲಾಮರ ವ್ಯಾಪಾರವು ಮೊದಲ ಬಾಹ್ಯ ಗುಲಾಮ ವ್ಯಾಪಾರವಾಗಿತ್ತು. ಕ್ರಿ.ಶ.10ನೇ ಶತಮಾನದಿಂದ ಸುಮಾರು 16ನೇ ಶತಮಾನದವರೆಗೆ ಅಂದಾಜಿನ ಪ್ರಕಾರ ಆರುಸಾವಿರ ದಿಂದ ಏಳುಸಾವಿರ ಗುಲಾಮರು ಭಾರತಕ್ಕೆ ಮಾರಾಟವಾಗಿದ್ದರೆಂದು ಹೇಳಬಹುದು. ಕ್ರಿ.ಶ. 9ನೇ ಶತಮಾನದ ನಂತರ ಭಾರತದ ಸಮುದ್ರಗಳ ಮೇಲೆ ಏಕಸಾಮ್ಯ ಪಡೆದ ಅರಬ್ಬರು ಗುಲಾಮರ ವ್ಯಾಪಾರದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದರು. ಅರಬ್ಬರು ಭಾರತದಲ್ಲಿ ಮತ್ತು ಮಧ್ಯಪ್ರಾಚ್ಯಗಳಲ್ಲಿ ಗುಲಾಮರನ್ನು ಮಾರಾಟ ಮಾಡಲು ಪ್ರಾರಂಬಿಸಿದರು. ಈ ವ್ಯಾಪಾರವು ಬಹಳ ವಿಸ್ತಾರವಾದುದ್ದಾಗಿದ್ದು, ಹೆಚ್ಚು ಪ್ರಭಾವ ಬೀರುತಿತ್ತು. ಅಮೇರಿಕಾದ ಗುಲಾಮ ವ್ಯವಸ್ಥೆಯ ಅಂಟ್ಲಾಟಿಕ ಗುಲಾಮ ವ್ಯಾಪಾರದೊಂದಿಗೆ ಪ್ರಾರಂಭವಾಗಿತ್ತೆಂದು ದಾಖಲೆಗಳು ಉಲ್ಲೇಖಿಸುತ್ತವೆ ಇದರಿಂದ ತಿಳಿಯುವುದೇನೆಂದರೆ ಗುಲಾಮರ ವ್ಯಾಪಾರವು ಇಡೀ ವಿಶ್ವದಾದ್ಯಂತ ಹರಡಿ ಕೊಂಡಿತ್ತು.[11]

ಸ್ವಾಹಿಲಿ ಬಂದರು ಭಾರತ ಮತ್ತು ಆಫ್ರಿಕಾದ ನಡುವೆ ಉತ್ತಮವಾದ ವ್ಯಾಪಾರ ಬೆಳವಣಿಗೆಯ ಕೇಂದ್ರವಾಗಿತ್ತು. ಸ್ವಾಹಿಲಿ ಸಂಸ್ಕೃತಿಯು ಭಾರತದೊಂದಿಗಿನ ಸಂಬಂಧದಲ್ಲಿ ಭಾರತದ ಸಂಪರ್ಕವನ್ನು ದಕ್ಷಿಣದ ಸೋಮಾಲಿಯಾದಿಂದ ಉತ್ತರದ ಮೊಜಂಬಿಕ್ವಿ ವರೆಗೂ ಹಾಗೂ ಹಲವಾರು ಬಂದರು ಗಳಲ್ಲಿಯೂ ಮುಖ್ಯವಾಗಿ ಕೊಮೊರಸ್ ಮತ್ತು ಮಡಗಸ್‌ಕರ್‌ವರೆಗೂ ಬೆಳೆಸಿಕೊಂಡಿತ್ತು. ಕೆಲವು ಪುರಾತತ್ವ ದಾಖಲೆಗಳು, ಭಾರತದಿಂದ ಕೋಳಿಮರಿಗಳು ಮತ್ತು ಕಪ್ಪು ಇಲಿಗಳು ಹಾಗೂ ಕೆಲವೊಂದು ಗಿಡಗಳು ಪೂರ್ವ ಆಫ್ರಿಕಾಕ್ಕೆ ರಫ್ತಾಗುತ್ತಿದ್ದವು.

**ಆಫ್ರಿಕಾ ಮತ್ತು ವಿಜಯನಗರ ಸಾಮ್ರಾಜ್ಯ ಗಾಜಿನ ಮಣಿಗಳ ವ್ಯಾಪಾರ**

ಭಾರತದ ಸಮುದ್ರಗಳಿಂದ ಮುಖ್ಯವಾಗಿ ವಿಜಯನಗರ ಸಾಮ್ರಾಜ್ಯದ ಅವದಿಯಲ್ಲಿ ಭಾರತದ ಮಲಬಾರ್ ಬಂದರುಗಳಿಂದ ಆಫ್ರಿಕಾದ ಬಂದರುಗಳಿಗೆ ಮುಖ್ಯವಾಗಿ ಬೆಳವಣಿಗೆ ಹೊಂದಿದ್ದ ವ್ಯಾಪಾರವೆಂದರೆ ಅದುವೇ ಗಾಜಿನ ಮಣಿಗಳ ವ್ಯಾಪಾರವಾಗಿತ್ತು. ಆಫ್ರಿಕಾದಾದ್ಯಂತ

ಯಥೇಚ್ಛವಾಗಿ ದೊರೆಯುತ್ತಿದ್ದ ಗಾಜಿನಿಂದ ಮಣಿಗಳನ್ನು ತಯಾರು ಮಾಡಿ ಅವುಗಳನ್ನು ಭಾರತಕ್ಕೆ ರಫ್ತು ಮಾಡಲಾಗುತಿತ್ತು. ಕಂದುಬಣ್ಣದ ಮತ್ತು ಕಪ್ಪುಬಣ್ಣದ ಗಾಜಿನ ಮಣಿಗಳು ಭಾರತಕ್ಕೆ ಅತಿ ಹೆಚ್ಚಾಗಿ ರಫ್ತಾಗುತ್ತಿದ್ದವು. ಪೂರ್ವ ಆಫ್ರಿಕಾದಲ್ಲಿ ಅತಿ ಹೆಚ್ಚಾಗಿ ಗಾಜಿನ ಮಣಿಗಳು ದೊರೆಯುತ್ತಿದ್ದವು. ಆಫ್ರಿಕಾದ ಪ್ರಮುಖ ಬಂದರುಗಳಾದ ಯಮನ್, ಓಮನ್ ಮತ್ತು ಸ್ವಾಹಿಲಿ ಗಳಿಂದ ಅತಿ ಹೆಚ್ಚಾಗಿ ಗಾಜಿನ ಮಣಿಗಳು ಭಾರತಕ್ಕೆ ರಫ್ತಾಗುತ್ತಿದ್ದವು. ಕ್ರಿ.ಶ. 14 ಮತ್ತು 15 ನೇ ಶತಮಾನಗಳಲ್ಲಿ ಜನ್ಜಿಬಾರ್ ದ್ವೀಪದಲ್ಲಿ ಅತಿ ಹೆಚ್ಚು ಗಾಜಿನ ಮಣಿಗಳು ದೊರೆಯುತ್ತಿದ್ದವು. ಇತ್ತೀಚಿನ ಪುರಾತತ್ವ ದಾಖಲೆಗಳ ಪ್ರಕಾರ ಜನ್ಜಿಬಾರ್ ದ್ವೀಪದಲ್ಲಿ ಕೆಲವೊಂದು ಗಾಜಿನ ಮಣಿಗಳು ದೊರೆತಿದ್ದು ಅವುಗಳ ಲಕ್ಷಣಗಳ ಆಧಾರದ ಮೇಲೆ ಕಾಲಮಾನವನ್ನು ಗುರ್ತಿಸಲಾಗಿದೆ. ಮತ್ತು ಅಲ್ಲಿ ಗಾಜಿನ ಮಣಿಗಳು ತಯಾರಿಸುತ್ತಿದ್ದ ಸಂದರ್ಭದಲ್ಲಿ ಉಂಟಾಗುತ್ತಿದ್ದ, ಹಾಳಾದ ಗಾಜಿನ ಮಣಿಗಳು ಸಹ ದೊರೆತಿವೆ.[12]

**ವಿಜಯನಗರ ಸಾಮ್ರಾಜ್ಯ ಮತ್ತು ಆಫ್ರಿಕಾದ ನಡುವಿನ ಪ್ರಮುಖ ಆಮದು ರಫ್ತು ಪ್ರಕ್ರಿಯೆಗಳು.**

ವಿಜಯನಗರ ಕಾಲದ ಅವದಿಯಲ್ಲಿ ಭಾರತ ಮತ್ತು ಆಫ್ರಿಕಾದ ನಡುವೆ ಉತ್ತಮವಾದ ವ್ಯಾಪಾರ ಸಂಪರ್ಕ ಏರ್ಪಡಿಸಿಕೊಂಡಿತ್ತು. ಈ ಕಾಲದಲ್ಲಿ ಹಲವಾರು ಸರಕುಗಳು ಭಾರತ ಮತ್ತು ಆಫ್ರಿಕಾದ ನಡುವೆ ವಿನಿಮಯವಾಗುತ್ತಿದ್ದವು. ವಸ್ತುಗಳ ವಿನಿಮಯದಿಂದಾಗಿ ಪರಸ್ಪರ ಆಮದು ಮತ್ತು ರಫ್ತು ಪ್ರಕ್ರಿಯೆಗಳು ಉತ್ತಮಗೊಂಡು ವ್ಯಾಪಾರದೊಂದಿಗೆ ಆರ್ಥಿಕ ಬಲವರ್ಧನೆ ಕೂಡ ಸಾಧ್ಯವಾಯಿತು.

ವಿಜಯನಗರ ಸಾಮ್ರಾಜ್ಯದ ಅವದಿಯಲ್ಲಿ ಭಾರತದ ಪಶ್ಚಿಮ ಬಂದರುಗಳಿಂದ ಹಲವಾರು ಸರಕುಗಳು ರಫ್ತಾಗುತ್ತಿದ್ದವು. ಕೆಲವು ಅತ್ಯಂತ ಪ್ರಮುಖ ಸರಕುಗಳ ವಿವರಣೆ ಈ ಕೆಳಕಂಡತಿದೆ.

**ರೇಷ್ಮೆ:** ಭಾರತದಲ್ಲಿ ರೇಷ್ಮೆ ಅಧಿಕ ಪ್ರಮಾಣದಲ್ಲಿ ದೊರಕುತಿತ್ತು. ರೇಷ್ಮೆಯಲ್ಲಿ ಎರಡು ವಿಧ ಒಂದು ದೇಶಿಯ ರೇಷ್ಮೆ ಮತ್ತೊಂದು ಚೀನಾದ ರೇಷ್ಮೆಯಾಗಿತ್ತು. ಚೀನಾದಿಂದ ಅಪಾರ ಪ್ರಮಾಣದ ರೇಷ್ಮೆ ಭಾರತಕ್ಕೆ ರವಾನೆಯಾಗುತಿತ್ತು. ಭಾರತದಿಂದ ಮತ್ತೆ ಇದು ಆಫ್ರಿಕಾಗೆ ಪುನರ್ ರಫ್ತಾಗುತಿತ್ತು. ಭಾರತೀಯ ಮತ್ತು ಚೀನಾದ ರೇಷ್ಮೆಗಳಿಗೆ ಆಫ್ರಿಕಾದಲ್ಲಿ ಅಪಾರ ಬೇಡಿಕೆ ಇತ್ತು. ಕಚ್ಚಾ ರೇಷ್ಮೆಯ ಪ್ರಮುಖವಾದುದಾಗಿದ್ದು, ಭಾರತ ಮತ್ತು ಆಫ್ರಿಕಾದ ನಡುವಿನ ವ್ಯಾಪಾರ ಮತ್ತು ವಾಣಿಜ್ಯದಲ್ಲಿ ರೇಷ್ಮೆಯ ಬಹಳಷ್ಟು ಪ್ರಾಮುಖ್ಯತೆಗಳಿಸಿತ್ತು.

**ಸಿದ್ಧ ಉಡುಪುಗಳು:** ದಕ್ಷಿಣ ಭಾರತದಲ್ಲಿ ಹತ್ತಿ ಬಟ್ಟೆಗಳು ತಯಾರಾಗುತ್ತಿದ್ದವು ಇವು ಸಿದ್ಧ ಉಡುಪುಗಳಾಗಿದ್ದು ದಕ್ಷಿಣದ ಬಂದರುಗಳಿಂದ ಆಫ್ರಿಕಾಕ್ಕೆ ರಫ್ತಾಗುತ್ತಿದ್ದವು. ಪ್ರಪ್ರಥಮ ಬಾರಿಗೆ ಸಿದ್ಧ ಉಡುಪುಗಳನ್ನು ನೋಡಿದ ಆಫ್ರಿಕಾದ ಜನರು ಬಹಳಷ್ಟು ಖುಷಿಪಟ್ಟರು. ಸಿದ್ಧ ಉಡುಪುಗಳಿಂದ ಅವರ ಜೀವನಮಟ್ಟ ಸ್ವಲ್ಪ ಸುದಾರಿಸಿತ್ತು. ಈ ವ್ಯಾಪಾರದಲ್ಲಿ ಅರಬ್ಬರು ಮುಖ್ಯವಾಗಿ ಭಾರತ ಮತ್ತು ಆಫ್ರಿಕಾದ ನಡುವೆ ಮಧ್ಯವರ್ತಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದರು.

**ಮರ:** ಭಾರತದ ಬಂದರುಗಳಿಂದ ಆಫ್ರಿಕಾಕ್ಕೆ ರಫ್ತಾಗುತ್ತಿದ್ದ ಸರಕುಗಳಲ್ಲಿ ಮರಗಳು ಕೂಡ ಪ್ರಮುಖವಾದವುಗಳಾಗಿದ್ದವು. ಮರಗಳನ್ನು ಮುಖ್ಯವಾಗಿ ಹಡಗುಗಳನ್ನು ನಿರ್ಮಾಣ ಮಾಡಲು ಬಳಸಲಾಗುತ್ತಿತ್ತು. ಹಡಗುಗಳನ್ನು ತಯಾರು ಮಾಡುವ ನೈಪುಣ್ಯತೆಯು ಭಾರತೀಯರಿಂದ ಆಫ್ರಿಕನ್ನರು ಬಹಳ ಚೆನ್ನಾಗಿ ಕಲಿತಿದ್ದರು ಆಫ್ರಿಕಾದ ಬಂದರುಗಳಲ್ಲಿ ಮರಗಳನ್ನು ಬಳಸಿ ಅಲ್ಲಿ ಹಡಗುಗಳ ನಿರ್ಮಾಣ ಕಾರ್ಯ ಪ್ರಮುಖವಾಗಿ ನಡೆಯುತಿತ್ತು.

**ಸಾಂಬಾರ ಪದಾರ್ಥಗಳು:** ಮಲಬಾರ್ ತೀರ ಪ್ರದೇಶಗಳು ಅತಿ ಹೆಚ್ಚಿನ ಸಾಂಬಾರ ಪದಾರ್ಥಗಳನ್ನು ಹೊಂದಿದ್ದ ಪ್ರದೇಶಗಳಾಗಿದ್ದವು. ಇಲ್ಲಿಂದ ವಿಶ್ವದ ವಿವಿಧ ಮಾರುಕಟ್ಟೆಗಳಿಗೆ ಸಾಂಬಾರ ಪದಾರ್ಥಗಳು ರಫ್ತಾಗುತ್ತಿದ್ದವು. ಅರಬ್ಬರು ಮತ್ತು ಯುರೋಪಿಯನ್ನರು ಭಾರತ ಮತ್ತು ಆಫ್ರಿಕಾ ನಡುವಿನ ಸಾಂಬಾರ ವ್ಯಾಪಾರದಲ್ಲಿ ಮಧ್ಯವರ್ತಿಗಳಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಪ್ರಮುಖ ಸಾಂಬಾರ ಪದಾರ್ಥಗಳಾದ ದಾಲ್ಚಿನ್ನಿ ಚಕ್ಕೆ, ಶುಂಠಿ, ಮೆಣಸು, ಮುಂತಾದವು ರಫ್ತಾಗುತ್ತಿದ್ದವು. ಕೆಂಪು ಸಮುದ್ರ ಪರ್ಷಿಯನ್ ಕೊಲ್ಲಿ ಮತ್ತು ಆಫ್ರಿಕಾದ ಬಂದರುಗಳು ಪ್ರಮುಖವಾಗಿ ಈ ವ್ಯಾಪಾರದಲ್ಲಿ ತೊಡಗಿಸಿಕೊಂಡಿದ್ದವು.

**ಮಡಿಕೆ ಮತ್ತು ಪಿಂಗಾಣಿ ವಸ್ತುಗಳು:** ಭಾರತವು ಮಡಿಕೆ ತಯಾರಿಕೆಗೆ ಪ್ರಾಮುಖ್ಯತೆಗಳಿಸಿತ್ತು. ಭಾರತದಾದ್ಯಂತ ವಿವಿಧ ಬೆಗೆಯ ಮಡಿಕೆಗಳು ಮತ್ತು ಸಿಂಗಾರಗೊಂಡ ಮಡಿಕೆಗಳು ರಫ್ತಾಗುತ್ತಿದ್ದವು. ಮಡಿಕೆಗಳನ್ನು ಗೃಹ ಉಪಯೋಗಿ ವಸ್ತುಗಳಾಗಿ ಬಳಸಲಾಗುತಿತ್ತು ಮತ್ತು ಮಡಿಕೆಗಳೊಂದಿಗೆ ಶೃಂಗಾರಗೊಂಡ ಪಿಂಗಾಣಿ ಸರಕುಗಳು ಕೂಡ ರಫ್ತಾಗುತ್ತಿದ್ದವು ಈಗಾಗಲೇ ಘಟಕ–04 ರಲ್ಲಿ ಚೀನಾ ಮತ್ತು ವಿಜಯನಗರ ಸಾಮ್ರಾಜ್ಯ ಸಂಬಂಧವನ್ನು ವಿವರಿಸಿರುವಂತೆ ಚೀನಾದಿಂದ ಪಿಂಗಾಣಿ ಪಾತ್ರೆಗಳು ಭಾರತಕ್ಕೆ ರಫ್ತಾಗುತ್ತಿದ್ದವು. ಈ ಪಿಂಗಾಣಿ ಪಾತ್ರೆಗಳು ಭಾರತದಿಂದ ಆಫ್ರಿಕಾಗೆ ಪನರ್ ರಫ್ತಾಗುತ್ತಿದ್ದವು.

**ರತ್ನ ಮಣಿಗಳು:** ಭಾರತದ ಮಲಬಾರ್ ಬಂದರುಗಳಿಂದ ವಿವಿಧ ಬಗೆಯ ರತ್ನ ಮಣಿಗಳು ರಫ್ತಾಗುತ್ತಿದ್ದವು. ಭಾರತದ ಕರಾವಳಿ ತೀರ ಪ್ರದೇಶಗಳಲ್ಲಿ ಅಪಾರ ಪ್ರಮಾಣದಲ್ಲಿ ದೊರಕುತ್ತಿದ್ದ

ಮುತ್ತು ಮತ್ತು ರತ್ನಗಳನ್ನು ಆಫ್ರಿಕಾಕ್ಕೆ ರಫ್ತು ಮಾಡಲಾಗುತ್ತಿತ್ತು. ವಿಜಯನಗರ ಸಾಮ್ರಾಜ್ಯಕ್ಕೆ ಭೇಟಿ ನೀಡಿದ್ದ ಹಲವಾರು ವಿದೇಶಿ ಪ್ರವಾಸಿಗರು ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾದ ಹಂಪೆಯಲ್ಲಿ ಮುತ್ತು ಮತ್ತು ರತ್ನಗಳನ್ನು ಬೀದಿಯಲ್ಲಿ ಮಾರಾಟ ಮಾಡುತ್ತಿದುದರ ಬಗ್ಗೆ ಉಲ್ಲೆಖಿಸಿದ್ದಾರೆ. ಹೀಗೆ ಭಾರತದ ಮುತ್ತು ರತ್ನಗಳಿಗೆ ವಿದೇಶಗಳಲ್ಲಿ ಅಪಾರಾದ ಬೇಡಿಕೆ ಇತ್ತು.

**ವಜ್ರ:** ವಿಜಯನಗರ ಸಾಮ್ರಾಜ್ಯದಲ್ಲಿ ಆಂದ್ರಪ್ರದೇಶದಲ್ಲಿ ಹಲವಾರು ವಜ್ರದ ಗಣಿಗಳಿದ್ದವು. ಈ ವಜ್ರದ ಗಣಿಗಳು ಅಪಾರ ಪ್ರಮಾಣದ ವಜ್ರವನ್ನು ಉತ್ಪಾದಿಸುತ್ತಿದ್ದವು. ಈ ವಜ್ರಗಳಿಗೆ ವಿಶ್ವದ ವಿವಿಧ ಭಾಗಗಳಲ್ಲಿ ಅಪಾರವಾದ ಬೇಡಿಕಗಳಿದ್ದವು. ವಜ್ರವನ್ನು ಶೇಖರಿಸಿ ಅವುಗಳನ್ನು ರಫ್ತು ಮಾಡಲಾಗುತಿತ್ತು.[13]

ಹೀಗೆ ಈ ಪದಾರ್ಥಗಳಲ್ಲದೆ ದೂಪ, ನೆಲಹಾಸುಗಳು ಮತ್ತು ಖರ್ಜೂರವು ಕೂಡ ರಫ್ತಾಗುತ್ತಿದ್ದವು. ರಫ್ತುಗಳ ಪ್ರಕ್ರಿಯೆಯಲ್ಲಿ ಈ ಮೇಲ್ಕಂಡ ಸರಕುಗಳು ವ್ಯಾಪಾರ ಮತ್ತು ವಾಣೀಜ್ಯದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸಿದ್ದವು.

**ಆಫ್ರಿಕಾದ ಬಂದರುಗಳಿಂದ ಮಲಬಾರ್ ಬಂದರುಗಳಿಗೆ ರಫ್ತಾಗುತ್ತಿದ್ದ ಪ್ರಮುಖ ಸರಕುಗಳು:**

ಈಗಾಗಲೇ ಭಾರತದ ಮಲಬಾರ್ ಬಂದರುಗಳಿಂದ ಆಫ್ರಿಕಾಕ್ಕೆ ರಫ್ತಾಗುತ್ತಿದ್ದ ಪ್ರಮುಖ ಸರಕುಗಳ ಬಗ್ಗೆ ತಿಳಿದುಕೊಂಡಿದ್ದೇವೆ. ಈಗ ಆಪ್ರಿಕಾದ ಬಂದರುಗಳಿಂದ ಭಾರತದ ಮಲಬಾರ್ ಬಂದರುಗಳಿಗೆ ರಫ್ತಾಗುತ್ತಿದ್ದ ಪ್ರಮುಖ ಸರಕುಗಳ ಬಗ್ಗೆ ಈ ಕೆಳಗೆ ವಿವರಿಸಲಾಗಿದೆ.

**ದಂತ:** ಆಫ್ರಿಕಾದ ಒಳಭಾಗದ ಕಾಡುಗಳಲ್ಲಿ ದೊರೆಯುತ್ತಿದ್ದ ಆನೆಗಳನ್ನು ಹಿಡಿದು ಅವುಗಳ ದಂತಗಳನ್ನು ಮಲಬಾರ್ ಬಂದರುಗಳಿಗೆ ರಫ್ತು ಮಾಡಲಾಗುತ್ತಿತ್ತು. ಪೂರ್ವ ಆಫ್ರಿಕಾ ಮತ್ತು ಮಧ್ಯ ಆಫ್ರಿಕಾಗಳಲ್ಲಿ ಅತಿ ಹೆಚ್ಚಿನ ಆನೆಗಳು ದೊರೆಯುತ್ತಿದ್ದು ಅವುಗಳ ದಂತಗಳನ್ನು ಭಾರತಕ್ಕೆ ರಫ್ತು ಮಾಡಲಾಗುತ್ತಿತ್ತು. ಈ ವ್ಯಾಪಾರದಲ್ಲಿ ನೇಯ್ಕು ಮತ್ತು ಮಕರಂಗ ಎಂಬ ಪಂಗಡಗಳು ಪ್ರಮುಖವಾಗಿ ತೊಡಗಿಸಿಕೊಂಡಿದ್ದವು. ದಂತಗಳಿಗೆ ಭಾರತದಾದ್ಯಂತ ಅಪಾರವಾದ ಬೇಡಿಕೆ ಇತ್ತು. ಈ ದಂತಗಳಿಂದ ಭಾರತದಲ್ಲಿ ಬಳೆಗಳನ್ನು ಮತ್ತು ಆಭರಣಗಳನ್ನು ತಯಾರಿಸುತ್ತಿದ್ದರು. ದಂತಗಳನ್ನು ಬಳಸಿ ಪಿಠೋಪಕರಣಗಳನ್ನು ಸಹ ತಯಾರಿಸುತ್ತಿದ್ದರು. ಇವು ಸಾಮಾನ್ಯವಾಗಿ ಶ್ರೀಮಂತ ವರ್ಗದವರು ಬಳಸುತ್ತಿದ್ದರು.

**ಗುಲಾಮರು:** ಆಫ್ರಿಕಾದಿಂದ ವಿಜಯನಗರ ಸಾಮ್ರಾಜ್ಯಕ್ಕೆ ಮುಖ್ಯವಾಗಿ ಮಲಬಾರ್ ಬಂದರುಗಳಿಗೆ ರಫ್ತಾಗುತ್ತಿದುದ್ದು ಗುಲಾಮರು, ಗುಲಾಮರನ್ನು ಆಫ್ರಿಕಾದ ವಿವಿಧ ಭಾಗಗಳಲ್ಲಿ ದಾಳಿ ಮಾಡಿ

ಹಿಡಿದು ಅವರನ್ನು ಭಾರತಕ್ಕೆ ಮತ್ತು ವಿವಿಧ ಭಾಗಗಳಿಗೆ ರಫ್ತು ಮಾಡಲಾಗುತಿತ್ತು. ಒಂದು ಅಂದಾಜಿನ ಪ್ರಕಾರ ಆಪ್ರಿಕಾದಿಂದ ಭಾರತಕ್ಕೆ ಕ್ರಿ.ಶ. 10ನೇ ಶತಮಾನದಿಂದ 16ನೇ ಶತಮಾನದ ವರೆಗೆ ಸುಮಾರು ಆರುಸಾವಿರದಿಂದ ಏಳುಸಾವಿರ ಗುಲಾಮರು ರಫ್ತಾಗಿದ್ದರು. ಈ ಗುಲಾಮರು ಭಾರತದಲ್ಲಿ, ಸೈನಿಕರಾಗಿ, ಸೇವಕರಾಗಿ ಹಾಗೂ ಗಣಿಗಳಲ್ಲಿ ಕಾರ್ಮಿಕರಾಗಿ ಸೇವೆಸಲ್ಲಿಸುತ್ತಿದ್ದರು.

**ಪ್ರಾಣಿಗಳ ಚರ್ಮ:** ಆಪ್ರಿಕಾದಿಂದ ವಿಜಯನಗರ ಸಾಮ್ರಾಜ್ಯಕ್ಕೆ ರಫ್ತಾಗುತ್ತಿದ್ದ ಪ್ರಮುಖ ಸರಕುಗಳಲ್ಲಿ ಮುಖ್ಯವಾದ ಮತ್ತೊಂದು ಸರಕು ಅದು ಪ್ರಾಣಿಗಳ ಚರ್ಮವಾಗಿತ್ತು. ಚಿರತೆಯ ಚರ್ಮವು ಭಾರತಕ್ಕೆ ಆಫ್ರಿಕಾದಿಂದ ರಫ್ತಾಗುತಿತ್ತು. ಆಫ್ರಿಕಾದ ಕಾಡುಗಳಲ್ಲಿ ದೊರಕುತ್ತಿದ್ದ ಪ್ರಾಣಿಗಳನ್ನು ಕೊಂದು ಅವುಗಳ ಚರ್ಮವನ್ನು ಭಾರತಕ್ಕೆ ರಫ್ತು ಮಾಡಲಾಗುತಿತ್ತು. ಇವುಗಳಲ್ಲಿ ಚಿರತೆ ಚರ್ಮವು ಹೆಚ್ಚು ಪ್ರಾಮುಖ್ಯತೆಯನ್ನು ಗಳಿಸಿತ್ತೆಂದು ಹೇಳಬಹುದು.

**ಘೇಂಡಾಮೃಗದ ಕೊಂಬು:** ಆಫ್ರಿಕಾದಿಂದ ವಿಜಯನಗರ ಸಾಮ್ರಾಜ್ಯದ ಬಂದರುಗಳಿಗೆ ರಪ್ತಾಗುತ್ತಿದ್ದ ಸರಕುಗಳಲ್ಲಿ ಘೇಂಡಾಮೃಗದ ಕೊಂಬು ಬಹಳ ಪ್ರಮುಖವಾಗಿತ್ತು. ಈ ಘೇಂಡಾಮೃಗದ ಕೊಂಬುಗಳನ್ನು ಭಾರತದಲ್ಲಿ ಶ್ರೀಮಂತರು ತಮ್ಮ ಮನೆಯ ಅಂದವನ್ನು ಹೆಚ್ಚಿಸಲು ಅವುಗಳನ್ನು ಬಳಸುತ್ತಿದ್ದರು. ರಾಜ ಕುಟುಂಬದವರು, ಸರದಾರರು ಹೆಚ್ಚಾಗಿ ಈ ವಸ್ತುಗಳನ್ನು ಕೊಂಡುಕೊಳ್ಳುತ್ತಿದ್ದರು. ಈ ವ್ಯಾಪಾರ ಅತಿ ಹೆಚ್ಚು ಪ್ರಗತಿಯಲ್ಲಿತ್ತು.

**ತಾಮ್ರ ಮತ್ತು ಕಬ್ಬಿಣ:** ಆಫ್ರಿಕಾದಲ್ಲಿ ಅತಿ ಹೆಚ್ಚು ತಾಮ್ರ ಮತ್ತು ಕಬ್ಬಿಣದ ನಿಕ್ಷೇಪಗಳು ದೊರಕುತಿದ್ದು ಈ ಲೋಹಗಳನ್ನು ವಿಜಯನಗರ ಸಾಮ್ರಾಜ್ಯದ ಪ್ರಮುಖ ಬಂದರುಗಳಾದ ಕ್ಯಾಲಿಕಟ್, ಹೊನ್ನಾವರ, ಭಟ್ಕಳ ಬಂದರುಗಳಿಗೆ ಆಫ್ರಿಕಾದಿಂದ ರಫ್ತು ಮಾಡಲಾಗುತ್ತಿತ್ತು. ತಾಮ್ರ ಮತ್ತೆ ಕಬ್ಬಿಣವನ್ನು ಬಳಸಿ ಹಲವಾರು ವಸ್ತುಗಳನ್ನು ತಯಾರಿಸಲಾಗುತ್ತಿತ್ತು. ಅಂತಹವುಗಳಲ್ಲಿ ಕಬ್ಬಿಣವನ್ನು ಬಳಸಿ ಖಡ್ಗಗಳನ್ನು ತಯಾರಿಸ ಲಾಗುತ್ತಿತ್ತು. ಭಾರತದ ಖಡ್ಗಗಳಿಗೆ ವಿಶ್ವದ ವಿವಿಧ ಭಾಗಗಳಲ್ಲಿ ಹಲವಾರು ಬೇಡಿಕೆ ಇತ್ತು. ಹಾಗೂ ತಾಮ್ರವನ್ನು ಬಳಸಿ ಗೃಹಪಯೋಗಿ ವಸ್ತುಗಳನ್ನು ತಯಾರಿಸಲಾಗುತ್ತಿತ್ತು. ತಾಮ್ರ ಮತ್ತು ಕಬ್ಬಿಣವು ಪ್ರಮುಖ ಲೋಹಗಳಾಗಿದ್ದು ವ್ಯಾಪಾರದ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸಿದ್ದವು.[14]

ಹೀಗೆ ಈ ಮೇಲ್ಕಂಡ ರೀತಿಯಲ್ಲಿ ವಿಜಯನಗರ ಸಾಮ್ರಾಜ್ಯ ಮತ್ತು ಆಫ್ರಿಕಾದ ನಡುವೆ ವ್ಯಾಪಾರ ಏರ್ಪಟ್ಟಿತ್ತು. ಹಲವಾರು ಸರಕುಗಳು ಆಫ್ರಿಕಾದ ಬಂದರುಗಳಿಂದ ಮಲಬಾರ್ ಬಂದರುಗಳಿಗೆ ರಫ್ತಾಗುವ ಮೂಲಕ ಭಾರತವು ಕೂಡ ಕೆಲವೊಂದು ಸರಕುಗಳಿಗೆ ಬೇರೆ

ದೇಶಗಳೊಂದಿಗೆ ಅವಲಂಬಿಸಿತ್ತೆಂದು ಈ ರೀತಿಯ ವ್ಯಾಪಾರ ಮತ್ತು ವಾಣಿಜ್ಯದಿಂದ ನಾವು ತಿಳಿದುಕೊಳ್ಳಬಹುದಾಗಿದೆ.

ವಿಜಯನಗರ ಸಾಮ್ರಾಜ್ಯದ ಅವದಿಯಲ್ಲಿ ಬೇರೆ ಬೇರೆ ಭಾಗಗಳಲ್ಲಿ ಬೇಡಿಕೆ ಹೊಂದಿದ ಸರಕುಗಳು ಮತ್ತು ವಿವಿಧ ಭಾಗಗಳಿಗೆ ಪೂರೈಕೆ ಹೊಂದುತ್ತಿದ್ದ ಸರಕುಗಳ ಬಗ್ಗೆ ಈ ಕೆಳಗಿನ ಕೋಷ್ಟಕದಲ್ಲಿ ವಿವರಿಸಲಾಗಿದೆ.

| ಬಂದರು /ಮಾರುಕಟ್ಟೆ | ಸರಕುಗಳ/ಪೂರೈಕೆ | ಸರಕುಗಳ ಬೇಡಿಕೆ |
|---|---|---|
| ಪೂರ್ವಆಫ್ರಿಕಾ,–ಕಿಲ್ವಾ ಮಾಂಬಾಸ | ದಂತ, ಗುಲಾಮರು, ಚಿನ್ನ ಮತ್ತು ಮರ | ಸಾಂಬಾರ ಪದಾರ್ಥಗಳು, ರೇಷ್ಮೆ, ಹತ್ತಿ ಬಟ್ಟೆಗಳು, ಮುತ್ತುಗಳು, ರತ್ನಗಳು, ವಜ್ರ, ಖರ್ಜೂರ ಪಿಂಗಾಣಿ |
| ಕೆಂಪು ಸಮುದ್ರ–ಅದೆನ್ | ಸಕ್ಕರೆ, ಚಿನ್ನ, ಬೆಳ್ಳಿ, ಕುದುರೆ ಮತ್ತು ಖರ್ಜೂರ | ಸಾಂಬಾರ ಪದಾರ್ಥಗಳು, ರೇಷ್ಮೆ, ಗುಲಾಮರು, ವಜ್ರ, ಮರ ಮತ್ತು ಪಿಂಗಾಣಿ |
| ಪರ್ಷಿಯನ್ ಕೊಲ್ಲಿ ಓರ್ಮಜ್, ಮಸ್ಕಟ್ | ಖಡ್ಗ, ಸಕ್ಕರೆ, ಬಣ್ಣ, ಬೆಳ್ಳಿ ಮುತ್ತುಗಳು, ರತ್ನಗಳು, ಮತ್ತು ಮರ | ರೇಷ್ಮೆ, ಸಾಂಬಾರ ಪದಾರ್ಥ, ಹತ್ತಿ ಬಟ್ಟೆಗಳು, ಮರ, ಮುತ್ತುರತ್ನಗಳು, ಪಿಂಗಾಣಿ |
| ಆಗ್ನೇಯ ಏಷ್ಯಾ–ಮಲಕ್ಕಾ | ಸಾಂಬಾರ ಪದಾರ್ಥಗಳು, ಸಕ್ಕರೆ, ಮುತ್ತುರತ್ನಗಳು ಮತ್ತು ಮರ | ರೇಷ್ಮೆ, ಹತ್ತಿಬಟ್ಟೆಗಳು, ದಂತ, ಗುಲಾಮರು ವಜ್ರ ಮತ್ತು ಮುತ್ತು ರತ್ನಗಳು, ಪಿಂಗಾಣಿ |
| ಭಾರತ–ಕ್ಯಾಲಿಕಟ್ ಕೊಚ್ಚಿನ್, ಹೊನ್ನಾವರ, ಭಟ್ಕಳ ಇತ್ಯಾದಿ | ಹತ್ತಿ ಬಟ್ಟೆಗಳು, ಸಾಂಬಾರ ಪದಾರ್ಥಗಳು ಮುತ್ತು ರತ್ನಗಳು, ಇಂಡಿಗೋ ಚಿನ್ನ ಮತ್ತು ವಜ್ರ | ದಂತ, ಗುಲಾಮರು, ರೇಷ್ಮೆ, ಕುದರೆ, ಪಿಂಗಾಣಿ, ಸುಗಂದದ್ರವ್ಯ ಮತ್ತು ಖರ್ಜೂರ |
| ದಕ್ಷಿಣ ಚಿನಾ–ಗುಂಗ್ ಜ್ವೋ ಮತ್ತು ಕ್ಯಾಂಟನ್ | ರೇಷ್ಮೆ, ಮರ, ಪಿಂಗಾಣಿ | ದಂತ, ಚಿನ್ನ, ಮುತ್ತುರತ್ನಗಳು, ಸಾಂಬಾರ ಪದಾರ್ಥಗಳು, ಹತ್ತಿಬಟ್ಟೆಗಳು, ವಜ್ರ ಮತ್ತು ಖಡ್ಗ |

**ವಿಜಯನಗರ ಸಾಮ್ರಾಜ್ಯ ಮತ್ತು ಆಫ್ರಿಕಾ ದೇಶಗಳ ನಡುವಿನ ವ್ಯಾಪಾರದಿಂದ ಉಂಟಾದ ಪರಿಣಾಮ.**

ವಿಜಯನಗರ ಸಾಮ್ರಾಜ್ಯ ಮತ್ತು ಆಫ್ರಿಕಾ ದೇಶಗಳ ನಡುವಿನ ವ್ಯಾಪಾರದಿಂದ ಮುಖ್ಯವಾಗಿ ಆಫ್ರಿಕದಲ್ಲಿ ಹಲವಾರು ಪರಿಣಾಮಗಳುಂಟಾದವು. ಆಫ್ರಿಕಾವು ವಿಶ್ವದ ವಿವಿಧ ಭಾಗಗಳೊಂದಿಗೆ ತನ್ನ ಸಂಪರ್ಕವನ್ನು ಬೆಳೆಸಿಕೊಳ್ಳುವುದರ ಮೂಲಕ ಆ ರಾಜ್ಯಗಳಲ್ಲಿ ಬಹಳಷ್ಟು ಬದಲಾವಣೆಗಳುಂಟಾದವು ಅಂತಹ ಬದಲಾವಣೆಗಳು ಕೆಲವೊಂದು ಪರಿಣಾಮಗಳನ್ನುಂಟು ಮಾಡಿದವು ಅಂತಹ ಪ್ರಮುಖ ಬದಲಾವಣೆಗಳನ್ನು ಈ ಕೆಳಕಂಡಂತೆ ಸಂಕ್ಷಿಪ್ತವಾಗಿ ತಿಳಿಸಲಾಗಿದೆ.

ವ್ಯಾಪಾರವು ರಾಜಕೀಯವಾಗಿ, ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಬಹಳಷ್ಟು ಬದಲಾವಣೆಗಳನ್ನುಂಟು ಮಾಡಿತ್ತು. ಹಾಗೆಯೇ ವ್ಯಾಪಾರದಿಂದಾಗಿ ಹಲವಾರು ನಗರಗಳು ಮತ್ತು ಬಂದರು ಪಟ್ಟಣಗಳು ಸಹ ಬೆಳವಣಿಗೆ ಹೊಂದಿದ್ದವು. ಪ್ರಮುಖವಾಗಿ ಕಿಲ್ವಾ, ಸಪೋಲಾ, ಮಲಿಂದಿ, ಮಾಮ್‌ಬಾಸ್, ಜನ್ಜಿಬಾರ್ ಮುಂತಾದ ಬಂದರು ಪಟ್ಟಣಗಳು ಬೆಳವಣಿಗೆ ಹೊಂದಿದವು. ಈ ಬಂದರು ಪಟ್ಟಣಗಳ ಬೆಳವಣಿಗೆಯಿಂದಾಗಿ ಗ್ರಾಮೀಣ ಆರ್ಥಿಕತೆಯು ಸಹ ಬೆಳವಣಿಗೆ ಪಡೆಯಿತು. ಜನರ ಜೀವನಮಟ್ಟ ಸುಧಾರಿಸಿ ವ್ಯಾಪಾರ ಕೈಗೊಂಡ ಕೆಲವೊಂದು ಸಮುದಾಯಗಳು ಐಷರಾಮಿ ಜೀವನವನ್ನು ನಡೆಸಲು ಪ್ರಾರಂಭಿಸಿದರು.

ಆಫ್ರಿಕಾವು ಹಂತ ಹಂತವಾಗಿ ಅರಬ್ಬರ ಆಳ್ವಿಕೆಗೆ ಒಳಪಟ್ಟಿತ್ತು ಹಾಗೂ ಅರಬ್ಬರು ಆಫ್ರಿಕಾದಲ್ಲಿ ತಮ್ಮ ವ್ಯಾಪಾರ ಮತ್ತು ವಾಣಿಜ್ಯವನ್ನು ಅಭಿವೃದ್ಧಿ ಪಡಿಸಿಕೊಂಡು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಕೆಲವೊಂದು ಬದಲಾಣೆಗಳನ್ನು ತಂದರು. ಅಫ್ರಿಕನ್ನರು ಈ ಯುಗದಲ್ಲಿ ಮೊದಲಬಾರಿಗೆ ವಿದೇಶಿ ವಸ್ತುಗಳ ಮೌಲ್ಯವನ್ನು ಆನಂದಿಸಿದರು. ಭಾರತದಿಂದ ರಫ್ತಾಗುತ್ತಿದ್ದ ಸಾಂಬಾರು ಪದಾರ್ಥಗಳು, ಸಿದ್ಧ ಉಡುಪುಗಳು ಮುಖ್ಯವಾಗಿ ಅವರ ಆಹಾರ ಮತ್ತು ಜೀವನ ಶೈಲಿಯ ಮೇಲೆ ಮಹತ್ತರವಾದ ಪ್ರಭಾವವನ್ನು ಬೀರಿದವು. ಆಫ್ರಿಕಾಕ್ಕೆ ವ್ಯಾಪಾರದ ಉದ್ದೇಶದಿಂದ ಭಾರತೀಯರು, ಅರಬ್ಬರು, ಪರ್ಷಿಯನ್ನರು ಮತ್ತು ಈಜಿಪ್ಟಿಯನ್ನರು ಪಾದಾರ್ಪಣೆಯನ್ನು ಮಾಡಿದರು. ನಂತರ ಅರಬ್ಬರು ಅಲ್ಲಿ ತಮ್ಮ ನೆಲೆಗಳನ್ನು ಸ್ಥಾಪಿಸಿದರು. ನಂತರ ಸ್ಥಳೀಯರೊಂದಿಗೆ ವಿವಾಹ ಸಂಪರ್ಕವನ್ನು ಏರ್ಪಡಿಸಿಕೊಂಡು ಸ್ವಾಹಿಲಿ ಎಂಬ ಹೊಸ ಜನಾಂಗದ ಹುಟ್ಟಿಗೆ ಕಾರಣರಾದರು. ಈ ಹೊಸ ಜನಾಂಗವು ಹೊಸ ಭಾಷೆಯನ್ನು ಸಹ

ಹುಟ್ಟುಹಾಕಿತು ಅದನ್ನು ಕಿಸ್ವಾಹಿಲಿ ಎಂದು ಕರೆಯಲಾಗುತ್ತಿತ್ತು. ಈ ಭಾಷೆಯು ಬಂಟು ಮತ್ತು ಅರೇಬಿಕ್ ಭಾಷೆಗಳ ಮಿಶ್ರಣವಾಗಿತ್ತು.

ಆಫ್ರಿಕಾ ಮಹಿಳೆಯರು ಉದ್ದವಾದ ರೇಷ್ಮೆ ಬಟ್ಟೆಗಳನ್ನು ಹಾಕಿಕೊಳ್ಳುತ್ತಿದ್ದರು. ಮತ್ತು ತಲೆಮುಸುಕನ್ನು ಧರಿಸುತ್ತಿದ್ದರು. ಇದರೊಂದಿಗೆ ಪುರುಷರು ತಲೆಗೆ ಟೋಪಿ ಹಾಕಿಕೊಳ್ಳುತ್ತಿದ್ದರು. ಚಪ್ಪಲಿ ಬಳಸಲು ಪ್ರಾರಂಬಿಸಿದರು. ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯಿಂದಾಗಿ ನಾಣ್ಯಗಳನ್ನು ಟಂಕಿಸುವ ಮತ್ತು ಬಳಸುವ ಪ್ರಕ್ರಿಯೆಗಳು ಆರಂಭಗೊಂಡವು. ಕಿಲ್ವಾ, ಸಪೋಲಾ ಮತ್ತು ಜನ್ಜಿಬಾರ್ ಪ್ರಮುಖ ನಾಣ್ಯ ಟಂಕಿಸುವ ಕೇಂದ್ರಗಳಾಗಿದ್ದವು ಹಾಗೂ ನಾಣ್ಯಗಳ ಚಲಾಣೆಯೊಂದಿಗೆ ಹಳೆಯ ವಸ್ತುವಿನಿಮಯ ಪದ್ಧತಿ ದೂರವಾಗಿ ನಾಣ್ಯ ಬಳಸಿ ವ್ಯಾಪಾರ ಮಾಡುವ ಪ್ರಕ್ರಿಯೆ ಆರಂಭಗೊಂಡಿತ್ತು. ಹಾಗೆಯೇ ಹೊಸ ಹೊಸ ಆಹಾರ ಬೆಳೆಗಳು ಅಲ್ಲಿ ಪರಿಚಯಸಲ್ಪಟ್ಟವು. ಉದಾ: ಅಕ್ಕಿ, ಗೋದಿ, ಕಿತ್ತಳೆ, ನಿಂಬೆಹಣ್ಣು, ಮತ್ತು ಬಾಳೆಹಣ್ಣುಗಳು, ಕರಾವಳಿ ಭಾಗದ ಜನರಲ್ಲಿ ಅತಿಹೆಚ್ಚಾಗಿ ಈ ಬೆಳೆಗಳನ್ನು ಬೆಳೆಯಲು ಪ್ರಾರಂಭಿಸಿದರು. ಅರಬ್ಬರ ನಂತರ ಪೋರ್ಚುಗೀಸರು ಆಫ್ರಿಕಾದ ಬಂದರುಗಳಲ್ಲಿ ಅದಿಪತ್ಯ ಸ್ಥಾಪಿಸಲು ಮುಂದಾದರು ನಂತರ ಬಹಳಷ್ಟು ಸಂಘರ್ಷಗಳು ಆಫ್ರಿಕಾದಲ್ಲಿ ಪ್ರಾರಂಭವಾದವು.

### 5.2 ವಿಜಯನಗರ ಸಾಮ್ರಾಜ್ಯ ಮತ್ತು ಈಜಿಪ್ಟ್

ವಿಜಯನಗರ ಸಾಮ್ರಾಜ್ಯ ಮತ್ತು ಈಜೆಪ್ಟ್ ದೇಶಗಳ ನಡುವೆ ಉತ್ತಮವಾದ ವ್ಯಾಪಾರ ಮತ್ತು ವಾಣಿಜ್ಯ ಸಂಬಂಧ ಬೆಳವಣಿಗೆ ಹೊಂದಿತ್ತು. ಈಜಿಪ್ಟ್ ಮತ್ತು ಭಾರತದ ನಡುವೆ ಪುರಾತನ ಕಾಲದಿಂದಲೂ ಹಲವಾರು ಸಂಬಂಧಗಳು ಬೆಳವಣಿಗೆ ಹೊಂದಿದ್ದವು. ಈಜಿಪ್ಟ್ ವಿಶ್ವದ ಅತ್ಯಂತ ಪ್ರಾಚೀನ ರಾಷ್ಟ್ರವಾಗಿದ್ದು ಈಜಿಪ್ಟ್ ನಾಗರಿಕತೆ ಬಹಳಷ್ಟು ವಿಶೇಷತೆಯನ್ನು ಗಳಿಸಿಕೊಂಡಿದೆ. ಈಜಿಪ್ಟ್‌ನಲ್ಲಿ ಮಾನವನ ನೆಲೆಯ ಕ್ರಿ.ಪೂ. 40,000 ಹಿಂದೆಯೇ ಆಗಿತ್ತೆಂದು ಅಲ್ಲಿನ ದಾಖಲೆಗಳು ಸ್ಪಷ್ಟಪಡಿಸುತ್ತದೆ. ಕ್ರಿ.ಪೂ. 3150ರಲ್ಲಿ ಈಜಿಪ್ಟ್ ನಾಗರೀಕತೆ ಬೆಳವಣಿಗೆ ಹೊಂದಿತು. ಮಾತ್ರವಲ್ಲದೇ ಈಜಿಪ್ಟ್‌ನಲ್ಲಿ ನಾರ್ಮರ್ ಎಂಬ ಪ್ರಥಮ ಸಾಮ್ರಾಜ್ಯ ಸ್ಥಾಪನೆಯಾಗಿ ಈಜಿಪ್ಟಿನ ಏಕೀಕರಣವಾಯಿತು. ಕ್ರಿ.ಶ.7ನೇ ಶತಮಾನದಲ್ಲಿ ಮುಸ್ಲಿಮರು ಈಜಿಪ್ಟಿನ ಮೇಲೆ ದಾಳಿ ಮಾಡಿದರು ಖಲೀಪರು ದಾಳಿಮಾಡಿ ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಖಲೀಪರ ಹಲವಾರು ಸಂತತಿಗಳು ಈಜಿಪ್ಟ್‌ನಲ್ಲಿ ಆಳ್ವಿಕೆ ನಡೆಸಿದವು. ಉದಾ:–ರಸಿದುನ್ ಖಲೀಫರು (632–661), ಉಮಾಯದ್ ಖಲೀಪರು (661–750), ಅಬ್ಬಾಸಿದ್ ಖಲೀಫರು (750 – 909), ಪತಾಮಿದ್ ಖಲೀಪರು (909–1171) ಅಯ್ಯುಬಿದ್ ಸುಲ್ತಾನರು (1171–1260) ಮತ್ತು

ಮಾಮುಲಿಕ್ ಸುಲ್ತಾನರು (1250–1517) ಕ್ರಿ.ಶ. 1517ರಲ್ಲಿ ಆಟೋಮನ್ ಸುಲ್ತಾನನಾದ ಸೇಲಿಂ ಕೈರೋವನ್ನು ವಶಪಡಿಸಿಕೊಂಡು ಈಜಿಪ್ಟನು ಆಟೋಮನ್ ಸಾಮ್ರಾಜ್ಯದೊಂದಿಗೆ ವಿಲೀನಗೊಳಿಸಿದನು. ಮಾಮೂಲಕ್ ಸಾಮ್ರಾಜ್ಯ ಮತ್ತು ಆಟೋಮನ್ ಸಾಮ್ರಾಜ್ಯದ ಆಡಳಿತ ಅವಧಿಯಲ್ಲಿ ಈಜಿಪ್ಟ್ ವಿಜಯನಗರ ಸಾಮ್ರಾಜ್ಯದೊಂದಿಗೆ ನೇರವಾದ ಸಂಪರ್ಕವನ್ನು ಹೊಂದಿತ್ತು.

ಕ್ರಿ.ಶ. 13ನೇ ಶತಮಾನದ ನಂತರ ಈಜಿಪ್ಟ್ ಕೆಂಪು ಸಮುದ್ರ ಭಾರತದ ಮಲಬಾರ್ ಬಂದರುಗಳು, ಮಲಯಾ ಮುಂತಾದ ದೇಶಗಳೊಂದಿಗೆ ಉತ್ತಮ ಸಂಬಂಧವನ್ನು ಬೆಳೆಸಿಕೊಂಡಿತ್ತು. ಕ್ರಿ.ಶ. 15ನೇ ಶತಮಾನದ ನಂತರ ಆಟೋಮನ್ ಸಾಮ್ರಾಜ್ಯದ ದಾಳಿಯ ಈಜಿಪ್ಟ್‌ನ ವ್ಯವಸ್ಥೆಯನ್ನು ಅವನತಿಗೆ ದೂಡಿತ್ತು. ಆಟೋಮನ್‌ರ ಮಿಲಿಟರಿಕರಣವು ಈಜಿಪ್ಟಿನ ಸಮಾಜ ಮತ್ತು ಆರ್ಥಿಕ ಪರಿಸ್ಥಿತಿಯನ್ನು ಕುಂಠಿತಗೊಳಿಸಿತು. ಆರ್ಥಿಕ ಕೊರತೆಗಳೊಂದಿಗೆ ಈಜಿಪ್ಟ್‌ನಲ್ಲಿ ವ್ಯಾಪಾರದ ಅವನತಿಯು ಉಂಟಾಯಿತು. ಇದಲ್ಲದೆ ಪೋರ್ಚುಗೀಸರು ಕೂಡ ಈಜಿಪ್ಟ್‌ನಲ್ಲಿ ತಮ್ಮ ವ್ಯಾಪಾರದ ಏಕಸ್ವಾಮ್ಯವನ್ನು ಸ್ಥಾಪಿಸಿದರು. ಕ್ರಿ.ಶ. 1687–1784ರ ಅವಧಿಯಲ್ಲಿ ಈಜಿಪ್ಟ್‌ನಲ್ಲಿ ಸುಮಾರು ಆರು ಭಾರಿ ಭೀಕರ ಬರಲಾಗ ಉಂಟಾಗಿ ಬಹಳಷ್ಟು ಸಮಸ್ಯೆಗಳು ಉದ್ಭವಿಸಿದವು. ಕ್ರಿ.ಶ. 1784ರ ಬರಗಾಲವು ಈಜಿಪ್ಟಿನ ಸುಮಾರು ಆರನೇ ಒಂದರಷ್ಟು ಜನಸಂಖ್ಯೆಯ ನಾಶಕ್ಕೆ ಕಾರಣವಾಯಿತು.

ಕ್ರಿ.ಶ. 1798ರಲ್ಲಿ ನೆಪೋಲಿಯನ್ ಭೋನಾಪಾರ್ಟ್ ಈಜಿಪ್ಟಿನ ಮೇಲೆ ದಾಳಿ ಮಾಡಿ ಫ್ರೆಂಚರ ವಸಾಹತುವಾಗಿ ರೂಪಿಸಿದನು. ಅನಂತರ ಬ್ರಿಟಿಷರು ತಮ್ಮ ಏಕಸ್ವಾಮ್ಯ ಸ್ಥಾಪಿಸಿದರು. ಕ್ರಿ.ಶ. 1882 ರಿಂದ 1953ರವರೆಗೆ ಈಜಿಪ್ಟ್ ಬ್ರಿಟಿಷರ ವಶದಲ್ಲಿತ್ತು. ಬ್ರಿಟಿಷರ ಆಡಳಿತದ ಅವಧಿಯಲ್ಲಿ ಬಹಳಷ್ಟು ಬದಲಾವಣೆಗಳು ಈಜಿಪ್ಟ್‌ನಲ್ಲಿ ಕಂಡು ಬಂದವು. ಕೊನೆಗೆ ಈಜಿಪ್ಟಿಯನ್ನರು ಬ್ರಿಟಿಷರ ವಿರುದ್ಧ ಹೋರಾಟ ಮಾಡಿ ಕ್ರಿ.ಶ. 1953ರಲ್ಲಿ ಗಣರಾಜ್ಯ ಈಜಿಪ್ಟನ್ನು ಸ್ಥಾಪಿಸಿಕೊಂಡರು. ಕ್ರಿ.ಶ. 1953 ರಿಂದ ಗಣರಾಜ್ಯವಾದ ಈಜಿಪ್ಟ್ ಕೈರೋವನ್ನು ರಾಜಧಾನಿ ಯಾಗಿ ಮಾಡಿಕೊಂಡು ವಿಶ್ವದ ಪ್ರಮುಖ ರಾಜ್ಯಗಳಲ್ಲಿ ಒಂದಾಗಿ ಬೆಳೆದು ನಿಂತಿದೆ.

**ವಿಜಯನಗರ ಸಾಮ್ರಾಜ್ಯ ಮತ್ತು ಈಜಿಪ್ಟಿನ ನಡುವೆ ವ್ಯಾಪಾರ ಮತ್ತು ವಾಣಿಜ್ಯ ಸಂಬಂಧಗಳು**

ವಿಜಯನಗರ ಸಾಮ್ರಾಜ್ಯದ ಬಂದರುಗಳಿಂದ ಈಜಿಪ್ಟಿಗೆ ಹಲವಾರು ಸರಕುಗಳು ರಫ್ತಾಗುತ್ತಿದ್ದವು. ಈ ವ್ಯಾಪಾರದಲ್ಲಿ ಅರಬ್ಬರು ಈಜಿಪ್ಟ್ ಮತ್ತು ಭಾರತದ ಬಂದರುಗಳೊಂದಿಗೆ ಮಧ್ಯವರ್ತಿಗಳಾಗಿ ಕಾರ್ಯನಿರ್ವಹಿಸುತ್ತಿದ್ದರು. ಕೆಂಪು ಸಮುದ್ರದಲ್ಲಿ ಕಂಡು ಬರುವ ಈಜಿಪ್ಟ್‌ಗೆ

ಭಾರತದಿಂದ ನೇರವಾದ ವ್ಯಾಪಾರ ಸಂಪರ್ಕವಿತ್ತು. ಭಾರತದ ಬಂದರುಗಳಿಂದ ಈಜಿಪ್ಟಿಗೆ ತಲುಪಲು ಪ್ರಮುಖವಾಗಿ ಮೂರು ಮಾರ್ಗಗಳಿದ್ದವು. ಅವುಗಳ ವಿವರಣೆ ಈ ಕೆಳಕಂಡತಿವೆ.

**ವ್ಯಾಪಾರ ಮಾರ್ಗಗಳು**

ಭಾರತದಿಂದ ಈಜಿಪ್ಟ್ ತಲುಪಲು ಭೂ ಮಾರ್ಗ ಮತ್ತು ಜಲ ಮಾರ್ಗಗಳೆರಡು ಸಹಾಯವಾಗಿದ್ದವು. ಪ್ರಮುಖ ಮೂರು ಮಾರ್ಗಗಳನ್ನು ಈ ಕೆಳಗೆ ಉಲ್ಲೇಖಿಸಲಾಗಿದೆ.

- ಭಾರತದ ಸಮುದ್ರಗಳಿಂದ ಪರ್ಷಿಯನ್ ಕೊಲ್ಲಿಯ ಮಾರ್ಗವಾಗಿ ಈಜಿಪ್ಟ್ ತಲಪುವ ಮಾರ್ಗ
- ಭೂಮಾರ್ಗ – ಇರಾಕ್ ಮತ್ತು ಟರ್ಕಿಯ ಮಾರ್ಗವಾಗಿ ಈಜಿಪ್ಟ್ ತಲುಪುವ ಮಾರ್ಗ
- ಭಾರತದ ಪಶ್ಚಿಮದ ಬಂದರುಗಳಿಂದ ಕೆಂಪು ಸಮುದ್ರದ ಮಾರ್ಗವಾಗಿ ಈಜಿಪ್ಟ್ ತಲಪುವ ಮಾರ್ಗ[15]

ಭಾರತ ಮತ್ತು ಈಜಿಪ್ಟಿನ ನಡುವಿನ ವ್ಯಾಪಾರದಲ್ಲಿ ಅರಬ್ಬರು ಪ್ರಮುಖ ಪಾತ್ರವನ್ನು ವಹಿಸಿದ್ದರು. ಕ್ರಿ.ಶ. 7ನೇ ಶತಮಾನದಲ್ಲಿ ಈಜಿಪ್ಟನ್ನು ಅರಬ್ಬರು ಸಂಪೂರ್ಣವಾಗಿ ನಿಯಂತ್ರಣ ವನ್ನು ಹೊಂದುವ ಮೂಲಕ ವ್ಯಾಪಾರ ಮತ್ತು ವಾಣಿಜ್ಯವನ್ನು ನಡೆಸುತ್ತಿದ್ದರು. ಅರಬ್ಬರು ನೇರವಾಗಿ ಭಾರತದ ಬಂದರುಗಳೊಂದಿಗೆ ಸಂಬಂಧವನ್ನು ಹೊಂದಿದುದರಿಂದ ಅವರಿಗೆ ಆಮದು ಮತ್ತು ರಫ್ತು ಪ್ರಕ್ರಿಯೆಗಳು ತುಂಬಾ ಸುಲಭವಾಗಿದ್ದವು.

ಹಲವಾರು ದಾಖಲೆಗಳ ಪ್ರಕಾರ ಬಂದರುಗಳು ಸರಕುಗಳ ಮುಖ್ಯ ವಿನಿಮಯ ಕೇಂದ್ರಗಳಾಗಿದ್ದವು. ಈಜಿಪ್ಟ್ ಮತ್ತು ವಿಜಯನಗರ ಸಾಮ್ರಾಜ್ಯದ ಅಂತಹ ಹಲವಾರು ಸರಕುಗಳು ವಿನಿಮಯವಾಗುತ್ತಿದ್ದವು. ಯುದ್ಧ ಪ್ರಾಣಿಗಳು ಸಾಂಬಾರ, ಪದಾರ್ಥಗಳು ಮುಖ್ಯವಾದವುಗಳಾಗಿದ್ದವು. ಭಾರತದ ಮಲಬಾರ್ ಮತ್ತು ಗುಜರಾತ್ ಬಂದರುಗಳಿಂದ ಈಜಿಪ್ಟಿಗೆ ಸಿದ್ಧ ಉಡುಪುಗಳು ರಫ್ತಾಗುತ್ತಿದ್ದವು. ಇದರೊಂದಿಗೆ ಕೆಲವೊಂದು ಮುತ್ತು ರತ್ನಗಳು ಹಾಗೂ ಸಾಂಬಾರ ಪದಾರ್ಥಗಳು ಮುಖ್ಯವಾದವುಗಳಾಗಿದವು. ಮಲಬಾರ್ ಭಾಗಗಳಲ್ಲಿ ದೊರೆಯುತ್ತಿದ್ದ ಅತಿಯಾದ ಸಾಂಬಾರ ಪದಾರ್ಥಗಳಿಗೆ ಪರ್ಷಿಯನ್ ಕೊಲ್ಲಿ, ಕೆಂಪು ಸಮುದ್ರದ ಭಾಗಗಳಲ್ಲಿ ಅತಿ ಹೆಚ್ಚಿನ ಬೇಡಿಕೆ ಇತ್ತು. ಈ ಮಾರ್ಗವಾಗಿಯೇ ಈಜಿಪ್ಟನ್ನು ಈ ಸರಕುಗಳು ತಲುಪುತ್ತಿದ್ದವು. ಮಲಬಾರ್ ತೀರದಿಂದ ಭಾರತೀಯ ಮರಗಳಿಗೆ ಅತಿ ಹೆಚ್ಚಿನ ಬೇಡಿಕೆ ಇತ್ತು. ಈ ಮರವನ್ನು ಬಳಸಿ ಅರಬ್ಬರು ಅಲ್ಲಿ ಹಡಗುಗಳನ್ನು ನಿರ್ಮಿಸುತ್ತಿದ್ದರು. ಕ್ರಿ.ಶ. 15ನೇ ಶತಮಾನದ ಸಂದರ್ಭದಲ್ಲಿ ಇಂಡಿಗೋ ಅತಿ ಹೆಚ್ಚಾಗಿ ಈಜಿಪ್ಟ್‌ಗೆ ರಫ್ತಾಗುತಿತ್ತು.

### ವಿಜಯನಗರ ಸಾಮ್ರಾಜ್ಯ ಮತ್ತು ಈಜಿಪ್ಟ್‌ನ ನಡುವೆ ಬಟ್ಟೆ ವ್ಯಾಪಾರ

ಭಾರತ ಮತ್ತು ಈಜಿಪ್ಟಿನ ನಡುವೆ ಪ್ರಾಚೀನ ಕಾಲದಿಂದಲೂ ಬಟ್ಟೆ ವ್ಯಾಪಾರ ಸಮರ್ಪಕವಾಗಿ ನಡೆಯುತಿತ್ತು. ಅದು ವಿಜಯನಗರ ಸಾಮ್ರಾಜ್ಯದಲ್ಲಿ ಬಹಳ ವೈಭವವಾಗಿ ಮುಂದುವರೆಯಿತು. ಮೂರು ಬಗೆಯ ಬಟ್ಟೆಗಳು ಬಾರತದ ಬಂದರುಗಳಿಂದ ರಫ್ತಾಗುತ್ತಿದ್ದವು. ಹತ್ತಿ ಬಟ್ಟೆಗಳು, ರೇಷ್ಮೆ ಬಟ್ಟೆಗಳು ಮತ್ತು ಉಣ್ಣೆಬಟ್ಟೆಗಳಾಗಿದ್ದವು. ಹತ್ತಿಯನ್ನು ಭಾರತದ ವಿವಿಧ ಭಾಗಗಳಲ್ಲಿ ಬೆಳೆಯುತ್ತಿದ್ದು ಹತ್ತಿ–ಬಟ್ಟೆಗಳಿಗೆ ಅಪಾರವಾದ ಬೇಡಿಕೆ ಇತ್ತು. ಬ್ಲಾಕ್ ಪ್ರಿಂಟರ್ಸ್ ಮತ್ತು ಬಣ್ಣದ ಬಟ್ಟೆಗಳು ಅತಿ ಹೆಚ್ಚಾಗಿ ರಫ್ತಾಗುತ್ತಿದ್ದವು. ಭಾರತದ ಪೂರ್ವ ಬಂದರುಗಳಿಂದ ಮುಖ್ಯವಾಗಿ ಮಸ್ಲಿನ್ ಬಟ್ಟೆಗಳು ರಫ್ತಾಗುತ್ತಿದವು. ಬಂಗಾಳದಲ್ಲಿ ನೆಲೆಸಿದ್ದ ಮುಸ್ಲಿಮರು ಮಸ್ಲಿನ್ ಬಟ್ಟೆಗಳನ್ನು ತಯಾರಿಸುತ್ತಿದ್ದರು. ಈ ಬಟ್ಟೆಗಳು ಈಜಿಪ್ಟ್‌ಗೆ ಅರಬ್ಬರ ಮೂಲಕ ರವಾನೆ ಯಾಗುತ್ತಿದ್ದವು. ಈಜಿಪ್ಟ್ ಮುಸ್ಲಿಂ ರಾಷ್ಟ್ರವಾಗಿದ್ದು ಅತಿ ಹೆಚ್ಚು ಮಸ್ಲಿನ್ ಬಟ್ಟೆಗಳನ್ನು ಭಾರತದಿಂದ ಆಮದುಮಾಡಿಕೊಳ್ಳುತ್ತಿತ್ತು.[16]

### ವಿಜಯನಗರ ಸಾಮ್ರಾಜ್ಯ ಮತ್ತು ಈಜಿಪ್ಟ್‌ನ ನಡುವೆ ಬಣ್ಣದ ವ್ಯಾಪಾರ

ವಿಜಯನಗರ ಸಾಮ್ರಾಜ್ಯದಿಂದ ಈಜಿಪ್ಟ್‌ಗೆ ಬಣ್ಣಗಳು ರಫ್ತಾಗುತ್ತಿದ್ದವು. ಮುಖ್ಯವಾಗಿ ಕಪ್ಪು ನೀಲಿ, ಹಸಿರು ಮತ್ತು ಹಳದಿ ಬಣ್ಣಗಳು ಅತಿ ಹೆಚ್ಚು ಪ್ರಾಮುಖ್ಯತೆ ಗಳಿಸಿದ್ದವು. ಬಣ್ಣ ಹಾಕಿ ಬಟ್ಟೆಗಳನ್ನು ತಯಾರಿಸುವುದರೊಂದಿಗೆ ಬಟ್ಟೆಗಳ ಮೇಲೆ ಕಸೂತಿ ಕೆಲಸವು ಕೂಡ ಸಮರ್ಪಕವಾಗಿ ನಡೆಯುತ್ತಿತ್ತು. ಚಿನ್ನದ ಮತ್ತು ಬೆಳ್ಳಿಯ ದಾರಗಳನ್ನು ಸಹ ಬಳಸಿ ಶ್ರೀಮಂತ ಬಟ್ಟೆಗಳನ್ನು ಕಸೂತಿ ಮೂಲಕ ತಯಾರಿಸುತ್ತಿದ್ದರು. ವಿಜಯನಗರ ಸಾಮ್ರಾಜ್ಯದಲ್ಲಿ ನೆಲಹಾಸು ಕೂಡ ತಯಾರಾಗುತಿತ್ತು. ಭಾರತಕ್ಕೆ ಮುಸ್ಲಿಮರ ಆಗಮನದ ನಂತರ ಭಾರತದಲ್ಲಿ ನೆಲಹಾಸುಗಳ ತಯಾರಿಕೆಯು ಪ್ರಾಮುಖ್ಯತೆ ಗಳಿಸಿತ್ತು. ರೇಷ್ಮೆ ಮತ್ತು ಹತ್ತಿಯನ್ನು ಬಳಸಿ ನೆಲಹಾಸುಗಳನ್ನು ತಯಾರಿಸಲಾಗುತ್ತಿತ್ತು. ಹಾಗೂ ಈ ನೆಲಹಾಸುಗಳ ತಯಾರಿಕೆಯಲ್ಲಿ ಪರ್ಷಿಯನ್ ಅಥವಾ ಮುಸ್ಲಿಂ ನೇಕಾರರು ತೊಡಗಿಸಿಕೊಂಡಿದ್ದರು.

### ವಿಜಯನಗರ ಸಾಮ್ರಾಜ್ಯ ಮತ್ತು ಈಜಿಪ್ಟಿನ ನಡುವೆ ಸಾಂಬಾರ ಪದಾರ್ಥಗಳ ವ್ಯಾಪಾರ

ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಅರಬ್ಬರು ಮತ್ತು ಪೋರ್ಚುಗೀಸರು ಭಾರತದ ಸಾಂಬಾರ ಪದಾರ್ಥಗಳಿಗೆ ಬಹಳಷ್ಟು ಬೇಡಿಕೆ ಹೊಂದಿದ್ದರು. ಅರಬ್, ಪರ್ಷಿಯಾ, ಆಫ್ರಿಕಾ ಮತ್ತು ಈಜಿಪ್ಟ್ ಹಾಗೂ ಯುರೋಪಿನ ದೇಶಗಳಿಗೆ ಭಾರತದಿಂದ ಸಾಂಬಾರ ಪದಾರ್ಥಗಳು

ರಫ್ತಾಗುತ್ತಿದ್ದವು ಮುಸ್ಲಿಮರ ವಶವಾದ ನಂತರ ಅಲ್ಲಿನ ವ್ಯಾಪಾರವು ಕೂಡ ಅವರ ನಿಯಂತ್ರಣಕ್ಕೆ ಒಳಪಟ್ಟಿತ್ತು. ಪ್ರಮುಖ ಸಾಂಬಾರ ಪದಾರ್ಥಗಳಾದ, ಮೆಣಸು, ಶುಂಠಿ, ಏಲಕ್ಕಿ, ದಾಲ್ಚಿನಿ ಚಕ್ಕೆ ಪ್ರಮುಖವಾದವುಗಳಾಗಿದ್ದವು. ಸಾಂಬಾರ ಪದಾರ್ಥಗಳ ಮೇಲಿನ ಒಡೆತನ ಪ್ರಾರಂಭದಲ್ಲಿ ಅರಬ್ಬರ ಕೈಯಲ್ಲಿತ್ತು. ನಂತರ ಭಾರತಕ್ಕೆ ಪೋರ್ಚುಗೀಸರ ಆಗಮನದ ನಂತರ ಈ ಸಾಂಬಾರ ವ್ಯಾಪಾರದಲ್ಲಿ ಅವರು ಏಕಸಾಮ್ಯವನ್ನು ಪಡೆದುಕೊಂಡರು. ಪೋರ್ಚುಗೀಸರ ಕಾಲದಲ್ಲಿಯೂ ಸಹ ಈಜಿಪ್ಟಿಗೆ ಸಾಂಬಾರ ಪದಾರ್ಥಗಳನ್ನು ಪೋರ್ಚುಗೀಸರು ಸರಬರಾಜು ಮಾಡುತ್ತಿದ್ದರು. [17]

ಹೀಗೆ ಈ ಮೇಲ್ಕಂಡ ಪ್ರಮುಖ ಸರಕುಗಳಲ್ಲದೆ ಕಬ್ಬಿಣ ಮತ್ತು ಕಬ್ಬಿಣದ ಖಡ್ಗಗಳು, ಆಹಾರ ಪದಾರ್ಥಗಳಾದ ಅಕ್ಕಿ, ಗೋಧಿ, ಬಾರ್ಲಿ, ಅವರೆಕಾಳುಗಳು, ಪ್ರಮುಖ ಹಣ್ಣುಗಳಾದ ಕಿತ್ತಲೆಹಣ್ಣು ಮತ್ತು ನಿಂಬೆ ಹಣ್ಣುಗಳು ಕೂಡ ರಫ್ತಾಗುತ್ತಿದ್ದವು. ಸಕ್ಕರೆಯು ಒಂದು ಪ್ರಮುಖ ಉತ್ಪನ್ನವಾಗಿತ್ತು. ಇಡೀ ಭಾರತದಾದ್ಯಂತ ಅತಿ ಹೆಚ್ಚಾಗಿ ಕಬ್ಬನ್ನು ಬೆಳೆಯಲಾಗುತಿತ್ತು. ಈ ಕಬ್ಬಿನಿಂದ ಬರುತ್ತಿದ್ದ ಸಕ್ಕರೆ ರಫ್ತು ಮಾಡಲಾಗುತಿತ್ತು. ಗಿಡಮೂಲಿಕೆ ಮತ್ತು ಕಷಾಯಗಳು ಕೂಡ ಭಾರತದಿಂದ ಈಜಿಪ್ಟ್‌ಗೆ ರಫ್ತಾಗುತ್ತಿದ್ದವು. ಇದಲ್ಲದೆ ಪಕ್ಷಿಗಳು, ಪ್ರಾಣಿಗಳು, ಪ್ರಾಣಿಗಳ ಉತ್ಪನ್ನಗಳು ಕೂಡ ಈಜಿಪ್ಟ್‌ಗೆ ಅರಬರಿಂದ ರವಾನೆಯಾಗುತ್ತಿದ್ದವು. ಈ ಎಲ್ಲಾ ಪ್ರಮುಖ ಸರಕುಗಳ ಬಗ್ಗೆ ಎಡನೇಯ ಅಧ್ಯಾಯದಲ್ಲಿ ಕೂಲಂಕುಷವಾಗಿ ಚರ್ಚಿಸಲಾಗಿದೆ. ಹೀಗೆ ಈ ಮೇಲ್ಕಂಡ ರೀತಿಯಲ್ಲಿ ವಿಜಯನಗರ ಸಾಮ್ರಾಜ್ಯದಿಂದ ಸರಕುಗಳು ರಫ್ತಾಗುತ್ತಿದ್ದವು. ಈಜಿಪ್ಟಿನಿಂದ ಯಾವುದೇ ಪ್ರತ್ಯೇಕ ಅಥವಾ ವಿಶೇಷ ಸರಕುಗಳು ಭಾರತಕ್ಕೆ ರಫ್ತಾಗುತ್ತಿರಲಿಲ್ಲ. ಆ ಭಾಗದಿಂದ ಭಾರತಕ್ಕೆ ರಫ್ತಾಗುತ್ತಿದ ಸರಕುಗಳನ್ನು ಎರಡನೇ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಪ್ರಮುಖ ಬಂದರು ಪಟ್ಟಣಗಳ ಬೆಳವಣಿಗೆ**

ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಆಫ್ರಿಕಾ, ಈಜಿಪ್ಟ್, ಅರೀಬಿಯಾ, ಪರ್ಷಿಯಾ, ಮಲಯಾ, ಚೀನಾ, ಶ್ರೀಲಂಕಾ ಮತ್ತು ಯುರೋಪಿನ ದೇಶಗಳೊಂದಿಗೆ ಉತ್ತಮವಾದ ವ್ಯಾಪಾರ ವಾಣಿಜ್ಯ ಸಂಪರ್ಕವನ್ನು ಕ್ರಮಬದ್ಧಬಾಗಿ ಏರ್ಪಡಿಸಿಕೊಳ್ಳಲಾಗಿತ್ತು. ವಿಜಯನಗರ ಸಾಮ್ರಾಜ್ಯದ ಸ್ಥಾಪನೆಗೂ ಮುನ್ನವೇ ಭಾರತ ವಿಶ್ವದ ವಿವಿಧ ಭಾಗಗಳೊಂದಿಗೆ ಉತ್ತಮ ಸಂಪರ್ಕ ಹೊಂದಿತ್ತು. ವಿಶ್ವದ ಪ್ರಪ್ರಥಮ ನಗರ ನಾಗರಿಕತೆಯಾದ ಹರಪ್ಪ ನಾಗರೀಕತೆಯಿಂದ ಹಿಡಿದು ಬ್ರಿಟಿಷರ ಕಾಲದವರೆಗೆ ವಿಶ್ವದ ಪ್ರಮುಖ ಸಮುದ್ರಗಳಾದ ಕೆಂಪು ಸಮುದ್ರ, ಮೆಡಿಟರೇನಿಯನ್ ಸಮುದ್ರ ಮತ್ತು ಪರ್ಷಿಯನ್ ಕೊಲ್ಲಿ ಭಾಗಗಳಲ್ಲಿ ಭಾರತದ ಸಂಪರ್ಕವನ್ನು ಗುರ್ತಿಸಬಹುದು. ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಪ್ರಮುಖವಾಗಿ ಈ ಭಾಗಗಳಲ್ಲಿ ಭಾರತದೊಂದಿಗೆ

ಸಂಬಂಧ ಹೊಂದಿದ್ದ ಪ್ರಮುಖ ಬಂದರು ಪಟ್ಟಣಗಳ ಬಗ್ಗೆ ತಿಳಿಸುವ ಪ್ರಯತ್ನವನ್ನು ಮಾಡಲಾಗಿದೆ. ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯಲ್ಲಿ ಪ್ರಮುಖವಾಗಿ ಸಹಕರಿಸಿ ಬಂದರು ಪಟ್ಟಣಗಳ ಬಗ್ಗೆ ಕೆಲವು ಉಪಯುಕ್ತ ಮಾಹಿತಿಗಳನ್ನು ನೀಡುತ್ತಿದ್ದೇನೆ.

**ಓರ್ಮಜ್ ಬಂದರು:** ಪರ್ಷಿಯನ್ ಕೊಲ್ಲಿಯಲ್ಲಿ ಕಂಡು ಬರುವ ಓರ್ಮಜ್ ಬಂದರು ಅತ್ಯಂತ ಹಳೆಯ ಬಂದರಾಗಿತ್ತು. ಗ್ರೀಕರ ಕಾಲದಲ್ಲಿ ಇದರ ಹೆಸರು ಓರ್ಗನ್ ಎಂದು ಕರೆಯಲಾಗುತಿತ್ತು. ಮುಸ್ಲಿಮರು ಕಾಲದಲ್ಲಿ ಓರ್ಮಜ್ ಎಂದು ಕರೆಯಲಾಗುತಿತ್ತು. ಸಮುದ್ರ ವ್ಯಾಪಾರದಲ್ಲಿ ಈ ಬಂದರು ಪಟ್ಟಣವು ಆರ್ಥಿಕ ಬೆಳವಣಿಗೆಯಲ್ಲಿ ಅತಿ ಪ್ರಮುಖವಾದ ಪಾತ್ರವನ್ನು ವಹಿಸಿತ್ತು. ಓರ್ಮಜ್ ಬಂದರಿನಿಂದ ನೇರವಾಗಿ ಮಲಬಾರ್ ಬಂದರುಗಳಿಗ ಸಂಪರ್ಕವಿತ್ತು. ಅರಬ್ಬರು ಈ ಬಂದರನ್ನು ವ್ಯಾಪಾರದಲ್ಲಿ ಸಕ್ರಿಯವಾಗಿ ಬಳಸಿಕೊಂಡಿದ್ದರು. ಕ್ರಿ.ಶ. 1290ರಲ್ಲಿ ಮಾರ್ಕೋಪೋಲೋ ಈ ಬಂದರಿಗೆ ಭೇಟಿ ನೀಡಿದ್ದನು. ಇಬನ್ ಬತೂತನು ಕೂಡ ಈ ಬಂದರಿಗೆ ಭೇಟಿ ನೀಡಿದ್ದನು. ಕ್ರಿ.ಶ. 1505ರಲ್ಲಿ ಪೋರ್ಚುಗೀಸರು ಈ ಬಂದರಿನ ಮೇಲೆ ನಿಯಂತ್ರಣ ಹೊಂದಿದ್ದರು. ಕ್ರಿ.ಶ. 1507ರಲ್ಲಿ ಅಲ್ಫೋನ್ಸೋ ಡಿ ಅಲ್ಬುಕರ್ಕ್ ಓರ್ಮಜನು ವಶಪಡಿಸಿಕೊಂಡನು. ಈ ಬಂದರು ಒಂದು ತುರ್ತು ನಿಲ್ದಾಣವಾಗಿತ್ತು. ಯುರೋಪಿನಿಂದ ಭಾರತದ ಮಲಬಾರ್ ಬಂದರುಗಳಿಗೆ ಬರುತ್ತಿದ ಪೋರ್ಚುಗೀಸರ ಹಡಗುಗಳು ಅಲ್ಲಿ ಸ್ವಲ್ಪ ಕಾಲ ತಂಗಿ ಅನಂತರ ಅಲ್ಲಿಂದ ಭಾರತದ ಬಂದರುಗಳಿಗೆ ಯಾನವನ್ನು ಪ್ರಾರಂಭಿಸುತ್ತಿದ್ದವು. ಈ ಬಂದರು ಮುಖ್ಯವಾಗಿ ಗುಲಾಮರ ಮತ್ತು ಸಾಂಬಾರ ಪದಾರ್ಥಗಳ ವ್ಯಾಪಾರದ ಪ್ರಮುಖ ಕೇಂದ್ರವಾಗಿತ್ತು.

**ಅದೆನೆ ಬಂದರು:** ಅದೆನೆ ಬಂದರು ಕೆಂಪು ಸಮುದ್ರದಲ್ಲಿ ಕಂಡುಬರುವ ಒಂದು ಬಹುಮುಖ್ಯವಾದ ಬಂದರು ಪಟ್ಟಣವಾಗಿದೆ. ಇದೊಂದು ಸ್ವಾಭಾವಿಕವಾದ ಬಂದರಾಗಿದೆ. ಈ ಬಂದರು ಕೂಡ ಭಾರತ ಮತ್ತು ಯುರೋಪಿನ ನಡುವೆ ಮಾರ್ಗ ಮಧ್ಯ ಕಂಡು ಬರುತ್ತಿದ್ದು ಈ ಬಂದರು ಭಾರತ, ಆಫ್ರಿಕಾ, ಈಜಿಪ್ಟ್, ಚೀನಾ ಮುಂತಾದ ದೇಶಗಳೊಂದಿಗಿನ ಸಂಪರ್ಕವನ್ನು ಹೊಂದಿತ್ತು. ಕ್ರಿ.ಶ. 1521ರಲ್ಲಿ ಈ ಬಂದರಿಗೆ ಚೀನಾದ ಮಿಂಗ್ ಸಾಮ್ರಾಟನು ಅದೆನೆ ಬಂದರು ನೌಕಾಯಾನ ಮಾಡುವಂತೆ ಆದೇಶಿಸಿದನು. ಅದೇನೆ ಬಂದರು ಕ್ರಿ.ಶ. 1513–1538ರವರೆಗೆ ಈ ಬಂದರಿನಿಂದ ಮುಖ್ಯವಾಗಿ ಕುದುರೆಗಳು ಭಾರತಕ್ಕೆ ಅರಬ್ಬರಿಂದ ರಫ್ತಾಗುತ್ತಿದ್ದವು. ಅದೆನೆ ಪ್ರಾರಂಭದಲ್ಲಿ ಒಂದು ಸಣ್ಣ ಹಳ್ಳಿಯಾಗಿತ್ತು. ಅಲ್ಲಿ ಅರಬ್ಬರು, ಸೋಮಾಲಿಗಳು ಮತ್ತು ಭಾರತೀಯರು ಮನೆಗಳನ್ನು ನಿರ್ಮಾಣ ಮಾಡಿಕೊಂಡು ವ್ಯಾಪಾರವನ್ನು ಮಾಡುತ್ತಿದ್ದರು.

**ಹಾದ್ರಮಾಟ್ ಬಂದರು :** ಹಾದ್ರಮಾಟ್ ಬಂದರು ಮತ್ತೊಂದು ಪ್ರಮುಖ ಬಂದರಾಗಿದ್ದು, ಅರೇಬಿಯಾದ ದ್ವೀಪಕಟ್ಟದಲ್ಲಿ ಕಂಡು ಬರುವ ಅತ್ಯಂತ ಹಳೆಯ ಬಂದರಾಗಿದೆ. ಈ ಬಂದರಿನಿಂದ ಆಫ್ರಿಕಾ ದೇಶಗಳೊಂದಿಗೆ ವ್ಯಾಪಾರ ಮತ್ತು ವಾಣಿಜ್ಯವು ಬಹಳ ಸುಲಭವಾಗಿ ನಡೆಯುತಿತ್ತು. ಭಾರತೀಯರು, ಅರಬ್ಬರು ಈ ಬಂದರಿನಲ್ಲಿ ಏಕಸ್ವಾಮ್ಯ ಸಾಧಿಸಿದರು. ಆಫ್ರಿಕಾದಿಂದ ಬರುವ ಎಲ್ಲಾ ಸರಕು ಮತ್ತು ಸೇವೆಗಳಿಗೆ ಇದು ನಿಲ್ದಾಣವಾಗಿತ್ತು. ಇಲ್ಲಿಂದ ವಿಶ್ವದ ವಿವಿಧ ಭಾಗಗಳಿಗೆ ಸರಕುಗಳನ್ನು ಸರಭರಾಜು ಮಾಡಲಾಗುತ್ತಿತ್ತು. ಈ ಬಂದರಿನಲ್ಲಿ, ನವಣೆ, ಗೋಧಿ, ಕಾಫಿ ಮತ್ತು ತೆಂಗಿನ ಕಾಯಿಗಳನ್ನು ಬೆಳೆಯಲಾಗುತಿತ್ತು. ಆಫ್ರಿಕಾದ ವ್ಯಾಪಾರದಲ್ಲಿ ಈ ಬಂದರು ಪ್ರಮುಖವಾದುದಾಗಿತ್ತು.

**ಸ್ವಾಹಿಲಿ ಬಂದರು :** ದಕ್ಷಿಣ ಆಫ್ರಿಕಾದಲ್ಲಿ ಕಂಡು ಬರುವ ಒಂದು ಪ್ರಮುಖ ಬಂದರು ಇದಾಗಿದ್ದು, ಭಾರತದೊಂದಿಗೆ ಉತ್ತಮವಾದ ವಾಣಿಜ್ಯ ಸಂಬಂಧವನ್ನು ಹೊಂದಿತ್ತು. ಈ ಬಂದರಿನಿಂದ ಹಲವಾರು ಸರಕುಗಳು ಭಾರತ ಮತ್ತು ಇತರ ಭಾಗಗಳಿಗೆ ರಫ್ತಾಗುತ್ತಿದ್ದವು. ಆಫ್ರಿಕಾದಲ್ಲಿ ದೊರೆಯುತ್ತಿದ್ದ ಹಲವಾರು ಸರಕು ಮತ್ತು ಸೇವೆಗಳನ್ನು ಈ ಬಂದರಿನಿಂದ ರಫ್ತು ಮಾಡಲಾಗುತಿತ್ತು. ನವಣೆ, ತೆಂಗಿನ ಎಣ್ಣೆ, ಒಣಮೀನು, ಮರ, ಅಫೀಮು (ಹೊಗೆಸೊಪ್ಪು), ಚಿನ್ನ, ತಾಮ್ರ. ಕಬ್ಬಿಣ ಮುಂತಾದ ಸರಕು ಮತ್ತು ಸೇವೆಗಳು ರಫ್ತಾಗುತ್ತಿದ್ದವು. ಬಹಳ ಪ್ರಮುಖವಾಗಿ ಈ ಬಂದರಿನಿಂದ ಗುಲಾಮರು ರಫ್ತಾಗುತ್ತಿದ್ದರು. ಹಾಗೆಯೇ ಈ ಬಂದರಿಗೆ ಹಲವಾರು ಸರಕುಗಳು ಅಮದಾಗುತ್ತಿದ್ದವು. ಭಾರತದ ಪ್ರಮುಖ ಸರಕುಗಳಾದ ಹತ್ತಿಬಟ್ಟೆಗಳು, ರೇಷ್ಮೆ, ಉಣ್ಣೆ, ಗಾಜಿನ ಮಣಿಗಳು, ಗಂಧದಮರ, ಆಭರಣಗಳು, ಕಾಫಿ, ಟೀ, ಮರ, ಕಬ್ಬಿಣ ಮುಂತಾದವು. ಈ ಬಂದರಿನಿಂದ ಅತಿ ಹೆಚ್ಚಾಗಿ ರಫ್ತಾಗುತ್ತಿದ್ದ ಲೋಹವೆಂದರೆ ಅದು ಚಿನ್ನವಾಗಿತ್ತು.

**ಕಿಲ್ವಾಬಂದರು** : ಕಿಲ್ವಾ ಬಂದರು ಪೂರ್ವ ಅಫ್ರಿಕಾದ ತಾಂಜೀನಿಯಾದ ದಕ್ಷಿಣ ಭಾಗದಲ್ಲಿ ಕಂಡು ಬರುತ್ತದೆ. ಕ್ರಿ.ಶ. 13ನೇ ಶತಮಾನದ ನಂತರ ಇದು ಒಂದು ಪ್ರಮುಖ ವಾಣಿಜ್ಯ ಬಂದರು ಪಟ್ಟಣವಾಗಿ ಬೆಳವಣಿಗೆ ಪಡೆದುಕೊಂಡಿತ್ತು. ಈ ಬಂದರು ಭಾರತ ಮತ್ತು ಚೀನಾದ ಬಂದರುಗಳೊಂದಿಗೆ ನೇರವಾದ ಸಂಪರ್ಕವನ್ನು ಸಾಧಿಸಿತ್ತು. ಕಿಲ್ವಾ ಬಂದರನು ಆಫ್ರಿಕಾದ ಚಿನ್ನದ ಬಂದರೆಂದು ಕರೆಯಲಾಗುತ್ತದೆ ಈ ಬಂದರಿನ ಮಾರ್ಗವಾಗಿ ಹಲವಾರು ಬಂದರುಗಳಿಗೆ ಸಂಪರ್ಕ ಕಲ್ಪಿಸಲಾಗಿತ್ತು. ಭಾರತದ ಮತ್ತು ಚೀನಾದ ಭಾಗಗಳಿಗೆ ಸಂಪರ್ಕವನ್ನು ಸಾಧಿಸಿತ್ತು. ಕಿಲ್ವಾದಲ್ಲಿ ಇತ್ತೀಚೆಗೆ ನಡೆದ ಭೂ ಸಂಶೋಧನೆಗಳಲ್ಲಿ ಭಾರತ ಮತ್ತು ಚೀನಾದ ಪಿಂಗಾಣಿ

ಪಾತ್ರೆಗಳು ಮಡಿಕೆ ಚೂರುಗಳು ದೊರೆತಿದ್ದು ಇವುಗಳಲ್ಲಿ ಮುಖ್ಯವಾಗಿ ಅಡಿಗೆ ಮಾಡುವ ಪಾತ್ರೆಗಳು ದೊರಕಿವೆ.

**ಸಪೋಲ ಬಂದರು :** ದಕ್ಷಿಣ ಆಫ್ರಿಕಾದಲ್ಲಿ ಕಂಡು ಬರುವ ಮತ್ತೊಂದು ಪ್ರಮುಖ ಬಂದರು. ಸಪೋಲ ಬಂದರು ಆಫ್ರಿಕಾದ ಒಳನಾಡುಗಳೊಂದಿಗೆ ಸಂಪರ್ಕವನ್ನು ಕಲ್ಪಿಸುತಿತ್ತು. ಕ್ರಿ.ಶ. 10ನೇ ಶತಮಾನದಲ್ಲಿ ಈ ಬಂದರು ಒಂದು ವ್ಯಾಪಾರ ಕೇಂದ್ರವಾಗಿ ಬೆಳವಣಿಗೆ ಹೊಂದಿತ್ತು. ಈ ಬಂದರು ಕೂಡ ಅತಿ ಹೆಚ್ಚು ಚಿನ್ನದ ವ್ಯಾಪಾರದಲ್ಲಿ ತೊಡಗಿಸಿಕೊಂಡಿತ್ತು.

**ಜನ್ಜಿಬಾರ್ ಬಂದರು :** ಜನ್ಜಿಬಾರ್ ಆಫ್ರಿಕಾದಲ್ಲಿ ಕಂಡು ಬರುವ ಮತ್ತೊಂದು ಪ್ರಮುಖ ಬಂದರಾಗಿದ್ದು, ಈ ಬಂದರನ್ನು ಪರ್ಷಿಯನ್ನರು, ಅರಬ್ಬರು ಮತ್ತು ಭಾರತೀಯರು ಮಧ್ಯ ಪ್ರಾಚ್ಯವನ್ನು ತಲುಪಲು ಒಂದು ಪ್ರಮುಖ ಕೇಂದ್ರವಾಗಿ ಬಳಸುತ್ತಿದ್ದರು. ಕ್ರಿ.ಶ. 1498ರಲ್ಲಿ ವಾಸ್ಕೋಡಿ ಗಾಮನು ಈ ಬಂದರಿನ ಮೇಲೆ ಬಂದು ಇಳಿಯುವ ಮೂಲಕ ಮೊದಲ ಬಾರಿಗೆ ಯುರೋಪಿಯನ್ನರ ನೆಲೆಯನ್ನು ಸ್ಥಾಪಿಸಿದನು. ಕ್ರಿ.ಶ. 1503ರಲ್ಲಿ ಈ ಬಂದರು ಸಂಪೂರ್ಣವಾಗಿ ಪೋರ್ಚುಗೀಸರ ಏಕಸ್ವಾಮ್ಯಕ್ಕೆ ಒಳಪಟ್ಟಿತ್ತು. ಆನಂತರ ಬ್ರೀಟಿಷರು ಈ ಭಾಗದಲ್ಲಿ ತಮ್ಮ ಆದಿಪತ್ಯವನ್ನು ಸ್ಥಾಪಿಸಿದರು. ಇದು ಆಫ್ರಿಕಾದ ವ್ಯಾಪಾರದಲ್ಲಿ ಬಹಳ ಪ್ರಮುಖವಾದ ಪಾತ್ರವನ್ನು ನಿರ್ವಹಿಸಿತು.

**ಮಡಗಸ್ಕರ್ :** ಆಫ್ರಿಕಾದಲ್ಲಿ ಕಂಡು ಬರುವ ಒಂದು ದ್ವೀಪ ಕಟ್ಟಲಾಗಿದೆ. ಪರ್ಷಿಯನ್, ಅರಬ್ ಮತ್ತು ಭಾರತದ ವ್ಯಾಪಾರಿಗಳು ಇಲ್ಲಿಗೆ ಭೇಟಿನೀಡಿ ಅಲ್ಲಿ ತಮ್ಮ ನೆಲೆಗಳನ್ನು ಸ್ಥಾಪಿಸಿದ್ದರು. ಭಾರತದೊಂದಿಗೆ ಈ ಬಂದರು ನೇರವಾದ ವ್ಯಾಪಾರ ಸಂಪರ್ಕವನ್ನು ಹೊಂದಿತ್ತು. ಕ್ರಿ.ಶ. 1500 ರಲ್ಲಿ ಪೋರ್ಚುಗೀಸರು ಭಾರತಕ್ಕೆ ಹೋಗುವ ಮಾರ್ಗ ಮಧ್ಯದಲ್ಲಿ ಈ ದ್ವೀಪಕ್ಕೆ ಭೇಟಿ ನೀಡಿದ್ದರು. ನಂತರ ಅವರು ಈ ಬಂದರಿನೊಂದಿಗೆ ಉತ್ತಮವಾದ ವ್ಯಾಪಾರ ಮತ್ತು ವಾಣಿಜ್ಯ ಸಂಪರ್ಕವನ್ನು ಬೆಳೆಸಿಕೊಂಡನು. ಪ್ರಾರಂಭದ ದಿನಗಳಲ್ಲಿ ಪ್ರತ್ಯೇಕವಾಗಿದ್ದ ಈ ಬಂದರು ನಂತರ ಬಂಟು ಸಂಸ್ಕೃತಿಯೊಂದಿಗೆ ಆಫ್ರಿಕಾದೊಂದಿಗೆ ವಿಲೀನಕರಿಸಿಕೊಂಡಿತ್ತು. ಭಾರತ ಮತ್ತು ಆಫ್ರಿಕಾದ ವ್ಯಾಪಾರದಲ್ಲಿ ಮತ್ತು ಭಾರತ ಮತ್ತು ಯುರೋಪಿನ ವ್ಯಾಪಾರದಲ್ಲಿ ಈ ಬಂದರು ನಿರ್ವಹಿಸಿದ ಪಾತ್ರ ಬಹಳ ಪ್ರಮುಖವಾದುದಾಗಿತ್ತು.

ಹೀಗೆ ವಿಜಯನಗರ ಸಾಮ್ರಾಜ್ಯವು ಆಫ್ರಿಕಾ ಮತ್ತು ಈಜಿಪ್ಟ್‌ನೊಂದಿಗೆ ಉತ್ತಮವಾದ ಸಂಬಂಧವನ್ನು ಏರ್ಪಡಿಸಿಕೊಂಡು ಪಶ್ಚಿಮ ದೇಶಗಳೊಂದಿಗೆ ತನ್ನ ಏಕಸ್ವಾಮ್ಯವನ್ನು ಸಾಧಿಸಿತ್ತು. ಭಾರತದ ಹಲವಾರು ಸರಕುಗಳು ಈ ದೇಶಗಳೊಂದಿಗೆ ವಿನಿಮಯವಾಗಿ ಪರಸ್ಪರ ವ್ಯಾಪಾರ

ಮತ್ತು ವಾಣಿಜ್ಯ ಉತ್ತಮಗೊಂಡಿತ್ತು. ಭಾರತವು ಪ್ರಾರಂಭದಿಂದ ತನ್ನ ವ್ಯಾಪಾರವನ್ನು ಬೆಳೆಸಿಕೊಂಡು ಬಂದಿದ್ದರು. ವಿಶೇಷವಾಗಿ ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಪೂರ್ವ ದೇಶಗಳು ಮತ್ತು ಪಶ್ಚಿಮ ದೇಶಗಳು ಹಾಗೂ ಆಗ್ನೇಯ ದೇಶಗಳೊಂದಿಗೆ ಹೊಂದಿದ್ದ ಉತ್ತಮ ಸಂಬಂಧದಿಂದಾಗಿ ವಿಜಯನಗರ ಸಾಮ್ರಾಜ್ಯ ಭಾರತದಲ್ಲಿ ಆಳ್ವಿಕೆ ನಡೆಸಿದ ಹಲವಾರು ಸಾಮ್ರಾಜ್ಯಗಳ ಪಟ್ಟಿಯಲ್ಲಿ ಆಗ್ರ ಪಂಕ್ತಿಯಲ್ಲಿ ನಿಲ್ಲುತ್ತದೆ. ಇತ್ತೀಚಿನ ಎಲ್ಲಾ ಹೊಸ ಹೊಸ ಸಂಶೋದನೆಗಳು ಭಾರತದ ಸರಕುಗಳು ವಿಶ್ವದ ಹಲವಾರು ಭಾಗಗಳಲ್ಲಿ ಹರಡಿಕೊಂಡಿರುವುದನ್ನು ಧೃಡಪಡಿಸುತ್ತಿವೆ. ಹೀಗೆ ವ್ಯಾಪಾರದ ಅಭಿವೃದ್ಧಿಯಿಂದಾಗಿ ಹಲವಾರು ಸಂಶೋದನೆಗಳನ್ನು ಕೈಗೊಳ್ಳಲು ಸಹಾಯಕವಾಗಿದೆ.

## ಗ್ರಂಥಸೂಚಿ


1. Neville chittick, test Atrica and the oriest ports and trade before the arrival of the Portuguese, P -13.
2. ಅದೇ, P -17
3. Keswani D.G. Indian cultural and commercial influence in the Indain ocean from Africa and Madagascar to South – East Asia, P-31.
4. ಅದೇ, P -40
5. Allen, J, de, v., A Proposal for Indian ocean studies. P-58
6. ಅದೇ, P -75
7. Haiti, The African Dias pora, P-177
8. ಅದೇ, P -178
9. Smith M.L. Trade and cultural contracts with south east asia, P-1-26.
10. Ray H.P. and saller J.F. Tradition and Archaeology, Early Maritime contacts in the Indian ocean, P – 85.
11. ಅದೇ, P -87
12. ಅದೇ, P -89
13. V.K. Jain, Trade and Traders in western India, P-102
14. Joginder. K Chawla, India’s over land trade with central Asia and Persia, P-101.
15. A.L. Udovitch, International Trade and the Medieval Egyptian country side, P -268.
16. ಅದೇ, P -289
17. ಅದೇ, P -320

# ಅಧ್ಯಾಯ –6

# “ವಿಜಯನಗರ ಕಾಲದ, ಆಂತರಿಕ ಮತ್ತು ವಿದೇಶಿ ವ್ಯಾಪಾರ, ವ್ಯಾಪಾರ ಮಾರ್ಗಗಳು ಮತ್ತು ನಗರೀಕರಣದ ಬೆಳವಣಿಗೆ”

ಈ ಅಧ್ಯಾಯದಲ್ಲಿ ವಿಜಯನಗರ ಕಾಲದ ವ್ಯಾಪಾರ ಮಾರ್ಗಗಳು ಮತ್ತು ನಗರೀಕರಣದ ಕುರಿತ ಬೆಳವಣಿಗೆಗಳ ಬಗ್ಗೆ ಚರ್ಚಿಸಲಾಗುವುದು. ವ್ಯಾಪಾರ ಮಾರ್ಗಗಳು ಮತ್ತು ನಗರೀಕರಣವು ಹೇಗೆ ವಿಜಯನಗರ ಸಾಮ್ರಾಜ್ಯದ ಆರ್ಥಿಕ ಬೆಳವಣಿಗೆಗೆ ಸಹಕಾರಿಯಾಯಿತು. ಆರ್ಥಿಕ ಬೆಳವಣಿಗೆಯಲ್ಲಿ ವ್ಯಾಪಾರ ಮತ್ತು ವಾಣಿಜ್ಯದ ಪಾತ್ರ, ವ್ಯಾಪಾರಿ ಸಂಘಗಳ ಬೆಳವಣಿಗೆ, ಆಂತರಿಕ ಮತ್ತು ವಿದೇಶಿ ವ್ಯಾಪಾರದ ಲಕ್ಷಣಗಳು ವ್ಯಾಪಾರದಿಂದ ಉಂಟಾದ ಅಥವಾ ಬೆಳವಣಿಗೆ ಹೊಂದಿದ ನಗರಗಳು ಬಂದರುಗಳು, ಬಂದರುಗಳ ಬೆಳವಣಿಗೆ ಈ ಎಲ್ಲಾ ಪ್ರಮುಖ ಅಂಶಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲು ಇಚ್ಛಿಸುತ್ತೇನೆ. ವಿಜಯನಗರ ಸಾಮ್ರಾಜ್ಯವು ಇಡೀ ಭಾರತದ ಸಾಮ್ರಾಜ್ಯಗಳಲ್ಲಿ ಆಡಳಿತ, ರಾಜಕೀಯ, ಆರ್ಥಿಕತೆ, ವ್ಯಾಪಾರ ಮತ್ತು ವಾಣಿಜ್ಯ ಮುಂತಾದ ವಿಷಯಗಳಿಂದ ಬಹಳಷ್ಟು ವಿಭಿನ್ನತೆಯನ್ನು ಹೊಂದಿದೆ. ಈ ವಿಭಿನ್ನತೆಯಿಂದಾಗಿ ಇಂದಿಗೂ ಕೂಡ ಈ ಸಾಮ್ರಾಜ್ಯದ ಕೊಡುಗೆಗಳನ್ನು ನಾವು ಸ್ಮರಿಸ ಬಹುದಾಗಿದೆ. ಈ ಕಾಲದ ಆಂತರಿಕ ಬೆಳವಣಿಗೆಗೆ ಹೇಗೆ ಈ ಎಲ್ಲಾ ಅಂಶಗಳು ಸಹಕಾರ ನೀಡಿದ್ದವು ಎಂಬುದನ್ನು ತಿಳಿಯುವುದು ನನ್ನ ಉದ್ದೇಶವಾಗಿದೆ.

## 6.1 ಆಂತರಿಕ ಮತ್ತು ವಿದೇಶಿ ವ್ಯಾಪಾರ

ಭಾರತ ದೇಶವು ಪ್ರಾರಂಭದಿಂದಲೂ ವ್ಯಾಪಾರ ಮತ್ತು ವಾಣಿಜ್ಯದಲ್ಲಿ ಬಹಳಷ್ಟು ಉನ್ನತಿಯನ್ನು ಗಳಿಸಿಕೊಂಡು ಬಂದಿದೆ. ಪ್ರಾಚೀನ ಕಾಲದಲ್ಲಿ ಚೀನಾ, ರೋಮ್, ಗ್ರೀಕ್ ದೇಶಗಳೊಂದಿಗೆ ವಿದೇಶಿ ವ್ಯಾಪಾರವನ್ನು ಹೊಂದಿದ್ದ ಭಾರತ, ವಿದೇಶಿ ವ್ಯಾಪಾರದೊಂದಿಗೆ ಆಂತರಿಕ ವ್ಯಾಪಾರದಲ್ಲೂ ಪ್ರಾಮುಖ್ಯತೆ ಗಳಿಸಿತ್ತು. ಮಧ್ಯಕಾಲೀನ ಭಾರತದಲ್ಲಿ ಅರಬ್ಬರು ಭಾರತಕ್ಕೆ ಆಗಮಿಸುವ ಮೂಲಕ ವ್ಯಾಪಾರದ ರೂಪುರೇಷೆಗಳನ್ನು ಬದಲಿಸಿದರು. ಅರಬ್ಬರ ನಂತರ 15ನೇ ತಮಾನದಲ್ಲಿ ಭಾರತಕ್ಕೆ ಪೋರ್ಚುಗೀಸರ ಆಗಮನವು ಸಂಪೂರ್ಣವಾಗಿ ವ್ಯಾಪಾರದ ಬದಲಾವಣೆಗೆ ಕಾರಣವಾಯಿತು. ಭಾರತ ತನ್ನ ವಿಭಿನ್ನ ಭೌಗೋಳಿಕ ಲಕ್ಷಣ, ಹವಾಗುಣ, ವಾಯುಗುಣ, ಸಂಪದ್ಭರಿತವಾದ ಭೂಪ್ರದೇಶ, ನದಿಗಳು ಹಾಗೂ ಸಮುದ್ರಗಳು ಭಾರತದ ವಿದೇಶಿ ವ್ಯಾಪಾರ ಮತ್ತು ಆಂತರಿಕ ವ್ಯಾಪಾರಗಳ ಬೆಳವಣಿಗೆಗೆ ಪ್ರಮುಖ ಕಾರಣವಾಯಿತು.

**ಆಂತರಿಕ ವ್ಯಾಪಾರ**

ವಿಜಯನಗರ ಕಾಲದ ಪ್ರಮುಖ ಬೆಳವಣಿಗೆಗಳಲ್ಲಿ ಆಂತರಿಕ ವ್ಯಾಪಾರವು ಕೂಡ ಒಂದು. ಆಂತರಿಕ ವ್ಯಾಪಾರ ಎಂದರೆ ಒಂದು ಸಾಮ್ರಾಜ್ಯದ ಒಳಗಡೆ ನಡೆಯುತ್ತಿದ್ದ ವ್ಯಾಪಾರ ವೆಂದು ಹೇಳಬಹುದು. ಅಂತರ್ ಪ್ರಾದೇಶಿಕ ವಾಣಿಜ್ಯ ಸಂಬಂಧವನ್ನು ಸಹ ಆಂತರಿಕ ವ್ಯಾಪಾರವೆಂದು ಕರೆಯಬಹುದಾಗಿದೆ. ಆಂತರಿಕ ವ್ಯಾಪಾರದ ಬೆಳವಣಿಗೆಯಲ್ಲಿ ವ್ಯಾಪಾರಿ ಸಂಘಗಳು ಮತ್ತು ಕಸುಬು ಆಧಾರಿತ ಸಂಘಗಳ ಪಾತ್ರ ಮಹತ್ವವಾದುದ್ದಾಗಿದೆ. ಕೃಷಿಯ ಬೆಳವಣಿಗೆ, ಉದ್ದಿಮೆಗಳ ಬೆಳವಣಿಗೆ ಮತ್ತು ಹಣದ ಆರ್ಥಿಕತೆಯ ಹೊಮ್ಮುವಿಕೆ ಆಂತರಿಕ ವ್ಯಾಪಾರದ ಬೆಳವಣಿಗೆಗೆ ಉತ್ತಮವಾದ ಮಾರ್ಗವನ್ನು ಸೃಷ್ಟಿಮಾಡಿತು. ಆಂತರಿಕ ವ್ಯಾಪಾರವು ಮುಖ್ಯವಾಗಿ ಸ್ಥಳೀಯ ವ್ಯಾಪಾರಸ್ಥರ ಮೂಲಕ ನಡೆಯುತ್ತಿತ್ತು. ಈ ಎಲ್ಲಾ ವ್ಯಾಪಾರಿಗಳು ರಾಜರಿಂದ ಪೋಷಣೆ ಪಡೆದು ವ್ಯಾಪಾರ ವಹಿವಾಟನ್ನು ಮುಕ್ತವಾಗಿ ನಡೆಸುತ್ತಿದ್ದರು. ಈ ಸಮುದಾಯದ ಶ್ರೀಮಂತ ವ್ಯಾಪಾರಿಗಳು ರಾಜಧಾನಿಯಲ್ಲೇ ನೆಲೆಗೊಳ್ಳುತ್ತಿದ್ದರು ರಾಜಧಾನಿಯಲ್ಲೇ ಉಳಿದಿದ್ದರಿಂದಾಗಿ ಅರಮನೆಯ ಅವಶ್ಯ ಕತೆಗಳು ಮತ್ತು ರಾಜಧಾನಿಯ ಜನರ ಅಗತ್ಯತೆಗಳನ್ನು ಅವಶ್ಯಕವಾಗಿ ಒದಗಿಸಲು ಸಾಧ್ಯವಾಯಿತು.

ಕೃಷ್ಣದೇವರಾಯನು ರಚಿಸಿರುವ ಅಮುಕ್ತ ಮೌಲ್ಯದ ಕೃತಿಯು ಪ್ರತಿಯೊಂದು ಹಳ್ಳಿಯಲ್ಲೂ ಸಣ್ಣ ಮಾರುಕಟ್ಟೆಗಳಿದ್ದವು, ಸ್ಥಳೀಯ ಜನರು ಆ ಮಾರುಕಟ್ಟೆಗಳಲ್ಲಿ ಸರಕುಗಳನ್ನು ಖರೀದಿಸುತ್ತಿದ್ದರು ಮತ್ತು ತಾವು ತಯಾರಿಸಿದ ಅಥವಾ ಬೆಳೆದ ವಸ್ತುಗಳನ್ನು ಇಲ್ಲಿ ಮಾರಾಟ ಮಾಡುತ್ತಿದ್ದರು[1] ಎಂಬ ವಿಷಯಗಳನ್ನು ತಿಳಿಸುತ್ತದೆ. ಹಲವಾರು ಶಾಸನಗಳು ಉಲ್ಲೇಖಿಸುವ ಪ್ರಕಾರ ಸರಕುಗಳು ಒಂದು ಕಡೆಯಿಂದ ಮತ್ತೊಂದು ಕಡೆಗೆ ರವಾನೆಯಾಗುತ್ತಿದ್ದವು. ಪ್ರಮುಖ ಸರಕುಗಳಾದ ಹತ್ತಿ, ರೇಷ್ಮೆ, ಅಕ್ಕಿ, ರಾಗಿ, ಸಕ್ಕರೆ, ಎಣ್ಣೆ, ವಿಳ್ಳೆದೆಲೆ, ಅಡಿಕೆ, ಹಣ್ಣುಗಳು, ಲೋಹಗಳು, ಕಬ್ಬಿಣ, ತಾಮ್ರ ಮತ್ತು ತಯಾರಿಸಿದ ವಸ್ತುಗಳಾದ ಉಕ್ಕಿನ ಪಾತ್ರೆಗಳು, ಹತ್ತಿಯ ದಾರಗಳು, ಪ್ರಾಣಿಗಳಾದ ಕುದುರೆಗಳು, ರಾಸುಗಳು, ಮುಂತಾದವು ಇಲ್ಲಿ ಮಾರಾಟವಾಗುತ್ತಿದ್ದವು.

ಹಂಪಿಯ ಬಾಲಕೃಷ್ಣ ದೇವಾಲಯದಲ್ಲಿರುವ ಶಾಸನವು ತಿರುಪತಿಯಿಂದ ಬಂದು ನಗರದಲ್ಲಿ ನೆಲೆಸಿದ ಗಂದ ಬಸವಯ್ಯ ಎಂಬ ವ್ಯಾಪಾರಿಯು ನಗರದಲ್ಲಿ ಗಂಧದ ಮರದ ಪುಡಿಯನ್ನು ಮಾರಾಟ ಮಾಡುತ್ತಿದ್ದನು ಎಂಬ ಮಾಹಿತಿಯನ್ನು ಒದಗಿಸುತ್ತದೆ. ಮತ್ತೊಂದು ಶಾಸನವಾದ ಮಂಟಗ ಬೆಟ್ಟದಲ್ಲಿರುವ ಶಾಸನವು ನಗರದ ಕೆಲವು ವರ್ತಕರ ಬಗ್ಗೆ ಮಾಹಿತಿ ನೀಡುತ್ತದೆ. ಪ್ರಮುಖ ವ್ಯಾಪಾರಿ ವರ್ಗಗಳಾದ ಬಮಿಶೆಟ್ಟಿ, ಬರಮಿಶೆಟ್ಟಿ ಮತ್ತು ರಾಮಶೆಟ್ಟಿಗಳ

ಬಗ್ಗೆಯೂ ಮಾಹಿತಿಯನ್ನು ನೀಡುತ್ತದೆ. ಹಂಪಿನಗರದಲ್ಲಿ ದೊರಕಿರುವ ಕೆಲವು ಪ್ರಮುಖ ಶಾಸನಗಳು ವ್ಯಾಪಾರಿಗಳಾದ ಚೆಮಿಶೆಟ್ಟಿ, ರಾಮಿಶೆಟ್ಟಿ ಮತ್ತು ನಾಯಿಶೆಟ್ಟಿಯ ಬಗ್ಗೆ ಮಾಹಿತಿ ನೀಡುತ್ತದೆ. ರೆಮುದಿದಿಯ ಬಳಿ ದೊರೆತಿರುವ ಮತ್ತೊಂದು ಶಾಸನವು ಪ್ರಮುಖ ವ್ಯಾಪಾರಿ ಪಂಗಡಗಳಾದ ಕಮಿಶೆಟ್ಟಿ ಮತ್ತು ವಿಚ್‌ನರಿಶೆಟ್ಟಿಗಳ ಬಗ್ಗೆ ಮಾಹಿತಿ ನೀಡುತ್ತದೆ.

ಆಂತರಿಕ ವ್ಯಾಪಾರವು ಮುಖ್ಯವಾಗಿ ರಾಜ್ಯವು ನೀಡುತ್ತಿದ್ದ ಭದ್ರತೆಯ ಮೇಲೆ ಅವಲಂಬಿತವಾಗಿತ್ತು. ವ್ಯಾಪಾರಿಗಳು ತಮ್ಮ ವೈಯಕ್ತಿಕ ವ್ಯಾಪಾರದ ರಕ್ಷಣೆಗಾಗಿ ತಮ್ಮದೇ ಸ್ವಂತ ಭದ್ರತೆಯನ್ನು ನಿರ್ಮಿಸಿಕೊಂಡಿದ್ದರು. ಕೆಲವು ಪ್ರಮುಖ ಸೂಕ್ಷ್ಮ ಪ್ರದೇಶಗಳಲ್ಲಿ ದರೋಡೆ ಕೋರರಿಂದ ರಕ್ಷಿಸಿಕೊಳ್ಳಲು ಅವರಿಗೆ ಇದರ ಅವಶ್ಯಕತೆ ಇತ್ತು. ಆಂತರಿಕ ವ್ಯಾಪಾರವು ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಸಾಕಷ್ಟು ಬೆಳವಣಿಗೆ ಹೊಂದಿತ್ತು. ಸುಮಾರು ಎಂಭತ್ತು ವ್ಯಾಪಾರಿ ಕೇಂದ್ರಗಳು ಈ ಪ್ರದೇಶದಲ್ಲಿ ಬೆಳವಣಿಗೆ ಹೊಂದಿದ್ದವು.

ಕರಾವಳಿ ಕರ್ನಾಟಕದ ವ್ಯಾಪಾರಿಗಳು ದಕ್ಷಿಣ ಭಾರತದಲ್ಲಿ ಮುಖ್ಯವಾಗಿ ವಿಜಯನಗರ ಸಾಮ್ರಾಜ್ಯದ ಆರ್ಥಿಕ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸಿದರು. ಬಾರ್ಕೂರು, ಕಾರ್ಕಳ ಮತ್ತು ಮೂಡಬಿದರೆ ಪ್ರಮುಖ ಸ್ಥಳೀಯ ವ್ಯಾಪಾರದ ಕರಾವಳಿ ನಗರಗಳಾಗಿದ್ದವು. ಸ್ಥಳೀಯ ವ್ಯಾಪಾರವು ಪಶ್ಚಿಮ ಘಟ್ಟಗಳ ನಗರಗಳೊಂದಿಗೆ ನಡೆಯುತ್ತಿತ್ತು. ಬಾರ್ಕೂರು ಮತ್ತು ಮಂಗಳೂರುಗಳಿಗೆ ವಿಜಯನಗರ ಅರಸರು ರಾಯಭಾರಿಗಳನ್ನು ನೇಮಿಸಿ ಆಡಳಿತ ನಡೆಸುತ್ತಿದ್ದರು. ಹಲವಾರು ಶಾಸನಗಳು ವಿಜಯನಗರ ಸಾಮ್ರಾಜ್ಯದ ಸ್ವಾಯತ್ತತೆಯ ಬಗ್ಗೆ ಮಾಹಿತಿ ನೀಡುತ್ತವೆ. ಅಂತರಿಕ ವ್ಯಾಪಾರದಲ್ಲಿ ಬಹಳ ಮುಖ್ಯವಾದ ವಿಷಯವೆಂದರೆ ಸುಂಕದ ಕಟ್ಟೆಗಳು ಸುಂಕದ ಕಟ್ಟೆಗಳನ್ನು ನಿರ್ಮಾಣ ಮಾಡಿ ಆ ಪ್ರದೇಶಗಳಲ್ಲಿ ಸುಂಕವನ್ನು ವಸೂಲಿ ಮಾಡುತ್ತಿದ್ದರು.

ಅಕ್ಕಿಯು ಆಂತರಿಕ ವ್ಯಾಪಾರದಲ್ಲಿ ಪ್ರಮುಖವಾದ ಸರಕಾಗಿತ್ತು. ಕರ್ನಾಟಕದ ಕರಾವಳಿ ತೀರ ಪ್ರದೇಶವು ಅತಿ ಹೆಚ್ಚಾಗಿ ಅಕ್ಕಿಯನ್ನು ಉತ್ಪಾದಿಸುತ್ತಿತ್ತು. ಕ್ರಿ.ಶ.16ನೇ ಶತಮಾನದ ವಿದೇಶಿ ಪ್ರವಾಸಿಗನಾದ ಡ್ಯುಯಟ್ ಬಾರ್ಬೋಸನ ಪ್ರಕಾರ ವಿಜಯನಗರ ಸಾಮ್ರಾಜ್ಯದಲ್ಲಿ ವಿವಿಧ ಬಗೆಯ ಅಕ್ಕಿಯನ್ನು ಬೆಳೆಯಲಾಗುತ್ತಿತ್ತು. ಈ ಅಕ್ಕಿಯನ್ನು ಅತಿ ಹೆಚ್ಚಾಗಿ ಶ್ರೀಮಂತರು ಬಳಸುತ್ತಿದ್ದರು. ಬಗೆಬಗೆಯ ಅಕ್ಕಿಯ ಬೆಲೆಯ ಅಧಿಕವಾಗಿದ್ದರಿಂದ ಈ ಅಕ್ಕಿಯನ್ನು ಬಡವರು ಬಳಸಲು ಸಾಧ್ಯವಾಗುತ್ತಿರಲಿಲ್ಲ. ಬಡವರು ಕಡಿಮೆ ದರ್ಜೆಯ ಅಕ್ಕಿಯನ್ನು ಬಳಸುತ್ತಿದ್ದರು. ಅಕ್ಕಿಯನ್ನು ಸ್ಥಳೀಯ ಮಾರುಕಟ್ಟೆಗಳಲ್ಲಿ ಮಾರಾಟ ಮಾಡಲಾಗುತ್ತಿತ್ತು. ಮಾರುಕಟ್ಟೆಗಳನ್ನು

ಸಾಮಾನ್ಯವಾಗಿ ಸಂತೆಗಳೆಂದು ಕರೆಯಲಾಗುತ್ತಿತ್ತು. ಈ ಜಾತ್ರೆಗಳಲ್ಲಿ ಅಥವಾ ಸಂತೆಗಳಲ್ಲಿ ಸ್ಥಳೀಯ ವ್ಯಾಪಾರಿಗಳು ಸರಕುಗಳನ್ನು ಬದಲಾಯಿಸಿಕೊಳ್ಳುತ್ತಿದ್ದರು. ಶಾಸನಗಳ ಪ್ರಕಾರ ಚಿನ್ನ, ಬೆಳ್ಳಿ ಮತ್ತು ತಾಮ್ರದ ನಾಣ್ಯಗಳು ಚಲಾವಣೆಯಲ್ಲಿದ್ದವು ಹಾಗೂ ಸ್ಥಳೀಯ ದೇವಾಲಯಗಳಿಗೆ ಸುಂಕವನ್ನು ವಸೂಲಿ ಮಾಡುವ ಅಧಿಕಾರವನ್ನು ನೀಡಲಾಗಿತ್ತು.[3]

ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾದ ಹಂಪಿಯಲ್ಲಿ ಹಲವಾರು ಬಜಾರುಗಳು ಅಥವಾ ಪೇಟೆಗಳಿದ್ದವು, ಅವುಗಳಲ್ಲಿ ಮುಖ್ಯವಾದವುಗಳೆಂದರೆ ವಿರುಪಾಕ್ಷಬಜಾರ್, ಕೃಷ್ಣಬಜಾರ್, ವಿಠಲಬಜಾರ್, ಅಚ್ಯುತ ಬಜಾರ್, ವರ್ಧಮಾನ ಬಜಾರ್, ಮಾಲ್ಯವಂತ ಬಜಾರ್ ಮತ್ತು ಪನ್ಸುಪಾರಿ ಬಜಾರ್‌ಗಳಾಗಿದ್ದವು. ಈ ಎಲ್ಲಾ ಬಜಾರ್‌ಗಳು ವ್ಯಾಪಾರ ಮತ್ತು ವಾಣಿಜ್ಯದ ಪ್ರಮುಖ ಕೇಂದ್ರಗಳಾಗಿದ್ದವು. ಸ್ಥಳೀಯ ಮತ್ತು ವಿದೇಶಿ ವ್ಯಾಪಾರಿಗಳು ಅಂಗಡಿಗಳನ್ನು ತೆರೆದು ಸರಕುಗಳನ್ನು ಮಾರಾಟ ಮಾಡುತ್ತಿದ್ದರು. ಈ ಕೇಂದ್ರಗಳಲ್ಲಿ ಹಲವಾರು ವ್ಯಾಪಾರ ಸಂಘಗಳು ವಾರದ ಮಾರುಕಟ್ಟೆಗಳಾಗಿ ವಿವಿಧ ಪುರಗಳಲ್ಲಿ ವ್ಯಾಪಾರ ವಹಿವಾಟು ನಡೆಸುತ್ತಿದ್ದವು. ಕನಕದಾಸರು ತಮ್ಮ ಮೋಹನ ತರಂಗಿಣಿಯಲ್ಲಿ ಈ ಬಜಾರ್‌ಗಳನ್ನು ಸೋಮ ಸೂರ್ಯವಿಧ್ಧಿ ಎಂದು ಕರೆದಿದ್ದಾರೆ. ಮುಂದುವರೆದು ಈ ಬಜಾರ್‌ಗಳಲ್ಲಿ ಲೆಕ್ಕವಿಲ್ಲದಷ್ಟು ಸರಕುಗಳನ್ನು ಮಾರಾಟ ಮಾಡಲಾಗುತ್ತಿತ್ತು. ಮುಖ್ಯವಾಗಿ ವೀಳ್ಯದೆಲೆ, ಚಂದನ, ಹೂವುಗಳು, ಸುಗಂದದ್ರವ್ಯಗಳು, ಔಷಧಿಗಳು, ಸಾಂಬಾರ ಪದಾರ್ಥಗಳು ಮತ್ತು ಒಣ ಹಣ್ಣುಗಳು ಪ್ರಮುಖವಾಗಿದ್ದವು. ಮತ್ತೊಂದು ಬಜಾರ್‌ಗಳಲ್ಲಿ ದಿನಸಿ ಪದಾರ್ಥಗಳ ಮಾರಾಟಗಾರರು, ಟೈಲರ್‌ಗಳು, ಕುಶಲಕರ್ಮಿಗಳು, ವರ್ಣಚಿತ್ರಗಾರರು, ವಿವಿಧ ಬಗೆಯ ಲೋಹ ತಯಾರಕರು, ಬಳೆಗಾರರು, ಅಕ್ಕಸಾಲಿಗರು ಮತ್ತು ಬಟ್ಟೆ ವ್ಯಾಪಾರಿಗಳು ನೆಲೆಸಿದ್ದರು. ನಗರದ ಮತ್ತೊಂದು ಭಾಗದಲ್ಲಿ ವ್ಯಾಪಾರಿಗಳು, ಚಿನ್ನ, ಮುತ್ತುಗಳು ಮತ್ತು ರತ್ನಗಳು ಅಮೂಲ್ಯವಾದ ಚಿನ್ನಾಭರಣ ಗಳನ್ನು ಮಾರಾಟ ಮಾಡುತ್ತಿದ್ದರು.

ಪಾಯಸ್‌ನ ಪ್ರಕಾರ ವಿಜಯನಗರದ ವಿವಿಧ ನಗರಗಳಲ್ಲಿ ಪ್ರತಿ ಸಾಯಂಕಾಲ ಸಂತೆಗಳು ನಡೆಯುತ್ತಿದ್ದವು. ಪ್ರಮುಖವಾಗಿ ಸಂತೆಗಳಲ್ಲಿ ಕುದುರೆಗಳು, ನೇರಳೆ ಹಣ್ಣು, ಸುಣ್ಣ ಕಿತ್ತಲೆಹಣ್ಣು, ದ್ರಾಕ್ಷಿಹಣ್ಣು ಮತ್ತು ವಿವಿಧ ಬಗೆಯ ತೋಟದ ಹಣ್ಣುಗಳು ಅಥವಾ ವಸ್ತುಗಳು ಮಾರಾಟವಾಗುತ್ತಿದ್ದವು. ರಾಜಧಾನಿಯ ಬೀದಿಗಳಲ್ಲಿ ಪ್ರತಿ ಶುಕ್ರವಾರ ಸಂತೆಗಳು ನಡೆಯುತ್ತಿದ್ದವು. ಇದರೊಂದಿಗೆ ಮೀನು, ಕೋಳಿಗಳು, ಒಣ ಮೀನು ಮತ್ತು ಹಂದಿಯನ್ನು ಮಾರಾಟ ಮಾಡಲಾಗುತ್ತಿತ್ತು.[4] ಕ್ರಿ.ಶ.1545ರ ಶಾಸನದ ಪ್ರಕಾರ ಸೋಮವಾರ ಕೃಷ್ಣಪುರದಲ್ಲಿ ಸಂತೆಯನ್ನು

ಮತ್ತು ಮಂಗಳವಾರ ಅಚ್ಚುತಪುರದಲ್ಲಿ ವ್ಯಾಪಾರ ವಹಿವಾಟು ಕ್ರಮಬದ್ಧವಾಗಿ ನಡೆಸಲಾಗುತ್ತಿತ್ತು. ಈ ಸಂತೆಗಳಿಗೆ ರಾಜ್ಯದ ವಿವಿಧ ಮೂಲಗಳಿಂದ ಬರುತ್ತಿದ್ದ ವ್ಯಾಪಾರಿಗಳು ತಮ್ಮೊಂದಿಗೆ ಬೆಲೆ ಬಾಳುವ ಮುತ್ತು ರತ್ನಗಳನ್ನು ಮತ್ತು ಬಟ್ಟೆಗಳನ್ನು ತಂದು ಮಾರಾಟ ಮಾಡುತ್ತಿದ್ದರು. ಮಾರುಕಟ್ಟೆಗಳು ಕ್ರಮಬದ್ಧವಾಗಿ ರಥಬೀದಿಗಳಲ್ಲಿ ಸುಮಾರು ಅರ್ಧ ಕಿಲೋ. ಮೀಟರ್‌ವರೆಗೆ ಇದ್ದಷ್ಟು ಬಹಳಷ್ಟು ಅಂಗಡಿಗಳು ರಸ್ತೆಯ ಎರಡು ಬದಿಗಳಲ್ಲಿಯೂ ಕೂಡ ನಿರ್ಮಾಣ ವಾಗಿದ್ದವು.[5]

ಈ ಎಲ್ಲಾ ವಿವಿಧ ಬಗೆಯ ಸಂತೆಗಳು ವ್ಯಾಪಾರಿಗಳನ್ನು ಬಹಳ ಸುಲಭವಾಗಿ ಆಕರ್ಷಿಸುತ್ತಿದ್ದವು. ಈ ಸಂತೆಗಳು ನಿಯತಕಾಲಿಕ ವ್ಯಾಪಾರವನ್ನು ಸಮರ್ಪವಾಗಿ ನಡೆಸುತ್ತಿದ್ದವು. ಸಾಮ್ರಾಜ್ಯದ ವಿವಿಧ ಮೂಲಗಳಿಂದ ವ್ಯಾಪಾರಿಗಳನ್ನು ಆಕರ್ಷಿಸಲು ಕುದುರೆ, ಎತ್ತಿನಗಾಡಿ ಮತ್ತು ಕಾಳುಗಳನ್ನು ಮಾರಾಟ ಮಾಡುತ್ತಿದ್ದರು. ಅಬ್ದುಲ್ ರಜಾಕ್‌ನ ಪ್ರಕಾರ ಸಂತೆಗಳಲ್ಲಿ ಆಭರಣಗಳು, ಮುತ್ತುಗಳು, ಪಚ್ಚೆ ಮತ್ತು ವಜ್ರವನ್ನು ಮುಕ್ತವಾಗಿ ಈ ಸಂತೆಗಳಲ್ಲಿ ಮಾರಾಟ ಮಾಡಲಾಗುತ್ತಿತ್ತು.[6] ಪಾಯಸ್ ತನ್ನ ಬರವಣಿಗೆಗಳಲ್ಲಿ ಉಲ್ಲೇಖಿಸುವ ಪ್ರಕಾರ ಬೀದಿಗಳು ಮತ್ತು ಮಾರುಕಟ್ಟೆಗಳು ಪ್ರಮುಖವಾಗಿ ಸಾಮಾನುಗಳನ್ನು ಹೇರಿಕೊಂಡು ಬರುತ್ತಿದ್ದವು. ಈ ಸಂದರ್ಭದಲ್ಲಿ ಹಲವಾರು ವ್ಯಾಪಾರಿಗಳು ಬೀದಿಗಳಲ್ಲಿ ತಮ್ಮ ವ್ಯಾಪಾರ ವಹಿವಾಟು ನಡೆಸುತ್ತಿದ್ದರು. ಮುತ್ತುರತ್ನಗಳು ವಜ್ರಗಳು, ಮುಖ್ಯವಾಗಿದ್ದವು. ನ್ಯೂನಿಜ್‌ನ ಪ್ರಕಾರ ಮಾರುಕಟ್ಟೆಗಳು ಸದಾಕಾಲ ದ್ರಾಕ್ಷಿ, ಕಿತ್ತಲೆ, ದಾಳಿಂಬೆ, ಹಲಸಿನ ಹಣ್ಣು ಮತ್ತು ಮಾವಿನ ಹಣ್ಣುಗಳಿಂದಾಗಿ ತುಂಬಿ ತುಳುಕುತ್ತಿತ್ತು ಎಂದು ವಿವರಿಸಿದ್ದಾನೆ.

**ವಿದೇಶೀ ವ್ಯಾಪಾರ**

ವಿಜಯನಗರ ಸಾಮ್ರಾಜ್ಯವು ಮೊಟ್ಟಮೊದಲ ಬಾರಿಗೆ ಮಧ್ಯಕಾಲೀನ ಭಾರತದ ಸಂದರ್ಭದಲ್ಲಿ ಅರಬ್ಬರು ಮತ್ತು ಪೋರ್ಚುಗೀಸರೊಂದಿಗೆ ಉತ್ತಮವಾದ ವ್ಯಾಪಾರ ಮತ್ತು ವಾಣಿಜ್ಯ ಸಂಪರ್ಕವನ್ನು ಅಭಿವೃದ್ಧಿ ಪಡಿಸಿತ್ತು. ಬಾರ್ಬೋಸನು ತನ್ನ ದಾಖಲೆಗಳಲ್ಲಿ ಉಲ್ಲೇಖಿಸಿರುವ ಪ್ರಕಾರ ಭಾರತದ ವ್ಯಾಪಾರವು ಹೇಗೆ ಅರಬ್ಬರಿಂದ ಪೋರ್ಚುಗೀಸರಿಗೆ ವರ್ಗಾವಣೆಯಾಯಿತ್ತೆಂದು ಉಲ್ಲೇಖಿಸಿದ್ದಾರೆ. ವಿದೇಶಿ ವ್ಯಾಪಾರ ರಾಷ್ಟ್ರ ರಾಷ್ಟ್ರಗಳ ನಡುವೆ ನಡೆಯುವ ವ್ಯಾಪಾರವಾಗಿದ್ದು, ಒಂದು ಸಾಮ್ರಾಜ್ಯ ವಿಶ್ವದ ಇತರ ರಾಷ್ಟ್ರಗಳೊಂದಿಗೆ ಹೊಂದಿದ್ದ ವ್ಯಾಪಾರ ಮತ್ತು ವಾಣಿಜ್ಯ ಸಂಪರ್ಕವಾಗಿದೆ. 15ನೇ ಶತಮಾನದ ಅಂತ್ಯ ಭಾಗದಲ್ಲಿ ಭಾರತಕ್ಕೆ ಬಂದ ಪೋರ್ಚುಗೀಸರು ಅರಬ್ಬರ ವ್ಯಾಪಾರ ಏಕಸಾಮ್ಯವನ್ನು ಮುರಿದು ತಮ್ಮ ಅಧಿಪತ್ಯವನ್ನು

ಸ್ಥಾಪಿಸಿದರು. ಪ್ರೌಢದೇವರಾಯನ ಕಾಲದಿಂದ ಹದಿನಾರನೇ ಶತಮಾನದ ಪ್ರಾರಂಭದವರೆಗೂ ಕುದುರೆ ವ್ಯಾಪಾರವು ಮುಸ್ಲಿಮರ ಕೈಯಲ್ಲೇ ನಡೆಯುತ್ತಿತ್ತು. ಭಟ್ಕಳ, ಹೊನ್ನಾವರ, ಮಂಗಳೂರು ಮತ್ತು ಗೋವಾ ಈ ಕಾಲದ ಪ್ರಮುಖ ವ್ಯಾಪಾರಿ ಬಂದರುಗಳಾಗಿದ್ದವು. ಓಮರ್ಜಿನ ಹಡಗುಗಳು ನೇರವಾಗಿ ಭಟ್ಕಳದ ಬಂದರಿಗೆ ಕುದುರೆಗಳು ಮತ್ತು ಮುತ್ತುಗಳನ್ನು ತುಂಬಿಕೊಂಡು ಬರುತ್ತಿದ್ದವು. ಇದಲ್ಲದೆ ಶ್ರೀಲಂಕಾದಿಂದ ಆನೆಗಳು, ತಾಮ್ರ, ಪಾದರಸ, ಸಿಂಧೂರ ಬಣ್ಣ ಮತ್ತು ಮಖಮಲ್ ಮುಖ್ಯವಾದವುಗಳು ಚೀನಾದಿಂದ ಆಮದಾಗುತ್ತಿದ್ದ ಚೀನಾ ರೇಷ್ಮೆ ಮುಖ್ಯವಾದ ವ್ಯಾಪಾರಿ ಸರಕ್ಕಾಗಿತ್ತು.[7]

ವಿಜಯನಗರ ಅರಸರು ಆನೆ, ಕುದುರೆ ಮುಂತಾದ ಪ್ರಾಣಿಗಳನ್ನು ವಿದೇಶದಿಂದ ಆಮದು ಮಾಡಿಕೊಳ್ಳುತ್ತಿದ್ದರು. ಪೊರ್ಚುಗೀಸರು ಗೋವಾವನ್ನು ವಶಪಡಿಸಿಕೊಂಡ ನಂತರ ವ್ಯಾಪಾರ ಮತ್ತು ವಾಣಿಜ್ಯ ಕ್ಷೇತ್ರದಲ್ಲಿ ಬಹಳಷ್ಟು ಪರಿಣಾಮಕಾರಿ ಬದಲಾವಣೆಗಳು ಉಂಟಾದವು. ಪೋರ್ಚುಗೀಸರು ವಿಜಯನಗರ ಸಾಮ್ರಾಜ್ಯ ಮತ್ತು ಬಿಜಾಪುರ ಸುಲ್ತಾನರೊಂದಿಗೆ ಕುದುರೆ ವ್ಯಾಪಾರದ ಏಕಸ್ವಾಮ್ಯವನ್ನು ಹೊಂದಿದ್ದರು. ಕುದುರೆ ವ್ಯಾಪಾರವು ಅರಬ್ಬರಿಂದ ಪೋರ್ಚುಗೀಸರ ಕೈ ಸೇರಿತು. ವಿದೇಶಿ ವ್ಯಾಪಾರಿಗಳಿಂದ ತೆರಿಗೆಯನ್ನು ಸಂಗ್ರಹಿಸಲಾಗುತ್ತಿತ್ತು. ಇದು ಕೂಡ ರಾಜ್ಯದ ಒಂದು ಪ್ರಮುಖ ಆದಾಯದ ಮೂಲವಾಗಿತ್ತು.

ವಿಜಯನಗರದ ಬಂದರುಗಳಿಂದ ಬಟ್ಟೆ, ಕಬ್ಬಿಣ, ಸಕ್ಕರೆ ಮತ್ತು ಸಾಂಬಾರ ಪದಾರ್ಥಗಳು ಪೋರ್ಚುಗಲ್‌ಗೆ ರಫ್ತಾಗುತ್ತಿದ್ದವು. ಈ ಕಾಲದ ಪ್ರಮುಖ ಬಂದರು ನಗರಗಳಾದ ಅಂಕೋಲಾ, ಕ್ಯಾಲಿಕಟ್, ಬಾರ್ಸೂರು, ಬಾರ್ಕೂರು ಮತ್ತು ಮಂಗಳೂರು ಬಂದರುಗಳಿಂದ ಆಹಾರ ಪದಾರ್ಥಗಳನ್ನು ವಿದೇಶಗಳಿಗೆ ಮುಖ್ಯವಾಗಿ ಮಾಲ್ಡೀವ್ ದ್ವೀಪಗಳು, ಓರ್ಮಜ್ ಅದೆನ್ ಮತ್ತು ಪೋರ್ಚುಗಲ್‌ಗೆ ರಫ್ತಾಗುತ್ತಿದ್ದವು. ಕಬ್ಬಿಣದ ಅಧಿರನ್ನು ಪೋರ್ಚುಗೀಸರು ಖರೀದಿಸುತ್ತಿದ್ದರು. ಸಕ್ಕರೆಯನ್ನು ಓರ್ಮಜಿಗೆ ಆಮದು ಮಾಡುತ್ತಿದ್ದರು. ಮೆಕ್ಕಾದಿಂದ ಬರುತ್ತಿದ್ದ ಹಡಗುಗಳ ಭಟ್ಕಳಕ್ಕೆ ಬಂದು ಅಲ್ಲಿಂದ ಸಾಂಬಾರ ಪದಾರ್ಥಗಳನ್ನು ಕೊಂಡೊಯ್ಯುತ್ತಿದ್ದವು. ವಿದೇಶೀ ವ್ಯಾಪಾರವು ಮಲಕ್ಕಾ, ಪೆಗು ಮತ್ತು ಸುಮಾತ್ರ ಗಳೊಂದಿಗೂ ನಡೆಯುತಿತ್ತು. ವಿದೇಶೀ ವ್ಯಾಪಾರವು ಭಾರತೀಯ ಮತ್ತು ವಿದೇಶೀ ವ್ಯಾಪಾರಿಗಳನ್ನು ಬಹಳಷ್ಟು ಆಕರ್ಷಿಸುತಿತ್ತು. ಆಮದು ತಮಗೆ ಅವಶ್ಯಕವಿರುವ ಸರಕುಗಳನ್ನು ವಿಜಯನಗರದ ಮಾರುಕಟ್ಟೆಗಳಲ್ಲಿ ಖರೀದಿಸುತ್ತಿದ್ದರು. ವಿದೇಶೀ ವ್ಯಾಪಾರ ವಿಜಯನಗರವನ್ನು ಅಭಿವೃದ್ಧಿಗೊಳಿಸಿತ್ತು.

ವಿದೇಶೀ ವ್ಯಾಪಾರವು ರಾಜದಾನಿಯಿಂದ ರಾಜ್ಯದ ವಿವಿಧ ಮೂಲಗಳಿಗೆ ಸಂಪರ್ಕವನ್ನು ಕಲ್ಪಸುತಿತ್ತು. ಈ ರಾಜಧಾನಿಯಿಂದ ಶ್ರೀರಂಗಪಟ್ಟಣಕ್ಕೆ ಮತ್ತು ಶಿವನ ಸಮುದ್ರಕ್ಕೆ ರಸ್ತೆ ಸಂಪರ್ಕ ಕಲ್ಪಸುತ್ತಿತ್ತು. ವಿಜಯನಗರದಿಂದ ರಾಯಚೂರು, ವಿಜಯನಗರದಿಂದ ಉದಯಗಿರಿ, ಕೊಂಡವೀಡು ಕೊಂಡವಲ್ಲಿ, ಕಂಚಿ, ಮದುರೈ, ರಾಮೇಶ್ವರಂ ವಿಜಯನಗರ ಸಾಮ್ರಾಜ್ಯದ ರಾಜಧಾನಿಯೊಂದಿಗೆ ನೇರ ವ್ಯಾಪಾರ ಮಾರ್ಗ ಹೊಂದಿದ್ದವು. ಈ ಎಲ್ಲಾ ಸ್ಥಳಗಳು ಸಾಮ್ರಾಜ್ಯದ ಬಂದರುಗಳೊಂದಿಗೆ ಗೋವಾವನ್ನು ಒಳಗೊಂಡಂತೆ ನೇರವಾದ ಸಂಪರ್ಕ ಹೊಂದಿದ್ದವು. ವಿದೇಶೀ ಪ್ರವಾಸಿಗರು ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿರುವ ಪ್ರಕಾರ ರಸ್ತೆಗಳು ಉತ್ತಮವಾಗಿದ್ದವು ಮತ್ತು ರಸ್ತೆಗಳ ಬದಿಗಳಲ್ಲಿ ಒದಗಿಸಿದ್ದ ಅನುಕೂಲತೆಗಳ ಬಗಗೆ ವಿವರಿಸಿದ್ದಾರೆ. ಈ ರಸ್ತೆಗಳಿಂದಾಗಿ ಸ್ಥಳೀಯ ವ್ಯಾಪಾರ ಮತ್ತು ವಿದೇಶೀ ವ್ಯಾಪಾರ ಹಿಂದಿಗಿಂತ ಹೆಚ್ಚು ಬೆಳವಣಿಗೆ ಹೊಂದಿತ್ತು. ಇದರಿಂದಾಗಿ ವಿಜಯನಗರ ಸಾಮ್ರಾಜ್ಯ ಆರ್ಥಿಕತೆಗೆ ಬಹಳಷ್ಟು ಸಹಕಾರಿಯಾದುದಲ್ಲದೆ ಸ್ಥಳೀಯ ವ್ಯಾಪಾರಿಗಳಿಗೂ ಅನುಕೂಲಕರವಾಗಿತ್ತು.

ವ್ಯಾಪಾರ ಮತ್ತು ವಾಣಿಜ್ಯಕ್ಕೆ ಸಂಬಂಧಿಸಿದ ವಿನಿಮಯ ಮಾಧ್ಯಮಗಳ ಕುರಿತಾಗಿ ಕೃಷ್ಣದೇವರಾಯನ ಕಾಲದಲ್ಲಿ ಹೊರಡಿಸಿರುವ ಶಾಸನಗಳು ಬಹಳಷ್ಟು ಮಾಹಿತಿಯನ್ನು ಒದಗಿಸುತ್ತವೆ. ಮುಖ್ಯವಾದ ಮಾಧ್ಯಮಗಳಾದ ಕವಾಡಿಗಳು ಕುದುರೆಗಾಡಿ ಎತ್ತಿನಗಾಡಿ ಮುಖ್ಯವಾದವುಗಳಾಗಿದ್ದವು. ಪ್ರಾಣಿಗಳು ಮತ್ತು ಮನುಷ್ಯ ಇಬ್ಬರು ಸಹ ಈ ಕಾರ್ಯಗಳಲ್ಲಿ ಮಗ್ನರಾಗಿದ್ದರು. ಹಾಗೂ ಒಂದು ಸ್ಥಳ ದಿಂದ ಮತ್ತೊಂದು ಸ್ಥಳಕ್ಕೆ ಸರಕುಗಳನ್ನು ರವಾನಿಸುತ್ತಿದ್ದರು. ಸರಕುಗಳನ್ನು ಎತ್ತಿನ ಗಾಡಿಗಳು ಮುಖ್ಯವಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ರವಾನಿಸುತ್ತಿದ್ದವು. ಕೆಲವೊಂದು ಸಂದರ್ಭದಲ್ಲಿ ದೋಣಿಗಳು, ಒಂಟೆಗಳು ಮತ್ತು ಕುದುರೆಗಳನ್ನು ಬಳಸಿಕೊಂಡು ಸರಕುಗಳನ್ನು ರವಾನಿಲಾಗುತಿತ್ತು. ಎಂಬುದರ ಬಗ್ಗೆ ಅಮುಕ್ತ ಮೌಲ್ಯದಲ್ಲಿ ಕೃಷ್ಣದೇವರಾಯನನ್ನು ಉಲ್ಲೇಖಿಸಿದ್ದಾನೆ.

ಕೃಷ್ಣದೇವರಾಯನ ಅಮುಕ್ತ ಮೌಲ್ಯದಲ್ಲಿ ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಗೆ ಬೇಕಾಗುವ ನೀತಿ ನಿಯಮಗಳ ಬಗ್ಗೆ ರಾಜನು ಕೈಗೊಳ್ಳಬೇಕಾದ ವಿದೇಶಿ ವ್ಯಾಪಾರಕ್ಕೆ ಬೇಕಾದ ಅವಶ್ಯಕ ಬಂದರುಗಳ ಬೆಳವಣಿಗೆಗೆ ಸಂಬಂಧಿಸಿದ ಮಾಹಿತಿಗಳನ್ನು ನೀಡಿದ್ದಾನೆ.[8] ಬಂದರುಗಳ ಬೆಳವಣಿಗೆಯಿಂದಾಗಿ ಕುದುರೆ ವ್ಯಾಪಾರ, ಆನೆ ವ್ಯಾಪಾರ ಮತ್ತು ಅಮೂಲ್ಯ ರತ್ನಗಳ ಅಮದಿಗೆ ಸಹಕಾರವಾಗಿತ್ತೆಂದು ಉಲ್ಲೇಖಿಸಿದ್ದಾನೆ. ರಾಜನಾದವನು ವಿದೇಶದಿಂದ ಬರುವ ವ್ಯಾಪಾರಿಗಳಿಗೆ ಮತ್ತು ನಾವಿಕರಿಗೆ ಉತ್ತಮ ಸೌಲಭ್ಯ ಒದಗಿಸಿಕೊಡಬೇಕು ಮತ್ತು ರಾಜ್ಯಕ್ಕೆ ಅವರು ತಂದ

ಸರಕುಗಳನ್ನು ಕೊಂಡುಕೊಳ್ಳಬೇಕು. ಉತ್ತಮವಾದ ಮಾರುಕಟ್ಟೆಯನ್ನು ಸ್ಥಾಪಿಸಬೇಕು ಹಾಗೂ ಆ ಸರಕುಗಳು ಮತ್ತು ವ್ಯಾಪಾರಿಗಳು ಶತ್ರುಗಳ ರಾಜ್ಯಕ್ಕೆ ಯಾವುದೇ ಸರಕುಗಳನ್ನು ಒದಗಿಸದಂತೆ ನೋಡಿಕೊಳ್ಳಬೇಕೆಂದು ತಿಳಿಸಿದ್ದಾನೆ. ಬಾರ್ಬೋಸನು ಉಲ್ಲೇಖಿಸಿರುವ ಪ್ರಕಾರ ಸಾಮ್ರಾಜ್ಯದ ಹಲವಾರು ವ್ಯಾಪಾರಿಗಳು ಶ್ರೀಮಂತರಾಗಿದ್ದರು. ವ್ಯಾಪಾರವು ಉತ್ತಮವಾಗಿ ನಡೆಯುತ್ತಿದ್ದು ಅವರು ವಿದೇಶಿಯರೊಂದಿಗೆ ಉತ್ತಮ ಸಂಪರ್ಕ ಹೊಂದಿದ್ದರೆಂದು ತಿಳಿಸಿದ್ದಾನೆ.

ಕರ್ನಾಟಕದ ಕರಾವಳಿ ತೀರವು ವಿದೇಶಿ ವ್ಯಾಪಾರದಲ್ಲಿ ಉತ್ತಮವಾದ ಪಾತ್ರವನ್ನು ನಿರ್ವಹಿಸಿತ್ತು. ಈ ಬಂದರುಗಳು ವಿದೇಶಿಯರಿಗೆ ಬಾಗಿಲು ತೆರೆದುಕೊಂಡು ವಿದೇಶೀ ವ್ಯಾಪಾರಕ್ಕೆ ಕಾರಣವಾಯಿತು. ಪಶ್ಚಿಮ ಏಷ್ಯಾ ರಾಷ್ಟ್ರಗಳಿಗೆ ಅಕ್ಕಿಯನ್ನು ಈ ಬಂದರುಗಳಿಂದ ರಫ್ತು ಮಾಡಲಾಗುತ್ತಿತ್ತು. ಅರಬ್ಬರು ಕರ್ನಾಟಕದ ಬಂದರುಗಳಲ್ಲಿ ಕುದುರೆ ವ್ಯಾಪಾರದ ಏಕಸ್ವಾಮ್ಯವನ್ನು ಹೊಂದಿದ್ದರು. ಈ ಕುದುರೆಗಳು ಯುದ್ಧದಲ್ಲಿ ಬಳಸುತ್ತಿದ್ದ ಪ್ರಮುಖ ಯುದ್ಧಸ್ತ್ರಗಳಾಗಿದ್ದವು. ವಿಜಯನಗರ ಅರಸರು ಯುದ್ಧ ಕುದರೆಗಳಿಗೆ ಸಾಕಷ್ಟು ಬೇಡಿಕೆ ಇಟ್ಟಿದ್ದರು. ಹಂಜಮಾನ ಎನ್ನುವ ವ್ಯಾಪಾರಿ ಸಂಘಗಳು ಶಾಸನಗಳಲ್ಲಿ ಬಹಳಷ್ಟು ಉಲ್ಲೇಖಿಸಿವೆ. ಹಂಜಮಾನ ಎನ್ನುವ ವ್ಯಾಪಾರಿ ಸಂಘಗಳು ವಿದೇಶೀಯರಾದ ಯಹೂದಿಗಳು ಮತ್ತು ಅರಬ್ಬರಿಂದ ಕೂಡಿದಂತಹ ಉತ್ತಮ ಸಂಘಗಳಾಗಿದ್ದವು.[9]

ಅರಬ್ ವ್ಯಾಪಾರಿಗಳು ಅಂತರಾಷ್ಟ್ರೀಯ ವ್ಯಾಪಾರದಲ್ಲಿ ಉತ್ತಮವಾದ ಪಾತ್ರವನ್ನು ನಿರ್ವಹಿಸಿದರು. ಇವರು ಕರ್ನಾಟಕದ ಕರಾವಳಿಯನ್ನು ವಿಶ್ವದ ವ್ಯಾಪಾರದೊಂದಿಗೆ ಸಂಪರ್ಕ ಕಲ್ಪಿಸಿದರು ಭಾರತಕ್ಕೆ ಯುರೋಪಿಯನ್ನರು ಬರುವುದಕ್ಕಿಂತ ಮೊದಲಿನಿಂದಲೂ ಅರಬ್ಬರು ಕರ್ನಾಟಕದ ವ್ಯಾಪಾರಿಗಳೊಂದಿಗೆ ಅಕ್ಕಿ, ಸಾಂಬಾರ ಮತ್ತು ಬಟ್ಟೆಗಳ ವ್ಯಾಪಾರದಲ್ಲಿ ಸಮರ್ಪಕವಾಗಿ ತೊಡಗಿಸಿಕೊಂಡಿದ್ದರು. ಈ ವಸ್ತುಗಳಿಗೆ ಸಾಕಷ್ಟು ಬೇಡಿಕೆಯನ್ನು ಪಶ್ಚಿಮ ಏಷ್ಯಾ ರಾಷ್ಟ್ರಗಳು ಹೊಂದಿದ್ದವು. ಭಾರತಕ್ಕೆ ಯುರೋಪಿಯನ್ನರ ಭೇಟಿಯನಂತರ ಅವರು ಭಾರತ ಮತ್ತು ಏಷ್ಯಾ ರಾಷ್ಟ್ರಗಳಲ್ಲಿ ಸರಕುಗಳನ್ನು ಖರೀದಿಸಿ ಅವುಗಳನ್ನು ಪಶ್ಚಿಮ ಕರಾವಳಿ ಬಂದರುಗಳ ಮೂಲಕ ವಿದೇಶಗಳಿಗೆ ರಫ್ತು ಮಾಡುತ್ತಿದ್ದರು. ಕೆಲವೊಂದು ದಾಖಲೆಗಳ ಪ್ರಕಾರ ಯಹೂದಿಗಳು ಸಹ ಈ ಭಾಗದಲ್ಲಿ ವ್ಯಾಪಾರ ಕೈಗೊಳ್ಳುತ್ತಿದ್ದರು. ಅಬ್ರಾಹಾಂಯೆಜು ಎಂಬ ವ್ಯಾಪಾರಿಯು ಮಂಗಳೂರು ಮತ್ತು ಅದೇನ್ ರಾಷ್ಟ್ರಗಳ ನಡುವೆ ಉತ್ತಮವಾದ ವ್ಯಾಪಾರ ನಿರ್ಮಾಣ ಮಾಡುವಲ್ಲಿ ಪ್ರಮುಖ ಪಾತ್ರವಹಿಸಿದ್ದನು. ಮತ್ತೆ ಕೆಲವು ದಾಖಲೆಗಳ ಪ್ರಕಾರ ಅಡಿಕೆ, ಕಬ್ಬಿಣ ಮತ್ತು ತಾಮ್ರದ ವ್ಯಾಪಾರವು ಪ್ರಾಮುಖ್ಯತೆಗಳಿಸಿತ್ತು.[10]

ಮುಸ್ಲಿಮರಲ್ಲದೇ ಸಾರಸ್ವತಾಸ್‌ರವರು ಕ್ರಿ.ಶ. 1500ರ ನಂತರ ಗೌಡ ಸಾರಸ್ವತಾಸ್ ಎಂಬ ಸಂಘಗಳು ಕರ್ನಾಟಕದ ಕರಾವಳಿ ಭಾಗಗಗಳಲ್ಲಿ ಉತ್ತಮವಾದ ಪ್ರಾಮುಖ್ಯತೆಗಳಿಸಿದ್ದರು. ಹಲವಾರು ಸಾರಸ್ವತ ಪಂಗಡದವರು ವಲಸೆ ಬಂದು ಕರಾವಳಿ ತೀರದಲ್ಲಿ ನೆಲೆಸಿದ್ದರು. ಹಲವಾರು ಕೆಳದಿ ದಾಖಲೆಗಳು ಉಲ್ಲೇಖಿಸುವ ಪ್ರಕಾರ ಸಾರಸ್ವತ್ ವ್ಯಾಪಾರಿ ಪಂಗಡವು ಕರಾವಳಿ ಭಾಗದಲ್ಲಿ ಉತ್ತಮ ವ್ಯಾಪಾರ ವಾಣಿಜ್ಯ ಸಂಪರ್ಕ ಹೊಂದಿದ್ದವು. ಇದಲ್ಲದೆ ಪೋರ್ಚುಗೀಸರ ದಾಖಲೆಗಳು ಮುಖ್ಯವಾಗಿ ಲೆದರ್ಸ್ ಡೊ ಕಾರ್ಟ್‌ಜಸ್ ಹೇಳಿಕೆಯ ಪ್ರಕಾರ ಸಾರಸ್ವತ್ ಎಂಬ ವ್ಯಾಪಾರಿ ಸಂಘಗಳು ಕರ್ನಾಟಕದ ಕರಾವಳಿ ತೀರ ಪ್ರದೇಶಗಳಲ್ಲಿ ವ್ಯಾಪಾರ ಮತ್ತು ವಾಣಿಜ್ಯದ ಮೇಲೆ ನಿಯಂತ್ರಣ ಹೊಂದಿದ್ದರು ಎಂದು ತಿಳಿಸಿದ್ದಾನೆ. ಬಾರ್ಕೂರು ಮತ್ತು ಮಂಗಳೂರಿನಲ್ಲಿ ಗದ್ಯಾಣವನ್ನು ತಯಾರಿಸುವ ಹಲವಾರು ನಾಣ್ಯ ಟಂಕಿಸುವ ಶಾಲೆಗಳು ನಿರ್ಮಾಣವಾಗಿದ್ದವು.

ಕ್ರಿ.ಶ. 16ನೇ ಶತಮಾನದ ಆರಂಭದಲ್ಲಿ ಪೋರ್ಚುಗೀಸರು ಕರ್ನಾಟಕದ ಕರಾವಳಿ ಭಾಗಗಳಲ್ಲಿ ಉತ್ತಮವಾದ ಪಾತ್ರವನ್ನು ನಿರ್ವಹಿಸಿದ್ದರು. ಭಾರತದ ಈ ಭಾಗಗಳಲ್ಲಿ ಪೋರ್ಚುಗೀಸರು ಸಾಂಬಾರ ಪದಾರ್ಥಗಳನ್ನು ಕೆಂಡುಕೊಳ್ಳುವ ಕಡೆ ಗಮನ ಹರಿಸಿದರು. ಪೋರ್ಚುಗೀಸರು ಮಲಬಾರಿನ ಭಾಗಗಳಲ್ಲಿ ಸಾಕಷ್ಟು ಸರಕುಗಳನ್ನು ಕೊಂಡುಕೊಂಡು ಅದನ್ನು ಯೂರೋಪಿನ ದೇಶಗಳಿಗೆ ರಫ್ತು ಮಾಡುತ್ತಿದ್ದರು. ಕ್ರಿ.ಶ. 16 ಮತ್ತು 17ನೇ ಶತಮಾನಗಳಲ್ಲಿ ಪೋರ್ಚುಗೀಸರು ಕರಾವಳಿ ಭಾಗದ ಕೋಟೆಗಳನ್ನು ದಾಳಿಮಾಡಿ ವಶಪಡಿಸಿಕೊಳ್ಳುತ್ತಿದ್ದರು.

ಪೋರ್ಚುಗೀಸರು ಭಾರತದ ವಿದೇಶೀ ವ್ಯಾಪಾರವನ್ನು ನಿಯಂತ್ರಿಸುವ ಪ್ರಯತ್ನ ಮಾಡಿದರು. ಇದರ ಫಲವಾಗಿ ಪೋರ್ಚುಗೀಸರು ರಹದಾರಿ ಪರವಾನಿಗೆ ಅಥವಾ ಅಪ್ಪಣೆ ಚೀಟಿಯನ್ನು ವಿತರಿಸಿದರು. ಈ ನೀತಿಯನ್ನು ಮಾಪಿಳ್ಳೆಗಳು ವಿರೋಧಿಸಿದರು. ಆದರೆ ಈ ಮಾಪಿಳ್ಳೆಗಳು ಅಷ್ಟೊಂದು ಉತ್ತಮವಾದ ಸ್ಥಾನವನ್ನು ಪಡೆದಿರಲಿಲ್ಲ. ಕೆಲವೊಂದು ದಾಖಲೆಗಳ ಪ್ರಕಾರ ಕ್ಯಾಲಿಕಟ್ ಮತ್ತು ಮಂಗಳೂರಿನ ವ್ಯಾಪಾರಿಗಳ ನಡುವೆ ಒಪ್ಪಂದವೇ ಏರ್ಪಟಿತ್ತು. ಬಸ್ರೂರು ಮತ್ತು ಮಂಗಳೂರಿನಿಂದ ಪೋರ್ಚುಗೀಸರು ಅಕ್ಕಿಯ ಕಪ್ಪಕಾಣಿಕೆಗಳನ್ನು ಪಡೆದುಕೊಳ್ಳುತ್ತಿದ್ದರು. ಪೋರ್ಚುಗೀಸರು ಈ ಭಾಗಗಳಲ್ಲಿ ನೇರವಾಗಿ ಆಡಳಿತವನ್ನು ಸ್ಥಾಪಿಸಲು ಸಾಧ್ಯವಾಗಲಿಲ್ಲ ಕಾರಣ ವಿಜಯನಗರ ಸಾಮ್ರಾಜ್ಯ ಮತ್ತು ಕೆಳದಿ ಅರಸರು ಹೆಚ್ಚು ಪ್ರಾಬಲ್ಯಗಳಿಸಿದ್ದರು. ಕೆಳದಿ ಅರಸರು ಕರ್ನಾಟಕದ ಕರಾವಳಿಯಲ್ಲಿ ಪೋರ್ಚುಗೀಸರ ಅವನತಿಗೂ ಕಾರಣರಾದರು. ಕ್ರಿ.ಶ. 17ನೇ ಶತಮಾನದ ಸಮಯಕ್ಕೆ ಪೋರ್ಚುಗಿಸರು

ಮಲಬಾರ್‌ನ ಮೇಲೆ ನಿಯಂತ್ರಣವನ್ನು ಕಳೆದುಕೊಂಡಿದ್ದರು. ಪೋರ್ಚುಗೀಸರು ಮಂಗಳೂರಿನಲ್ಲಿ ರಾಣಿ ಅಬ್ಬಕ್ಕನಿಂದ ಹಲವು ಬಾರಿ ಸೋಲನ್ನು ಅನುಭವಿಸಿದರು. ಅಬ್ಬಕ್ಕ ಮತ್ತು ಅವಳ ಸೈನ್ಯವು ಪೋರ್ಚುಗೀಸರೊಂದಿಗೆ ಹೊಂದಿದ್ದ ಭಿನ್ನಾಭಿಪ್ರಾಯವು ಪೋರ್ಚುಗೀಸರ ಅವನತಿಗೆ ಪ್ರಮುಖವಾದ ಕಾರಣವಾಯಿತು[11].

ದೇಶೀಯ ಮತ್ತು ವಿದೇಶಿಯ ವ್ಯಾಪಾರಗಳು ಹಲವಾರು ವೃತ್ತಿ ಸಂಘಗಳನ್ನು ಸ್ಥಾಪಿಸಿಕೊಂಡು ವ್ಯಾಪಾರ ವ್ಯವಹಾರಗಳನ್ನು ನಡೆಸಿಕೊಂಡು ಬರುತ್ತಿದ್ದರು. ಸಂಘಗಳು ವಿವಿಧ ಹೆಸರುಗಳಲ್ಲಿ ನಿರ್ಮಾಣಗೊಂಡು ದೇಶದ ಆಂತರಿಕ ಮತ್ತು ಕಡಲೋತ್ತರ ವ್ಯಾಪಾರದಲ್ಲಿ ತೊಡಗಿಸಿಕೊಂಡಿದ್ದರು. ಈ ಸಂಘಗಳು, ನದಿ, ಕಡಲು ಮತ್ತು ರಸ್ತೆ ಮಾರ್ಗಗಳಲ್ಲಿ ಸಂಚರಿಸಿ ಸರಕುಗಳನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ರವಾನಿಸುತ್ತಿದ್ದರು. ಸರಕುಗಳ ಸಾಗಾಣಿಕೆಗೆ ಪೂರಕವಾಗಿದೆ. ಪ್ರಮುಖ ಸಾಧನಾವೆಂದರೆ ಬಂಡಿಗಳು, ಎತ್ತು, ಕತ್ತೆ, ಕೋಣ ಎಮ್ಮೆ, ಕುದುರೆ ಬಂಡಿಗಳು ಸರಕು ಸಾಗಣಿಕೆಯಲ್ಲಿ ಬಹಳಷ್ಟು ಪ್ರಾಮುಖ್ಯತೆಗಳಿಸಿದ್ದವು. ಇದಲ್ಲದೆ ಕರಾವಳಿಯ ಭಾಗಗಳಲ್ಲಿ ಸಣ್ಣದೋಣಿಗಳು ಪಾತಿ ದೋಣಿಗಳು, ತೆಪ್ಪ ಹಾಯಿ ದೋಣಿಗಳನ್ನು ಬಳಸುತ್ತಿದ್ದರು. ಒಳ ಭಾಗದ ವ್ಯಾಪಾರದಲ್ಲಿ ನದಿ ಹಳ್ಳ ಹಾಗೂ ಕಾಲುದಾರಿಗಳನ್ನು ಬಳಸಿ ಸ್ಥಳ ತಲುಪುತ್ತಿದ್ದರು.[12]

ವ್ಯಾಪಾರಕ್ಕಾಗಿ ಹೊರಟಾಗ ನಡೆಯುತ್ತಿದ್ದ ಹಾದಿಗಳ್ಳರ ದಾಳಿಗಳಿಂದ ರಕ್ಷಣೆ ಪಡೆಯಲು ಬಿಲ್ಲುಗಾರರನ್ನು ತಮ್ಮೊಡನೆ ಕರೆದೊಯ್ಯುತ್ತಿದ್ದರು. ವ್ಯಾಪಾರಕ್ಕಾಗಿ ಹೊರಟಾಗ 150 ರಿಂದ 200 ಜನರ ದೊಡ್ಡ ತಂಡದೊಂದಿಗೆ ಹೋಗುತ್ತಿದ್ದರು. ನಿರ್ದಿಷ್ಟ ವ್ಯಾಪಾರಿ ಪಟ್ಟಣಗಳಿಗೆ ಹೋಗಿ ವ್ಯಾಪಾರ ನಡೆಸಿ ಅಲ್ಲಿಯ ಆಡಳಿತಕ್ಕೆ ತೆರಿಗೆ ಸಲ್ಲಿಸುತ್ತಿದ್ದರು. ಸಣ್ಣ ಸಣ್ಣ ವ್ಯಾಪಾರಿಗಳು ಹಳ್ಳ – ಕೇರಿಗಳಲ್ಲಿ ತಮ್ಮ ಹೇರುಗಳಲ್ಲಿ ಒಯ್ದು ಸಾಮಾನುಗಳ ವ್ಯಾಪಾರ ಮಾಡುತ್ತಿದ್ದರು. ಘಟ್ಟದ ಪ್ರದೇಶಗಳಲ್ಲಿ ಜನರಿಗೆ ಅಗತ್ಯವಿದ್ದ ಉಪ್ಪು ದೊಡ್ಡ ಪ್ರಮಾಣದಲ್ಲಿ ಕರಾವಳಿಯಿಂದ ಸಾಗಾಟವಾಗುತ್ತಿತ್ತು.

ವಿಜಯನಗರ ಕಾಲದಲ್ಲಿ ಬಂದರುಗಳ ಮೂಲಕ ದೇಶ ಹಾಗೂ ವಿದೇಶಗಳೊಂದಿಗೆ ವ್ಯಾಪಾರ ಮತ್ತು ವ್ಯವಹಾರಗಳು ಬೃಹತ್ ಪ್ರಮಾಣದಲ್ಲಿ ನಡೆಯುತ್ತಿತು. ದಿನಬಳಕೆಯ ಪ್ರಮುಖ ವಸ್ತುಗಳಾದ ಅಕ್ಕಿ, ಅಡಿಕೆ, ಉಪ್ಪು, ಏಲಕ್ಕಿ, ಕಾಳುಮೆಣಸು, ಸಕ್ಕರೆ, ಶುಂಠಿ, ಲವಂಗ, ಭತ್ತ, ಜೋಳ, ಅವರೆ, ಕಡಲೆ ಮುಂತಾದವುಗಳು ಹೆಚ್ಚು ವ್ಯಾಪಾರವಾಗುತ್ತಿದ್ದವು. ಬೆಲೆಬಾಳುವ ಲೋಹಗಳಾದ ಬಂಗಾರ, ತಾಮ್ರ ಮುಂತಾದವುಗಳು ವ್ಯಾಪಾರಕ್ಕಾಗಿ ಕರಾವಳಿಯ

ಬಂದರುಗಳಿಗೆ ಬರುತ್ತಿದ್ದವು. ಕೋಲಾರ ಚಿನ್ನದ ಗಣಿಯಲ್ಲಿ ತೆಗೆದ ಲೋಹವನ್ನು ಹೊನ್ನಾವರ ಬಂದರಿನ ಮೂಲಕ ಸಿಂಧು ಕಣಿವೆಗೆ ಸಾಗಿಸುತ್ತಿದ್ದರು ಎಂದು ಅನೇಕ ವಿದ್ವಾಂಸರು ಗುರುತಿಸಿದ್ದಾರೆ. ಅನೇಕ ಬಂದರುಗಳು ಚಿನ್ನದ ಸಾಗಾಟವನ್ನು ತಮ್ಮ ಹೆಸರಿನಲ್ಲಿಯೇ ಸೂಚಿಸುತ್ತವೆ. ಉದಾರಣೆಗೆ ಹೊನ್ನಾವರದಂತೆ ಕುಮಟಾ ಬಂದರಿನ ಮುಖಜ ಪ್ರದೇಶ ಹೊನ್ನಳ್ಳಿ, ಇದು ಹೊನ್ನಿನ ಹಳ್ಳಿ ಎಂಬ ಅರ್ಥವನ್ನು ಹೊಮ್ಮಿಸುತ್ತದೆ. ಅಂತಹ ಬೆಲೆಬಾಳುವ ಲೋಹಗಳ ವ್ಯಾಪಾರ ಈ ಬಂದರುಗಳ ಮೂಲಕ ನಡೆಯುತ್ತಿತ್ತೆಂದು ತಿಳಿಸುತ್ತವೆ.[13]

ಬಳ್ಳಿಗಾವೆಯ ವರ್ತಕರು ಇಂದ್ರನೀಲ, ಚಂದ್ರಕಾಂತ, ಮುತ್ತು, ಮಾಣಿಕ್ಯ, ವಜ್ರ, ವೈಡೂರ್ಯ, ಗೋಮೇಧಕ, ಪುಷ್ಯರಾಗ, ಪದ್ಮರಾಗ ಮುಂತಾದ ರತ್ನಗಳ ವ್ಯಾಪಾರ ಮಾಡುತ್ತಿದ್ದರೆಂದು ತಿಳಿದು ಬರುತ್ತದೆ. ಬ್ರಹ್ಮಗಿರಿ, ಸಿದ್ಧಾಪುರ, ಜಟಿಂಗ ರಾಮೇಶ್ವರ, ಮಸ್ಕಿ, ನಿಟ್ಟೂರು, ಉದಂಗೋಲ, ಪಾಲಕಿಗುಂಡು ಮತ್ತು ಗವಿಮಠಗಳಲ್ಲಿ ಬಹು ಲೋಹ ದೊರಕುತ್ತಿತ್ತು. ಕರ್ನಾಟಕದ ವ್ಯಾಪಾರಿಗಳು ವಜ್ರದ ವ್ಯಾಪಾರವನ್ನು ನಡೆಸುತ್ತಿದ್ದರು. ಬಳ್ಳಾರಿಯಲ್ಲಿ ದೊರೆಯುವ ವಿಶಿಷ್ಟ ಮಣಿಗಳ ಹಾರಮಾಡಿ ವ್ಯಾಪಾರ ಮಾಡುತ್ತಿದ್ದರು.

**ವ್ಯಾಪಾರ ಮತ್ತು ವಿನಿಮಯ ಪದ್ಧತಿ**

ವಿಜಯನಗರ ಸಾಮ್ರಾಜ್ಯದ ವ್ಯಾಪಾರ ಮತ್ತು ವಹಿವಾಟು ಮುಖ್ಯವಾಗಿ ಎರಡು ಮಾದರಿಯಲ್ಲಿ ನಡೆಯುತಿತ್ತು. ಒಂದು ಮಾದರಿ ನಾಣ್ಯಗಳನ್ನು ಬಳಸಿ ಸರಕುಗಳನ್ನು ಕೊಂಡುಕೊಳ್ಳುವುದು, ಮತ್ತೊಂದು ಮಾದರಿ ವಸ್ತುಗಳ ವಿನಿಮಯ ಮಾಡಿಕೊಳ್ಳುವುದಾಗಿತ್ತು. ತಿರುವಳ್ಳಿ ಶಾಸನವು ವಸ್ತು ವಿನಿಮಯ ವ್ಯಾಪಾರ ಕುರಿತಾಗಿ ಮಾಹಿತಿಯನ್ನು ಒದಗಿಸುತ್ತದೆ. ವಸ್ತುವಿನಿಮಯ ಕುರಿತಾದ ವಿವರಗಳನ್ನು ಈ ಕೆಳಕಂಡ ಕೋಷ್ಟಕದಲ್ಲಿ ವಿವರಿಸಲಾಗಿದೆ.[14]

| ಕ್ರ.ಸಂ. | ಸರಕುಗಳು | ಪ್ರಮಾಣ | ದರ |
|---|---|---|---|
| 1 | ಶ್ರೀಗಂಧದ ಲೇಪ | 10 ಕಾನಂ | 05 ನಲಿಭತ್ತ |
| 2 | ಕರ್ಪೂರ | 05 ಕಾನಂ | 40 ನಲಿ ಭತ್ತ |
| 3 | ಅಕಿಲ್ | 10 ಕಾನಂ | 10 ನಲಿ ಭತ್ತ |
| 4 | ಎಣ್ಣೆ | 05 ನಲಿ | 26 ಪಾರ ಭತ್ತ |
| 5 | ಸಾಂಬಾರ | 1 ನಲಿ | 10 ನಲಿ ಭತ್ತ |
| 6 | ಜೀರಿಗೆ | 1 ನಲಿ | 10 ನಲಿ ಭತ್ತ |
| 7 | ಇಂಗು | 1 ನಲಿ | 2 ಪಾರ ಭತ್ತ |
| 8 | ಹಸಿರು ಬೇಳೆ | 1 ಪಾಲಂ | 2 ಪಾರ ಭತ್ತ |
| 9 | ವಿಳ್ಯೇದೆಲೆ ಅಡಿಕೆ | 10,000 ನಂಬರ್‌ಗಳಲ್ಲಿ | 15 ಪಾಲ ಭತ್ತ |

ಹೀಗೆ ಈ ಮೇಲ್ಕಂಡ ರೀತಿಯಲ್ಲಿ ವಸ್ತು ವಿನಿಮಯದ ಮೂಲಕ ವ್ಯಾಪಾರ ನಡೆಯುತ್ತಿತ್ತು. ಹಾಗೆಯೇ ಈ ಮೇಲೆ ಹೇಳಿದಂತೆ ಹಣದ ಮೂಲಕ ವ್ಯಾಪಾರದ ಬೆಳವಣಿಗೆಯ ಬಗ್ಗೆ. ಮಾಹಿತಿ ದೂರಕುತ್ತದೆ. ಮುಖ್ಯವಾಗಿ, ಕಾಸು, ಪಾಲಂಕಾಸು, ಕಾಲಕ, ಪಾನಂ ಮತ್ತು ದಿನಾರ ಪ್ರಮುಖವಾದ ನಾಣ್ಯಗಳಾಗಿದ್ದವು. ದಿನಾರವು ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಪ್ರಮುಖವಾದ ನಾಣ್ಯಗಳಾಗಿದ್ದವು. ದಿನಾರವು ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಪ್ರಮುಖವಾದ ಪಾತ್ರವನ್ನು ನಿರ್ವಹಿಸಿತು ಮನಿಪ್ರಾವಲಂ ಸಾಹಿತ್ಯವು ಕಾಸು, ಪಾನಂ, ಪಾಕಂ, ಕಾಲಕ, ತಾನಂ, ತಿರಾಮಂಗಳ ಬಗ್ಗೆ ಬಹಳಷ್ಟು ಮಾಹಿತಿಯನ್ನು ನೀಡುತ್ತದೆ. ನಾಣ್ಯಗಳ ಚಲಾವಣೆಯ ಮೊದಲು ಕವಡೆಗಳನ್ನು ಬಳಸಿ ವ್ಯಾಪಾರ ಮಾಡಲಾಗುತ್ತಿತ್ತು. ಕವಡೆಗಳನ್ನು ವಿಶ್ವದ ಪ್ರಪ್ರಥಮ ಹಣವೆಂದು ಕರೆಯಲಾಗುತ್ತದೆ.

ಹೀಗೆ ಈ ಮೇಲ್ಕಂಡ ರೀತಿಯಲ್ಲಿ ವ್ಯಾಪಾರ ಮತ್ತು ವಾಣಿಜ್ಯವು ಬೆಳವಣಿಗೆ ಹೊಂದುವ ಮೂಲಕ ವಿನಿಮಯ ಪದ್ಧತಿ ರೂಡಿಗೆ ಬಂದಿತು. ತಮಗೆ ಅವಶ್ಯಕವಾದ ವಸ್ತುಗಳನ್ನು ಅವರು ಕೊಂಡುಕೊಳ್ಳುವ ಬದಲಾಗಿ ವಿನಿಯಮ ಪದ್ಧತಿ ಸಾಮಾನ್ಯವಾಗಿತ್ತು. ಈ ವಿನಿಮಯ ಪದ್ಧತಿಯು ಸಾಮಾನ್ಯವಾಗಿ ಆಂತರಿಕ ವ್ಯಾಪಾರದಲ್ಲಿ ಅತಿ ಹೆಚ್ಚಾಗಿ ಕಂಡುಬರುತ್ತಿತ್ತು. ಆದರೆ ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಸಾಮಾನ್ಯವಾಗಿ ದಿನಾರ ನಾಣ್ಯ ಹೆಚ್ಚು ಪ್ರಚಲಿತದಲ್ಲಿತ್ತು.

**6.2 ವಿಜಯನಗರ ಕಾಲದ ವ್ಯಾಪಾರಿ ಮಾರ್ಗಗಳು**

ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯಲ್ಲಿ ಉತ್ತಮವಾದ ರಸ್ತೆಗಳು ಮತ್ತು ನಗರಗಳು ಪ್ರಮುಖವಾದ ಪಾತ್ರವನ್ನು ವಹಿಸಿದವು. ಕರ್ನಾಟಕದ ಬಂದರುಗಳು ಮತ್ತು ಉದಾರವಾದ ತೆರಿಗೆಗಳು ಸಾಗರೋತ್ತರ ವ್ಯಾಪಾರಕ್ಕೆ ಸಹಕಾರಿಯಾಯಿತು. ಪ್ರಾರಂಭದ ದಿನಗಳಲ್ಲಿ ಈ ರಸ್ತೆಗಳಲ್ಲಿ ಸಂಚರಿಸುವಾಗ ವ್ಯಾಪಾರಿಗಳು ಬಹಳ ಎಚ್ಚರಿಕೆಯಿಂದ ಸಾಗಬೇಕಿತ್ತು. ಹಲವಾರು ರಸ್ತೆಗಳಲ್ಲಿ ದರೋಡೆಕೊರರು ವ್ಯಾಪಾರಿಗಳನ್ನು ದರೋಡೆ ಮಾಡುತ್ತಿದ್ದರು. ಜಲಮಾರ್ಗವುಭೂ ಮಾರ್ಗಕ್ಕಿಂತ ಹೆಚ್ಚು ಸುರಕ್ಷಿತವಾಗಿತ್ತು. ವಿಜಯನಗರ ಸಾಮ್ರಾಜ್ಯದಲ್ಲಿ ಆಂಧ್ರ ಪ್ರದೇಶವು ನದಿಗಳು ಮತ್ತು ಕಾಲುವೆಗಳ ಮೂಲಕ ಉತ್ತಮ ಸಂಪರ್ಕವನ್ನು ಹೊಂದಿತ್ತು.ಈ ಎಲ್ಲಾ ಲಕ್ಷಣಗಳಿಂದ ವಿಜಯನಗರ ಸಾಮ್ರಾಜ್ಯದ ಆಂತರಿಕ ಮತ್ತು ವಿದೇಶೀ ವ್ಯಾಪಾರ ಬೆಳವಣಿಗೆ ಹೊಂದಲು ಸಹಕಾರಿಯಾಯಿತು.

ವಿಜಯನಗರ ಸಾಮ್ರಾಜ್ಯವು ವಿಶಾಲವಾದ ವಿಸ್ತೀರ್ಣವನ್ನು ಹೊಂದಿತ್ತು. ಈ ಸಾಮಾಜ್ರದ ರಾಜಧಾನಿಯಾದ ಹಂಪೆಯು ಹಲವಾರು ರಸ್ತೆ ಮಾರ್ಗಗಳಿಂದಾಗಿ ಉತ್ತಮ ಸಂಪರ್ಕ

ಕಲ್ಪಸಿಕೊಂಡಿತ್ತು. ಹಂಪೆಯು ಮದ್ರಾಸ್, ಚಂದ್ರಗಿರಿ, ತಿರುಪತಿ, ಮತ್ತು ಪುಲಿಕಾಟ್‌ನೊಂದಿಗೆ ನೇರ ಸಂಪರ್ಕವಿತ್ತೆಂದು ಹಾಗೂ ಉತ್ತರಕ್ಕೆ ಸಂಪರ್ಕ ಕಲ್ಪಿಸುವ ಎರಡು ಪ್ರಮುಖ ಮಾರ್ಗಗಳಿದ್ದವು. ಒಂದು ಮಚಲೀಪಟ್ಟಣದಿಂದ ಕೋವಿಲ್‌ಕೊಂಡದವರೆಗೆ ಮತ್ತೊಂದು ಕೋವಿಲ್ ಕೊಂಡದಿಂದ ಬಳ್ಳಾರಿಯ ಕಂಪ್ಲಿಯವರೆಗೆ ಹಬ್ಬಿತ್ತು.

ಸರಕುಗಳನ್ನು ಒಂದು ಸ್ಥಳದಿಂದ ಬೇಡಿಕೆ ಇರುವ ಮತ್ತೊಂದು ಸ್ಥಳಕ್ಕೆ ಸಾಗಿಸಲು ಉತ್ತಮ ಮಾರ್ಗಗಳ ಅವಶ್ಯಕತೆ ಇದೆ. ಸರಕುಗಳು ಎಷ್ಟೇ ಅಮೂಲ್ಯ ಮತ್ತು ಬೆಲೆಬಾಳುವ ಸರಕುಗಳಾಗಿದ್ದರು ಅವು ಸರಿಯಾದ ಸಮಯಕ್ಕೆ ಮಾರುಕಟ್ಟೆಗೆ ಬರದಿದ್ದರೆ ಆ ಸರಕುಗಳಿಗೆ ಬೆಲೆ ಇರುವುದಿಲ್ಲ. ವಸ್ತುಗಳು ಸಮಯಕ್ಕೆ ಸರಿಯಾಗಿ ತಲುಪಲು ರಸ್ತೆಗಳು ಪ್ರಮುಖ ಪಾತ್ರ ವಹಿಸುತ್ತವೆ. ಮಧ್ಯಕಾಲೀನ ಭಾರತದಲ್ಲಿ ಅಥವಾ ವಿಜಯನಗರ ಸಾಮ್ರಾಜ್ಯದಲ್ಲಿ ಕರಾವಳಿಯ ಮೂಲಕ ನಡೆದ ವ್ಯಾಪಾರ ವಾಣಿಜ್ಯ ಉತ್ತಮ ಸಾಗಾಣಿಕಾ ಸೌಲಭ್ಯಗಳಿಂದ ಕೂಡಿತ್ತು. ಇದು ನದಿ ಹಾಗೂ ಭೂಮಾರ್ಗವನ್ನು ಒಳಗೊಂಡಿತ್ತು. ಕಡಲೋತ್ತರ ವ್ಯಾಪಾರಕ್ಕೆ ಅನುಕೂಲವಾದ, ಸುರಕ್ಷಿತವಾದ ಹತ್ತಿರದ ಕಡಲ ಮಾರ್ಗಗಳೂ ಇದ್ದವು. ಇವು ರೋಮ್. ಗ್ರೀಸ್, ಕೆಂಪು ಸಮುದ್ರ, ಭೂ ಮಧ್ಯಸಮುದ್ರ, ಪರ್ಷಿಯಾ-ಅರಬ್ ದೇಶಗಳು ಹಾಗೂ ಇಂಡೋನೇಷ್ಯಾ, ಶ್ರೀಲಂಕಾ, ಚೀನಾ ಯುರೋಪಿನ ದೇಶಗಳೊಂದಿಗೆ ತಲುಪುವ ಕಡಲ ಮಾರ್ಗವಾಗಿತ್ತು.

ಸರಕುಗಳನ್ನು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಸಾಗಿಸಲು ಎರಡು ಮುಖ್ಯ ಸಾರಿಗೆ ವ್ಯವಸ್ಥೆಗಳಿದ್ದವು. ಅವುಗಳೆಂದರೆ ಭೂ ಮಾರ್ಗಗಳು ಮತ್ತು ಜಲಮಾರ್ಗಗಳು ಇವುಗಳ ವಿವರಣೆಯನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

**ಭೂ ಮಾರ್ಗಗಳು**

ಭೂ ಮಾರ್ಗಗಳು ಸರಕುಗಳ ಸಾಗಾಣಿಕೆಯಲ್ಲಿ ಬಹಳ ಪ್ರಾಮುಖ್ಯತೆ ಗಳಿಸಿದ್ದವು. ದಕ್ಷಿಣಭಾರತದ ಹಲವಾರು ಭೂ ಮಾರ್ಗಗಳು ವಿಶಾಲವಾಗಿಯೂ ಹಾಗೂ ಭೌಗೋಳಿಕ ಅಡೆತಡೆಗಳಿಂದ ಮುಕ್ತವಾಗಿದ್ದವು. ಈ ಭೂ ಮಾರ್ಗಗಳು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಗ್ರಾಮಗಳು, ನಗರಗಳು ಮತ್ತು ಪಟ್ಟಣಗಳಿಗೆ ಸಂಪರ್ಕ ಕಲ್ಪಿಸುತ್ತಿದ್ದವು. ಉತ್ತರ ಭಾರತ ಮತ್ತು ದಕ್ಷಿಣ ಭಾರತದ ನಡುವೆ ಭೂಮಾರ್ಗಕ್ಕಿಂತ ಹೆಚ್ಚಾಗಿ ಜಲಮಾರ್ಗದ ಮೂಲಕ ಸರಕುಗಳನ್ನು ಸಾಗಿಸಲಾಗುತಿತ್ತು. ವಿಂಧ್ಯ ಮತ್ತು ಸಾತ್ಪುರ ಬೆಟ್ಟಗಳು ಭೂ ಮಾರ್ಗದ ಬೆಳವಣಿಗೆಗೆ ಅಡ್ಡಿಯಾಗಿದ್ದವು. ಅದರಿಂದಾಗಿ ಭೂ ಮಾರ್ಗಗಳ ಬದಲಿಗೆ ಕಡಲು ಮಾರ್ಗ ಬಳಸಲಾಗುತಿತ್ತು. ಕರ್ನಾಟಕದ ಬಂದರುಗಳಿಂದ ಸರಕುಗಳನ್ನು ತುಂಬಿಕೊಂಡ ಹಡಗುಗಳು

ಗುಜರಾತಿನ ಬಂದರುಗಳಿಗೆ ತಲುಪಿ ಅಲ್ಲಿಂದ ಭೂಮಾರ್ಗದ ಮೂಲಕ ಅವಶ್ಯಕ ಸ್ಥಳಗಳಿಗೆ ಸರಕುಗಳನ್ನು ಸಾಗಿಸಲಾಗುತಿತ್ತು. ಹಲವಾರು ನದಿಗಳು ಬಂದರಿನಿಂದ ಒಳನಾಡಿಗೆ ಸರಕು ಸಾಗಾಣಿಕೆಗೆ ಅನುಕೂಲವಾಗಿದ್ದು, ಮುಂದೆ ಭೂ ಮಾರ್ಗ ಅನುಸರಿಸಿ ಹಿನ್ನಾಡನ್ನು ಪೇಟೆ–ಪಟ್ಟಣಗಳನ್ನು ಸೇರಬಹುದಾಗಿತ್ತು. ಪ್ರಾಚೀನ ಹಾಗೂ ಮಧ್ಯಕಾಲೀನ ಕರ್ನಾಟಕವನ್ನು ಆಳಿದ ಕೇಂದ್ರ ಹಾಗೂ ರಾಜಧಾನಿ ಪಟ್ಟಣಗಳು ಬಂದರುಗಳಿಂದ ಬಹುದೂರದಲ್ಲಿದ್ದರೂ ಇವುಗಳ ನಡುವೆ ಸಂಪರ್ಕ ಏರ್ಪಡಿಸುವ ಸುಲಭ ಮಾರ್ಗಗಳನ್ನು ನಿರ್ಮಿಸಿ ಕೊಂಡಿದ್ದರು.

ಬಂದರುಗಳು ಕರ್ನಾಟಕದ ಆರ್ಥಿಕ ಬೆಳಬೆಣಿಗೆಯ ಕ್ರಾಂತಿಕಾರಿ ಕೇಂದ್ರಗಳಾಗಿದ್ದರಿಂದ ಇವುಗಳೊಂದಿಗೆ ದುಡಿಯುವ ವರ್ಗ ಪ್ರಮುಖ ಸಂಬಂಧ ಹೊಂದಿತ್ತು. ಹೊರನಾಡಿನ ಶ್ರಮಿಕರು ಕರಕುಶಲ ಕರ್ಮಿಗಳು ಬಂದರು ಪಟ್ಟಣದ ಬಳಿಯಲ್ಲಿ ನಿರ್ಮಿಸಿದ್ದ ಕೈಗಾರಿಕಾ ಕೇಂದ್ರಗಳಲ್ಲಿ ವಾಸಮಾಡುತ್ತಿದ್ದರು. ಕರ್ನಾಟಕದ ಕರಾವಳಿಯನ್ನು ಪಶ್ಚಿಮ ಘಟ್ಟಗಳು ಪೂರ್ವದತ್ತ ಸುಲಭ ಸಂಪರ್ಕವನ್ನು ತಪ್ಪಿಸಿವೆ. 1500 ಮೀಟರ್‌ನಿಂದ 4500 ಮೀಟರ್‌ವರೆಗೆ ಇವುಗಳ ಎತ್ತರವಿದೆ. ಈ ಪಶ್ಚಿಮ ಘಟ್ಟಗಳು ಪದರು ಪದರಾಗಿ ಪಶ್ಚಿಮ ಉತ್ತರವಾಗಿ ಹಬ್ಬಿದ್ದು ಉತ್ತರ ದಕ್ಷಿಣವಾಗಿ ಗೋಡೆಯಂತೆ ನಿಂತಿದೆ. ದುರ್ಗಮವಾದ ಪಶ್ಚಿಮ ಘಟ್ಟಗಳ ಸಾಲುಗಳ ಮದ್ಯೆ ಅಲ್ಲಲ್ಲಿ ಪಶ್ಚಿಮ ಪೂರ್ವವಾಗಿ ಹಲವಾರು ಕೊರಕಲುಗಳು ಉಂಟಾಗಿವೆ. ಈ ಕೊರಕಲುಗಳು ಅತ್ಯುತ್ತಮವಾದ ಪೂರ್ವದತ್ತ ಸಂಪರ್ಕ ಕಲ್ಪಿಸುವ ಭೂ ಮಾರ್ಗಗಳಾಗಿವೆ. ಈ ಕಣಿವೆಗಳ ಪಕ್ಕದಲ್ಲಿ ಪಶ್ಚಿಮಕಾಳಿ, ಅಘನಾಶಿನಿ, ಬೆಡ್ತಿ, ಶರಾವತಿ, ಸೌರಭಿ, ಪಂಚಗಂಗಾವಳಿ, ಸೀತಾನದಿ, ಸ್ವರ್ಣನದಿ, ಗುರುಪುರ, ನೇತ್ರಾವತಿ ನದಿಗಳು ಹಿನ್ನಾಡಿಗೆ ಸಂಪರ್ಕ ಕಲ್ಪಿಸುವ ಅತ್ಯುತ್ತಮ ಮಾರ್ಗಗಳಾಗಿವೆ. ಗುರೂರು, ನೇತ್ರಾವತಿ ನದಿಗಳು ಹಿನ್ನಾಡಿಕೆ ಸಂಪರ್ಕ ಕಲ್ಪಿಸುವ ಅತ್ಯುತ್ತಮ ಮಾರ್ಗಗಳಾಗಿವೆ.

ಕೃಷ್ಣದೇವರಾಯನ ಕಾಲದಲ್ಲಿ ಈ ಕೆಳಕಂಡ ಪ್ರಮುಖವಾದ ಭೂಮಾರ್ಗಗಳ ಮೂಲಕವಾಗಿ ಸರಕುಗಳ ಸಾಗಾಣಿಕೆ ನಡೆಯುತ್ತಿತ್ತು. ಅವುಗಳಲ್ಲಿ ಪ್ರಮುಖವಾದ ಮಾರ್ಗಗಳೆಂದರೆ,

1. ವಿಜಯನಗರದಿಂದ ಶಿವನಸಮುದ್ರ ಮತ್ತು ಶ್ರೀರಂಗ ಪಟ್ಟಣ
2. ವಿಜಯನಗರದಿಂದ ರಾಯಚೂರು ಕಡೆಗಿನ ಮಾರ್ಗ
3. ವಿಜಯನಗರದಿಂದ ಉದಯಗಿರಿ, ಕೊಂಡವೀಡು ಮತ್ತು ಕರಾವಳಿಯ ಮಾರ್ಗವಾಗಿ ಸಿಂಹಚಲಂ ಮತ್ತು ಶ್ರೀಕುರಮಮ್ ಮಾರ್ಗ

4. ವಿಜಯನಗರದಿಂದ ಕಾಳಹಸ್ತಿ, ತಿರುಪತಿ, ಕಂಚಿ, ತಿರುವನ ಮಲೈ, ಚಿದಂಬರಂ, ಮಧುರೈ, ರಾಮೇಶ್ವರಂ, ಧನುಕ್ಷೆಕೊಂಡಿ ಮಾರ್ಗ.[15]

ಸರಕುಗಳನ್ನು ಎತ್ತಿನಗಾಡಿಗಳು ಮತ್ತು ಕುದುರೆಗಾಡಿಗಳಿಂದ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ರವಾನಿಸಲಾಗುತ್ತಿತ್ತು. ಬಾರ್ಬೋಸನ ಪ್ರಕಾರ ಎಮ್ಮೆಗಳು ಸರಕು ಸಾಗಾಣಿಕೆಯಲ್ಲಿ ಪ್ರಮುಖವಾಗಿ ಬಳಸಲ್ಪಡುತ್ತಿದ್ದವೆಂದು ತಿಳಿಸಿದ್ದಾರೆ. ಪಯಾಸ್ ಮತ್ತು ನ್ಯೂನಿಜ್‌ನ ಪ್ರಕಾರ ಹೆಸರಗತ್ತೆ ಮತ್ತು ಎತ್ತುಗಳನ್ನು ಸರಕು ಸಾಗಾಣಿಕೆಯಲ್ಲಿ ವ್ಯಾಪಾಕವಾಗಿ ಬಳಸಿಕೊಳ್ಳಲಾಗಿತ್ತೆಂದು ಹೇಳಿದ್ದಾರೆ. ಅಲ್ಲಿನ ಸ್ಥಳೀಯ ರೈತರು ತಿಳಿಸಿರುವ ದಾಖಲೆಗಳ ಪ್ರಕಾರ ಭಟ್ಕಳಕ್ಕೆ ಪ್ರತಿ ವರ್ಷ ಸುಮಾರು ಆರು ಸಾವಿರದಷ್ಟು ಎತ್ತುಗಳು ಬರುತ್ತಿದ್ದವು. ಸೀಜರ್ ಪೆಡ್ರಿಕ್ ಹೇಳಿರುವ ಪ್ರಕಾರ ಜನರು ಎತ್ತುಗಳನ್ನು ಮೂಗುದಾರ ಹಾಕಿ ನಿಯಂತ್ರಿಸಿ ಹಾಗೂ ಹಗ್ಗಗಳನ್ನು ಕಟ್ಟಿ ಮರದ ಗಾಡಿಗಳಲ್ಲಿ ಸರಕುಗಳನ್ನು ಸಾಗಿಸುತ್ತಿದ್ದರು.

ಕಾಲುವೆಗಳು ಕೂಡ ಸರಕುಗಳ ಸಾಗಣಿಕೆಗೆ ಬಳಸಲ್ಪಡುತ್ತಿದ್ದವು. ಬಾರ್ಬೋಸನ ಪ್ರಕಾರ ಅತಿ ಹೆಚ್ಚಾಗಿ ಬಟ್ಟೆಯ ಸರಕುಗಳು ಸಾಮ್ರಾಜ್ಯದ ವಿವಿಧ ಭಾಗಗಳಿಂದ ನದಿಗಳ ಮತ್ತು ಕಾಲುವೆಗಳ ಮಾರ್ಗವಾಗಿ ಬಂದರು ಪಟ್ಟಣಗಳಿಗೆ ಬರುತ್ತಿದ್ದವು. ಬಂಡಿಗಳು ಕೃಷಿ ಸರಕುಗಳನ್ನು ಮತ್ತು ಮಿಲಿಟರಿ ಪಡೆಗಳನ್ನು ಸಾಗಿಸಲು ಸಹಾಯಕವಾಗಿದ್ದವು. ಕೃಷ್ಣದೇವರಾಯನ ಶಾಸನಗಳಲ್ಲಿ ಉಲ್ಲೇಖಿಸಿರುವ ಪ್ರಕಾರ ಕೆಲವೊಂದು ಪ್ರಮುಖ ಸರಕು ಸಾಗಾಣಿಕೆ ಬಂಡಿಗಳ ಅಥವಾ ಗಾಡಿಗಳ ಮೂಲಕ ನಡೆಯುತ್ತಿದೆ. ಅವುಗಳೆಂದರೆ 1.ಕವಾಡಿಗಳು 2.ಕುದುರೆಗಾಡಿಗಳು 3.ಎತ್ತಿನಗಾಡಿಗಳು. ಹೆಸರಗತ್ತೆ ಮತ್ತು ವಿವಿಧ ಬಗೆಯ ಪ್ರಾಣಿಗಳು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಸರಕುಗಳನ್ನು ಸಾಗಿಸುವ ಪ್ರಮುಖವಾದ ಸಾಧನಗಳಾಗಿದ್ದವು.

ಕರ್ನಾಟಕದ ವಿವಿಧ ಬಂದರುಗಳಿಂದ ಹಿನ್ನಾಡಿಗೆ ಭೂಮಾರ್ಗ ನಿರ್ಮಿಸಲಾಗಿತ್ತು. ಈ ಮಾರ್ಗವು ಹಿನ್ನಾಡಿನಿಂದ ಬಂದರುಗಳಿಗೆ ವಿಶೇಷವಾಗಿ ಸಂಪರ್ಕವನ್ನು ಕಲ್ಪಿಸುತ್ತಿದ್ದವು. ಅಂತಹ ಪ್ರಮುಖವಾದ ಭೂ ಮಾರ್ಗಗಳೆಂದರೆ ಕಾರವಾರ ಬಂದರಿನಿಂದ ಹಿನ್ನಾಡಿಗೆ ಮಾರ್ಗವನ್ನು ಕಲ್ಪಿಸುವ ಕಾರವಾರ–ಕೈಗಾ–ಹುಬ್ಬಳ್ಳಿ, ಬೆಳಗಾಂವ್ ಮಾರ್ಗಗಳು, ಇದಲ್ಲದೆ ಕಾರವಾರ–ಅವರ್ಸಾ–ಬಾಳೆಗುಳ–ಆಗಸೂರು–ರಾಮನಗರ– ಅರೇಬೈಲು ಮಾರ್ಗ ಪ್ರಮುಖವಾಗಿವೆ ಹಾಗೂ ದಕ್ಷಿಣಭಾಗ ಈ ಎರಡು ಮಾರ್ಗಗಳು ಕಾರವಾರ ಬಂದರಿಗೆ ಹಿನ್ನಾಡಿನೊಂದಿಗೆ ಸಂಪರ್ಕಕಲ್ಪಿಸುತ್ತಿದ್ದವು ಈ ಮಾರ್ಗಗಳು ಮಹಾರಾಷ್ಟ್ರದ ಪಶ್ಚಿಮ ಭಾಗ, ಆಂದ್ರಪ್ರದೇಶದ ಗುಂಟೂರು, ಗುತ್ತಿ, ಅನಂತಪುರ ಹಾಗೂ ತಮಿಳುನಾಡಿನ ಪೂರ್ವ ಕರಾವಳಿಯ ಬಂದರುಗಳಿಗೆ

ಸಂಪರ್ಕ ಕಲ್ಪಿಸುತ್ತವೆ. ಕಾಳೀನದಿಯಲ್ಲಿ ಬಹು ದೂರದವರೆಗೆ ಸರಕುಗಳನ್ನು ಸಾಗಾಟ ಮಾಡಬಹುದಿತ್ತು. ಹಾಗೂ ಹಿನ್ನಾಡಿನ ಸರಕುಗಳನ್ನು ಕಾಳೀನದಿಯ ಮೂಲಕ ಬಂದರುವರೆಗೂ ತರಬಹುದಾಗಿತ್ತು.

ಅಂಕೋಲಾ ಬಂದರಿನಿಂದ ಹಿನ್ನಾಡಿಗೆ ಅರೇಬೈಲ್ ಮಾರ್ಗ ಗುಲ್ಬರ್ಗಾ ಹೊಸಪೇಟೆ ಹಾಗೂ ಉತ್ತರದ ಕಡೆ ಹೋಗಲು ಸಂಪರ್ಕವಿತ್ತು. ಕುಮುಟಾ ಬಂದರಿನಿಂದ ಪಶ್ಚಿಮ ಘಟ್ಟಗಳ ಕಣಿವೆ ಮಾರ್ಗಗಳು ಸಹಾಯಕವಾಗಿದ್ದವು. ನೀಲಕುಂದ, ವಡ್ಡಿ ಹಾಗೂ ದೇವಿಮನೆ ಕೊರಕಲು ಕಣಿವೆಗಳು ಈ ವ್ಯಾಪಾರಕ್ಕೆ ತುಂಬಾ ಉಪಯುಕ್ತ ಮಾರ್ಗಗಳಾಗಿವೆ. ಬನವಾಸಿ, ಬಳ್ಳಿಗಾವೆ, ಶಿವಮೊಗ್ಗ ಹಾಗೂ ಬಡ್ತಿ ನದಿಗಳು ಅಂಕೋಲ ಬಂದರು ಮತ್ತು ಕುಮುಟಾ ಬಂದರಿಗೆ ಸುಲಭವಾಗಿ ಸಂಪರ್ಕ ಕಲ್ಪಸುತ್ತಿದ್ದವು.

ಹೊನ್ನಾವರ ಬಂದರಿಗೆ ಶರಾವತಿ ಬದಿಯಲ್ಲಿ ಸಾಗಿದರೆ ಹೊನ್ನಾವರ ಬಂದರಿನ ಹಿನ್ನಾಡಾಗಿರುವ ಶಿವಮೊಗ್ಗ, ಬೆಂಗಳೂರು, ಕೋಲಾರಗಳನ್ನು ಸುಲಭವಾಗಿ ತಲುಪುಬಹುದಾಗಿತ್ತು. ಹೀಗೆ ಪಶ್ಚಿಮ ಘಟ್ಟದಲ್ಲಿ ಉಂಟಾಗಿರುವ ಎರಡು ಕಣಿವೆ ಮಾರ್ಗಗಳು ಬಂದು ಮಾವಿನಗುಡಿ – ಕತ್ತಲೆಕಾನು ಹಾಗೂ ಎರಡು ರಾಮತೀರ್ಥ ಚಂದಾವರ ಮೂಲಕ ಬಡಾಳ ಮಾರ್ಗವಾಗಿತ್ತು. ಹೊನ್ನಾವರರಿಂದ ಹೊರಟ ಭೂಮಾರ್ಗ ಅವಲಕ್ಕಿ, ಹಡಿನಬಾಳ, ಮೂಡ್ಕಣಿ, ಗೇರಸೊಪ್ಪಾ, ಕತ್ತಲೆಕಾನ, ಮಾವಿನಗುಂಡಿ ಮೂಲಕ ಸಿದ್ದಪುರಕ್ಕು ಮತ್ತು ಜೋಗಕ್ಕೂ ಸಂಪರ್ಕ ಕಲ್ಪಿಸುತ್ತಿತ್ತು. ಗೇರು ಸೊಪ್ಪದವರೆಗೆ ಬಂದರಿನಿಂದ ನೌಕೆಯ ಮೂಲಕ ಬಂದ ಸರಕು ಮುಂದೆ ರಸ್ತೆ ಮಾರ್ಗವಾಗಿ ಈ ದಾರಿಯ ಮೂಲಕ ಸಾಗುತ್ತಿತ್ತು. ಜೋಗದಿಂದ ಶಿವಮೊಗ್ಗ, ಬೆಂಗಳೂರು, ಮೈಸೂರು ಕೋಲಾರದವರೆಗೂ ಈ ಮಾರ್ಗ ಸಂಪರ್ಕ ಸಾಧಿಸುತ್ತಿತ್ತು.

ಭಟ್ಕಳ ಬಂದರಿನ ಮೂಲಕ ಹಿನ್ನಾಡಿಗೆ ಹೋಗಲು ಸುಲಭದ ಮಾರ್ಗಗಳಿದ್ದವು. ಭಟ್ಕಳ ಹಾಡುವಳ್ಳಿ, ಕೊಗಾರ ಮಾರ್ಗವಾಗಿ ಒಂದು, ಭಟ್ಕಳ–ವೆಂಕಟಾಪುರ–ಶಿರಾಲಿ–ಚಿತ್ರಾಪುರ– ಮಾರ್ಗವಾಗಿ ಹಾಗೂ ಭಟ್ಕಳ–ಶಿರೂರು ಮಾರ್ಗವಾಗಿ ಇನ್ನೊಂದು ಭೂ ಮಾರ್ಗಗಳಿದ್ದವು. ಇದು ಹೇರು ಚಕ್ಕಡಿ ಕುದುರೆಗಾಡಿ ಮಾರ್ಗವಾಗಿತ್ತು. ಅದು ಮುಂದೆ ಕುಂದಾಪುರ ಬಂದರಿಗೆ ಹೊರನಾಡಾಗಿದ್ದ ಶಿವಮೊಗ್ಗ, ಮೈಸೂರು, ಸೇಲಂ, ಕೋಲಾರ ಹಾಗೂ ಅನಂತಪುರ ಜಿಲ್ಲೆಗಳವರೆಗೂ ಸಂಪರ್ಕ ಕಲ್ಪಿಸುತ್ತಿತ್ತು.

ಬೈಂದೂರು ಬಂದರಿನಿಂದ ಹಿನ್ನಾಡಿಗೆ ಮಾರ್ಗ ಬೈಂದೂರು–ಶಿರೂರು ಬಂದರುಗಳಿಗೆ ಸಂಪರ್ಕ ಕಲ್ಪಿಸುವ ಮಾರ್ಗಗಳೆಂದರೆ, ಒಂದು ಶಿರೂರು ಬಟ್ಕಳ ಮಾರ್ಗವಾಗಿ ಹಿನ್ನಾಡಿಗೆ

ತಲುಪುವುದು, ಇನ್ನೊಂದು ಬೈಂದೂರು, ವಣ್ಸೆ, ಕೊಲ್ಲೂರು ಮಾರ್ಗವಾಗಿ ಹಿನ್ನಾಡಿಗೆ ಸಾಗುವುದು. ಈ ಎರಡು ಮಾರ್ಗಗಳು ಹಲವಾರು ನದಿಗಳ ಸಂಪರ್ಕದಿಂದ ಉತ್ತಮ ಭೂ–ನದಿ ಮಾರ್ಗಗಳಾಗಿವೆ.

ಕುಂದಾಪುರ ಬಂದರಿನಿಂದ ಉತ್ತಮವಾದ ಮಾರ್ಗಗಳು ಸಂಪರ್ಕವನ್ನು ಕಲ್ಪಿಸುತ್ತಿದ್ದವು. ಬಾಳೆಬರೆ ಘಾಟಿಮಾರ್ಗವು ಏಕಕಾಲದಲ್ಲಿ ಹಲವು ಚಕ್ಕಡಿಗಳನ್ನು ಹೇರುಗಳನ್ನು ಬಳಸಲು ಯೋಗ್ಯವಾಗಿತ್ತು. ಬಾಳೆಬರೆ ಘಾಟಿಯನ್ನು ದಾಟಿದರೆ ಹಿನ್ನಾಡಿಗೆ ಸುಲಭವಾಗಿ ಸಂಪರ್ಕ ಪಡೆಯಬಹುದಾಗಿತ್ತು. ಕುಂದಾಪುರ–ಆಗೊಂಬೆ ಮಾರ್ಗ ಮತ್ತು ಗಂಗೊಳ್ಳಿ–ನಾಯಕವಾಡಿ–ಮುಳ್ಳಕಟ್ಟೆ–ಆಲೂರು ಮಾರ್ಗವಾಗಿ ಸಂಪರ್ಕ ಕಲ್ಪಿಸಲಾಗುತ್ತಿತ್ತು.

ಬಾರ್ಕೂರು ಬಂದರಿನಿಂದ ಹಿನ್ನಾಡಿಗೆ ಮಾರ್ಗ ಕಾರ್ಕಳದ ಮೂಲಕ ಹಿರಿಯಡ್ಡ–ಬಂಡಸಾಲೆವರೆಗೆ ನದಿಮಾರ್ಗವಾಗಿ ಮುಂದೆ ಹೇರು ಚಕ್ಕಡಗಾಡಿ ಇತ್ಯಾದಿಗಳ ಮೂಲಕ ಘಟ್ಟಕ್ಕೆ ಸಂಪರ್ಕ ಪಡೆಯಬಹುದಿತ್ತು. ಹಾಗೆ ಕಾರ್ಕಳದಿಂದ ವರಾಂಗದ ಮೂಲಕವೂ ಹಿನ್ನಾಡಿಗೆ ಸಂಪರ್ಕ ಹೊಂದುತ್ತಿತ್ತು. ಇನ್ನೊಂದು ಮಾರ್ಗವಾಗಿ ಕಾರ್ಕಳ–ಚಿಕ್ಕಮಗಳೂರು ಶೃಂಗೇರಿ–ಆಗೂಂಬೆ–ಭಜಗೋಳ ಮಾರ್ಗವು ಇತ್ತು. ಹೀಗೆ ಹಿನ್ನಾಡಿನ ಬಹುದೂರದ ಮೈಸೂರು–ಸೇಲಂವರೆಗೂ ಸಂಪರ್ಕವೂ ಸಾಧ್ಯವಾಗಿತ್ತು.

ಮಂಗಳೂರು ಬಂದರಿನಿಂದ ಹಿನ್ನಾಡಿಗೆ ಮಾರ್ಗ ಕಲ್ಪಿಸುವ ಪ್ರಮುಖ ರಸ್ತೆಗಳೆಂದರೆ ಮಂಗಳೂರು – ಹಾಸನ – ಬೆಂಗಳೂರು ಭೂ ಮಾರ್ಗಗಳಾಗಿವೆ. ಗುರುಪುರ ಮತ್ತು ನೇತ್ರಾವತಿ ನದಿಗಳು ಮಂಗಳೂರಿಗೆ ಸಂಪರ್ಕ ಕಲ್ಪಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದವು. ಮಂಗಳೂರಿನಿಂದ ಕಾಸರಗೋಡು, ನೀಲೇಶ್ವರ ಹಾಗೂ ಮಲಬಾರಿನ ಬಂದರುಗಳಿಗೆ ತಲುಪಲು ಸುಲಭದ ನೇರಮಾರ್ಗಗಳಿದ್ದವು.

**ಕಡಲ ಮಾರ್ಗಗಳು**

ಭಾರತ ಪ್ರಾಚೀನ ಕಾಲದಿಂದಲೂ ಕಡಲ ಮಾರ್ಗಗಳ ಮೂಲಕ ವ್ಯಾಪಾರ ಮತ್ತು ವಹಿವಾಟುವನ್ನು ನಡೆಸುತ್ತಿತು. ಭಾರತದ ಪೂರ್ವ ಪಶ್ಚಿಮ ಬಂದರುಗಳು ವಿದೇಶದೊಂದಿಗೆ ವ್ಯಾಪಾರ ಸಂಪರ್ಕವನ್ನು ಹೊಂದಿದ್ದವು. ಕರ್ನಾಟಕದ ಹಲವಾರು ಬಂದರುಗಳು ವ್ಯಾಪಾರದ ಕೇಂದ್ರಗಳಾಗಿದ್ದವು. ಪೂರ್ವ ಬಂದರುಗಳಿಗಿಂತ ಪಶ್ಚಿಮ ಬಂದರುಗಳು ಪಶ್ಚಿಮ ಕರಾವಳಿಯ ನಡು ಮಧ್ಯದಲ್ಲಿದುದರಿಂದ ಈ ಬಂದರುಗಳು ದೊಡ್ಡ ಪ್ರಮಾಣದ ವ್ಯಾಪಾರಕ್ಕೆ ತೆರೆದು

ಕೊಂಡಿದ್ದವು. ಗುಜರಾತಿನ ಬಂದರುಗಳು ಕೇರಳ ಮತ್ತು ಗೋವಾದ ಬಂದರುಗಳು ವ್ಯಾಪಾರದ ಕೇಂದ್ರಗಳಾಗಿದ್ದವು. ಪೂರ್ವ ಬಂದರು ನೈಸರ್ಗಿಕವಾಗಿ ಭೌಗೋಳಿಕವಾಗಿ ಬಹಳಷ್ಟು ರಕ್ಷಣಾತ್ಮಕ ಬಂದರುಗಳಾಗಿದ್ದವು. ಈ ಬಂದರುಗಳು ನೈಸರ್ಗಿಕವಾಗಿ ರಚನೆಯಾದ ಬಂದರುಗಳಾಗಿದ್ದು ಹಡಗು ನಿಲ್ಲಿಸಲು ಸಹಾಯಕವಾಗಿದ್ದವು. ಕರ್ನಾಟಕದ ಪಶ್ಚಿಮಘಟ್ಟಗಳಲ್ಲಿ ದೊರೆಯುತ್ತಿದ್ದ ಮರಗಳು ದೊಡ್ಡ ದೊಡ್ಡ ನೌಕೆಗಳನ್ನು ನಿರ್ಮಿಸಲು ಸಹಾಯಕವಾಗಿದ್ದವು. ಉಪ್ಪು ನೀರಿನಲ್ಲಿ ಹಡಗುಗಳು ಬಾಳಿಕೆಬರುವಂತೆ ಅವುಗಳಿಗೆ ಲೇಪಿಸಲು ಔಷಧಯುಕ್ತ ವನಸ್ಪತಿ ಇಲ್ಲಿ ದೊರೆಯುತ್ತಿತ್ತು.

ಕರ್ನಾಟಕದ ಕಡಲ ತೀರವು ಬಹಳ ವಿಶಿಷ್ಟವಾದದ್ದಾಗಿತ್ತು. ಈ ಬಂದರುಗಳಿಂದ ದಕ್ಷಿಣದ ಕಡೆಗೆ ಬಂದರೆ ಶ್ರೀಲಂಕಾ ತಲುಪಬಹುದಿತ್ತು. ಅದೇ ಮಾರ್ಗವಾಗಿ ಪೂರ್ವ ಬಂದರುಗಳಿಗೆ ಚೀನಾ, ಮಲಯಾ, ಸುಮಾತ್ರ ದೇಶಗಳಿಗೆ ಸಂಪರ್ಕ ಕಲ್ಪಿಸುತಿತ್ತು. ಬಂಗಾಳ, ತಮಿಳುನಾಡು ಮತ್ತು ಆಂಧ್ರಪ್ರದೇಶ ಬಂದರುಗಳಿಗೆ ಸಂಪರ್ಕವನ್ನು ಕಲ್ಪಿಸಲಾಗುತ್ತಿತ್ತು. ಈ ಬಂದರುಗಳಿಂದ ಉತ್ತರಕ್ಕೆ ಸಂಚರಿಸಿದರೆ ಗುಜರಾತಿಗೆ ತಲುಪಬಹುದಿತ್ತು. ಈ ಬಂದರುಗಳಿಂದ ಪಶ್ಚಿಮಕ್ಕೆ ಹೊರಟರೆ ಪರ್ಷಿಯಾ ಹಾಗೂ ಅರಬ್‌ದೇಶಗಳಿಗೆ, ಆಫ್ರಿಕಾ ದೇಶಗಳಿಗೆ, ಮತ್ತು ಯುರೋಪಿನ ದೇಶಗಳಿಗೆ ಸಂಪರ್ಕವನ್ನು ಕಲ್ಪಸಲಾಗುತ್ತಿತ್ತು. ಈ ಬಂದರುಗಳು ವಿದೇಶೀ ವ್ಯಾಪಾರಕ್ಕೆ ಬಹಳಷ್ಟು ಸಹಕಾರಿಯಾಗಿದ್ದವು. ಇದಲ್ಲದೆ ಆಂತರಿಕ ವ್ಯಾಪಾರಕ್ಕೆ ಈ ಬಂದರುಗಳು ಸಹಾಯಕವಾಗಿದ್ವವು. ಕರ್ನಾಟಕದ ಬಂದರುಗಳಿಂದ ಸರಕುಗಳನ್ನು ಸಮುದ್ರ ಮಾರ್ಗದ ಮೂಲಕ ಉತ್ತರ ಭಾರತಕ್ಕೆ ರವಾನಿಸಲಾಗುತ್ತಿತ್ತು. ವಿದೇಶದಿಂದ ಭಾರತಕ್ಕೆ ಬರುತ್ತಿದ್ದ ಸರಕುಗಳು ನೇರವಾಗಿ ಪಶ್ಚಿಮ ಕರಾವಳಿಯ ಬಂದರುಗಳಿಗೆ ಬಂದು ನೆಲೆಗೊಳ್ಳುತ್ತಿದ್ದವು. ಈ ಬಂದರುಗಳಿಂದ ದೇಶದ ವಿವಿಧ ಭಾಗಗಳಿಗೆ ಸರಕುಗಳನ್ನು ರಸ್ತೆಗಳ ಮೂಲಕ, ನದಿಗಳ ಮೂಲಕ ಬಂದರುಗಳಿಗೆ ರಫ್ತುಮಾಡಲಾಗುತ್ತಿತ್ತು. ಬಂದರುಗಳಿಂದ ಹಡಗುಗಳಿಗೆ ಸರಕುಗಳನ್ನು ತುಂಬಿಸಿ ವಿದೇಶಗಳಿಗೆ ರಫ್ತಾಗುತ್ತಿತ್ತು. ಹೀಗೆ ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯಲ್ಲಿ ಕಡಲ ಮಾರ್ಗವು ಸಮರ್ಪಕವಾದ ಅಭಿವೃದ್ಧಿ ಹೊಂದಲು ಸಹಕಾರಿಯಾಗಿದ್ದವು.

**ಅರೇಬಿಯಾ ಮತ್ತು ಪರ್ಷಿಯಾಕ್ಕೆ ಕಡಲು ಮಾರ್ಗ**

ಅರೇಬಿಯಾ ಮತ್ತು ಪರ್ಷಿಯಾ ದೇಶಗಳು ಸಿಂಧೂ ನಾಗರೀಕತೆಯ ಕಾಲದಿಂದಲೂ ಭಾರತದೊಂದಿಗೆ ವ್ಯಾಪಾರ ಸಂಪರ್ಕವನ್ನು ಹೊಂದಿದ್ದವು. ಭಾರತಕ್ಕೆ ಅರಬ್ಬರ ಆಗಮನದ ನಂತರ ಭಾರತ ಮತ್ತು ಅರಬ್ ದೇಶಗಳ ನಡುವಿನ ವ್ಯಾಪಾರ ಮತ್ತಷ್ಟು ಬೆಳವಣಿಗೆ ಹೊಂದಿತ್ತು.

ಅರೇಬಿಯಾವು ಭಾರತದೊಂದಿಗೆ ವ್ಯಾಪಾರ ನಡೆಸಿದ ದೇಶಗಳಲ್ಲಿಯೇ ವಿಶಿಷ್ಟ ದೇಶ. ಅರೇಬಿಯಾದ ವರ್ತಕರು ಮತ್ತು ಭಾರತೀಯ ವರ್ತಕರು ವಿವಿಧ ಬಗೆಯ ಕೊಂಡುಕೊಳ್ಳುವಿಕೆಯನ್ನು ನಡೆಸಿದ್ದರು. ಅರೇಬಿಯಾವನ್ನು ತಲುಪಲು ಅರಬ್ಬೀ ಸಮುದ್ರದ ಮೂಲಕ ನೇರವಾದ ಮಾರ್ಗವಿತ್ತು. ಮಾನ್ಸೂನ್ ಮಾರುತಗಳು ಬೀಸುವ ಸಂದರ್ಭದಲ್ಲಿ ಅಥವಾ ಹಿಪ್ಪಟಸ್ ಮಾರುತಗಳು ಬೀಸುವ ಸಂದರ್ಭದಲ್ಲಿ ಹಡಗುಗಳ ಗುಂಪೇ ಕಡಲ ಮೂಲಕ ಸಾಗುತ್ತಿದ್ದವು. ಪರ್ಷಿಯಾದ ಕೊಲ್ಲಿಯಿಂದ ಭಾರತದ ಪಶ್ಚಿಮ ಕರಾವಳಿಯವರೆಗೆ ನೇರವಾದಂತಹ ಸಂಪರ್ಕವಿತ್ತು. ಕರ್ನಾಟಕದ ಕರಾವಳಿಯ ಬಂದರುಗಳಿಂದ ಹೊರಟ ಹಡಗುಗಳು ಅರಬ್ಬೀಸಮುದ್ರದಲ್ಲಿ ಸಂಚರಿಸಿ ಅಲ್ಲಿಂದ ಪರ್ಷಿಯನ್ ಕೊಲ್ಲಿ ಮತ್ತು ಕೆಂಪು ಸಮುದ್ರಗಳ ಮೂಲಕ ಪರ್ಷಿಯನ್ ದೇಶಗಳಾದ ಓಮನ್, ಪರ್ಷಿಯಾ ಕೊಲ್ಲಿಗಳ ಮೂಲಕ ಸುಲಭವಾಗಿ ತಲುಪುತ್ತಿದ್ದವು. ಅರೇಬಿಯಾದ ವರ್ತಕರು ಭಾರತದ ಸರಕುಗಳನ್ನು ಮೊದಲು ಅರಬ್ಬಿಯಾ ಪರ್ಷಿಯಾಗಳಿಗೆ ತಲುಪಿಸಿ ಮುಂದೆ ಭೂ ಮಾರ್ಗವಾಗಿ ರೋಮ್–ಗ್ರೀಕ್‌ಗಳಿಗೆ ತಲುಪಿಸುತ್ತಿದ್ದರು. ಕಾರವಾರ, ಹೊನ್ನಾವರ, ಕುಂದಾಪುರ, ಬಾರ್ಕೂರು ಮತ್ತು ಮಂಗಳೂರುಗಳ ಮೂಲಕ ಅರಬ್‌ದೇಶಗಳಿಗೆ ನೇರವಾದ ಕಡಲು ಮಾರ್ಗಗಳಿದ್ದವು.[16]

### ಶ್ರೀಲಂಕಾಕ್ಕೆ ಕಡಲು ಮಾರ್ಗ

ಭಾರತ ಮತ್ತು ಶ್ರೀಲಂಕಾದ ಅಥವಾ ಸಿಲೋನಿನ ನಡುವೆ ಪ್ರಾಚೀನ ಕಾಲದಿಂದಲೂ ವ್ಯಾಪಾರ ವಾಣಿಜ್ಯ ಮತ್ತು ರಾಜಕೀಯ ಸಂಚಾರಗಳು ಏರ್ಪಟ್ಟಿದ್ದವು. ಶ್ರೀಲಂಕಾವು ಭಾರತದ ಒಂದು ಅವಿಭಾಜ್ಯ ರಾಷ್ಟ್ರವೇ ಆಗಿತ್ತು. ಕರ್ನಾಟಕದ ಮಲಬಾರಿನ ತೀರಗಳ ಮೂಲಕ ಶ್ರೀಲಂಕಾಕ್ಕೆ ನೇರವಾದ ಸಂಪರ್ಕವಿತ್ತು. ಕರ್ನಾಟಕದ ಬಂದರುಗಳಿಂದ ಕನ್ಯಾಕುಮಾರಿಗೆ ತೆರಳಿ ಅಲ್ಲಿಂದ ನೇರವಾಗಿ ಶ್ರೀಲಂಕಾಕ್ಕೆ ಹೋಗಬಹುದಿತ್ತು.

### ಚೀನಾ ಮತ್ತು ಸುಮಾತ್ರ ದೇಶಗಳಿಗೆ ಕಡಲು ಮಾರ್ಗ

ಭಾರತ ಪ್ರಾಚೀನ ಕಾಲದಿಂದಲೂ ಚೀನಾ ಮಲಯಾ ದೇಶಗಳೊಂದಿಗೆ ವ್ಯಾಪಾರ ಸಂಪರ್ಕವನ್ನು ಹೊಂದಿತ್ತು. ಕರ್ನಾಟಕದ ಪಶ್ಚಿಮ ಕರಾವಳಿಯಿಂದ ಹೋಗುವ ಹಡಗುಗಳಿಗೆ ಶ್ರೀಲಂಕಾ ಮತ್ತು ಭಾರತದ ನಡುವಿನ ಜಲಸಂಧಿ ಮಾರ್ಗವು ಉತ್ತಮವಾದ ಮಾರ್ಗವಾಗಿತ್ತು. ಪಶ್ಚಿಮ ಕರಾವಳಿಯಿಂದ ಹೊರಡುವ ಎಲ್ಲಾ ಹಡಗುಗಳು ಪೂರ್ವ ಕರಾವಳಿಗೆ ಹೋಗುತ್ತಿದ್ದವು. ಪೂರ್ವ ಕರಾವಳಿಯ ಪ್ರಮುಖ ಬಂದರುಗಳಾದ ಅರಿಕಮೇಡು ಮತ್ತು ಕಾವೇರಿ ಪಟ್ಟಂಗಳನ್ನು ದಾಟಿ ನಂತರ ಚೀನಾ ಮಲಯಾ ಸುಮಾತ್ರ ದೇಶಗಳಿಗೆ ಹಡಗುಗಳು ಸಂಚರಿಸುತ್ತಿದ್ದವು

ವ್ಯಾಪಾರಿಗಳು ತಮ್ಮ ಹಡಗುಗಳನ್ನು ಅನುಕೂಲತೆಗೆ ಹಾಗೂ ಗಾಳಿಗೆ ತಕ್ಕಂತೆ ಹಡಗುಗಳನ್ನು ಹತ್ತಿರದ ಬಂದರುಗಳಿಗೆ ತಲುಪಿಸಿ ಮುಂದೆ ನಿರ್ದಿಷ್ಟವಾದ ದೇಶಗಳಿಗೆ ತಲುಪುತ್ತಿದ್ದರು. ಪೂರ್ವದ ದೇಶಗಳಿಗೆ ಹಾಗೂ ಚೀನಾಕ್ಕೆ ಹೊರಡುತ್ತಿದ್ದ ಹಡಗುಗಳು ಬರ್ಗಜ್, ಮಸೇಲಿಯಾ, ಪಲೂರಾ ಮತ್ತು ತಾಮ್ರಲಿಪ್ತಿ ಬಂದರುಗಳ ಮೂಲಕ ತಲುಪಿದ್ದರು. ನಾಗಪಟ್ಟಣ, ಮಂಗಳೂರು, ಹೊನ್ನಾವರದವರೆಗೂ ಚೀನಾದ ವರ್ತಕರ ಹಡಗುಗಳು ಬಂದಿರುತ್ತಿದ್ದವು. ಈ ಪ್ರಮುಖ ಬಂದರುಗಳಿಂದ ಚೀನಾದೊಂದಿಗೆ ವ್ಯಾಪಾರ ನಡೆಯುತ್ತಿತ್ತು. ಆಫ್ರಿಕಾದ ಭೀಕರವಾದ ಮರಳುಗಾಡು ಈಜಿಪ್ಟ್ ಮತ್ತು ರೋಮ್ ದೇಶಗಳಿಗೆ ಸುಲಭವಾಗಿ ತಲುಪಲು ಸಾಧ್ಯವಾಗುತ್ತಿರಲಿಲ್ಲ. ಭೂ ಮಾರ್ಗವು ಈ ದೇಶಗಳಿಗೆ ತಲುಪಲು ಕಷ್ಟವಾಗಿದುದರಿಂದ ವ್ಯಾಪಾರಿಗಳು ಕಡಲ ಮಾರ್ಗದ ಮೂಲಕವೇ ಆಫ್ರಿಕಾ ದೇಶಗಳಿಗೆ ಸಂಚಾರ ಮಾಡಲಾಗುತ್ತಿತ್ತು. ಕಡಲಮಾರ್ಗ ಮತ್ತು ಭೂ ಮಾರ್ಗಗಳ ಸಹಾಯದಿಂದ ಈಜಿಪ್ಟ್ ಮತ್ತು ರೋಮ್ ದೇಶಗಳಿಗೆ ತಲುಪುತ್ತಿದ್ದರು.

ಮಾನ್ಸೂನ್ ಮಾರುತಗಳು ಕಡಲ ಮಾರ್ಗ ಪ್ರಯಾಣದಲ್ಲಿ ಪ್ರಮುಖ ಪಾತ್ರ ವಹಿಸಿದ್ದವು. ಹಿಪ್ಪಲಸ್ ಮಾರುತಗಳ ಬೀಸುವ ಕಾಲ ಮತ್ತು ದಿಕ್ಕನ್ನು ಸ್ಪಷ್ಟವಾಗಿ ಗುರ್ತಿಸಿದ ಮೇಲೆ ಯಾನ ಪ್ರಕಿಯೆ ಬಹಳಷ್ಟು ಸರಳವಾಯಿತು. ಯಾವ ತಿಂಗಳು ಹೊರಡಬೇಕು ಅದು ತೆಗೆದುಕೊಳ್ಳುವ ಸಮಯ ಕಾಲ ಹಾಗೂ ತಲುಪುವ ಸಮಯ ಎಲ್ಲವನ್ನು ಸ್ಪಷ್ಟವಾಗಿ ಗುರ್ತಿಸಲಾಗುತ್ತಿತ್ತು. ಈ ಕಾಲಗಣತೆಯ ಆಧಾರದ ಮೇಲೆ ಹಡಗುಗಳು, ಭಾರತದ ಪಶ್ಚಿಮ ಹಾಗೂ ಪೂರ್ವ ಕರಾವಳಿಯ ಮೂಲಕ ವಿವಿಧ ದೇಶಗಳಿಗೆ ವ್ಯಾಪಾರಿಗಳು ಹಡಗುಗಳ ಮೂಲಕ ಹೋಗುತ್ತಿದ್ದವು.

### 6.3 ವಿಜಯನಗರ ಕಾಲದ ಪ್ರಮುಖ ಬಂದರುಗಳು

ವಿಜಯನಗರ ಸಾಮ್ರಾಜ್ಯ ದಕ್ಷಿಣ ಭಾರತದಲ್ಲಿ ಹಿಂದೂ ಧರ್ಮ ಮತ್ತು ಸಂಸ್ಕೃತಿಯನ್ನು ರಕ್ಷಿಸುವ ಉದ್ದೇಶದಿಂದ ಸ್ಥಾಪನೆಗೊಂಡರೂ ವಿದೇಶೀ ವ್ಯಾಪಾರ ಸಾಮ್ರಾಜ್ಯದ ಆರ್ಥಿಕ ಬೆಳವಣಿಗೆಯಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸಿತ್ತು. ವಿಜಯನಗರ ಸಾಮ್ರಾಜ್ಯ ದಕ್ಷಿಣ ಭಾರತದ ಚರಿತ್ರೆಯಲ್ಲಿ ಪ್ರಮುಖಪಾತ್ರ ವಹಿಸಿದೆ. ಸಾಮ್ರಾಜ್ಯ ಅಭಿವೃದ್ಧಿ ಹೊಂದಿದಂತೆಲ್ಲ ಇಡೀ ದಕ್ಷಿಣ ಭಾರತದ ಸಣ್ಣಪುಟ್ಟ ಸಾಮ್ರಾಜ್ಯಗಳನ್ನು ವಿಲೀನಕರಿಸಿಕೊಂಡು ಒಂದು ದೊಡ್ಡ ಸಾಮ್ರಾಜ್ಯವಾಗಿ ಬೆಳೆಯಿತು. ವಿಜಯನಗರ ಅರಸರು ಕರಾವಳಿಯ ಬಂದರುಗಳನ್ನು ಅದ್ಭುತವಾದ ರೀತಿಯಲ್ಲಿ ತಮ್ಮ ಆರ್ಥಿಕ ಅಭಿವೃದ್ಧಿಗೆ ಹಾಗೂ ರಾಜ್ಯ ಸೈನ್ಯದ ಬೆಳವಣಿಗೆಗೆ

ಬಳಸಿಕೊಂಡರು. ಇವರ ಕಾಲದಲ್ಲಿ ಬಸರೂರು, ಬಾರ್ಕೂರು, ಭಟ್ಕಳ ಹೊನ್ನಾವರ ಬಂದರುಗಳು ದೊಡ್ಡ ರೀತಿಯಲ್ಲಿ ಕಡಲೋತ್ತರ ವ್ಯಾಪಾರದಲ್ಲಿ ತೊಡಗಿದ್ದವು.

ವಿಜಯನಗರ ಸಾಮ್ರಾಜ್ಯ ಅಸ್ತಿತ್ವಕ್ಕೆ ಬಂದಾಗ ದಕ್ಷಿಣ ಬಾರತದ ವಿವಿಧ ಸಾಮ್ರಾಜ್ಯಗಳಾಗಿದ್ದ ಹೊಯ್ಸಳರು, ಕದಂಬರು ಮತ್ತು ಅಲ್ಪೆಕರು ಆಡಳಿತಾತ್ಮಕವಾಗಿ ಅವನತಿ ಹೊಂದಿದ್ದರು. ವಿಜಯನಗರ ಸಾಮ್ರಾಜ್ಯ ಈ ಅವಕಾಶವನ್ನು ಸಮರ್ಪಕವಾಗಿ ಬಳಸಿಕೊಂಡು ದಕ್ಷಿಣಭಾರತದ ಪ್ರಮುಖ ಭಾಗಗಳಾದ ಭಟ್ಕಳ, ಹೊನ್ನಾವರ ಹಾಗೂ ಕುಮುಟಾ ತಾಲ್ಲೂಕಿನ ಕೆಲವು ಭೂ ಪ್ರದೇಶಗಳನ್ನು ವಶಪಡಿಸಿಕೊಂಡಿತು. ಬಾರ್ಕೂರಿನಲ್ಲಿ ದೊರೆತಿರುವ ಶಾಸನದ ಪ್ರಕಾರ ವಿಜಯನಗರದ ಅರಸ ಒಂದನೇ ಹರಿಹರನ ಕಾಲದಲ್ಲಿ ಬಾರ್ಕೂರಿನಲ್ಲಿ ಒಂದು ಕೋಟೆ ನಿರ್ಮಿಸಿದ್ದು ತಿಳಿಯುತ್ತದೆ.

ಕ್ರಿ.ಶ.1348ರ ಇಡಗುಂಜಿ ಶಾಸನ ಉಲ್ಲೇಖಿಸಿರುವ ಪ್ರಕಾರ ಮಲ್ಲೇಯ ದಂಡನಾಯಕನು ಈ ಪ್ರದೇಶದಲ್ಲಿ ಆಡಳಿತ ನಡೆಯುತ್ತಿದ್ದ ಬಗ್ಗೆ ತಿಳಿಯುತ್ತದೆ. ಜಿಕ್ಕಾಯಿ ತಾಯಿ ಕ್ರಿ.ಶ. 1346ರ ಸುಮಾರಿಗೆ ಸಂಗಮ ಸಹೋದರರಿಗೆ ತಾವಾಳುತ್ತಿದ್ದ ಉತ್ತರ ಕನ್ನಡದ ಪ್ರದೇಶವನ್ನು ಸ್ವ ಸಂತೋಷದಿಂದ ಆಡಳಿತಕ್ಕೆ ಬಿಟ್ಟುಕೊಟ್ಟಿದ್ದಳು. ಅವು ಭಟ್ಕಳ ಹಾಗೂ ಹೊನ್ನಾವರದ ಪ್ರದೇಶಗಳಾಗಿದ್ದವು. ಮಲ್ಲೇಯ ದಂಡನಾಯನು (1345–1369) ವರೆಗೆ ಬಾರ್ಕೂರು ಕೇಂದ್ರದಿಂದ ಆಡಳಿತವನ್ನು ನೋಡಿಕೊಳ್ಳುತ್ತಿದ್ದನು. ವಿಜಯನಗರ ಸಾಮ್ರಾಜ್ಯದ ಮೇಲ್ವಿಚಾರಕನಾಗಿದ್ದ ಮಾದವ ಮಂತ್ರಿ ಕ್ರಿ.ಶ.1378 ರಲ್ಲಿ ಗೋವಾವನ್ನು ಬಹುಮನಿಗಳಿಂದ ಗೆದ್ದು ಗೋವಾ, ಕಾರವಾರ, ಅಂಕೋಲಾ ಪ್ರದೇಶಗಳನ್ನು ವಿಜಯನಗರ ಸಾಮ್ರಾಜ್ಯಕ್ಕೆ ಸೇರಿಸುತ್ತಾನೆ.[17]

ವಿಜಯನಗರ ಅರಸರು ಗವರ್ನರ್‌ಗಳನ್ನು ನೇಮಿಸಿ ಹೊನ್ನಾವರ ಕೇಂದ್ರದಿಂದ ಈ ಪ್ರದೇಶಗಳ ಆಡಳಿತ ನಡೆಸಿದರು. ತುಳುನಾಡನ್ನು ಕ್ರಿ.ಶ. 1345ರಲ್ಲಿ ವಿಜಯನಗರದ ಅರಸರು ಆಕ್ರಮಿಸಿದರು. ಮುಂದೆ ಒಂದನೇ ಹರಿಹರ ಹಾಗೂ ಬುಕ್ಕರು ವಿಜಯನಗರದ ಕೈಯಿಂದ ತುಳುನಾಡು ತಪ್ಪದಂತೆ ತಮ್ಮ ಆಡಳಿತ ನಡೆಸಿದರು. ಕಾಲಕ್ಕೆ ತಕ್ಕಂತೆ ಸಾಮ, ದಂಡ, ಬೇದಗಳಿಂದ ತುಳುನಾಡು ವಿಜಯನಗರದ ಕೈಯಲ್ಲಿ ಉಳಿಯುವಂತೆ ಮುಂದಿನ ಅರಸರು ನೋಡಿಕೊಂಡರು.

ವಿಜಯನಗರ ವೈಭವಕ್ಕೆ ಹಾಗೂ ಸಮರ್ಥ ಸೈನ್ಯಕ್ಕೆ ಕರ್ನಾಟಕದ ಬಂದರುಗಳ ಕೊಡುಗೆ ಅಪೂರ್ವವಾದದ್ದು ಕಡಲೋತ್ತರ ವ್ಯಾಪಾರ ನಡೆಸದಂತೆ ಪರ್ಷಿಯಾದಿಂದ ಸೈನ್ಯಕ್ಕೆ ಬೇಕಾದ ಉತ್ತಮ ತಳಿಯ ಕುದುರೆಗಳನ್ನು ಕಡಲ ಮಾರ್ಗವಾಗಿ ತರಿಸುತ್ತಿದ್ದರು. ರಾಜ್ಯದ ವ್ಯಾಪಾರದಲ್ಲಿ

ಅರಬ್ ವರ್ತಕರು ದೊಡ್ಡ ಸಂಖ್ಯೆಯಲ್ಲಿದ್ದರು. ಬಾರ್ಕೂರು, ಭಟ್ಕಳ, ಹೊನ್ನಾವರ, ಬಂದರುಗಳ ಮೂಲಕ ವಿದೇಶದ ಉತ್ತಮ ತಳಿಯ ಕುದುರೆಗಳನ್ನು ತರಿಸಿಕೊಂಡರು. ಇದಲ್ಲದೇ ತಮ್ಮ ರಾಜ್ಯದ ಉತ್ತಮ ಬೆಳೆಗಳಾದ ಹತ್ತಿ, ಭತ್ತ, ಅಡಿಕೆ, ತೆಂಗು ಹಾಗೂ ಮಸಾಲೆ ದಿನಿಸುಗಳನ್ನು ವಿದೇಶಕ್ಕೆ ದೊಡ್ಡ ಪ್ರಮಾಣದಲ್ಲಿ ಮಾರಾಟ ಮಾಡುತ್ತಿದ್ದರು. ಇದರ ಕಾಲದಲ್ಲಿ ಹಡಗು ಕಟ್ಟುವ ಉದ್ಯಮ ಭರದಿಂದ ಬೆಳೆಯಿತು.

ಈ ಸಾಮ್ರಾಜ್ಯದ ಆಡಳಿತ ಅವಧಿಯಲ್ಲಿ ಅಭಿವೃದ್ಧಿ ಹೊಂದಿದ್ದ ಪ್ರಮುಖ ಬಂದರುಗಳ ವಿವರವನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

**ಕರ್ನಾಟಕ ಬಂದರುಗಳ ಸಾಮಾನ್ಯ ಲಕ್ಷಣಗಳು**

ಕರ್ನಾಟಕದ ಬಂದರುಗಳು ಇಡೀ ವಿಶ್ವದಲ್ಲೇ ಶ್ರೇಷ್ಠವಾದಂತಹ ವಿಶೇಷ ಲಕ್ಷಣಗಳನ್ನು ಹೊಂದಿವೆ. ಕರ್ನಾಟಕದ ಬಂದರುಗಳನ್ನು ಸಾಂಬಾರ ಪದಾರ್ಥಗಳ ಮಾರ್ಗ ಎಂದು ಕರೆಯಲಾಗುತ್ತಿತ್ತು. ವಿಶ್ವದ ಮುಖ್ಯ ಬಂದರುಗಳಿಗೆ ಕರ್ನಾಟಕದ ಬಂದರುಗಳು ನೇರ ಸಂಪರ್ಕ ಕಲ್ಪಿಸಿದ್ದವು. ಕಾರವಾರದಿಂದ ಮಂಗಳೂರಿಗೆ ಬಂದರುಗಳು ನೈಸರ್ಗಿಕವಾಗಿ ಸರಮಾಲೆಯನ್ನು ಧರಿಸಿರುವಂತೆ ಕಾಣುತ್ತಿದ್ದವು. ಈ ನೈಸರ್ಗಿಕ ಲಕ್ಷಣಗಳು, ಹಡಗುಗಳ ತಂಗುದಾಣಕ್ಕೆ ಬಹಳಷ್ಟು ಉಪಯುಕ್ತವಾಗಿದ್ದವು. ಕರ್ನಾಟಕದ ಪ್ರಮುಖ ಬಂದರುಗಳಾದ ಕಾರವಾರ, ಅಂಕೋಲಾ, ಕುಮುಟಾ, ಹೊನ್ನಾವರ, ಭಟ್ಕಳ, ಬೈಂದೂರು, ಕುಂದಾಪುರ, ಮಲ್ಪೆ, ಮಂಗಳೂರು ನೈಸರ್ಗಿಕವಾಗಿ ರಚನೆಗೊಳ್ಳಲು ಪಶ್ಚಿಮ ಘಟ್ಟಗಳು ಸಹಾಯಮಾಡಿವೆ. ಪಶ್ಚಿಮ ಘಟ್ಟಗಳು ಹಲವೆಡೆ ಕಡಲಿಗೆ ಚಾಚಿ ನಿಂತಿವೆ. ಹೀಗೆ ಕಡಲಿಗೆ ಇಳಿದಿರುವ ಪರ್ವತಗಳು ಅರ್ಧಚಂದ್ರಕೃತಿಯಲ್ಲಿ ಭಾಗಿಕೊಂಡಿವೆ. ಇದರಿಂದ ಕಡಲ ನೀರು ಒಳನುಗ್ಗಿ ಬಂದರುಗಳು ಕೊಲ್ಲಿಯೂ ಕಾರವಾಗಿವೆ. ಇವು ಕಡಲೆಡೆಯಿಂದ ಬೀಸಿ ಬರುವ ಮಾರುತಗಳನ್ನು ಶಾಂತಗೊಳಿಸುತ್ತವೆ. ಹಾಗೇ ಇದು ಗಟ್ಟಿ ಲೆಟರೈಟ್ ಮಣ್ಣಿನಿಂದ ನಿರ್ಮಿತವಾದ ತಳದಿಂದ ಕೂಡಿರುವುದರಿಂದ ಬಂದರಿನಲ್ಲಿ ನೀರಿನ ಮಟ್ಟ ಏರು–ಪೇರಾಗದೇ ಶಾಶ್ವತವಾಗಿ ಒಂದೇ ಮಟ್ಟದಲ್ಲಿ ಇರುತ್ತದೆ.[18]

ಕಡಲಲ್ಲಿ ನಿಂತಿರುವ ದ್ವೀಪಗಳು ಬಂದರಿಗೆ ಬಹುವಿಧದ ಸಹಾಯ ನೀಡುತ್ತಿವೆ. ಮುಖ್ಯವಾಗಿ ಕಡಲೆಡೆಯಿಂದ ಬೀಸಿ ಬರುವ ಮಾರುತಗಳಿಗೆ ತಡೆಯೊಡ್ಡುತ್ತವೆ. ವ್ಯಾಪಾರಿ ಹಡಗುಗಳಿಗೆ ತಂಗುದಾಣದಂತೆ ಈ ದ್ವೀಪಗಳು ಕಾರ್ಯ ನಿರ್ವಹಿಸುತ್ತವೆ. ಇಲ್ಲಿ ದೊರೆಯುವ ಸಿಹಿ ನೀರು ವ್ಯಾಪಾರಿ ಹಡಗುಗಳಿಗೆ ತುಂಬಾ ಉಪಕಾರಿಯಾಗಿವೆ. ಹಾಗೆ ಹಲವು

ಸಂದರ್ಭಗಳಲ್ಲಿ ಸರಕು ಸಂಗ್ರಹಕ್ಕೆ ಇವು ಸಹಾಯ ಮಾಡುತ್ತವೆ. ತೀರದ ಬಳಿಯಲ್ಲಿ ಕಡಲಿಗೆ ಬಾಚಿರುವ ಎತ್ತರ ಶಿಖರಗಳು ದಾರಿ ದೀಪದಂತಿದ್ದವು. ಹಲವು ಸಂದರ್ಭಗಳಲ್ಲಿ ಅವುಗಳ ತುದಿಯಲ್ಲಿ ದೀಪಗಳನ್ನು ಬೆಳಗಿಸಿ ಕಡಲಲ್ಲಿರುವ ಹಡಗುಗಳಿಗೆ ಮಾರ್ಗದರ್ಶನ ಮಾಡುತ್ತಿದ್ದರು.

ಕರಾವಳಿಯ ತೀರದ ಉದ್ದಕ್ಕೂ ಇರುವ ಬಂದರುಗಳಿಗೆ ಇನ್ನೊಂದು ಬಹುಮುಖ್ಯ ಕೊಡುಗೆಗಳೆಂದರೆ ಪಶ್ಚಿಮ ಘಟ್ಟಗಳಲ್ಲಿ ಹುಟ್ಟಿ ಕಡಲನ್ನು ಸೇರುವ ನದಿಗಳು ಈ ನದಿಗಳು ಮುಖಜ ಪ್ರದೇಶದಲ್ಲಿ ಶಾಂತವು ವಿಸ್ತಾರವೂ ಆಗಿದ್ದು ಕಡಲು ಸೇರುತ್ತವೆ ಇಲ್ಲಿ ಹಲವು ದೊಡ್ಡ ಹಡಗುಗಳನ್ನು ಏಕಕಾಲದಲ್ಲಿ ಲಂಗರು ಮಾಡಬಹುದಾಗಿತ್ತು. ಪಶ್ವಿಮ ಘಟ್ಟಗಳಲ್ಲಿ ನೈಸರ್ಗಿಕವಾಗಿ ಬೆಳೆಯುತ್ತಿದ್ದ ಮಸಾಲೆತಿನಿಸು, ಮರಮಟ್ಟು ಹಾಗೂ ಪ್ರಾಣಿ ಪಕ್ಷಿಗಳನ್ನು ಈ ನದಿಗಳ ಮೂಲಕ ದೊಡ್ಡ ದೊಡ್ಡ ದೋಣಿಗಳಲ್ಲಿ ಬಂದರಿಗೆ ಸಾಗಿಸಲು ಅನುಕೂಲವಾಗಿತ್ತು. ಹಾಗೇ ಹೊರನಾಡಿನಿಂದ ಬಂದ ಸರಕನ್ನು ಹಿನ್ನಾಡಿಗೆ ಸಾಗಿಸಲು ಈ  ನದಿ ತೊರೆಗಳು ಸಹಾಯಕ ವಾಗಿದ್ದವು. ಈ ಬಂದರು ಪಟ್ಟಣಗಳು ರಾಜಧಾನಿ ಪಟ್ಟಣ, ವ್ಯಾಪಾರಿ ಪಟ್ಟಣ ಧಾರ್ಮಿಕ ಕೇಂದ್ರ ಹಾಗೂ ಆಡಳಿತ ಕೇಂದ್ರಗಳಾಗಿದ್ದವು. ಈ ಎಲ್ಲಾ ಬಗೆಯ ಬಂದರು ಪಟ್ಟಣಗಳಲ್ಲಿ ವರ್ತಕರಿಗೆ ಅನುಕೂಲ ನೀಡುವ ಏಕಕಾಲದಲ್ಲಿ ಹಲವು ಹಡಗುಗಳನ್ನು ಲಂಗರು ಮಾಡುವ ಸ್ಥಳ ಸರಕು ಸಂಗ್ರಹಕ್ಕೆ ವಿಶಾಲವಾದ ಸ್ಥಳಗಳು ಬಂದರಿನ ಹೊರವಲಯದಲ್ಲಿ ಕೈಗಾರಿಕೆಗಳು ಮತ್ತು ಕೃಷಿ ಮಾಡುವ ವಿಶಾಲ ಗದ್ದೆಗಳಿದ್ದವು. ಈ ಎಲ್ಲಾ ಬಂದರುಗಳಿಂದ ಒಂದೇ ಸಮಯದಲ್ಲಿ ಹಡಗುಗಳು ಒಳ ಬರಲು ಹಾಗೂ ಹೊರ ಹೋಗಲು ಪ್ರತ್ಯೇಕ ಮಾರ್ಗಗಳಿದ್ದವು.

**ಕಾರವಾರ ಬಂದರು**

ಕಾರವಾರ ಬಂದರು ಪಶ್ವಿಮ ಕರಾವಳಿಯಲ್ಲಿ ಕಂಡು ಬರುವ ಪ್ರಮುಖ ಬಂದರಾಗಿದ್ದು ಇದು ಉತ್ತರ ಕನ್ನಡ ಜಿಲ್ಲೆಯಲ್ಲಿ ಕಂಡು ಬರುತ್ತದೆ. ಈ ಬಂದರು ನೈಸರ್ಗಿಕವಾಗಿ ರಚನೆಯಾಗಿದೆ. ಅಲೆಗಳಿಂದ ಮತ್ತು ಮಾರುತಗಳಿಂದ ಈ ಬಂದರು ರಕ್ಷಣೆ ಪಡೆದಿದೆ. ಕಾರವಾರ ಬಂದರು ಪ್ರಾರಂಭದಲ್ಲಿ ವಿಜಯನಗರ ಸಾಮ್ರಾಜ್ಯಕ್ಕೆ ಒಳಪಟ್ಟಿತ್ತು. ನಂತರ ಬ್ರಿಟಿಷರ ವಶವಾಗಿ ಕ್ರಿ.ಶ. 1956ರವರೆಗೆ ಇದು ಮದ್ರಾಸ್ ಪ್ರೆಸಿಡೆನ್ಸಿಗೆ ಒಳಪಟ್ಟಿತ್ತು. ನಂತರ ಕರ್ನಾಟಕದ ಪ್ರಮುಖ ಬಂದರಾಯಿತು. ಕಾರವಾರ ಬಂದರನ್ನು ಕರ್ನಾಟಕದ ಕಾಶ್ಮೀರವೆಂದು ಕರೆಯಲಾಗುತ್ತದೆ. ಈ ಬಂದರಿನ ಒಟ್ಟು ಉದ್ದ 355 ಮೀಟರ್‌ಗಳು ಇದರ ಆಳ ಸುಮಾರು ಆರರಿಂದ ಎಂಟು ಮೀಟರ್‌ಗಳು ಕಾರವಾರದ ಬಳಿಯಲ್ಲಿ ಆರಬ್ಬೀ ಸಮುದ್ರದಲ್ಲಿ ಐದು ದ್ವೀಪಗಳು ನಿಂತಿವೆ. ಇವುಗಳು ಬಂದರನ್ನು ರಕ್ಷಿಸುವ ನಿಸರ್ಗ ನಿರ್ಮಿತ ಸೈನಿಕರಂತಿವೆ. ಇವು

ಕಡಲೋತ್ತರ ವ್ಯಾಪಾರಕ್ಕೆ ತುಂಬಾ ಸಹಾಯಕವಾಗಿದೆ. ಕೊಂಕಣ ಕರಾವಳಿಯ ದಕ್ಷಿಣ ತುದಿಯಲ್ಲಿ ಗೋವಾಕ್ಕೆ ಹೊಂದಿಕೊಂಡಂತಿರುವ ಕಾರಾವಾರವು ಕರ್ನಾಟಕದ ಸರ್ವಋತು ಬಂದರುಗಳಲ್ಲಿ ಒಂದಾಗಿದೆ.[19]

**ಕಾರವಾರ ಬಂದರಿನ ಬೆಳವಣಿಗೆ**

ಕಾರವಾರ ಬಂದರು ಪ್ರಾಚೀನ ಕಾಲದಿಂದಲೂ ಜಾಗತಿಕ ವ್ಯಾಪಾರ ವಹಿವಾಟಿನಲ್ಲಿ ತೊಡಗಿದ್ದ ಬಂದರು. ಅದಕ್ಕಿರುವ ನೈಸರ್ಗಿಕ ಹಾಗೂ ಭೌಗೋಳಿಕ ಕೊಡುಗೆಗಳು ಅದನ್ನೊಂದು ಸುರಕ್ಷಿತ ನೈಸರ್ಗಿಕ ಬಂದರಾಗಿ ನಿರ್ಮಿಸಿದೆ. ಈಗಲೂ 21ನೇ ಶತಮಾನದಲ್ಲೂ ಯಾವುದೇ ಹೆಚ್ಚಿನ ಕೃತಕ ಸೌಲಭ್ಯಗಳನ್ನು ಒದಗಿಸದಿದ್ದರೂ ಅದು ತನ್ನ ಹಿಂದಿನ ಸುರಕ್ಷತೆಯನ್ನು ರಕ್ಷಿಸಿಕೊಂಡು ಬಂದಿದೆ. ಭಾರತದ ಪಶ್ಚಿಮ ಕರಾವಳಿ ಆಫ್ರಿಕಾ ಹಾಗೂ ಏಷ್ಯಾದ ಅರಬ್ ರಾಷ್ಟ್ರಗಳು ಮತ್ತು ಯುರೋಪಿನ ತೀರ ಪ್ರದೇಶದ ದೇಶಗಳೊಂದಿಗೆ ನೇರ ಸಂಪರ್ಕ ಪಡೆಯಲು ಅನುಕೂಲವಾಗಿದೆ. ಕಡಲ ಮಾರ್ಗವಾಗಿ ಮೇಲ್ಕಾಣಿಸಿದ ದೇಶಗಳಿಗೆ ಸಂಪರ್ಕಿಸಲು ಸುಲಭವಾಗಿದೆ. ಕಾರವಾರ ಬಂದರಿನ ಚರಿತ್ರೆ ಆರಂಭದ ಕಾಲಗತಿಯವರೆಗೆ ಅಂದರೆ ಕ್ರಿಸ್ತಶಕದ ಆರಂಭಕ್ಕೆ ಹೋಗುತ್ತದೆ.

ಪ್ಲಿನಿಯು ಬರೆದಿರುವ ಕೃತಿ ಪ್ರಾಕೃತಿಕ ಚರಿತ್ರೆಯಲ್ಲಿ ಉಲ್ಲೇಖಿತಗೊಂಡಿರುವ ಭಾರತದ ಕಡಲ ತೀರದ ವಿವರದಲ್ಲಿ ಕರ್ನಾಟಕದ ಕಡಲ ತೀರವೂ ಸೇರಿದೆ. ಈತನ ಪ್ರವಾಸಿ ಕಥನವು ಕನ್ನಡ ಕರಾವಳಿ ಅರಬ್ ರಾಷ್ಟ್ರಗಳೊಂದಿಗೆ ನೇರ ಸಂಪರ್ಕ ಹೊಂದಿದ್ದನ್ನು ಸ್ಪಷ್ಟಪಡಿಸುತ್ತದೆ. 'ಅರೇಬಿಯಾದಲ್ಲಿಯ ಸೈಯಾಗ್ರಸ್ ಎಂಬ ಭೂಶಿರದಿಂದ ಇಂಡಿಯಾಕ್ಕೆ ಸಾವಿರದ ಮುನ್ನೂರ ಮೂವತ್ತೈದು ಮೈಲಿ ದೂರದ ಪ್ರಯಾಣವನ್ನು ಹಿಪ್ಪಾಲಸ್ ಎಂದು ಕರೆಯಲ್ಪಡುವ ಮಾರುತದ ಸಹಾಯದಿಂದ ಸೇರಹುದಾಗಿತ್ತು.

ಟಾಲೆಮಿಯು ತನ್ನ ಭೂಗೋಳ ವಿಜ್ಞಾನದ ಕೈಪಿಡಿಯಲ್ಲಿ ಭಾರತದ ಅನೇಕ ವಿಚಾರಗಳ ಕುರಿತು ಬರೆದಿದ್ದಾನೆ. ಆತ ಪಶ್ಚಿಮ ಕರಾವಳಿಯ ಭಾಗದಲ್ಲಿ ಸಂಚರಿಸಿ ಹಲವಾರು ಬಂದರುಗಳು ವ್ಯಾಪಾರ ಕೇಂದ್ರಗಳಾಗಿವೆ ಎಂದು ವಿವರಿಸಿದ್ದಾನೆ. ಈ ಬಂದರಿನ ಭಾಗದಲ್ಲಿ ಕಡಲುಗಳ್ಳರ ಬಗ್ಗೆ ಉಲ್ಲೇಖಿಸಿದ್ದಾನೆ.[20] ದಾರಿತಪ್ಪಿ ಬಂದ ಹಡಗುಗಳು ಮತ್ತು ಬಂದರಿಗೆ ಬೆಲೆಬಾಳುವ ವಸ್ತುಗಳನ್ನು ತುಂಬಿಕೊಂಡು ಬರುತ್ತಿದ್ದ ಹಡಗುಗಳನ್ನು ದೋಚುತ್ತಿದ್ದರು. ಅದರಿಂದ ವ್ಯಾಪಾರಿಗಳು ಬಿಲ್ಲುಗಾರರ ಪಡೆಯನ್ನು ತಮ್ಮ ಬಳಿ ಕರೆದುಕೊಂಡು ಹೋಗುತ್ತಿದ್ದರು. ಕಾರವಾರ ಪ್ರದೇಶದ ಕಡಲುಗಳ್ಳರ ಬಗ್ಗೆ ಸಂಗಂ ಸಾಹಿತ್ಯದಲ್ಲೂ ಪ್ರಸ್ತಾಪವಿದೆ. ಕಾರವಾರ ಬಂದರು ಕಡಲೋತ್ತರ

ವ್ಯಾಪಾರದ ಮುಕಟಮಣಿಯಂತಿತ್ತು. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಸಂದರ್ಭದಲ್ಲಿ ಬಿಜಾಪುರ ಸುಲ್ತಾನನ ವಶದಲ್ಲಿದ್ದ ಈ ಬಂದರು ಮುಂದೆ ಗೋವಾ ವಿಜಯನಗರಕ್ಕೆ ಸೇರುತ್ತಿದ್ದಂತೆ ವಿಜಯನಗರದ ವಶವಾಗಿತ್ತು.

**ಅಂಕೋಲಾ ಬಂದರು**

ಕಾರವಾರದಿಂದ ದಕ್ಷಿಣಕ್ಕೆ ಸುಮಾರು ಮೂವತ್ತು ಕಿ.ಲೋ ಮೀಟರ್ ದೂರದಲ್ಲಿ ಅಂಕೋಲಾ ಬಂದರಿದೆ. ಅಂಕೋಲಾ ತಾಲ್ಲೂಕು ಕೇಂದ್ರವು ಕೂಡ ಹೌದು. ಕದಂಬರು ಬನವಾಸಿಯಲ್ಲಿ ನೆಲೆ ನಿಂತ ಮೇಲೆ ಅಂಕೋಲಾ ಬಂದರಿನಲ್ಲಿ ತಮ್ಮ ಪ್ರಭುತ್ವ ಸಾಧಿಸಿದರು. ನಂತರ ವಿಜಯನಗರ ಸಾಮ್ರಾಜ್ಯದ ಆಳ್ವಿಕೆಗೆ ಒಳಪಟ್ಟಿತ್ತು. ಅಂಕೋಲಾ ಕಾರವಾರದ ದಕ್ಷಿಣಕ್ಕಿದೆ. ಇದರ ಪೂರ್ವದಲ್ಲಿ ಯಲ್ಲಾಪುರ, ಶಿರ್ಶಿ ತಾಲ್ಲೂಕುಗಳಿದ್ದರೆ, ದಕ್ಷಿಣದಲ್ಲಿ ಕುಮುಟಾ ತಾಲ್ಲೂಕಿದೆ. ಪಶ್ಚಿಮದಲ್ಲಿ ಅರಬ್ಬಿ ಸಮುದ್ರ ಇದ್ದು ಪಶ್ಚಿಮ ಘಟ್ಟಗಳು ಉತ್ತರ ದಕ್ಷಿಣವಾಗಿ ಹಬ್ಬಿವೆ. ಈ ಪಶ್ಚಿಮ ಘಟ್ಟಗಳು ತಾಲ್ಲೂಕಿನಾದ್ಯಂತ ಪಸರಿಸಿದೆ. ಅಂಕೋಲಾವು ಮಳೆಗಾಗಿ ಮಾನ್ಸೂನ್ ಮಾರುತವನ್ನು ಅವಲಂಬಿಸಿದೆ. ಅಂಕೋಲಾ ಬಳಿಯ ಪಶ್ಚಿಮ ಘಟ್ಟಸಾಲಿನಲ್ಲಿ ಬೆಲೆಬಾಳುವ ಮರಗಳಾದ ಎಬೋನಿ, ಮತ್ತಿ, ದೇವದಾರು ಮುಂತಾದವುಗಳು ಮಸಾಲೆ ಸಾಮಾಗ್ರಿಗಳಾದ ಕಾಳುಮೆಣಸು, ದಾಲ್ಚಿನಿ, ಲವಂಗ ಮುಂತಾದವುಗಳು ಬೆಳೆಯುತ್ತವೆ.[21]

ಅಂಕೋಲಾ ಬಂದರು ಕಾರವಾರದಷ್ಟು ನೈಸರ್ಗಿಕ ಅನುಕೂಲತೆಯನ್ನು ಪಡೆಯದಿದ್ದರೂ ಸೀಮಿತವಾದ ಕೊಡುಗೆಗಳಿಂದ ಸಹಜ ಬಂದರಾಗಿ ರೂಪಿತಗೊಂಡಿದೆ. ಪಶ್ಚಿಮ ಘಟ್ಟಗಳಲ್ಲಿ ಹುಟ್ಟಿ ಅಂಕೋಲಾದಲ್ಲಿ ಹರಿಯುವ ನದಿಗಳೂ ಈ ಬಂದರಿಗೆ ಅನೇಕ ರೀತಿಯ ಅನುಕೂಲತೆಗಳನ್ನು ಉಂಟುಮಾಡುತ್ತವೆ. ಸದಾ ನಾಲ್ಕರಿಂದ ಆರು ಮೀಟರ್‌ನೀರನ್ನು ಹೊಂದಿರುವುದರಿಂದ ಮಧ್ಯಮ ಗಾತ್ರದ ಸರಕು ತುಂಬಿದ ಹಡಗುಗಳನ್ನು ಇಲ್ಲಿ ಲಂಗರು ಮಾಡಬಹುದಾಗಿತ್ತು. ಕಾರವಾರ ಬಂದರಿನಲ್ಲಿ ಉಂಟಾಗುತ್ತಿದ್ದ ವ್ಯಾಪಾರಿ ಹಡಗುಗಳ ಒತ್ತಡ ಕಡಿಮೆ ಮಾಡಿಕೊಳ್ಳಲು ಈ ಬಂದರು ಸಹಾಯಕವಾಗಿತ್ತು.

**ಅಂಕೋಲಾ ಬಂದರಿನ ಬೆಳವಣಿಗೆ**

ಅಂಕೋಲಾ ಬಂದರು ಪ್ರಾಚೀನ ಕಾಲದಿಂದಲೂ ಉತ್ತಮವಾದಂತಹ ಬಂದರಾಗಿ ಕಾರ್ಯನಿರ್ವಹಿಸಿದೆ. ಕದಂಬರ ರಾಜ್ಯ ಸ್ಥಾಪನೆಯ ನಂತರ ಕರ್ನಾಟಕ ಕರಾವಳಿ ಅವರ ವ್ಯಾಪಾರದ ಭಾಗವಾಗಿತ್ತು. ಕದಂಬರ ನಂತರ ಆಳಿದ ಕರ್ನಾಟಕದ ಎಲ್ಲಾ ರಾಜವಂಶಗಳು

ಅಂಕೋಲಾ ಪ್ರದೇಶವನ್ನು ತಮ್ಮ ಆಡಳಿತಕ್ಕೆ ಸೇರಿಸಿಕೊಂಡಿದ್ದರು. ಈ ಬಂದರು ವ್ಯಾಪಾರ ಮತ್ತು ವಾಣಿಜ್ಯಕ್ಕೆ ಒಳಪಟ್ಟ ಪ್ರಮುಖ ಬಂದರಾಗಿತ್ತು. ಕರ್ನಾಟಕದ ಕರಾವಳಿಯ ಪ್ರದೇಶವನ್ನು ಬಳಸಿಕೊಂಡು ಬಾದಾಮಿ ಚಾಲುಕ್ಯರು ಇಡೀ ದ್ವೀಪವನ್ನು ಗೆದ್ದರು. ಈ ಭಾಗದಲ್ಲಿ ಅರಬ್ಬರು ಪರ್ಷಿಯನ್ನರು ಮತ್ತು ಪೋರ್ಚುಗೀಸರು ಕೂಡ ತಮ್ಮ ಏಕಸಾಮ್ಯ ಸಾಧಿಸಿದ್ದರು.

ಅಂಕೋಲಾ ಬಂದರು ಜೈನಧರ್ಮದ ಪ್ರಬಲ ಕೇಂದ್ರವಾಗಿತ್ತು ಜೈನರು ವ್ಯಾಪಾರ ವ್ಯವಹಾರದಲ್ಲಿ ತೊಡಗಿದ್ದ ಜನಾಂಗವಾಗಿದ್ದು ಅಂಕೋಲೆಯ ಹತ್ತಿರದ ಹೊನ್ನೇಬೈಲಿನಲ್ಲಿ ಜೈನರ ಗುಹೆಗಳು ಸಿಕ್ಕಿವೆ. "ಜೈನ್‌ಬೀರ್" ಎಂಬುದು ಮಂಜುಗುಣಿ ಹಾಗೂ ಬೇಲೇಕೇರಿ ಹಳ್ಳಿಗಳಲ್ಲಿ ಗ್ರಾಮದೇವರಾಗಿದ್ದಾರೆ. ಇವುಗಳು ಅಂಕೋಲಾ ಪ್ರಬಲ ವ್ಯಾಪಾರಿ ಕೇಂದ್ರವಾಗಿದ್ದನ್ನು ಸೂಚಿಸುತ್ತದೆ. ಹಾಗೇ ಅಂಕೋಲಾದ ಸುತ್ತಲಿನ ಹಳ್ಳಿಗಳ ಹೆಸರುಗಳೂ ಪ್ರಾಚಿನ ಕಾಲದಲ್ಲಿ ಅಂಕೋಲಾದ ಮೂಲಕ ವ್ಯಾಪಾರ ವ್ಯವಹಾರ ನಡೆಯುತ್ತಿದ್ದುದನ್ನು ಸೂಚಿಸುತ್ತದೆ.

ವಿಜಯನಗರ ಆಡಳಿತದ ಆರಂಭದಿಂದಲೇ ಅಂಕೋಲಾ ಪ್ರಮುಖ ಬಂದರಾಗಿತ್ತು. ಅರಬ್ಬರು ಈ ಬಂದರಿನ ಮೂಲಕ ವಿಜಯನಗರದ ಅರಸರಿಗೆ ಬೇಕಿದ್ದ ಕುದುರೆ ಇತ್ಯಾದಿಗಳನ್ನು ಈ ಮಾರ್ಗವಾಗಿ ತರುತ್ತಿದ್ದರು. ಹಾಗೇ ಮುಂದೆ ಈ ಬಂದರೊಂದು ಪ್ರಮುಖ ವ್ಯಾಪಾರಿ ಸರಕುಗಳನ್ನು ಸಾಗಿಸುವ ಕೇಂದ್ರವಾಗಿ ಪರಿವರ್ತನೆ ಹೊಂದಿತು.[22]

**ಕುಮುಟಾ ಬಂದರು**

ಉತ್ತರ ಕನ್ನಡ ಜಿಲ್ಲೆಯಲ್ಲಿ ಕಂಡು ಬರುವ ಮತ್ತೊಂದು ಪ್ರಮುಖವಾದ ಬಂದರು ಇದಾಗಿದೆ. ಇದು ಭಟ್ಕಳದಿಂದ ಸುಮಾರು 58 ಕಿ.ಮೀ ದೂರದಲ್ಲಿದೆ, ಕಾರವಾರದಿಂದ ಸುಮಾರು 72.7 ಕಿ.ಮೀ ದೂರದಲ್ಲಿದೆ ಈ ಭಾಗದಲ್ಲಿ ಕೊಂಕಣಿ ರೈಲ್ವೆ ಹಾದು ಹೋಗುತ್ತದೆ. ಕುಮುಟಾ ಬಂದರು ಪ್ರಾಚೀನ ಕಾಲದಿಂದಲೂ ಕಡಲೋತ್ತರ ವ್ಯಾಪಾರದಲ್ಲಿ ಪ್ರಖ್ಯಾತವಾಗಿದ್ದ ಬಂದರು. ಇಲ್ಲಿಂದ ಸಾಗಿಸುತ್ತಿದ್ದ ಹತ್ತಿ ಮಧ್ಯಕಾಲೀನ ಯುರೋಪಿನ ಆರ್ಥಿಕತೆಯನ್ನು ರೂಪಿಸಿತ್ತು ಕುಮುಟಾದ ಉತ್ತರದಲ್ಲಿ ಅಂಕೋಲಾ ತಾಲ್ಲೂಕು ದಕ್ಷಿಣದಲ್ಲಿ ಹೊನ್ನವರ ತಾಲ್ಲೂಕು ಪೂರ್ವದಲ್ಲಿ ಶಿರ್ಶಿ ಮತ್ತು ಸಿದ್ದಾಪುರ ತಾಲ್ಲೂಕುಗಳಿವೆ. ಪಶ್ಚಿಮದಲ್ಲಿ ಅರಬ್ಬೀ ಸಮುದ್ರವಿದ್ದು ಪೂರ್ವದಲ್ಲಿ ಉತ್ತರ ದಕ್ಷಿಣವಾಗಿ ಸಹ್ಯಾದ್ರಿ ಪರ್ವತಗಳು ಹಬ್ಬಿವೆ.

ಕುಮುಟಾ ಬಂದರಿಗೆ ನಿಸರ್ಗ ನೀಡಿದ ಬಹುದೊಡ್ಡ ಕೊಡುಗೆ ಎಂದರೆ ಪಶ್ಚಿಮ ಘಟ್ಟಗಳು ಕುಮುಟಾ ಬಂದರು ಅಘನಾಶಿನಿ ನದಿಯ ಸಣ್ಣ ತೊರೆಯೊಂದು ಕಡಲು ಸೇರುವಲ್ಲಿ

ನಿರ್ಮಾಣಗೊಂಡಿದೆ[23] ಕುಮುಟಾ ಬಂದರು ಒಂದೆಡೆ ಗಟ್ಟಿ ಲ್ಯಾಟರೈಟ್ ಮಣ್ಣಿನ ಗುಡ್ಡ ಹಾಗೂ ಇನ್ನೊಂದೆಡೆ ವಿಶಾಲವಾದ ಮರಳುರಾಶಿಯ ಮಧ್ಯೆ ಇರುವುದರಿಂದ ಇಲ್ಲಿ ನೀರು ಸದಾ ಕಾಲ 5 ರಿಂದ 6 ಮೀಟರ್ ಇರುತ್ತಿತು. ಜೊತೆಯಲ್ಲಿ ತೊರೆಯೊಂದು ಬಂದು ಬಂದರಿನಲ್ಲಿ ಸೇರುತ್ತಿದ್ದರಿಂದ ಸರಕುಗಳನ್ನು ನೌಕೆಗಳ ಮೂಲಕ ಊರಿನ ಒಳಗೆ ಸಾಗಿಸಲು ಅನುಕೂಲವಾಗಿತ್ತು. ಪಶ್ಚಿಮ ಘಟ್ಟದ ಸಣ್ಣಗುಡ್ಡ ಒಂದು ಬಂದರನ್ನು ಸುತ್ತುವರಿದು ನಿಂತಿರುವುದರಿಂದ ಕಡಲೆಡೆಯಿಂದ ಬೀಸಿಬರುವ ಮಾರುತಗಳ ಹೊಡೆತದಿಂದ ರಕ್ಷಣೆ ಪಡೆಯಲು ಅನುಕೂಲವಾಗಿತ್ತು.

**ಕುಮುಟಾ ಬಂದರಿನ ಬೆಳವಣಿಗೆ**

ಶಾತವಾಹನರ ಅಳ್ವಿಕೆಯ ಕಾಲದಲ್ಲಿ ಈ ಬಂದರು ಅವರ ಆಳ್ವಿಕೆಗೆ ಒಳಪಟ್ಟಿತ್ತು. ನಂತರ ಕದಂಬರು, ರಾಷ್ಟ್ರಕೂಟರು, ವಿಜಯನಗರದ ಅರಸರು ತಮ್ಮ ಆಳ್ವಿಕೆಗೆ ಒಳಪಡಿಸಿಕೊಂಡರು. ಕದಂಬರು ಈ ಪ್ರದೇಶವನ್ನು ಆಳುವಾಗ ಕುಮುಟಾ ಬಂದರನ್ನು ವ್ಯಾಪಾರ ವಹಿವಾಟಿಗೆ ಬಳಸಿಕೊಂಡಿದ್ದರು. ಬಹುಮುಖ್ಯವಾಗಿ ಬಾದಾಮಿ ಚಾಳುಕ್ಯರು ತಮ್ಮ ಕಡಲೋತ್ತರ ವ್ಯಾಪಾರಕ್ಕೆ ಮತ್ತು ಸೈನಿಕ ಚಟುವಟಿಕೆಗಳಿಗೆ ಕುಮುಟಾ ಬಂದರನ್ನು ಬಳಸಿಕೊಂಡರು. ಚೀನಾದ ಪ್ರವಾಸಿ ಹ್ಯೂಯಾನ್‌ತ್ಸಾಂಗ್‌ನು ಬನವಾಸಿಗೆ ಬಂದ ಸಂದರ್ಭದ ವಿವರಗಳಲ್ಲಿ ಚೀನಾ ಹಾಗೂ ಕರ್ನಾಟಕದ ಸಂಬಂಧ ಕಾಣುತ್ತದೆ. ಆತ ಹೇಳುವ ಕೊಂಕಣದಲ್ಲಿ ಕುಮುಟಾವು ಸೇರಿದೆ.ದೊಡ್ಡ ಹಡಗು ಕಾಂಬೋಡಿಯ ಮೂಲಕ ಚೀನಾಕ್ಕೆ ತಲುಪಿದ್ದನ್ನು ಚೀನಾದ ದಾಖಲೆಯೊಂದು ಹೇಳುತ್ತದೆ. [24]

ಕುಮುಟಾದ ಬಳಿಯ ಅಘನಾಶಿನಿ ದಡದಲ್ಲಿ ದೀವಗಿ ಎಂಬ ಊರೊಂದಿದೆ ಇದು ಬೌದ್ಧರ ಕೇಂದ್ರವಾಗಿತ್ತು. ಇದರ ಹಿಂದಿನ ಹೆಸರು ದೀವೂಗಾಂವ್, ಇಲ್ಲೊಂದು ಬೌದ್ಧ ವಿಹಾರವು ಇತ್ತೆನ್ನುತ್ತಾರೆ. ಗೋವಾ, ಜಂದಾವರ ಕದಂಬರು, ದೇವಗಿರಿಯ ಯಾದವರು, ಹಾನಗಲ್ಲಿನ ಕದಂಬರು ಕುಮುಟಾದಲ್ಲಿ ತಮ್ಮ ಪ್ರಭುತ್ವ ಸಾಧಿಸಿದ್ದರು. ನಂತರ ವಿಜಯನಗರ ಅರಸರು ಈ ಬಂದರಿನ ಮೇಲೆ ಅಧಿಪತ್ಯ ಸಾಧಿಸಿದರು. ಕ್ರಿ.ಶ.1417ರ ವಿಜಯನಗರದ ಶಾಸನವು ವಿಜಯನಗರ ಸಾಮ್ರಾಜ್ಯದ ಸೇನಾನಾಯಕ ಹೊನ್ನಾವರ ವಾಸಿ ನಾಗಣ್ಣ ಒಡೆಯನು, ಗೇರುಸೊಪ್ಪೆಯ ಅರಸರು ಮಹಾ ಮಂಡಳೇಶ್ವರರಾಗಿ ರಾಜ್ಯಭಾರ ಮಾಡುತ್ತಿದ್ದರು. ಈ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವು ಸರ್ವತೋಮುಖವಾಗಿ ಅಭಿವೃದ್ಧಿ ಹೊಂದಿದ್ದು ವಿಜಯನಗರ

ಸಾಮ್ರಾಜ್ಯಕ್ಕೆ ಬೇಕಾಗಿದ್ದ ಸೈನ್ಯದ ಅಶ್ವಗಳನ್ನು ಈ ಬಂದರುಗಳ ಮೂಲಕವೇ ಅರಬ್ ರಾಷ್ಟ್ರಗಳಿಂದ ತರಿಸಿಕೊಳ್ಳಲಾಗುತ್ತಿತ್ತು.

**ಹೊನ್ನಾವರ ಬಂದರು**

ಕರ್ನಾಟಕದ ಕರಾವಳಿಯ ಪ್ರಮುಖ ಬಂದರುಗಳಲ್ಲಿ ಹೊನ್ನಾವರವು ಕೂಡ ಒಂದು. ಮೌರ್ಯರ ಕಾಲದಿಂದಲೂ ವ್ಯಾಪಾರ ಮತ್ತು ವಾಣಿಜ್ಯಕ್ಕೆ ಇದು ಹೆಸರುವಾಸಿಯಾಗಿತ್ತು. ಶರಾವತಿ ನದಿ ಕಡಲು ಸೇರುತ್ತಿದ್ದ ಪ್ರದೇಶದ ಸ್ವಲ್ಪ ದೂರದಲ್ಲೇ ದ್ವೀಪ ಇರುವುದರಿಂದ ಇದು ವ್ಯಾಪಾರಿ ನೌಕೆಗಳಿಗೆ ದಾರಿ ದೀಪದಂತಿತ್ತು. ಶರಾವತಿ ನದಿಯಲ್ಲಿ ಪೂರ್ವದತ್ತ ಸುಮಾರು ಮೂವತ್ತು ಕಿಲೋಮೀಟರ್ ಸರಾಗವಾಗಿ ನೌಕಾಯನ ಮಾಡಬಹುದಾಗಿರುವುದರಿಂದ ವನೋತ್ಪನ್ನ ಮತ್ತು ಇತರ ಸರಕುಗಳನ್ನು ಸುಲಭವಾಗಿ ತಂದು ವ್ಯಾಪಾರ ಮಾಡಲು ಅನುಕೂಲವಾಗಿತ್ತು ಒಳನಾಡಿನೊಂದಿಗೆ ಸಂಪರ್ಕ ಕಲ್ಪಿಸುವ ಇಷ್ಟು ಉತ್ತಮ ವ್ಯವಸ್ಥೆ ಬೇರೆ ಯಾವುದೇ ಕನ್ನಡ ನಾಡಿನ ಪಟ್ಟಣಗಳಿಗೆ ಇಲ್ಲ.

ಹೊನ್ನಾವರ ಬಂದರು ಶ್ರೀಲಂಕಾ ಹಾಗೂ ಆಫ್ರಿಕಾದ ದೇಶಗಳಿಗೆ ಸಂಪರ್ಕ ಕಲ್ಪಿಸಲು ಇದ್ದ ಉತ್ತಮ ಮಾರ್ಗವಾಗಿತ್ತು. ಬನವಾಸಿ ಬೌದ್ಧ ಕೇಂದ್ರದಿಂದ ಶ್ರೀಲಂಕಾಕ್ಕೆ ಹೋದ ಬೌದ್ಧ ಬಿಕ್ಷುಗಳು ಬಳಸಿದ್ದು ಇದೇ ಬಂದರು ಮಾರ್ಗ ಎಂದು ಹಲವು ವಿದ್ವಾಂಸರು ಸ್ಪಷ್ಟ ಪಡಿಸಿದ್ದಾರೆ. ಈ ದ್ವೀಪವು ಪ್ರಾಚೀನ ಕಾಲದಿಂದಲೂ ಕಡಲ ವ್ಯಾಪಾರಿಗಳಿಗೆ ದಾರಿ ದೀಪದಂತೆ ಸಹಕರಿಸುತ್ತಾ ಬಂದಿದೆ. ಇಲ್ಲಿರುವ ಸ್ಥಳವಕಾಶ ಮತ್ತು ನೀರು ಕಡಲಯಾನಿಗಳಿಗೆ ತುಂಬಾ ಸಹಾಯಕವಾಗಿತ್ತು. ಕೆಳದಿಯ ರಾಣಿಯ ಚೆನ್ನಮ್ಮಾಜಿಯ ಮಗ ಬಸವರಾಜನು ಇಲ್ಲೊಂದು ಕೋಟೆ ನಿರ್ಮಿಸಿ ಕಡಲೋತ್ತರ ವ್ಯಾಪಾರಕ್ಕೆ ಹಾಗೂ ಹೊನ್ನಾವರ ಬಂದರಿನ ರಕ್ಷಣೆಗೆ ಬಳಸಿಕೊಂಡನು ಅಂದಿನಿಂದ ಈ ದ್ವೀಪವು ಬಸವರಾಜ ದುರ್ಗವಾಯಿತು. ಹಿಂದೆ ಇದನ್ನು ನವಿಲುದುರ್ಗ ಎಂದು ಕರೆಯುತ್ತಿದ್ದರು.[25]

ಗೋವಾದ ಕದಂಬರು ತಮ್ಮ ಆಡಳಿತ ಅವಧಿಯಲ್ಲಿ ಕೋಟೆಯನ್ನು ನಿರ್ಮಿಸಿದ್ದರು. ಇಲ್ಲಿ ಕನಿಷ್ಠ ನಾಲ್ಕರಿಂದ ಐದು ಮೀಟರ್‌ವರೆಗೆ ನೀರು ನಿಂತಿರುತ್ತಿತ್ತು. ಆದ್ದರಿಂದ ಇಲ್ಲಿ ಸರಕು ತುಂಬಿದ ದೊಡ್ಡ ಹಡುಗುಗಳನ್ನು ಲಂಗರು ಮಾಡುವುದು ಸುಲಭವಾಗಿತ್ತು. ಕಾಸರಗೂಡು, ಹೊನ್ನಾವರ, ಕರ್ಕಿ ಹಳದೀಪುರಗಳು ವಿಸ್ತಾರ ಭೂಪ್ರದೇಶಗಳಿಂದ ಕೂಡಿದೆ. ಇಲ್ಲಿ ಸರಕುಗಳನ್ನು ಸಂಗ್ರಹಮಾಡುವುದು ಹಾಗೂ ಹಡಗುಗಳಿಗೆ ತುಂಬುವುದು ಮತ್ತು ಇಳಿಸುವುದು ಸುಲಭವಾಗಿತ್ತು.

**ಹೊನ್ನಾವರ ಬಂದರಿನ ಬೆಳವಣಿಗೆ**

ಹೊನ್ನಾವರ ಬಂದರು ಪ್ರಾಚೀನ ಶಿಲಾಯುಗ ಹಾಗೂ ನೂತನ ಶಿಲಾಯುಗ ಕಾಲದಿಂದಲೂ ಸಹ ಜನವಸತಿಯ ಕೇಂದ್ರವಾಗಿತ್ತಲ್ಲದೇ ಸಮಕಾಲೀನ ಸಂಸ್ಕೃತಿಯೊಂದಿಗೆ ಸಂಬಂಧ ಹೊಂದಿತ್ತು ಎಂಬ ವಿಷಯವನ್ನು ಅನಂದರ ಹಾಗೂ ಎಸ್.ಆರ್.ರಾವ್‌ರವರ ಸಂಶೋಧನೆಗಳು ತಿಳಿಸುತ್ತವೆ. ಶ್ರೀಲಂಕಾಕ್ಕೆ ಹೋದ ಥೇರಕ್ಕಿತ್ ಮತ್ತು ಆತನ ಅನುಯಾಯಿಗಳ ಬಳಸಿದ ಮಾರ್ಗ ಹೊನ್ನಾವರದ ಬಂದರಾಗಿತ್ತು. ಶ್ರೀಲಂಕಾದೊಂದಿಗೆ ನಡೆದ ಅನೇಕ ಪ್ರಮುಖ ಸಂಪರ್ಕಕ್ಕೆ ಹೊನ್ನಾವರ ಬಂದರು ಮಾರ್ಗವಾಗಿತ್ತು. ಅಶೋಕನ ಮಗ ಮಹೇಂದ್ರ ತಾಮ್ರಪರ್ಣಿ ಶ್ರೀಲಂಕಾಕ್ಕೆ ಕೈಗೊಂಡ ಯಾತ್ರೆಗೆ ಹೊನ್ನಾವರ ಬಂದರು ಮಾರ್ಗವಾಗಿತ್ತು.[26]

ಮೌರ್ಯರು, ಶಾತವಾಹನರ ಕಾಲದಲ್ಲಿ ರೋಮ್ ದೇಶದ ವರ್ತಕರು ಕೋಟೆಗಳನ್ನು ಕಟ್ಟಿಕೊಂಡು ವ್ಯಾಪಾರ ನಡೆಸುತ್ತಿದ್ದರು. ಹೀಗೆ ರೋಮನ್ ನಿಂದ ಬರುತ್ತಿದ್ದ ವರ್ತಕರು ಕರ್ನಾಟಕವನ್ನು ಕಡಲಮಾರ್ಗವಾಗಿ ಸಂಪರ್ಕಿಸುತ್ತಿದ್ದರು. ಆಗಲೂ ಅವರಿಗೆ ಪಶ್ಚಿಮ ಕರಾವಳಿಗೆ ಹತ್ತಿರದ ಹಾಗೂ ಸುರಕ್ಷಿತ ಮಾರ್ಗ ಹೊನ್ನಾವರ ಶಾತವಾಹನರ ಕಾಲದಲ್ಲಿ ಹೊನ್ನಾವರ ಬಂದರು ಇವರ ಅಧೀನವಾಗಿದ್ದದ್ದು ತಿಳಿಯುತ್ತದೆ. ಕದಂಬರು ಸಹಜವಾಗಿ ಹೊನ್ನಾವರ ಬಂದರನ್ನು ವ್ಯಾಪಾರ–ವ್ಯವಹಾರಕ್ಕಾಗಿ ಬಳಸಿಕೊಂಡರು. ಕ್ರಿ.ಶ.1346ರ ಶಾಸನ ಆ ಪ್ರದೇಶದ ಮೇಲೆ ಮಹಾಪ್ರಧಾನ ಮಲೆಯ ದಂಡನಾಯಕನ ಹಿಡಿತವಿತ್ತೆಂದು ಸೂಚಿಸುತ್ತದೆ. ಗೆರುಸೊಪ್ಪದಲ್ಲಿ ಪ್ರವರ್ಧಮಾನಕ್ಕೆ ಬಂದ ಅರಸರು ವಿಜಯನಗರದ ಅಧೀನತೆಯನ್ನು ಒಪ್ಪಿಕೊಂಡು ಹೊನ್ನಾವರ–ಭಟ್ಕಳದಲ್ಲಿ ತಮ್ಮ ಅಧಿಪತ್ಯವನ್ನು ಮೆರೆದರು. ವಿಜಯನಗರ ಕಾಲದ ಆರಂಭದಲ್ಲಿಯೇ ಹೊನ್ನಾವರ ಬಂದರು ಪ್ರಮುಖವಾದ ವಾಣಿಜ್ಯ ಬಂದರಾಗಿ ತೆರೆದುಕೊಂಡಿತ್ತು. ಅರಬ್, ಪರ್ಷಿಯಾ ದೇಶಗಳಿಂದ ತರುತ್ತಿದ್ದ ಉತ್ತಮ ತಳಿಯ ಕುದುರೆಗಳನ್ನು ಹೊನ್ನಾವರ ಬಂದರಿನ ಮೂಲಕವೂ ತರಿಸುತ್ತಿದ್ದರು. ಹೊನ್ನಾವರದಲ್ಲಿ ಕೇಂದ್ರ ಸ್ಥಾಪಿಸಿ ರಾಜ್ಯಪಾಲರನ್ನು ನೇಮಿಸಿ ಆಡಳಿತ ನಡೆಸಿದರು. 13ನೇ ಶತಮಾನದಲ್ಲಿ ಚೀನಾದ ವ್ಯಾಪಾರಿಗಳು ತಮ್ಮ ಹಡುಗುಗಳ ಮೂಲಕ ಕ್ವಿಲಾನ ತಲುಪಿದ ದಾಖಲೆಗಳಿವೆ. ಈ ಹಡಗುಗಳು ವ್ಯಾಪಾರಿ ಉದ್ದೇಶಗಳಿಗೆ ಹೊನ್ನಾವರ ಬಂದರನ್ನು ಸಂದರ್ಶಿಸಿದ ಸಾಧ್ಯತೆಗಳಿವೆ. ಅಪ್ಪಾದೊರೈಯವರು ಹೊನ್ನಾವರ ಬಂದರು ಚೀನಾದೊಂದಿಗೆ ವಾಣಿಜ್ಯ ಸಂಪರ್ಕ ಹೊಂದಿತ್ತು ಎಂದು ತಮ್ಮ 'ಎಕಾನಾಮಿಕಲ್ ಕಂಡಿಷನ್ ಇನ್ ಸೌತ್ ಇಂಡಿಯಾ'ದಲ್ಲಿ ವಿವರಿಸಿದ್ದಾರೆ.[27]

## ಭಟ್ಕಳ ಬಂದರು

ಉತ್ತರ ಕನ್ನಡದ ದಕ್ಷಿಣ ತುದಿಯಲ್ಲಿರುವ ತಾಲ್ಲೂಕು ಕೇಂದ್ರಪ್ರದೇಶ ಭಟ್ಕಳ. ಇಲ್ಲಿ ಭಟ್ಕಳ ನದಿ ಕಡಲು ಸ್ಥಳದಲ್ಲಿ ಬಂದರು ನಿರ್ಮಾಣವಾಗಿದ್ದು ಇದು ನೈಸರ್ಗಿಕ ಕೊಡುಗೆಗಳಿಂದ ಅತ್ಯಂತ ಶ್ರೀಮಂತವಾಗಿದೆ. ಭಟ್ಕಳ ಬಂದರು ಕರ್ನಾಟಕದ ಕರಾವಳಿಯ ಮಧ್ಯಭಾಗದಲ್ಲಿದೆ. ಈ ಬಂದರು ಮುಕ್ತ ವ್ಯಾಪಾರದ ಕೇಂದ್ರದಂತ್ತಿತ್ತು. ಇದು ಪ್ರಾಚೀನ ಕಾಲದಿಂದಲೂ ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಭಟ್ಕಳ ನದಿಯು ಕಡಲು ಸೇರುವ ಜಾಗದಲ್ಲಿ ಬಂದರು ನಿರ್ಮಾಣವಾಗಿದ್ದು ಇದರಲ್ಲಿ ಇಂದಿಗೂ ಐದರಿಂದ ಆರು ಕಿಲೋಮೀಟರ್ ಪೂರ್ವದತ್ತ ನೌಕೆಗಳನ್ನು ಮುಕ್ತವಾಗಿ ಸಾಗಿಸಬಹುದಾಗಿದೆ.

ಭಟ್ಕಳ ಬಂದರಿನ ಬಳಿ ವಿಶಾಲ ಭೂ ಭಾಗವಿದ್ದು, ಚಿಕ್ಕ ಚಿಕ್ಕ ಗುಡ್ಡಗಳಿಂದ ಕೂಡಿದೆ ಇದರೊಂದಿಗೆ ಬಂದರಿನಿಂದ ಸುಮಾರು ಐದು ಕಿ.ಮೀ ದೂರದಲ್ಲಿರುವ ನೇತ್ರಾಣಿ ದ್ವೀಪವು ಕಡಲೋತ್ತರ ವ್ಯಾಪಾರಕ್ಕೆ ಸಹಾಯಕವಾಗಿದೆ. ಇಲ್ಲಿ ದೊರೆಯುವ ಸಿಹಿ ನೀರು ಕಡಲೋತ್ತರ ವ್ಯಾಪಾರಿಗಳಿಗೆ ಉಪಯುಕ್ತವಾಗಿತ್ತು. ಸರಕುಗಳನ್ನು ಇಳಿಸಲು ಮತ್ತು ತುಂಬಲು ಹಾಗೂ ಸಂತೆಯ ವ್ಯಾಪಾರ ನಡೆಸಲು ಅನುಕೂಲಕರವಾಗಿತ್ತು. ಭಟ್ಕಳ ಬಂದರಿನ ಸಂಪರ್ಕ ಹೊಂದಿರುವ ಹಿನ್ನಾಡು ವಿಸ್ತಾರವಾಗಿದ್ದು, ಪಶ್ಚಿಮ ಘಟ್ಟಗಳ ಕೊರಕಲಿನ ಮೂಲಕ ಸಂಪರ್ಕ ಪಡೆಯುತ್ತದೆ.[28]

## ಭಟ್ಕಳ ಬಂದರಿನ ಬೆಳವಣಿಗೆ

ಕರ್ನಾಟಕದ ಬಂದರುಗಳಲ್ಲಿ ಭಟ್ಕಳ ಬಂದರು ಕರಾವಳಿಯ ಮಧ್ಯಭಾಗದಲ್ಲಿದೆ.ಅರಬ್ ರಾಷ್ಟ್ರಗಳಾದ ಅರೇಬಿಯಾ, ಪರ್ಶಿಯಾ, ಬಸ್ರಾ, ಮೆಕ್ಕಾ, ಪಿವ್ರ, ಬಾಗ್ದಾದ್ ಮುಂತಾದ ದೇಶಗಳೊಂದಿಗೆ ನೇರವಾದ ವ್ಯಾಪಾರ ಸಂಪರ್ಕ ಹೊಂದಿದ್ದರು. ಮಾನ್ಸೂನ್ ಮಾರುತದೊಂದಿಗೆ ಬರುವ ವ್ಯಾಪಾರಿ ಹಡಗುಗಳ ತಂಡ ಸಹಜವಾಗಿ ಭಟ್ಕಳದ ತೀರದೆಡೆ ಬಂದು ತಲುಪುತ್ತಿದ್ದವು. ನೇತ್ರಾಣಿ ಮತ್ತು ಭಟ್ಕಳ ಬಂದರುಗಳು ಪ್ರಾಚೀನ ಕಾಲದ ಕಡಲೋತ್ತರ ವ್ಯಾಪಾರಿಗಳಿಗೆ ಬಹು ಅಕರ್ಷಣೀಯ ಸ್ಥಳವಾಗಿತ್ತು. ಇಲ್ಲಿಂದ ಘಟ್ಟಕ್ಕೂ ಹಾಗೂ ಘಟ್ಟದಿಂದ ಬಂದರಿಗೂ ಸಲೀಸಾದ ಮಾರ್ಗವಿತ್ತು. ಈ ಮಾರ್ಗ ದೇಶದ ವಿವಿಧ ಭಾಗಗಳಿಗೆ ಸಂಪರ್ಕ ಕಲ್ಪಿಸಿತ್ತು. ವಿದೇಶಗಳಲ್ಲೂ ಬಹು ಬೇಡಿಕೆಯ ಬೆಲೆಬಾಳುವ ಮರಗಳು, ಅಕ್ಕಿ, ನವಿಲು ಮುಂತಾದವುಗಳು ಇಲ್ಲಿಂದ ಸಾಗಾಟವಾಗುತ್ತಿದ್ದವು. ಉತ್ತರ ಕನ್ನಡದಲ್ಲಿ ಆಳಿದ ಎಲ್ಲಾ ರಾಜ

ಮನೆತನಗಳ ಆಡಳಿತ ಅವಧಿಯಲ್ಲಿ ಪ್ರಮುಖ ಗಡಿ ಬಂದರಾಗಿತ್ತು. ಭಟ್ಕಳ ಬಂದರಿನ ಮೂಲಕ ಹಿನ್ನಾಡಿಗೆ ಹೋಗಲು ಸುಲಭದ ಮಾರ್ಗಗಳಿದ್ದವು.

**ಕುಂದಾಪುರ ಬಂದರು**

ಕುಂದಾಪುರ ಬಂದರು ಕರ್ನಾಟಕದ ಪ್ರಖ್ಯಾತ ವ್ಯಾಪಾರಿ ಕೇಂದ್ರಗಳಲ್ಲಿ ಒಂದು. ಕುಂದಾಪುರಕ್ಕೆ ಅತ್ಯುತ್ತಮ ಬಂದರಾಗುವ ಎಲ್ಲಾ ಲಕ್ಷಣಗಳನ್ನು ನಿಸರ್ಗವೆ ನೀಡಿದೆ. ಗಂಗಾವಳಿ ನದಿಯು ವಿಶಾಲವಾದ ಪಾತ್ರದೊಂದಿಗೆ ಕಡಲನ್ನು ಸೇರುವಲ್ಲಿ ಶಾಂತವಾಗಿದೆ. ಇದರಿಂದ ನದಿಯ ಮೂಲಕ ದೊಡ್ಡ ದೊಡ್ಡ ನೌಕೆಗಳನ್ನು ಬಂದರಿಗೆ ತರಲು ಸಾಧ್ಯವಾಗಿತ್ತು. ಕರಾವಳಿಯ ಪ್ರಮುಖ ವ್ಯಾಪಾರಿ ಕೇಂದ್ರ ಕುಂದಾಪುರ.

**ಕುಂದಾಪುರ ಬಂದರಿನ ಬೆಳವಣಿಗೆ**

ವಿಜಯನಗರದ ಅರಸರು ಕಡಲೋತ್ತರ ವ್ಯಾಪಾರವನ್ನು ಆರಂಭದಿಂದಲೇ ದೊಡ್ಡ ಪ್ರಮಾಣದಲ್ಲಿ ಆರಂಭಿಸಿದರು. ಒಂದನೇ ಬುಕ್ಕನ ಆಸ್ಥಾನದಲ್ಲಿ ಸಿಲೋನ್ ಮತ್ತಿತರ ದೇಶಗಳ ರಾಜರುಗಳು ಹಾಗೂ ಮಲಬಾರಿನ ಮುಖಂಡರುಗಳು ರಾಯಭಾರಿಗಳನ್ನು ಇಟ್ಟಿದರಲ್ಲದೇ ಹೇರಳವಾದ ಬಹುಮಾನಗಳನ್ನು ಕೊಡುಗೆಗಳನ್ನು ಕೊಟ್ಟಿದ್ದರೆಂದು ತಿಳಿಯುತ್ತದೆ. ಚೀನಾದ ಮಿಂಗ್‌ವಂಶದ ರಾಜನ ಆಸ್ಥಾನಕ್ಕೆ ಬುಕ್ಕನು ಕ್ರಿ.ಶ 1374 ರಲ್ಲಿ ರಾಯಭಾರಿಯನ್ನು ಕಳಸಿದ್ದನೆಂದು ದಾಖಲೆ ಇದೆ. ಆತನ ನಂತರ ಅಧಿಕಾರಕ್ಕೆ ಬಂದ ಎರಡನೇ ಹರಿಹರನು ಕ್ರಿ.ಶ.1404 ರವರೆಗೆ ರಾಜ್ಯವಾಳಿದನು.[29]

**ಮಂಗಳೂರು ಬಂದರು**

ಇಂದಿನ ಕರ್ನಾಟಕದ ದಕ್ಷಿಣ ತುದಿಯ ಭಾಗವಾಗಿರುವ ಮಂಗಳೂರು ಕ್ರಿಸ್ತ ಶತಕದ ಆರಂಭದಲ್ಲಿಯೇ ಜಗತ್ತಿನ ಪ್ರಮುಖ ಬಂದರುಗಳೊಂದಿಗೆ ಸಂಪರ್ಕ ಪಡೆದಿತ್ತು. ತುಳು, ಕನ್ನಡ, ಮಲಯಾಳಂ ಮತ್ತು ಕೊಂಕಣಿ ಭಾಷೆಗಳ ಜನಪದರಿಂದ ಕೂಡಿರುವ ಈ ಪಟ್ಟಣವು ಕಡಲೋತ್ತರ ವ್ಯಾಪಾರದ ಬಹುದೊಡ್ಡ ಕೀರ್ತಿ ಕೇಂದ್ರವಾಗಿತ್ತು. ಹಂಜಮಾನ್ ಎಂಬ ವ್ಯಾಪಾರಿ ಸಂಘ ಬಹಳಷ್ಟು ಪ್ರಾಮುಖ್ಯತೆಗಳಿಸಿತ್ತು. ವ್ಯಾಪಾರಕ್ಕಾಗಿ ಭಾರತಕ್ಕೆ ಬಂದ ಅರಬ್ಬರು ಸ್ಥಳೀಯ ಸ್ತ್ರೀಯರನ್ನು ವಿವಾಹವಾಗಿ 'ಬ್ಯಾರಿ' ಗಳೆಂದು ಗುರ್ತಿಸಲ್ಪಟ್ಟಿದ್ದರು.

ಕರ್ನಾಟಕದ ಪ್ರಾಚೀನ ಬಂದರು ಪಟ್ಟಣಗಳಲ್ಲಿ ಮಂಗಳೂರು ಒಂದು ಪ್ರಮುಖವಾದ ಪಟ್ಟಣವಾಗಿದೆ. ಕರ್ನಾಟಕದ ಕರಾವಳಿಯ ನೈಸರ್ಗಿಕ ಬಂದರುಗಳಲ್ಲಿ ಮಂಗಳೂರು

ಪ್ರಮುಖವಾದದ್ದು, ನೇತ್ರಾವತಿ ಹಾಗೂ ಪಾಲ್ಗುಣಿ ನದಿಗಳು ಕಡಲನ್ನು ಸೇರುವಲ್ಲಿ ಮಂಗಳೂರು ಬಂದರು ನಿರ್ಮಾಣಗೊಂಡಿದೆ.

**ಮಂಗಳೂರು ಬಂದರಿನ ಬೆಳವಣಿಗೆ**

ಮಂಗಳೂರು ಬಂದರಿನ ಕುರಿತ ಕ್ರಿಸ್ತಶಕದ ಹಿಂದಿನ ಉಲ್ಲೇಖಗಳು ಸಂಗಮ್ ಸಾಹಿತ್ಯದಲ್ಲಿ ಕಂಡು ಬರುತ್ತವೆ. ಇದೇ ಕಾಲದ ವಿದೇಶಿ ಬರಹಗಳು ಮಂಗಳೂರಿನ ಬಗ್ಗೆ ಉಲ್ಲೇಖಿಸಿದ್ದು ನೋಡ ಸಿಗುತ್ತದೆ. ತುಳುನಾಡು, ತುಳುದೇಶ ಎಂದು ಕರೆಯಲ್ಪಡುವ ಪ್ರದೇಶವು ಮಂಗಳೂರನ್ನು ಒಳಗೊಂಡಿತ್ತು. ಮಂಗಳೂರು ಬಂದರು ಪಶ್ಚಿಮದ ರಾಷ್ಟ್ರಗಳೊಂದಿಗೆ ಸಂಪರ್ಕ ಹೊಂದಲು ಅನುಕೂಲ ದಿಕ್ಕಿನಲ್ಲಿದುದ್ದರಿಂದ ಪಾಶ್ಚಾತ್ಯರು, ಅರಬ್ಬರು, ಪರ್ಷಿಯನ್ನರು ಮಂಗಳೂರು ಬಂದರಿನೊಂದಿಗೆ ವ್ಯಾಪಾರ ಸಂಬಂಧ ಹೊಂದಿದ್ದರು.

ಹೊಯ್ಸಳರು ಈ ಭಾಗದಲ್ಲಿ ಆಳ್ವಿಕೆ ಮಾಡುತ್ತಿದ್ದರು. ವಿಜಯನಗರ ಆಳುಪರು ಮತ್ತು ಹೊಯ್ಸಳರು ಏಕಕಾಲದಲ್ಲಿ ಈ ಮಂಗಳೂರನ್ನು ಆಳ್ವಿಕೆ ಮಾಡುತ್ತಿದ್ದರು. ಕ್ರಿ.ಶ.1336ರಲ್ಲಿ ವಿಜಯನಗರ ಸ್ಥಾಪನೆಯಾದ ನಂತರ ತುಳುನಾಡಿನ ಅರಸರು ಸ್ವಮನಸ್ಸಿನಿಂದ ವಿಜಯನಗರದ ಅಧಿಪತ್ಯವನ್ನು ಒಪ್ಪಿಕೊಂಡರು. ಬಾರ್ಕೂರು ಮತ್ತು ಮಂಗಳೂರುಗಳನ್ನು ವಿಂಗಡಿಸಿ ಪ್ರತ್ಯೇಕಗೊಳಿಸಿ ವಿಜಯನಗರ ಅರಸರು ಆಡಳಿತ ನಡೆಸಿದರು. ವಿಜಯನಗರ ಸಾಮ್ರಾಜ್ಯದ ರಾಜರು ಈ ಭಾಗದ ಆಡಳಿತಕ್ಕೆ ರಾಜ್ಯಪಾಲರನ್ನು ನೇಮಿಸಿ ಆಡಳಿತ ನಡೆಸುತ್ತಿದ್ದರು.[30]

ಹೀಗೆ ವಿಜಯನಗರ ಸಾಮ್ರಾಜ್ಯದ ಆಡಳಿತ ಅವಧಿಯಲ್ಲಿ ಹಲವಾರು ಬಂದರುಗಳು ರಾಜ್ಯದ ಆರ್ಥಿಕ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸಿದ್ದವು. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದ ನಂತರ ಅವರು ಈ ಭಾಗದಲ್ಲಿ ಆಡಳಿತ ನಡೆಸಲು ರಾಜ್ಯಪಾಲರನ್ನು ನೇಮಿಸಿ ಬಂದರುಗಳ ಅಭಿವೃದ್ಧಿಗೆ ದುಡಿದರು. ರಾಜ್ಯಪಾಲರು ಮತ್ತು ಅವರ ಆಡಳಿತದ ಕಾಲವನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

ತುಳುನಾಡು ಅಥವಾ ಮಂಗಳೂರು ಭಾಗವು ವಿಜಯನಗರ ಸಾಮ್ರಾಜ್ಯಕ್ಕೆ ಒಳಪಟ್ಟ ಮೇಲೆ ಈ ಭಾಗದ ಮೇಲೆ ನಿಯಂತ್ರಣ ಹೊಂದುವ ಉದ್ದೇಶದಿಂದ ವಿಜಯನಗರ ಅರಸರು ರಾಜ್ಯಪಾಲರನ್ನು ನೇಮಿಸಿ ಆಳ್ವಿಕೆ ನಡೆಸಿದರು. ಈ ರಾಜ್ಯಪಾಲರು ಈ ಭಾಗದ ಆಳ್ವಿಕೆ ಮಾಡಿಕೊಂಡು ವಿಜಯನಗರ ಸಾಮ್ರಾಜ್ಯಕ್ಕೆ ನಿಷ್ಠಾವಂತರಾಗಿದ್ದರು. ಪ್ರಮುಖವಾಗಿ ಕ್ರಿ.ಶ. 1345

ರಿಂದ ಕ್ರಿ.ಶ. 1563 ರವರೆಗೆ ಆಳ್ವಿಕೆ ಮಾಡಿದ ಮಂಗಳೂರಿನ ರಾಜ್ಯಪಾಲರ ವಿವರ ಈ ಕೆಳಕಂಡಂತಿದೆ.[31]

| | ರಾಜ್ಯಪಾಲರ ಹೆಸರು | ಆಳ್ವಿಕೆಯ ಕಾಲ |
|---|---|---|
| 1 | ಶಂಕರದೇವ ಒಡೆಯ | ಕ್ರಿ.ಶ 1345 |
| 2 | ಗೌತರಸ | ಕ್ರಿ.ಶ.1346 |
| 3 | ಮಲ್ಲಯ್ಯ-ದಂಡನಾಯಕ | ಕ್ರಿ.ಶ.1348 |
| 4 | ಹಡಪದ ಗೌತರಸ | ಕ್ರಿ.ಶ.1349 |
| 5 | ಮಲ್ಲಯ್ಯ | ಕ್ರಿ.ಶ.1353 |
| 6 | ಮದರಸ | ಕ್ರಿ.ಶ.1364 |
| 7 | ಶಂಕರದೇವ ಒಡೆಯ | ಕ್ರಿ.ಶ.1375 |
| 8 | ಫಂಡರಿ ದೇವ ಒಡೆಯ | ಕ್ರಿ.ಶ.1377 |
| 9 | ಮದರಸ | ಕ್ರಿ.ಶ.1379 |
| 10 | ಮಲ್ಲರಸ | ಕ್ರಿ.ಶ.1389 |
| 11 | ಮದರಸ | ಕ್ರಿ.ಶ.1390 |
| 12 | ಲಿಂಗರಸ | ಕ್ರಿ.ಶ.1390 |
| 13 | ಹಡಪದ ಮದರಸ | ಕ್ರಿ.ಶ.1396 |
| 14 | ನಾಗಣ್ಣ ಒಡೆಯ | ಕ್ರಿ.ಶ.1404 |
| 15 | ಭಣಪ್ಪ ಒಡೆಯ | ಕ್ರಿ.ಶ.1407 |
| 16 | ತಿಮ್ಮಣ ಒಡೆಯ | ಕ್ರಿ.ಶ.1411 |
| 17 | ಕೇಶಪ್ಪ ಒಡೆಯ | ಕ್ರಿ.ಶ.1417 |
| 18 | ಅನ್ನಪು ಒಡೆಯ | ಕ್ರಿ.ಶ.1418 |
| 19 | ತಿಮ್ಮಣ್ಣ ಒಡೆಯ | ಕ್ರಿ.ಶ.1419 |
| 20 | ದೇವರಾಯ ಒಡೆಯ | ಕ್ರಿ.ಶ.1429 |
| 21 | ಅಣ್ಣಪ್ಪ ಒಡೆಯ | ಕ್ರಿ.ಶ.1431 |
| 22 | ದೇವರಾಯ ಒಡೆಯ | ಕ್ರಿ.ಶ.1437 |
| 23 | ತ್ರಿಯಂಬಕ ಒಡೆಯ | ಕ್ರಿ.ಶ.1448 |

| | | |
|---|---|---|
| 24 | ಗೋಪಣ್ಣ ಒಡೆಯ | ಕ್ರಿ.ಶ.1451 |
| 25 | ತಿಮ್ಮಣ್ಣ ದಂಡನಾಯಕ | ಕ್ರಿ.ಶ.1456 |
| 26 | ವಿಟರಸ ಒಡೆಯ | ಕ್ರಿ.ಶ.1465 |
| 27 | ರಟ್ಟಪ್ಪ ಒಡೆಯ | ಕ್ರಿ.ಶ.1513 |
| 28 | ಕೊಂಡಪ್ಪ | ಕ್ರಿ.ಶ.1535 |
| 29 | ಸದಾಶಿವರಾಯ ನಾಯಕ | ಕ್ರಿ.ಶ.1557 |

ಹೀಗೆ ಈ ಮೇಲ್ಕಂಡ ರಾಜ್ಯಪಾಲರುಗಳು ಮಂಗಳೂರಿನಲ್ಲಿ ಆಡಳಿತವನ್ನು ನೋಡಿಕೊಂಡು ಅಲ್ಲಿನ ಶಾಂತಿ ಮತ್ತು ಸಾಮರಸ್ಯವನ್ನು ನೋಡಿಕೊಳ್ಳುತ್ತಿದ್ದರು. ವ್ಯಾಪಾರ ವಾಣಿಜ್ಯ ಅಭಿವೃದ್ಧಿಯಿಂದಾಗಿ ಇಡೀ ಮಂಗಳೂರು ಭಾಗವು ಆಧುನಿಕವಾಗಿ ಬೆಳವಣಿಗೆ ಹೊಂದತೊಡಗಿತು. ಅರಬ್ಬರು ಮತ್ತು ಪೋರ್ಚುಗೀಸರು ತಾವು ತರುತ್ತಿದ್ದ ಸರಕುಗಳಿಗೆ ಅಲ್ಲಿ ಉತ್ತಮವಾದ ಮಾರುಕಟ್ಟೆ ನಿರ್ಮಿಸಿಕೊಂಡಿದ್ದರು ಮತ್ತು ತಮಗೆ ಅಗತ್ಯವಾದ ವಸ್ತುಗಳನ್ನು ಅಲ್ಲಿ ಕೊಂಡು ಕೊಂಡು ತಮ್ಮ ದೇಶಗಳಿಗೆ ತೆರಳುತ್ತಿದ್ದರು. ಈ ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯಿಂದಾಗಿ ವಿಜಯನಗರಕ್ಕೆ ಅಪಾರವಾದಂತಹ ಸಂಪತ್ತು ಹರಿದು ಬರುತ್ತಿತ್ತು. ಬಂದರುಗಳು ಈ ಸಾಮ್ರಾಜ್ಯದ ಆಳ್ವಿಕೆಗೆ ಒಳಪಟಿದ್ದರಿಂದ ಪರ್ಷಿಯಾದಿಂದ ಬರುತ್ತಿದ್ದ ಕುದುರೆಗಳ ಮೇಲೆ ನಿಯಂತ್ರಣ ಹೊಂದಲು ಅವರಿಗೆ ಸಹಾಯಕವಾಯಿತು.

### 6.4 ವಿಜಯನಗರ ಸಾಮ್ರಾಜ್ಯದ ಪ್ರಮುಖ ನಗರಗಳ ಬೆಳವಣಿಗೆ

ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ನಗರಗಳ ಬೆಳವಣಿಗೆ ಕೂಡ ಒಂದು ಪ್ರಮುಖವಾದ ಲಕ್ಷಣವಾಗಿತ್ತು. ಸಾಮ್ರಾಜ್ಯದ ಅವಧಿಯಲ್ಲಿ ಬೆಳವಣಿಗೆ ಹೊಂದಿದ ವ್ಯಾಪಾರ ಮತ್ತು ವಾಣಿಜ್ಯವು ನಗರಗಳ ಬೆಳವಣಿಗೆಗೆ ಕಾರಣವಾಯಿತು. ಈ ಕಾಲದಲ್ಲಿ ಸ್ಥಾಪನೆಯಾದ ಕಾರ್ಖಾನೆಗಳು ಕೂಡ ನಗರಗಳ ಬೆಳವಣಿಗೆಯಲ್ಲಿ ಪ್ರಮುಖವಾದ ಪಾತ್ರವನ್ನು ನಿರ್ವಹಿಸಿದವು. ವಿಜಯನಗರ ಸಾಮ್ರಾಜ್ಯದ ಪ್ರಮುಖ ನಗರಗಳಲ್ಲಿ ಹಂಪೆಯು (ವಿಜಯನಗರ) ಕೂಡ ಒಂದಾಗಿದೆ. ಇದು ತುಂಗಭದ್ರ ನದಿಯ ದಡದ ಮೇಲೆ ನಿರ್ಮಾಣವಾಗಿತ್ತು ಮತ್ತು ಈ ನಗರದ ಸುತ್ತ ಉತ್ತಮವಾದ ಬೆಟ್ಟಗುಡ್ಡಗಳು ನಿರ್ಮಾಣವಾಗಿದ್ದವು.

ಕ್ರಿ.ಶ. ಹನ್ನೆರಡನೇ ಶತಮಾನದಿಂದಲೂ ದಕ್ಷಿಣ ಭಾರತದಲ್ಲಿ ನಗರೀಕರಣ ಪ್ರಕ್ರಿಯೆ ಪ್ರಗತಿಯನ್ನು ಹೊಂದುತ್ತಿರುವ ಬಗ್ಗೆ ಸ್ಪಷ್ಟ ಮಾಹಿತಿಗಳಿವೆ. ಈ ನಗರೀಕರಣ ಪ್ರಕ್ರಿಯೆ ಹೊಸ ನಗರಗಳ ಹುಟ್ಟು ಹಾಗೂ ನಗರಗಳ ಬೆಳವಣಿಗೆಯಲ್ಲಿ ಕಾಣುತ್ತೇವೆ. ನಗರ ಬೆಳವಣಿಗೆ

ಎಂಬುದು ಎರಡು ರೀತಿಯಲ್ಲಿತ್ತು. ನಗರ ಕೇಂದ್ರಗಳ ಹೆಚ್ಚಳ ಮತ್ತು ನಗರಗಳ ವಿಸ್ತಾರ. ಈ ಪ್ರಕ್ರಿಯೆಗಳಿಗೆ, ಭೌಗೋಳಿಕ, ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಅಂಶಗಳು ಅನುಕೂಲಕರವಾಗಿದ್ದವು. ಇದೇ ಸಂದರ್ಭದಲ್ಲಿ ಅನೇಕ ಹಳೆಯ ಕೇಂದ್ರಗಳು ಶತಮಾನಗಳಿಂದಲೂ ಅವನತಿ ಹೊಂದದೆ ಹಾಗೆಯೇ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ಬಂದವು. ಹೀಗೆ ನಗರ ಬೆಳವಣಿಗೆಯನ್ನು ಗುರ್ತಿಸುವಂತಹ ಮೂರು ಅಂಶಗಳನ್ನು ಗಮನದಲ್ಲಿಟ್ಟು ಕೊಳ್ಳಬೇಕಾಗುತ್ತದೆ. ದಖನ್ ಪಯಾರ್ಯ ದ್ವೀಪ ಅಂತರರಾಷ್ಟ್ರೀಯ ಸಮುದ್ರ ಮಾರ್ಗದಲ್ಲಿದ್ದು ನಗರ ಕೇಂದ್ರಗಳು ಬೆಳೆಯುವುದಕ್ಕೆ ಕಾರಣವಾಯಿತು. ಪೂರ್ವ ಹಾಗೂ ಪಶ್ಚಿಮ ತೀರ ಹೊರ ಪ್ರಪಂಚದೊಡನೆ ವ್ಯಾಪಾರ ಸಂಬಂಧವನ್ನು ಹೊಂದಿದ್ದು ನಗರ ಕೇಂದ್ರಗಳು ಹುಟ್ಟಿಕೊಳ್ಳಲು ಸಾಧ್ಯವಾಯಿತು. ರಾಜ್ಯಗಳು ಉದಯಿಸಿ ಬೆಳೆದಂತೆ ಅನೇಕ ರಾಜಧಾನಿಗಳಲ್ಲೂ ಆಡಳಿತ ಕೇಂದ್ರಗಳು ಬೆಳೆದವು. ಸಾಮ್ರಾಜ್ಯಗಳು ಉದಯಿಸಿದಂತೆ ನಗರೀಕರಣ ಪ್ರಕ್ರಿಯೆ ಹೆಚ್ಚು ಪುಷ್ಟಿಯನ್ನು ಪಡೆಯಿತು. ಇದರಲ್ಲಿ ದೇವಾಲಯ ಹಾಗೂ ಮಠಗಳ ಪಾತ್ರವನ್ನು ಕಾಣುತ್ತೇವೆ.[32]

ಕ್ರಿ.ಶ. 12ನೇ ಶತಮಾನದಲ್ಲಿ ಚೋಳ, ಹೊಯ್ಸಳ ಸಾಮ್ರಾಜ್ಯ ಕಾಲದಲ್ಲಿ ನಗರ ಕೇಂದ್ರಗಳು ವೃದ್ಧಿಸಿದವು. ಹಾಗೆಯೇ ಮುಂದುವರಿದು 14ನೇ ಶತಮಾನದಲ್ಲಿ ವಿಜಯನಗರ ಸಾಮ್ರಾಜ್ಯ ಕಾಲದಲ್ಲಿ ನಗರೀಕರಣ ಪ್ರಕ್ರಿಯೆ ಹೆಚ್ಚು ಪ್ರಬಲವಾಯಿತು. ವಾಣಿಜ್ಯ ಮತ್ತು ನಗರ ಜೀವನ ಹಾಗೂ ಕುಶಲಕರ್ಮಿಗಳಿಂದ ಕೂಡಿದ ಈ ವಾಸಸ್ಥಳಗಳು ಪ್ರಾಮುಖ್ಯತೆಯನ್ನು ಪಡೆದವು. ಇಂತಹ ಸನ್ನಿವೇಶದಲ್ಲಿ ವಿಜಯನಗರ ಸಾಮ್ರಾಜ್ಯ ಕಾಲವು ನಗರ ಬೆಳವಣಿಗೆಗೆ ಪ್ರೋತ್ಸಾಹದಾಯಕವಾಗಿತ್ತು. ನಗರ ಬೆಳವಣಿಗೆಗೆ ಸಂಬಂಧಿಸಿದಂತೆ ಮತ್ತೊಂದು ಆಸಕ್ತಿಯುತ ಅಂಶವೆಂದರೆ ನಗರಗಳು, ಅವುಗಳ ಸ್ವಭಾವಕ್ಕನುಗುಣವಾಗಿ ಅವುಗಳ ವಿಂಗಡಣೆ ಬೆಳೆಯುವ ಹಂತದಲ್ಲಿ ತಮ್ಮ ಸ್ವಭಾವವನ್ನು ರೂಪಿಸಿಕೊಳ್ಳುತ್ತವೆ. ನಗರ ಕೇಂದ್ರಗಳು ಒಂದಕ್ಕಿಂತ ಹೆಚ್ಚು ಕಾರ್ಯ ಚಟುವಟಿಕೆಗಳಲ್ಲಿ ತೊಡಗುತ್ತವೆ. ಕೆಲವು ಊರುಗಳು ತಮ್ಮದೇ ಆದ ವೈಶಿಷ್ಟ ಬೆಳೆಸಿಕೊಳ್ಳುವುದು ವಿಶೇಷವಾಗಿ ಕಂಡು ಬರುತ್ತದೆ.

ವಿಜಯನಗರದ ಅರಸರು ತಮ್ಮ ಆಡಳಿತ ಅವಧಿಯಲ್ಲಿ ಶಿಕ್ಷಣ ಮತ್ತು ಬ್ರಾಹ್ಮಣರ ಅಭಿವೃದ್ಧಿಗಾಗಿ ಹಲವಾರು ಅಗ್ರಹಾರಗಳನ್ನು ಪ್ರಾರಂಭಿಸಿದರು. ಈ ಎಲ್ಲಾ ಅಗ್ರಹಾರಗಳ ಹಂತ ಹಂತವಾಗಿ ಪುರಗಳಾಗಿ ಪರಿವರ್ತನೆ ಹೊಂದ ತೊಡಗಿದ್ದವು. ಅಗ್ರಹಾರಗಳ ಮತ್ತು ಪುರಗಳ ಅಭಿವೃದ್ಧಿಗೆ ಅರಸರು ಹಲವಾರು ದಾನದತ್ತಿಗಳನ್ನು ನೀಡಿದರು. ಇಂತಹ ಕೇಂದ್ರಗಳು ಮುಂದೆ

ಸುತ್ತ ಮುತ್ತಲಿನ ಗ್ರಾಮ ಸನ್ನಿವೇಶದಲ್ಲಿ ವಿಶೇಷ ಪ್ರಾಮುಖ್ಯತೆ ಪಡೆದು, ಆರ್ಥಿಕ, ಧಾರ್ಮಿಕ ಚಟುವಟಿಕೆಗಳ ರಾಜಕೀಯ ಕೇಂದ್ರಗಳಾದವು. ಇದಕ್ಕಾಗಿ ಸಾಕಷ್ಟು ಆರ್ಥಿಕ ಅನುಕೂಲಗಳನ್ನು ಕಲ್ಪಿಸಿಕೊಡಲಾಯಿತು. ಕ್ರಮೇಣ ಆ ಕೇಂದ್ರಗಳು ಪಟ್ಟಣಗಳಾಗಿ ಬೆಳೆದು ಗ್ರಾಮ ಜೀವನಕ್ಕಿಂತ ಭಿನ್ನವಾದ ಚಟುವಟಿಕೆ ಕೇಂದ್ರಗಳಾದವು.

ಪುರಗಳಾಗಿ ಬೆಳೆದ ಕೆಲವು ಕೇಂದ್ರಗಳು ವಾಣಿಜ್ಯ ಮಾರ್ಗದಲ್ಲಿದ್ದ ಸನ್ನಿವೇಶದಲ್ಲಿ ವಿಶೇಷ ಮಾರುಕಟ್ಟೆ ಬೆಳೆದ ಸಂದರ್ಭದಲ್ಲಿ ಆಯಕಟ್ಟಿನ ಜಾಗದಲ್ಲಿದ್ದು ನಗರಗಳಾಗಿ ಪರಿವರ್ತನೆ ಹೊಂದಿದ್ದವು. ಮಂಡ್ಯ ಜಿಲ್ಲೆಯಲ್ಲಿ ದೊರಕಿರುವ ಕ್ರಿ.ಶ.13 ರಿಂದ 15ನೇ ಶತಮಾನದ ಶಾಸನಗಳಲ್ಲಿ ಕೆಲವು ಗ್ರಾಮಗಳನ್ನು ಪುರಗಳನ್ನಾಗಿ ಮಾರ್ಪಡಿಸಿದ ವಿವರಗಳಿವೆ. ಆರ್ಥಿಕ ಅಂಶಗಳು ಅಥವಾ ಚಟುವಟಿಕೆಗಳು ಹೆಚ್ಚಾದಂತೆ ಹಾಗೂ ವ್ಯಾಪಾರ ವಾಣಿಜ್ಯಕ್ಕೆ ಪ್ರೋತ್ಸಾಹ ದೊರೆತಿರುವ ಮಾಹಿತಿಗಳು ಸಿಗುತ್ತವೆ. ಪಟ್ಟಣಗಳಾಗಿ ಬೆಳೆದ ಸ್ಥಳಗಳನ್ನು ಆಡಳಿತಕ್ಕಾಗಿ ಕೆಲವು ಬದಲಾವಣೆಗಳನ್ನು ಮಾಡಿದ ಉಲ್ಲೇಖವಿದೆ. ಕ್ರಿ.ಶ.1337ರ ಶಾಸನ ಬಿರುಗಹಳ್ಳಿಯನ್ನು ಪುರವನ್ನಾಗಿ ಪರಿವರ್ತಿಸಿದುದಕ್ಕಾಗಿ ತೆರಿಗೆಗಳನ್ನು ಕೊಡುವ ಬಗ್ಗೆ ನಿರ್ಬಂಧನೆಗಳನ್ನು ತಿಳಿಸುತ್ತದೆ. ಆರುವನಹಳ್ಳಿ ಶಾಸನವು ಬಾಚಪಟ್ಟವನ್ನು ಸ್ಥಾಪಿಸಿದುದರ ಬಗ್ಗೆ ತಿಳಿಸುತ್ತದೆ. ಕ್ರಿ.ಶ.1328ರ ಯಳಂದೂರು ಶಾಸನವು ಉಪೇಂದ್ರಪಟ್ಟಣ (ಮದ್ದೂರು) ವು ಪ್ರವರ್ದಮಾನಕ್ಕೆ ಬಂದಿರುವ ವಿವರವನ್ನು ಒಳಗೊಂಡಿದೆ. ಬೊಮ್ಮನಹಳ್ಳಿಯಲ್ಲಿ ಹೊಸ ಪಟ್ಟಣವನ್ನು ಕಟ್ಟಲಾಯಿತು. ಕೊಳ್ಳೇಗಾಲದ ಶಾಸನವು ಈ ಬಗ್ಗೆ ಹೆಚ್ಚು ಮಾಹಿತಿಗಳನ್ನು ನೀಡುತ್ತದೆ. ಕ್ರಿ.ಶ.1354ರಲ್ಲಿ ಕೆಂಪರಾಯಪಟ್ಟಣವು ಅಸ್ತಿತ್ವಕ್ಕೆ ಬಂದ ನಂತರ ಸಾಕಷ್ಟು ಪ್ರಮುಖವಾಯಿತು .ಕ್ರಿ.ಶ.1470ರ ಗುಬ್ಬಿಯ ಶಾಸನದಿಂದ ಸಂಪಿಕೆಯಪುರವನ್ನು ಮಹಾ ಸಾಮಂತನು ಕಟ್ಟಿಸಿ ಮಲ್ಲಿಕಾರ್ಜುನ ದೇವಾಲಯವನ್ನು ಜೀರ್ಣೋದ್ಧಾರ ಮಾಡಿದನೆಂದು ಹೇಳುತ್ತದೆ.[33]

ವಿಜಯನಗರ ಕಾಲದಲ್ಲಿ ಮಾರುಕಟ್ಟೆ ಕಾರ್ಯನಿರತವಾಗಿದ್ದು ಆರ್ಥಿಕ ಚಟುವಟಿಕೆಗಳಿಂದ ಕೂಡಿದ ಕೆಲವು ಪಟ್ಟಣಗಳ ಉಲ್ಲೇಖಗಳು ದೊರೆಯುತ್ತವೆ. ವ್ಯಾಪಾರ, ವಾಣಿಜ್ಯ, ವಸ್ತು ಉತ್ಪಾದನೆ ಮೊದಲಾದ ಆರ್ಥಿಕ ಚಟುವಟಿಕೆಗಳನ್ನು ಈ ಪಟ್ಟಣಗಳಲ್ಲಿ ಕಾಣುತ್ತೇವೆ. ಸಾಧಾರಣವಾಗಿ ಇಂತಹ ಕೇಂದ್ರಗಳು ವಾಣಿಜ್ಯ ಮಾರ್ಗಗಳ ಬಳಿ ಇದ್ದು ಇತರ ಪ್ರದೇಶಗಳೊಂದಿಗೆ ಸಂಪರ್ಕ ಹೊಂದಿದ್ದವು. ಮಾರುಕಟ್ಟೆ, ದೇವಾಲಯ, ಕುಶಲಕರ್ಮಿಗಳು ಮತ್ತಿತರ ವಿವಿಧ ಮಾರ್ಗಗಳಿಂದ ಕೂಡಿದ ಕೇಂದ್ರಗಳಾಗಿದ್ದು ಅವುಗಳ ಪ್ರಭಾವ ವಿಸ್ತೃತವಾಗಿತ್ತು. ಮಾಂಬಳ್ಳಿ ಎಂಬ ಪಟ್ಟಣವು ಮುಖ್ಯವಾದ ನಗರ ಕೇಂದ್ರವಾಗಿತ್ತು ಎಂಬ ವಿಚಾರವನ್ನು

ಯಳಂದೂರಿನ ಶಾಸನ ತಿಳಿಸುತ್ತದೆ. ಈ ಊರಿಗೆ ಹರಿಹರ ಪಟ್ಟಣವೆಂದು ಕರೆಯುತ್ತಿದ್ದರು ಹಾಗೂ ಇಲ್ಲಿ ವ್ಯಾಪಾರ ಕೆಲಸಕ್ಕಾಗಿ ಅನೇಕ ವ್ಯವಸ್ಥೆ ಮಾಡಲಾಗಿತ್ತೆಂದು ತಿಳಿದು ಬರುತ್ತದೆ. ನಾನಾದೇಶದ ವರ್ತಕರು ಮಾಂಬಳ್ಳಿಯಲ್ಲಿ ಶ್ರೀಮಂತರಾಗಿದ್ದು ದಾನ ದತ್ತಿಗಳನ್ನು ಬಿಟ್ಟುಕೊಟ್ಟರು. ಮಲೆ ರಾಜ್ಯದ ಅರಗ ನಗರವೂ ಆರ್ಥಿಕ ಚಟುವಟಿಕೆಗಳಿಗೆ ಹೆಸುರುವಾಸಿಯಾಗಿತ್ತು. ಪಶ್ಚಿಮ ಕರಾವಳಿಗೆ ವಾಣಿಜ್ಯ ಸಂಪರ್ಕ ಹೊಂದುವ ಮಾರ್ಗದಲ್ಲಿದ್ದು ಹಲವಾರು ಶತಮಾನಗಳವರೆಗೆ ಮುಖ್ಯವಾದ ನಗರ ಕೇಂದ್ರ ಎಂಬ ಅಂಶ ಶಾಸನಗಳಿಂದ ಹಾಗೂ ಇತರ ಮೂಲಗಳಿಂದ ತಿಳಿಯುತ್ತದೆ.

ಪಶ್ಚಿಮ ಕರಾವಳಿಯ ನಗರ ಕೇಂದ್ರಗಳು ಆರ್ಥಿಕ ಚಟುವಟಿಕೆಗಳಿಂದ ಪ್ರಭಾವಿತವಾಗಿದ್ದವು. ಈ ಕೇಂದ್ರಗಳಲ್ಲಿನ ವರ್ತಕರು ಅವರ ಶ್ರೇಣಿಗಳ ಮೂಲಕ ನಗರಗಳ ಬೆಳವಣಿಗೆ ಶ್ರಮಿಸಿದರು. ಪೋರ್ಚುಗೀಸರ ಆಗಮನದಿಂದ ಈ ಪಟ್ಟಣಗಳು ಹೆಚ್ಚು ಕ್ರಿಯಾ ಶೀಲವಾದವು. ಅಲ್ಲದೆ ಕೆಲವು ಕೇಂದ್ರಗಳು ರಾಜಕೀಯ, ಧಾರ್ಮಿಕ, ಚಟುವಟಿಕೆಗಳಲ್ಲೂ ನಿರತವಾಗಿದ್ದವು. ಉತ್ತರ ಕನ್ನಡ ಜಿಲ್ಲೆಯ ಅಂಕೋಲ, ಮಿರ್ಜಾನ್, ಹೊನ್ನಾವರಗಳ ಬಗ್ಗೆ ತಿಳಿಯಲು ಪೋರ್ಚುಗೀಸ್ ಆಧಾರಗಳಿವೆ. ಭಟ್ಕಳ ಮತ್ತೊಂದು ಪ್ರಸಿದ್ಧ ನಗರವಾಗಿತ್ತು. ಕರಾವಳಿಯ ಬಾರ್ಕೂರು, ಬಸರೂರು ನಗರಗಳ  ಬಗ್ಗೆಯೂ ಕೆಲವು ಮಾಹಿತಿಗಳು ಲಭ್ಯವಿದೆ. ಮಂಗಳೂರು ಅಥವಾ ಮಂಗಳಾಪುರದ ಬಗ್ಗೆ ಹಲವಾರು ಮಾಹಿತಿಗಳು ದೊರೆಯುತ್ತವೆ.[34]

ಧಾರ್ಮಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಿಂದ ಕೆಲವು ನಗರಗಳು ಪ್ರಾಮುಖ್ಯತೆಯನ್ನು ಪಡೆದವು. ಈ ಕೇಂದ್ರಗಳು ದೇವಾಲಯ, ಮಠಗಳು, ನಗರದ ಚಟುವಟಿಕೆಗಳ ಸ್ಥಾನವಾಗಿದ್ದವು. ಆಳಅರಸರು ಅವುಗಳೊಂದಿಗೆ ನಿಕಟ ಸಂಪರ್ಕಗಳನ್ನು ಹೊಂದಿದ್ದರು. ಕ್ರಿ.ಶ.1417ರ ಶಾಸನವು ತೆರಕನಾಂಬಿ ರಾಜ್ಯದ ತ್ರಿಯಂಬಕನಪುರ ಎಂಬ ಪಟ್ಟಣವು ಹರಿಹರ ರಾಯನಿಂದ ದಾನದತ್ತಿ ಪಡೆದುದರ ಬಗ್ಗೆ ಉಲ್ಲೇಖಿಸುತ್ತದೆ. ತಲಕಾಡು, ಮೇಲುಕೋಟೆ, ಕೋಲಾರ, ಬೇಲೂರು, ಕಾರ್ಕಳ, ಮೂಡಬಿದರೆ ಮುಂತಾದ ಕೆಲವೊಂದು ನಗರಗಳು ಧಾರ್ಮಿಕ ಕ್ಷೇತ್ರಗಳಾಗಿದ್ದು ಧಾರ್ಮಿಕವಾಗಿ ನಗರಗಳ ಬೆಳವಣಿಗೆಗೆ ಕಾರಣವಾಯಿತು.

ರಾಜಕೀಯ ಚಟುವಟಿಕೆಗಳ ಕೇಂದ್ರಗಳಾಗಿ ಆಡಳಿತ ಸ್ಥಾನಗಳಾಗಿ ಸೈನ್ಯದ ಬೀಡು ಅಥವಾ ಕೋಟೆಗಳಾಗಿ ಕೆಲವು ನಗರ ಕೇಂದ್ರಗಳು ಬೆಳೆದು ಬಂದಿವೆ. ತೆರೆಕನಾಂಬಿ, ಉಮ್ಮತ್ತೂರು, ತಗಡೂರು, ಮುಳಬಾಗಿಲು, ಗೆರುಸೊಪ್ಪೆ, ಸಂಗೀತಪುರ ಪ್ರಮುಖನಗರ

ಕೇಂದ್ರಗಳು ಕೋಟೆಗಳನ್ನು ನಿರ್ಮಿಸಿ ರಾಜ್ಯದ ರಕ್ಷಣೆ ಮಾಡುತ್ತಿದ್ದರು ಈ ಕೋಟೆ ನಗರಗಳು ಸಹ ಪ್ರಮುಖವಾಗಿ ಬೆಳವಣಿಗೆ ಹೊಂದಿದ್ದವು.

ನಗರ ಎಂದರೆ ನಾಗರಿಕರು ವಾಸಿಸುವ ಸ್ಥಳ ಅಥವಾ ಪ್ರದೇಶಕ್ಕೆ ನಗರ ಎಂದು ಅರ್ಥೈಸಬಹುದು. ನಗರ ಎಂದರೆ ಮುಖ್ಯ ಪಟ್ಟಣ ಅಥವಾ ಪುರ ಎಂದು ಕರೆಯಲಾಗುತ್ತದೆ. ನಗರಗಳನ್ನು ಅವುಗಳ ವ್ಯಾಪಕತೆ ಮತ್ತು ಅದರಲ್ಲಿ ವಾಸಿಸುವ ಜನಸಂಖ್ಯೆಯನ್ನು ಆಧರಿಸಿ ಆ ವಸತಿ ಪ್ರದೇಶವನ್ನು ನಗರ ಅಥವಾ ಪಟ್ಟಣ ಎಂದು ವರ್ಗೀಕರಿಸಬಹುದು. ಮತ್ತೊಂದು ವರ್ಗೀಕರಣದಂತೆ ನಗರದಲ್ಲಿ ಸುಸಂಸ್ಕೃತರು ಸಮಾಜದಲ್ಲಿ ಉನ್ನತ ಸ್ಥಾನಮಾನಗಳನ್ನು ಹೊಂದಿರುವವರು, ಆಡಳಿತಗಾರರು ಮತ್ತು ಸಮಾಜದ ಶ್ರೇಷ್ಠಿಗಳು ವಾಸಿಸುವ ಪ್ರದೇಶವನ್ನು ಜನವಸತಿ ಪ್ರದೇಶವೆಂದು ಹೇಳಬಹುದಾಗಿದೆ. ವಿಜಯನಗರ ಸಾಮ್ರಾಜ್ಯದ ವಿಜಯನಗರ ಪಟ್ಟಣವು ಪಂಪಾಕ್ಷೇತ್ರದಲ್ಲಿ ಇದ್ದ ಕಾರಣ ಮುಂದೆ ಇದುವೇ ಹಂಪೆಯಾಗಿ ಮಾರ್ಪಾಡಾಯಿತು ವಿಜಯನಗರದ ಸುತ್ತ ಏಳು ಸುತ್ತಿನ ಕೋಟೆ ಇದ್ದವೆಂದು ನಮಗೆ ಕೆಲವು ವಿದೇಶಿಯರ ದಾಖಲೆಗಳು ತಿಳಿಸುತ್ತವೆ. ಈ ಏಳು ಸುತ್ತಿನ ಕೋಟೆಯೊಳಗೆ ವಿಜಯನಗರ ಪಟ್ಟಣಕ್ಕೆ ಹೊಂದಿಕೊಂಡಿದ್ದ ಚಿಕ್ಕ ಜನ ವಸತಿಯ ಪ್ರದೇಶಗಳನ್ನು ಉಪನಗರಗಳೆಂದು ಗುರ್ತಿಸಬಹುದು. ಈ ಉಪನಗರಗಳು ಗಾತ್ರ, ವ್ಯಾಪ್ತಿ ಮತ್ತು ರಚನಾ ವಿನ್ಯಾಸದಲ್ಲಿ ನಗರಗಳಿಗಿಂತ ಚಿಕ್ಕವಾಗಿದ್ದು ಇವುಗಳನ್ನು ವಿಜಯನಗರ ಪಟ್ಟಣದ ಉಪನಗರಗಳೆಂದು ಕರೆಯಬಹುದು. ಕಮಲಾಪುರ, ಕೃಷ್ಣಪುರ, ಅಚ್ಯುತಾಪುರ, ವಿಠಲಾಪುರ, ಮಲಪನಗುಡಿ, ಆನಯ ಶಯನಗುಡಿ, ತಿರುಮಲಾದೇವಿಪಟ್ಟಣ, ವರಧಂಜಮ್ಮನ ಪಟ್ಟಣ, ವೆಂಕಾಟಪುರ, ಆನೆಗೊಂದಿ, ನಿಂಬಾಪುರ ಮತ್ತು ನಾಗಲಾಪುರ ಪ್ರಮುಖವಾದವುಗಳಾಗಿದ್ದವು.[35]

ಈ ಮೇಲ್ಕಂಡ ಉಪನಗರಗಳನ್ನು ಅವುಗಳ ಭೌಗೋಳಿಕ ವ್ಯಾಪ್ತಿಯ ಮಾನದಂಡವಾಗಿ ಮೂರು ವಲಯಗಳಾಗಿ ವಿಂಗಡಿಸಲಾಗಿತ್ತು. ಕೇಂದ್ರವಲಯ, ವ್ಯವಸಾಯವಲಯ ಮತ್ತು ಹೊರವಲಯ, ಕೇಂದ್ರವಲಯದಲ್ಲಿ ಮುಖ್ಯವಾಗಿ ರಾಜನ ವಾಸಸ್ಥಾನ, ಆಡಳಿತ ಕೇಂದ್ರ, ಮಂತ್ರಿಗಳ ವಾಸಸ್ಥಾನ ಪ್ರಮುಖ ದೇವಾಲಯಗಳು ಮತ್ತು ವಾಣಿಜ್ಯ ಚಟುವಟಿಕೆಗೆ ಸೀಮಿತವಾಗಿತ್ತೆಂದು ಹೇಳಬಹುದು. ಎರಡನೇ ವಲಯ ವ್ಯವಸಾಯ ವಲಯವಾಗಿದ್ದು ಇಲ್ಲಿ ವಿವಿಧ ಬೆಳೆಗಳನ್ನು ಬೆಳೆದು ಕೇಂದ್ರವಲಯಕ್ಕೆ ಸರಬರಾಜು ಮಾಡಲಾಗುತ್ತಿತ್ತು. ಕೇಂದ್ರವಲಯದಲ್ಲಿ ಸಾಮಾನ್ಯವಾಗಿ ಅಸ್ತಿತ್ವದಲ್ಲಿದ್ದ ಮಾರುಕಟ್ಟೆ ವಿಭಾಗಗಳನ್ನು ನಾವು ಇಂದಿಗೂ ಕಾಣಬಹುದಾಗಿದೆ. ಮೂರನೇ ವಲಯ ಹೊರವಲಯವಾಗಿದ್ದು, ಇದು ರಾಜಧಾನಿಯಿಂದ

ಅಥವಾ ಕೇಂದ್ರವಲಯದಿಂದ ಸುಮಾರು ಐದರಿಂದ ಆರು ಕಿಲೋಮೀಟರ್ ವಿಸ್ತೀರ್ಣ ಹೊಂದಿದ್ದವು ಈ ವಲಯಗಳು ಹಳ್ಳಿಗಳಿಂದ ಕೂಡಿದ್ದ ಸಣ್ಣಮಟ್ಟ ನಗರ ಭಾಗಗಳಾಗಿದ್ದು ಪ್ರಮುಖ ಕೇಂದ್ರಗಳಾಗಿದ್ದವು. ಒಂದು ಅಂದಾಜಿನ ಪ್ರಕಾರ ವಿಜಯನಗರ ಪಟ್ಟಣದ ಜನಸಂಖ್ಯೆ ಸುಮಾರು ಒಂದು ಲಕ್ಷವಿತ್ತೆಂದು ಹೇಳಬಹುದು.

ವಿಜಯನಗರ ಸಾಮ್ರಾಜ್ಯದಲ್ಲಿ ನಗರಗಳ ಬೆಳವಣಿಗೆಗೆ ಹಲವಾರು ಅಂಶಗಳು ಕಾರಣವಾಗಿದ್ದವು. ಭೌಗೋಳಿಕ ಅಂಶಗಳು, ಆಡಳಿತಾತ್ಮಕ ಅಂಶಗಳು, ಆರ್ಥಿಕ ಅಂಶಗಳು, ವಾಣಿಜ್ಯ ಅಂಶಗಳು, ಧಾರ್ಮಿಕ ಅಂಶಗಳು, ಮಿಲಿಟರಿ ಅಂಶಗಳು, ನಗರಗಳ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸಿದವು. ಈ ಅಂಶಗಳ ಪ್ರಮುಖ ವಿವರಣೆಯನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

**ಭೌಗೋಳಿಕ ಮತ್ತು ಆಡಳಿತಾತ್ಮಕ ಅಂಶಗಳು:**

ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ನಗರಗಳು ಪ್ರಮುಖವಾಗಿ ತುಂಗಭದ್ರಾ ನದಿಯ ದಡದ ಮೇಲೆ ಮತ್ತು ಕರಾವಳಿ ಭಾಗಗಳಲ್ಲಿ ಸ್ಥಾಪನೆಯಾಗಿದ್ದವು. ಪ್ರಾಚೀನ ಕಾಲದಿಂದಲೂ ಆಳ್ವಿಕೆ ಮಾಡಿದ ಹಲವಾರು ರಾಜಮನೆತನಗಳು ಸಾಮ್ರಾಜ್ಯವನ್ನು ರಾಜಧಾನಿ, ಜಿಲ್ಲೆ ಮತ್ತು ತಾಲ್ಲೂಕುಗಳಾಗಿ ವಿಂಗಡಿಸಿದ್ದಾರೆ. ವಿಜಯನಗರ ಅರಸರು ಮೊದಲು ಹೊಯ್ಸಳ ರಾಜ್ಯದಲ್ಲಿ ಸೇವೆಸಲ್ಲಿಸುತ್ತಿದ್ದರು. ನಂತರ ಇವರು ಅಧಿಕಾರಕ್ಕೆ ಬಂದಾಗ ಹೆಚ್ಚು ಕಡಿಮೆ ಅದೇ ಸಂಪ್ರದಾಯವನ್ನು ಮುಂದುವರೆದರು. ತುಂಗಾಭದ್ರ ನದಿಯು ಮೈದುಂಬಿ ಹರಿಯುತ್ತಿದ್ದು ಈ ನದಿಯು ವಿಜಯನಗರ ಸ್ಥಾಪನೆಗೆ ಕಾರಣವಾಯಿತು.

ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾದ ಹಂಪೆಯು ಆಡಳಿತದ ಪ್ರಮುಖ ಕೇಂದ್ರವಾಗಿತ್ತು. ಆಡಳಿತದ ಅಧಿಕಾರಿಗಳು, ಮಂತ್ರಿಗಳು ಇಲ್ಲಿ ನೆಲೆಸಿದ್ದರು. ಇವರೊಂದಿಗೆ ಕುಶಲ ಕರ್ಮಿಗಳ ವರ್ಗವಾದ ಬಡಗಿಗಳು, ನೇಕಾರರು, ಅಕ್ಕಸಾಲಿಗರು, ಕುಂಬಾರರು, ವ್ಯಾಪಾರಿಗಳು ಮುಂತಾದವರು ನೆಲೆಸಿದ್ದರು. ಇಲ್ಲಿ ವಾಸವಿದ್ದ ಜನರಿಗೆ ಕುಡಿಯುವ ನೀರು, ರಸ್ತೆ, ಮಾರುಕಟ್ಟೆ, ಮನೆಗಳು ಮತ್ತು ಉಳಿದೆಲ್ಲ ಮೂಲ ಸೌಕರ್ಯಗಳನ್ನು ಒದಗಿಸುವುದು ರಾಜನ ಕರ್ತವ್ಯವಾಗಿತ್ತು.[36]

**ಆರ್ಥಿಕ ಅಂಶಗಳು:**

ಹಲವಾರು ಆರ್ಥಿಕ ಅಂಶಗಳು ನಗರಗಳ ನಿರ್ಮಾಣದಲ್ಲಿ ಪ್ರಮುಖ ಪಾತ್ರ ವಹಿಸಿದ್ದವು. ಆರ್ಥಿಕ ಅಂಶಗಳಾದ ಕೃಷಿ, ವ್ಯಾಪಾರ ಮತ್ತು ವಾಣಿಜ್ಯ ಸುಂಕುಗಳು, ತೆರಿಗೆಗಳು ಹಾಗೂ ಭೂ ಕಂದಾಯ ವ್ಯವಸ್ಥೆ ರಾಜ್ಯದಲ್ಲಿ ನಗರಗಳ ನಿರ್ಮಾಣಕ್ಕೆ ಪ್ರಮುಖ ಪಾತ್ರವಹಿಸಿದ್ದವು. ಆರ್ಥಿಕ ಅಂಶಗಳು ಬೆಳವಣಿಗೆ ಹೊಂದಿದಂತೆ ಆ ಭಾಗದಲ್ಲಿ ಮಾರುಕಟ್ಟೆಗಳು ನಿರ್ಮಾಣವಾದವು. ಈ ಮಾರುಕಟ್ಟೆಗಳು ಜನರಿಗೆ ಅವಶ್ಯಕವಾಗಿದಂತಹ ಸರಕುಗಳನ್ನು ಒದಗಿಸುತ್ತಿದ್ದವು. ಈ ಕಾಲದಲ್ಲಿ ಜನರು ಚಿನ್ನ ಮತ್ತು ಬೆಳ್ಳಿಯನ್ನು ಹೆಚ್ಚಾಗಿ ಬಳಸುತ್ತಿದ್ದರು. ಇದರೊಂದಿಗೆ ಈ ಭಾಗದಲ್ಲಿ ಹಲವಾರು ಕಾರ್ಖಾನೆಗಳು ರಚನೆಯಾಗಿದ್ದವು. ಈ ಎಲ್ಲಾ ಕಾರ್ಖಾನೆಗಳು ಮುಖ್ಯವಾಗಿ ಆರ್ಥಿಕ ಬೆಳವಣಿಗೆಯೊಂದಿಗೆ ನಗರಗಳ ಬೆಳವಣಿಗೆಗೆ ಪ್ರಮುಖ ಪಾತ್ರವನ್ನು ವಹಿಸಿದ್ದವು.

**ವಾಣಿಜ್ಯ ಅಂಶಗಳು**

ವಿಜಯನಗರ ಕಾಲದಲ್ಲಿ ರೈತರು ತಾವು ಬೆಳೆದ ವಸ್ತುಗಳನ್ನು ಮಾರಾಟ ಮಾಡಲು ನಗರಗಳಿಗೆ ಧಾವಿಸುತ್ತಿದ್ದರು. ಆ ಕಾಲದಲ್ಲಿ ಹಂಪೆಯು ಮುಖ್ಯವಾದ ವಾಣಿಜ್ಯ ನಗರವಾಗಿತ್ತು. ಈ ನಗರದ ಸುತ್ತಮುತ್ತ ಯಾವುದೇ ರೀತಿಯ ನಗರಗಳು ನಿರ್ಮಾಣವಾಗಿರಲಿಲ್ಲ. ಆದರೆ ರಾಜಧಾನಿಯಿಂದ ಬಹುದೂರದಲ್ಲಿ ಹಲವಾರು ನಗರಗಳು ನಿರ್ಮಾಣವಾಗಿದ್ದವು. ಗೋವಾ, ಅಣ್ಣೀಗೇರಿ, ಬೆಳಗಾಂ, ಐಹೊಳೆ, ಬಾದಾಮಿ, ರಾಯಚೂರು, ಬಂಕಾಪುರ ಮುಂತಾದವು ರಾಜಧಾನಿಯಿಂದ ಬಹಳಷ್ಟು ದೂರದಲ್ಲಿ ನಿರ್ಮಾಣವಾಗಿದ್ದವು. ಇದರಿಂದಾಗಿ ಅತಿ ಹೆಚ್ಚು ಜನರು ರಾಜಧಾನಿಯ ಸುತ್ತಮುತ್ತ ವಾಸಿಸಲು ಪ್ರಾರಂಭಿಸಿದರು. ಮುಖ್ಯವಾಗಿ ರೈತರು ಇಲ್ಲಿ ನೆಲೆಸಿ ಭತ್ತ, ಹತ್ತಿ ಬೇಳೆಕಾಳುಗಳು ಮತ್ತು ತರಕಾರಿಗಳನ್ನು ಬೆಳೆದು ಆಂತರಿಕ ವ್ಯಾಪಾರದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.

ನಗರಗಳ ಬೆಳವಣಿಗೆಯಲ್ಲಿ ವ್ಯಾಪಾರ ಮತ್ತು ವಾಣಿಜ್ಯ ಪ್ರಮುಖ ಪಾತ್ರವನ್ನು ವಹಿಸಿತ್ತು. ಈ ಸಾಮ್ರಾಜ್ಯವು ಸಂಪೂರ್ಣವಾಗಿ ವ್ಯಾಪಾರ ಮತ್ತು ವಾಣಿಜ್ಯಕ್ಕೆ ಅವಲಂಬನೆಯಾಗಿತ್ತು. ವಿಜಯನಗರ ಸಾಮ್ರಾಜ್ಯಕ್ಕೆ ಬೇಟಿನೀಡಿದ ವಿದೇಶಿ ಪ್ರವಾಸಿಗರ ಹೇಳಿಕೆಗಳ ಪ್ರಕಾರ ವಿಜಯನಗರ ಪ್ರಮುಖ ವಾಣಿಜ್ಯ ಕೇಂದ್ರವಾಗಿದ್ದು ಇಲ್ಲಿಗೆ ವಿಶ್ವದ ವ್ಯಾಪಾರಿಗಳು ಸಂದರ್ಶಿಸಿದ್ದ ಸ್ಥಳವಾಗಿದ್ದು ವ್ಯಾಪಾರ ಮತ್ತು ವಾಣಿಜ್ಯದಲ್ಲಿ ಪ್ರಮುಖ ಪಾತ್ರವಹಿಸಿತ್ತು.

ವಿದೇಶಿ ವ್ಯಾಪಾರದ ಬೆಳವಣಿಗೆಯಿಂದಾಗಿ ನಗರಗಳ ಬೆಳವಣಿಗೆಗೆ ಪೂರಕವಾದ ವಾತಾವರಣ ನಿರ್ಮಾಣವಾಗಿತ್ತು. ವಿದೇಶೀ ವ್ಯಾಪಾರಿಗಳು ತಮ್ಮ ಹಡುಗುಗಳ ಮೂಲಕ ಕರಾವಳಿ ನಗರಗಳಲ್ಲಿ ಮತ್ತು ಬಂದರುಗಳಲ್ಲಿ ತಮ್ಮ ವ್ಯಾಪಾರ ಕೈಗೊಳ್ಳುತ್ತಿದ್ದರು ಅವರ ಸರಕುಗಳಿಗೆ ಉತ್ತಮವಾದ ಮಾರುಕಟ್ಟೆ ನಿರ್ಮಾಣವಾಗಿತ್ತು. ಇಲ್ಲಿಗೆ ತರುತ್ತಿದ್ದ ಕುದುರೆಗಳು ಆನೆಗಳು ಇತರ ವಸ್ತುಗಳು ಬಹಳಷ್ಟು ಬೇಡಿಕೆ ಹೊಂದಿದ್ದವು[37].

**ಧಾರ್ಮಿಕ ಅಂಶಗಳು**

ಪ್ರಾಚೀನ ಕರ್ನಾಟಕ ಹಾಗೂ ವಿಜಯನಗರ ಅವಧಿಯ ಕರ್ನಾಟಕವು ಹಲವಾರು ಧಾರ್ಮಿಕ ಹಬ್ಬಗಳ ಆಚರಣೆ ಮತ್ತು ಉತ್ಸವಕ್ಕೆ ಸಾಕ್ಷಿಯಾಗಿದೆ. ವಿಜಯನಗರ ಸಾಮ್ರಾಜ್ಯದ ಸ್ಥಾಪನೆಯ ಉದ್ದೇಶವು ಹಿಂದೂ ಧರ್ಮದ ರಕ್ಷಣೆಯಾಗಿತ್ತು. ಶೈವಧರ್ಮ, ವೈಷ್ಣವ ಧರ್ಮ ಜೈನಧರ್ಮ ರಾಜರಿಂದ ಪೋಷಿಸಲ್ಪಪಟ್ಟವು ಇವುಗಳ ಆಚರಣೆಗಳು ಹಂತಹಂತವಾಗಿ ನಗರಗಳ ಬೆಳವಣಿಗೆಗೆ ಪ್ರಮುಖವಾಗಿ ಕಾರಣವಾದವು. ಅರಬ್ಬರು ಭಾರತದೊಂದಿಗೆ ವ್ಯಾಪಾರ ಮಾಡುತ್ತಿದ್ದ ಸಂದರ್ಭದಲ್ಲಿ ಅವರು ಸ್ಥಳೀಯ ಜನರೊಂದಿಗೆ ವಿವಾಹವನ್ನು ಏರ್ಪಡಿಸಿಕೊಂಡು ತಮ್ಮದೇಯಾದ ಕಾಲೋನಿಗಳನ್ನು ನಿರ್ಮಿಸಿಕೊಂಡಿದ್ದರು. ಮಂಗಳೂರನ್ನು ತಮ್ಮ ಮುಖ್ಯ ಧಾರ್ಮಿಕ ಕೇಂದ್ರವಾಗಿ ಅಭಿವೃದ್ಧಿ ಪಡಿಸಿಕೊಂಡಿದ್ದರು.[38] ಭಾರತಕ್ಕೆ ಪೋರ್ಚುಗೀಸರ ಆಗಮನದ ನಂತರ ಅಲ್ಬುಕರ್ಕ್‌ನು ತಮ್ಮ ಜನಸಂಖ್ಯೆಯನ್ನು ಹೆಚ್ಚಿಸಿಕೊಳ್ಳವ ಉದ್ದೇಶದಿಂದ ಸ್ಥಳೀಯರೊಂದಿಗೆ ವಿವಾಹ ಸಂಪರ್ಕ ಏರ್ಪಡಿಸಿದನು ನಂತರ ಮುಸ್ಲಿಂ ಧರ್ಮ ಮತ್ತು ಕ್ರೈಸ್ತ ಧರ್ಮ ಬೆಳವಣಿಗೆ ಹೊಂದಿದಂತೆ ನಗರಗಳ ಬೆಳವಣಿಗೆಗೂ ಕಾರಣವಾದವು.

**ಸೈನಿಕ ಅಂಶಗಳು**

ಹದಿನಾಲ್ಕನೇ ಶತಮಾನದ ಮಧ್ಯಭಾಗದಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದ ನಂತರ ಬಹುಮನಿ ರಾಜ್ಯ ಗುಲ್ಬರ್ಗಾದಲ್ಲಿ ಸ್ಥಾಪನೆಯಾಯಿತು. ಮುಖ್ಯವಾಗಿ ತುಂಗಭದ್ರಾ ರಾಯಚೂರು ದೋಅಬ್ ಪ್ರಾಂತ್ಯದ ಒಡೆತನ ಹೊಂದಲು ಎರಡು ರಾಜ್ಯಗಳು ಪರಸ್ಪರ ಯುದ್ಧದಲ್ಲಿ ತೊಡಗಿಸಿಕೊಂಡವು. ಈ ಯುದ್ಧಗಳು ವಿಜಯನಗರ ಸಾಮ್ರಾಜ್ಯ ತನ್ನ ಸೈನ್ಯವನ್ನು ಬಲಪಡಿಸಿಕೊಂಡಿತು. ಮುಖ್ಯವಾಗಿ ವಿಜಯನಗರದಲ್ಲಿ ಇಡೀ ಕರ್ನಾಟಕದಲ್ಲಿ ಮೊದಲ ಬಾರಿಗೆ ಕಾವಲು ಗೋಪುರಗಳನ್ನು ನಿರ್ಮಿಸಲಾಯಿತು. ವಿಜಯನಗರ ಅರಸರು ತಮ್ಮ ಯುದ್ಧಕ್ಕೆ ಅವಶ್ಯಕವಾಗಿದ್ದ ಪ್ರಮುಖ ಮದ್ದು ಗುಂಡುಗಳನ್ನು ರಕ್ಷಣೆ ಮಾಡಿಕೊಳ್ಳಲು ದೊಡ್ಡದಾದ ಸಂಗ್ರಹ ಮನೆಗಳನ್ನು ನಿರ್ಮಿಸಿದರು. ನಗರಗಳಲ್ಲಿ ಪ್ರಮುಖವಾಗಿ ಸೈನಿಕರು ಮತ್ತು ಅಧಿಕಾರಿಗಳು

ನೆಲೆಸಿದ್ದರು. ಹಾಗೂ ಎರಡನೇ ದೇವರಾಯ, ಕೃಷ್ಣದೇವರಾಯ, ರಾಮರಾಯ ಇವರು ದೊಡ್ಡ ಪ್ರಮಾಣದ ಸೈನ್ಯವನ್ನು ಸಂಘಟಿಸಿದ್ದರು. ಈ ಸೈನ್ಯವು ನಗರಗಳ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿತ್ತು.

**ಬೌದ್ಧಿಕ ಅಂಶಗಳು**

ವಿಜಯನಗರ ಆಡಳಿತ ಅವಧಿಯಲ್ಲಿ ಹಲವಾರು ಗ್ರಂಥಗಳು ಸಾಹಿತ್ಯ ಕ್ಷೇತ್ರವನ್ನು ಪ್ರಜ್ವಲಿಸಿದವು. ಕನ್ನಡ, ತೆಲುಗು, ಸಂಸ್ಕೃತ ಮತ್ತು ತಮಿಳು ಭಾಷೆಗಳಲ್ಲಿ ರಚನೆಯಾದ ಗ್ರಂಥಗಳು, ಕೃಷ್ಣದೇವರಾಯ ಮತ್ತು ರಾಣಿಯರು ರಚಿಸಿದ ಗ್ರಂಥಗಳು, ಹಲವಾರು ರಾಜರು ಸಾಹಿತ್ಯ ಕ್ಷೇತ್ರಕ್ಕೆ ನೀಡಿದ ಕೊಡುಗೆಯ ಬಹಷ್ಟು ಪಂಡಿತರನ್ನು ಆಕರ್ಷಿಸಿತ್ತು. ಅತಿಹೆಚ್ಚು ಪಂಡಿತರು ನೆಲೆಸಿ ಅವರು ವಿದ್ಯಾ ಕೇಂದ್ರಗಳನ್ನು ಸ್ಥಾಪಿಸಿ ವಿದ್ಯಾದ್ಯಾನ ಮಾಡುತ್ತಿದ್ದರು. ಕೃಷ್ಣದೇವರಾಯನು ಯಾವಾಗಲೂ ಕವಿಗಳಿಗೆ, ಪಂಡಿತರೊಂದಿಗೆ ಕಾಲ ಕಳೆಯುತ್ತಿದ್ದನು. ಅವನು ಕವಿಗಳಗೆ, ಪಂಡಿತರಿಗೆ ಹಣ, ಭೂಮಿ ಮತ್ತು ಉಡುಗೊರೆಗಳನ್ನು ನೀಡಿ ಅವರ ಶ್ರೇಯಾಭಿವೃದ್ಧಿಗೆ ಕಾರ್ಯನಿರ್ವಹಿಸಿದ್ದನು. ಈ ಎಲ್ಲಾ ಬೌದ್ಧಿಕ ಅಂಶಗಳು ಕೂಡ ನಗರಗಳ ಬೆಳವಣಿಗೆಗೆ ಪ್ರಮುಖ ಪಾತ್ರವನ್ನು ನಿರ್ವಹಿಸಿದವು.

**ಲಲಿತ ಕಲೆ ಅಂಶಗಳು**

ವಿಜಯನಗರ ಸಾಮ್ರಾಜ್ಯವು ಅತ್ಯಪೂರಕವಾಗಿ ಕಲೆ, ಸಂಗೀತ, ನೃತ್ಯ, ಚಿತ್ರಕಲೆ ಮುಂತಾದ ಕಲೆಗಳಿಗೆ ಪ್ರೋತ್ಸಾಹವನ್ನು ನೀಡುತ್ತಿತ್ತು. ಈ ಪ್ರೋತ್ಸಾಹದಿಂದಾಗಿ ಹಲವಾರು ಕಲೆಗಾರರು, ಹಾಡುಗಾರರು, ಸಂಗೀತಗಾರರು ಮತ್ತು ನೃತ್ಯಗಾರರು ನಗರಗಳಲ್ಲಿ ನೆಲೆಸಲು ಆರಂಭಿಸಿದರು. ಹಂತ ಹಂತವಾಗಿ ಜನಸಂಖ್ಯೆ ಹೆಚ್ಚಾದಂತೆಲ್ಲ ನಗರಗಳ ಬೆಳವಣಿಗೆ ಕೂಡ ಸಂಭವಿಸಿತು ಎಂದು ಹೇಳಬಹುದು. ವಿಜಯನಗರ ಕಾಲದ ಹಲವಾರು ದೇವಾಲಯಗಳು ಈ ಕಲೆಯ ಪ್ರಮುಖ ಕೇಂದ್ರಗಳಾಗಿದ್ದವು. ಈ ದೇವಾಲಯಗಳಲ್ಲಿ ನೃತ್ಯ, ಸಂಗೀತದ ತರಗತಿಗಳು ನಡೆಯುತ್ತಿದ್ದು ಅಲ್ಲಿ ಅಭ್ಯಾಸ ಮಾಡುತ್ತಿದ್ದು ಧಾರ್ಮಿಕ ವಿಶೇಷ ಸಂದರ್ಭಗಳಲ್ಲಿ ಅಲ್ಲಿ ಅವರು ಈ ಕಲೆಗಳನ್ನು ತೋರ್ಪಡಿಸುತ್ತಿದ್ದರು. ಹೀಗೆ ಲಲಿತ ಕಲೆಗಳು ಬೆಳೆದಂತೆ ಆ ಭಾಗಗಳು ನಗರಗಳಾಗಿ ಬೆಳವಣಿಗೆ ಹೊಂದಿದ್ದವು.

**ಶೈಕ್ಷಣಿಕ ಅಂಶಗಳು**

ವಿಜಯನಗರದ ಅರಸರು ತಮ್ಮ ಆಡಳಿತ ಅವಧಿಯಲ್ಲಿ ಶಿಕ್ಷಣದ ಬೆಳವಣಿಗೆಗೆ ಹೆಚ್ಚು ಒತ್ತನ್ನು ನೀಡಿದ್ದರು. ಈ ಕಾಲದಲ್ಲಿ ದೇವಾಲಯಗಳು ಮತ್ತು ಅಗ್ರಹಾರಗಳು ಶೈಕ್ಷಣಿಕ ಕೇಂದ್ರಗಳಿಗೆ ಕಾರ್ಯನಿರ್ವಹಿಸುತ್ತಿದ್ದವು. ಈ ಶೈಕ್ಷಣಿಕ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದ ಪಂಡಿತರು ವಿವಿಧ ವಿಷಯಗಳಲ್ಲಿ ಅಲ್ಲಿ ಶಿಕ್ಷಣ ನೀಡುತ್ತಿದ್ದರು. ಈ ಶಿಕ್ಷಣ ಕೇಂದ್ರಗಳಲ್ಲಿ ಶಿಕ್ಷಣಕ್ಕೋಸ್ಕರಕ್ಕಾಗಿ ಭೂಮಿಯನ್ನು ದಾನವಾಗಿ ನೀಡುತ್ತಿದ್ದರು. ಈ ಭೂಮಿಗಳಿಗೆ ಯಾವುದೇ ಸುಂಕ ಅಥವಾ ತೆರಿಗೆ ಇರುತ್ತಿರಲಿಲ್ಲ. ಮುಕ್ತವಾಗಿದಂತಹ ಈ ಭೂಮಿಗಳಿಂದ ಬರುತ್ತಿದ್ದ ಆದಾಯದಿಂದ ಈ ಎಲ್ಲಾ ಶಿಕ್ಷಣ ಕೇಂದ್ರಗಳು ಕಾರ್ಯನಿರ್ವಹಿಸುತ್ತಿದ್ದವು. ಈ ಶಿಕ್ಷಣ ಕೇಂದ್ರಗಳಿಗೆ ಸಾಮ್ರಾಜ್ಯದ ವಿವಿಧ ಭಾಗಗಳಿಂದ ವಿದ್ಯಾರ್ಥಿಗಳು ಜ್ಞಾನಾರ್ಜನೆಗೆ ಬಂದು ನೆಲೆಸುತ್ತಿದ್ದರು. ಹೀಗೆ ಬಂದು ನೆಲೆಸಿದ ವಿದಾರ್ಥಿಗಳಿಂದ ಆ ಭಾಗಗಳಲ್ಲಿ ಜನಸಂಖ್ಯೆ ಅಧಿಕವಾಗಿ ನಗರಗಳಾಗಿ ಪರಿವರ್ತನೆಯಾಗುತ್ತಿದ್ದವು. ಹೀಗೆ ಶೈಕ್ಷಣಿಕ ಕೇಂದ್ರಗಳು ಕೂಡ ನಗರದ ಬೆಳವಣಿಗೆಗೆ ಪ್ರಮುಖವಾದ ಪಾತ್ರವನ್ನು ವಹಿಸಿದ್ದವು.

**ಇತರೆ ಅಂಶಗಳು**

ವಿಜಯನಗರ ಸಾಮ್ರಾಜ್ಯದಲ್ಲಿ ನಡೆಯುತ್ತಿದ್ದ ಹಬ್ಬಗಳು, ಉತ್ಸವಗಳು, ಭವ್ಯವಾದ ಕಟ್ಟಡಗಳು ವಿದೇಶೀಯರನ್ನು ಆಕರ್ಷಿಸಿದವು. ಅರಬ್ಬರು, ಪೋರ್ಚುಗೀಸರು, ಇಟಲಿಯನ್ನರು, ರಷ್ಯಾನ್ನರು ಮತ್ತು ಪರ್ಷಿಯಾದವರು ಇಲ್ಲಿಗೆ ಭೇಟಿ ನೀಡುತ್ತಿದ್ದರು. ಇವು ಕೇವಲ ಭೇಟಿ ಮಾತ್ರವಾಗದೇ ಅವರು ಇಲ್ಲಿಯ ಸಂಸ್ಕೃತಿಯನ್ನು ಅಧ್ಯಯನ ಮಾಡುವ ಉದ್ದೇಶದಿಂದ ಇಲ್ಲೇ ಸ್ವಲ್ಪಕಾಲ ನೆಲೆಗೊಳ್ಳುತ್ತಿದ್ದರು. ನಂತರ ವ್ಯಾಪಾರದ ಉದ್ದೇಶಗಳಿಂದಾಗಿ ಇಲ್ಲಿಯೇ ನೆಲೆಸಿದ ಹಲವಾರು ವಿದೇಶೀಯರು ನಗರಗಳ ಬೆಳವಣಿಗೆಯಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸಿದರು.

ಅರಬ್ಬರು ಮತ್ತು ಪರ್ಷಿಯನ್ನರು ಸಾಮ್ಯಾಜ್ಯಕ್ಕೆ ಕುದುರೆಗಳನ್ನು ಸರಬರಾಜು ಮಾಡುತ್ತಿದ್ದರು. ಭಾರತದ ಸಾಂಬಾರ ಪದಾರ್ಥಗಳಿಗೆ  ಯೂರೋಪಿನಲ್ಲಿ ಬಹಳಷ್ಟು ಬೇಡಿಕೆ ಇತ್ತು. ಈ ಪದಾರ್ಥಗಳು ಯುರೋಪಿಗೆ ರಫ್ತಾಗುತ್ತಿದ್ದವು. ಈ ವ್ಯಾಪಾರ ಮತ್ತು ವಾಣಿಜ್ಯ ಪ್ರಕ್ರಿಯೆಗಳಿಂದಾಗಿ ಸ್ಥಳೀಯ ಜನರ ಜೀವನ ಮಟ್ಟದಲ್ಲಿ ಬದಲಾವಣೆಗಳುಂಟಾದವು. ಈ ಬದಲಾವಣೆಗಳಿಂದಾಗಿ ಜನ ಒಂದೆಡೆ ಸೇರಬಯಸಿ ನಗರಗಳ ಬೆಳವಣಿಗೆಗೆ ಪ್ರಮುಖ ಕಾರಣಾದರು. ಇದರೊಂದಿಗೆ ಕೃಷಿ, ಕಾರ್ಖಾನೆಗಳ ಬೆಳವಣಿಗೆ, ವ್ಯಾಪಾರಿವರ್ಗ, ಕಾರ್ಮಿಕವರ್ಗಗಳು ಒಂದೆಡೆ ನೆಲೆಸಿ ನಗರಗಳ ಬೆಳವಣಿಗೆಗೆ ಕಾರಣಕರ್ತರಾದರು.

ಹೀಗೆ ಈ ಮೇಲ್ಕಂಡ ಎಲ್ಲಾ ಅಂಶಗಳು ಕೂಡ ನಗರಗಳ ಬೆಳವಣಿಗೆಗೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಕಾರಣವಾದವು. ಈ ಎಲ್ಲಾ ಅಂಶಗಳು ನಗರ ಬೆಳವಣಿಗೆಗೆ ಕಾರಣವಾದುದಲ್ಲದೇ ಆ ಸಮಾಜದ ಉನ್ನತಿಗೆ ಕಾರಣವಾದವು. ಜನರ ಜೀವನಮಟ್ಟ ಆರ್ಥಿಕತೆ, ಶಿಕ್ಷಣದಲ್ಲಿ ಬೆಳವಣಿಗೆ ಉಂಟಾಗಿ ನಗರಗಳೊಂದಿಗೆ ನಗರ ಸಂಸ್ಕೃತಿಯ ಅಂಶಗಳು ಬೆಳವಣಿಗೆ ಹೊಂದಿದ್ದವು. ಕರಾವಳಿ ಪ್ರದೇಶಗಳಲ್ಲಿ ನಡೆಯುತ್ತಿದ್ದ ವ್ಯಾಪಾರ ಮತ್ತು ವಾಣಿಜ್ಯ ಪ್ರಕ್ರಿಯೆಗಳು ಸಂಪೂರ್ಣವಾಗಿ ಅಲ್ಲಿನ ಸಾಮಾಜಿಕ ಜೀವನದ ಬದಲಾವಣೆಗೆ ಕಾರಣವಾಯಿತು. ಹೀಗೆ ಈ ಎಲ್ಲಾ ಅಂಶಗಳು ನಗರಗಳ ಬೆಳವಣಿಗೆಗೆ ಸಹಕಾರಿಯಾಯಿತು ಎಂದು ಹೇಳಬಹುದು. ಪ್ರಮುಖ ನಗರಗಳ ಬೆಳವಣಿಗೆ ಕುರಿತು ಈ ಕೆಳಗೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ವಿಜಯನಗರ (ಹಂಪೆ)**

ವಿಜಯನಗರ ಅಥವಾ ಹಂಪೆ ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿತ್ತು. ಈ ನಗರವು ತುಂಗಭದ್ರಾ ನದಿಯ ದಡದಲ್ಲಿ ನಿರ್ಮಾಣವಾಗಿತ್ತು. ಈ ನಗರವನ್ನು ಪಂಪ, ಪಂಪಕ್ಷೇತ್ರ ಎಂದೆಲ್ಲ ಕರೆಯುತ್ತಿದ್ದರು. ಹಂಪೆ ನಗರವಾಗಿ ಬೆಳವಣಿಗೆ ಹೊಂದುವ ಮುಂಚೆ ಇದು ಒಂದು ಸಣ್ಣ ಹಳ್ಳಿಯಾಗಿತ್ತು. ಕ್ರಿ.ಶ 1336ರಲ್ಲಿ ಹರಿಹರ ಮತ್ತು ಬುಕ್ಕರು ವಿಜಯನಗರ ಸಾಮ್ರಾಜ್ಯ ಸ್ಥಾಪನೆಮಾಡಿದ ನಂತರ ಹಂಪೆಯನ್ನು ರಾಜಧಾನಿಯಾಗಿ ಮಾಡಿ ಅದಕ್ಕೆ ವಿಜಯನಗರವೆಂದು ಹೆಸರಿಟ್ಟರು. ತುಂಗಭದ್ರ ನದಿ ಪಕ್ಕದಲ್ಲೇ ಹರಿಯುತ್ತಿದ್ದರಿಂದ ಈ ನಗರದ ಸ್ಥಾಪನೆಗೆ ಸಹಾಯಕವಾಯಿತು. ಅರ್ಧ ಮಿಲಿಯನ್ ಗಿಂತಲೂ ಅತಿ ಹೆಚ್ಚು ಜನ ಅಲ್ಲಿ ವಾಸಮಾಡುತ್ತಿದ್ದರು. ಈ ನಗರವು ವಿಶ್ವದ ಅತ್ಯಂತ ಎರಡನೇ ದೊಡ್ಡ ನಗರವಾಗಿತ್ತು.[39]

ಹಂಪಿ ನಗರವು ಬೆಟ್ಟ ಗುಡ್ಡಗಳ ತಪ್ಪಲಿನಲ್ಲಿ ನಿರ್ಮಾಣವಾಗಿದ್ದು ಈ ನಗರದಾದ್ಯಂತ ಮಾರುಕಟ್ಟೆಗಳು ದೇವಾಲಯಗಳು ನಿರ್ಮಾಣವಾಗಿದ್ದವು. ವಿಶಾಲವಾದ ವಿರೂಪಾಕ್ಷ ದೇವಾಲಯ, ಕಲ್ಲಿನರಥ, ಗಣಪತಿ ವಿಗ್ರಹಗಳು, ರಾಣಿಯರ ರಾಜರ ಅರಮನೆಗಳು ಹಾಗೂ ವಿವಿಧ ಬಗೆಯ ಕಲೆ ಮತ್ತು ವಾಸ್ತುಶಿಲ್ಪ ವ್ಯಾಪಾರ ವಾಣಿಜ್ಯ ಈ ನಗರದ ಬೆಳವಣಿಗೆಗೆ ಪ್ರಮುಖ ಕಾರಣವಾಗಿತ್ತು.ಈ ಎಲ್ಲಾ ಅಂಶಗಳಿಂದಾಗಿ ಈ ನಗರದಲ್ಲಿ ಮುತ್ತು ರತ್ನಗಳನ್ನು ರಸ್ತೆಯಲ್ಲಿ ಮಾರಾಟ ಮಾಡಲಾಗುತ್ತಿದ್ದು ಪ್ರಮುಖ ನಗರವಾಗಿತ್ತೆಂದು ಹೇಳಬಹುದು.

**ಪೆನುಗೊಂಡ**

ಪೆನುಗೊಂಡ ಹಂಪಿಯ ನಂತರ ಮತ್ತೊಂದು ಪ್ರಮುಖ ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿತ್ತು. ಪೆನುಗೊಂಡವು ವಿವಿಧ ಸಾಮ್ರಾಜ್ಯಗಳ ರಾಜಧಾನಿಯಾಗಿ ಬಹಳಷ್ಟು ಮಹತ್ವ ಪಡೆದಿತ್ತು. ಪೂರ್ವ ವಿಜಯನಗರ ಸಾಮ್ರಾಜ್ಯದಲ್ಲಿ ಹೊಯ್ಸಳರು ಪೆನುಗೊಂಡವನ್ನು ಕೊನೆಯ ರಾಣಿಗಾಗಿ ನಿರ್ಮಾಣ ಮಾಡಿದರು. ಪೆನುಗೊಂಡದಲ್ಲಿ ನಿರ್ಮಾಣವಾಗಿರುವ ಕೋಟೆಗಳು ಹೊಯ್ಸಳರ ಕಾಲದಲ್ಲಿ ನಿರ್ಮಾಣವಾದವು. ಪ್ರಸ್ತುತ ಈ ಪೆನುಗೊಂಡವು ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯಲ್ಲಿ ನೆಲೆಗೊಂಡಿದೆ. ಹೊಯ್ಸಳರು, ಚಾಲುಕ್ಯರು, ವಿಜಯನಗರ ನವಾಬರು, ಮರಾಠರು, ಮತು ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿತ್ತು. ಕೊನೆಗೆ ಹೈದರಬಾದಿನ ನಿಜಾಮನು ಆಳ್ವಿಕೆಯನ್ನು ನಡೆಸಿದನು. ಕೃಷ್ಣದೇವರಾಯ, ವೆಂಕಟಪತಿರಾಯ ಈ ನಗರದ ಮೇಲೆ ನಿಯಂತ್ರಣ ಹೊಂದಿದ್ದರು. ರಾಯ ದಳವಾಯಿ ಕೊಂತಿ ನಾಯಿಡುನನ್ನು ಪೆನುಗೊಂಡದ ರಾಜ್ಯಪಾಲನಾಗಿ ನೇಮಿಸಲಾಯಿತು. ಇವನು ಮಹಾರಾಜ ಶ್ರೀ ಎಂಬ ಬಿರುದುನೊಂದಿಗೆ ಪೆನುಗೊಂಡವನ್ನು ಕ್ರಿ.ಶ. 1635–1652 ರವರಗೆ ಆಳ್ವಿಕೆ ಮಾಡಿದನು.[40]

ಪೆನುಗೊಂಡವು ವಿವಿಧ ದಾರ್ಮಿಕ ಸಾಮ್ರಾಜ್ಯಗಳ ಆಡಳಿತಕ್ಕೆ ಒಳಪಟ್ಟಿತ್ತು. ಇದು ಜೈನರ ಪ್ರಮುಖ ಕೇಂದ್ರವು ಕೂಡ ಆಗಿತ್ತು. ಹಲವಾರು ಜೈನ ದೇವಾಲಯಗಳು ನಿರ್ಮಾಣವಾಗಿದ್ದವು. ಪ್ರಸಿದ್ಧ ಪಚ್ಚಿ ಪಾರ್ಶ್ವನಾಥ ಸ್ವಾಮಿ ದೇವಾಲಯ ಪಾರ್ಶ್ವನಾಥನ ಮೂರ್ತಿಯೊಂದಿಗೆ ಈ ಪೆನುಗೊಂಡದಲ್ಲಿ ನಿರ್ಮಾಣವಾಗಿದೆ. ಮುಸ್ಲಿಂ ಧರ್ಮದ ಪ್ರಸಿದ್ಧ ಬಾಬಯ್ಯ ದರ್ಗಾವು ಇಲ್ಲಿದೆ, ಹೀಗೆ ಈ ನಗರವು ಹೆಚ್ಚು ಪ್ರಾಮುಖ್ಯತೆಯನ್ನು ಗಳಿಸಿಕೊಂಡಿದೆ.

**ಬಂಕಾಪುರ**

ಬಂಕಾಪುರವು ಹಾವೇರಿ ಜಿಲ್ಲೆಯಲ್ಲಿ ಕಂಡು ಬರುತ್ತದೆ. ಚಾಲುಕ್ಯರ ಕಾಲದಲ್ಲಿ ಸುಂದರವಾದ ದೇವಾಲಯಗಳು ನಿರ್ಮಾಣವಾದವು. ಆದರೆ ಕ್ರಿ.ಶ. 1567ರಲ್ಲಿ ಆಲಿ ಆದಿಲ್ ಷಾ ದಾಳಿ ಮಾಡಿದ ನಂತರ ಹಲವಾರು ದೇವಾಲಯಗಳು ನಾಶವಾದವು. ಬಂಕಾಪುರ ಕೋಟೆಯು ಬನವಾಸಿ, ಕದಂಬರು, ಗಂಗರು, ಚೋಳರು, ರಾಷ್ಟ್ರಕೂಟರು, ಹೊಯ್ಸಳರು, ಚಾಲುಕ್ಯರು, ವಿಜಯನಗರದ ಅರಸರು ಮತ್ತು ಆದಿಲ್‌ಷಾಹಿಗಳ ಆಳ್ವಿಕೆಗೆ ಒಳಪಟ್ಟಿತ್ತು. ಬಂಕೇಶರಾಯನ ನಂತರ ಬಂಕಾಪುರವೆಂದು ಕರೆಯಲಾಯಿತು. ಅಮೋಘ ವರ್ಷನ ರಾಜ್ಯಪಾಲನಾಗಿದ್ದ ಇವನು ಇದನ್ನು ಆಳ್ವಿಕೆ ಮಾಡುತ್ತಿದ್ದನು. ಅಮೋಘವರ್ಷನ ರಾಜ್ಯಪಾಲನಾಗಿದ್ದ ಇವನು ಇದನ್ನು 16ನೇ ಶತಮಾನದಲ್ಲಿ ಬಹುಮನಿಗಳು ಬಂಕಾಪುರದ ಮೇಲೆ ದಾಳಿಮಾಡಿ ವಶಪಡಿಸಿಕೊಂಡರು.

**ಗೋವಾ**

ಗೋವಾ ನಗರದ ಇತಿಹಾಸವು ಪ್ರಾಗೈತಿಹಾಸ ಕಾಲದಿಂದ ಇಂದಿನವರೆಗೂ ಮುಂದುವರೆದಿದೆ. ಈ ನಗರವು ಪಶ್ಚಿಮ ಕರಾವಳಿಯ ಕೊಂಕಣ ತೀರದಲ್ಲಿ ನಿರ್ಮಾಣವಾಗಿದೆ. ಇದೊಂದು ಬಹು ಮುಖ್ಯವಾದ ವ್ಯಾಪಾರ ಕೇಂದ್ರ. ಹಾಗೂ ವ್ಯಾಪಾರಿಗಳು, ಕ್ರೈಸ್ಥ ಮಿಷನರಿಗಳು, ನೌಕಾಯಾನಿಗಳು ಇಲ್ಲಿ ನೆಲೆಸಿದ್ದರು. ಮೌರ್ಯರು, ಶಾತವಾಹನರು, ಬೋಜರು, ಬಾದಾಮಿ ಚಾಳುಕ್ಯರು, ಕದಂಬರು, ವಿಜಯನಗರ ಅರಸರು, ಬಹುಮನಿಸುಲ್ತಾನರು ಆಳ್ವಿಕೆಯನ್ನು ಮಾಡದಿರು. ಕ್ರಿ.ಶ. 1350ರಲ್ಲಿ ಗೋವಾ ಬಹುಮನಿ ಸುಲ್ತಾನರ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ.ಶ. 1370ರಲ್ಲಿ ವಿಜಯನಗರದ ಅರಸರು ವಶಪಡಿಸಿಕೊಂಡು ಅರೇಬಿಯಾದಿಂದ ಬರುವ ಕುದುರೆಗಳನ್ನು ತಮ್ಮ ಸಾಮ್ರಾಜ್ಯಕ್ಕೆ ಆಮದು ಮಾಡಿಕೊಂಡು ತಮ್ಮ ಕುದುರೆಗಳನ್ನು ತಮ್ಮ ಸಾಮ್ರಾಜ್ಯಕ್ಕೆ ಆಮದು ಮಾಡಿಕೊಂಡು, ತಮ್ಮ ಅಶ್ವಪಡೆಯನ್ನು ಬಲಪಡಿಸಿಕೊಂಡಿದ್ದರು. ಕ್ರಿ.ಶ. 1492ರಲ್ಲಿ ಗೋವಾವನ್ನು ಬಿಜಾಪುರದ ಆದಿಲ್ ಷಾಹಿಗಳು ಮತ್ತೆ ವಾಪಸ್ಸು ವಶಪಡಿಸಿಕೊಂಡರು.

ಕ್ರಿ.ಶ.1510ರಲ್ಲಿ ಪೋರ್ಚುಗೀಸರು ಬಿಜಾಪುರ ಆದಿಲ್‌ಷಾ ನಿಂದ ವಶಪಡಿಸಿಕೊಂಡರು. ಗೋವಾವನ್ನು ವಶಪಡಿಸಿಕೊಂಡ ಮೇಲೆ ಆ ನಗರವನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆ ಮಾಡಿದರು. ಇದು ಅವರ ಪ್ರಮುಖ ವ್ಯಾಪಾರಿ ಕೇಂದ್ರವು ಕೂಡ ಹೌದು. ಗೋವಾದಲ್ಲಿ ವ್ಯಾಪಾರ ವಹಿವಾಟು ಕ್ರಮಬದ್ಧವಾಗಿ ನಡೆಯುತ್ತಿದ್ದು ಪ್ರಮುಖ ವಾಣಿಜ್ಯ ಕೇಂದ್ರವಾಗಿತ್ತು.[41] ಇಲ್ಲಿ ಇದ್ದ ಬಂದರಿನ ಮೂಲಕ ಅಂತರರಾಷ್ಟ್ರೀಯ ವ್ಯಾಪಾರ ಮತ್ತು ಆಂತರಿಕ ವ್ಯಾಪಾರ ನಡೆಯುತ್ತಿತ್ತು. ಪೋರ್ಚುಗೀಸರು ವಿದೇಶಿ ವ್ಯಾಪಾರದ ಮೇಲೆ ಆಧಿಪತ್ಯ ಸ್ಥಾಪಿಸಿದ ಮೇಲೆ ವಿಜಯನಗರದ ಅರಸರಿಗೆ ಗೋವಾ ಮತ್ತು ಇತರೆ ಪಶ್ಚಿಮ ಕರಾವಳಿ ಬಂದರುಗಳ ಮೂಲಕ ಕುದುರೆಗಳನ್ನು ಸರಬರಾಜು ಮಾಡುತ್ತಿದ್ದರು ಹಾಗೂ ಭಾರತದಿಂದ ಖರೀದಿಸಿದ ಸರಕುಗಳನ್ನು ಹಡಗುಗಳಿಗೆ ತುಂಬಿ ವಿದೇಶಗಳಿಗೆ ಸಾಗಿಸುತ್ತಿದ್ದರು.

**ಮಂಗಳೂರು**

ಮಂಗಳೂರಿನ ಇತಿಹಾಸವು ಕ್ರಿ.ಪೂ. 3ನೇ ಶತಮಾನಕ್ಕೆ ಹೋಗುತ್ತದೆ.ಈ ನಗರವನ್ನು ಕದಂಬರು, ವಿಜಯನಗರ ಅರಸರು, ಪೋರ್ಚುಗೀಸರು ಮತ್ತು ಹೈದರ್ ಆಲಿ ಆಳ್ವಿಕೆ ಮಾಡಿದರು.ಈ ನಗರವನ್ನು ತುಳುನಾಡು ಎಂದು ಕರೆಯುವರು. ಕ್ರಿ.ಶ, 1345ರ ನಂತರ ಮಂಗಳೂರು ವಿಜಯನಗರ ಅರಸರ ಆಳ್ವಿಕೆಗೆ ಒಳಪಟ್ಟಿತ್ತು. ಇವರ ಕಾಲದಲ್ಲಿ ಕ್ರಿ.ಶ. 1345–

1550ರ ವರೆಗೆ ದಕ್ಷಿಣ ಕನ್ನಡದ ಈ ಭಾಗವನ್ನು ಮಂಗಳೂರು ಮತ್ತು ಬಾರ್ಕೂರುಗಳಾಗಿ ವಿಂಗಡಿಸಿ ಪ್ರತ್ಯೇಕವಾದ ಪ್ರಾಂತ್ಯಗಳಾಗಿ ರಾಜ್ಯಪಾಲರುಗಳಿಂದ ಇಲ್ಲಿ ಆಳ್ವಿಕೆ ಮಾಡಲಾಗುತ್ತಿತ್ತು. ಕ್ರಿ.ಶ. 1550ರಲ್ಲಿ ಕೆಳದಿ ನಾಯಕರ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ.ಶ. 1342ರಲ್ಲಿ ಇಬನ್ ಬತೂತನು ಈ ನಗರಕ್ಕೆ ಭೇಟಿನೀಡಿ ಇದನ್ನು ಮನ್‌ಜರೂರ್ ಎಂದು ಕರೆದಿದ್ದಾನೆ.[42] ಕ್ರಿ.ಶ. 1448ರಲ್ಲಿ ಅಬ್ದುಲ್ ರಜಾಕ್ ಭೇಟಿ ನೀಡಿದ್ದನು. ಇಟಲಿ ಪ್ರವಾಸಿಗ ವಾರ್ತೆಮಾ ಕ್ರಿ.ಶ. 1506ರಲ್ಲಿ ಭೇಟಿನೀಡಿ ಸುಮಾರು ಹದಿನಾರು ಹಡಗುಗಳು ಅಕ್ಕಿಯನ್ನು ತುಂಬಿಕೊಂಡು ವಿದೇಶಕ್ಕೆ ತೆರಳಲು ಸಿದ್ಧವಾಗಿದ್ದವೆಂದು ಉಲ್ಲೇಖಿಸಿದ್ದಾರೆ.

ಕ್ರಿ.ಶ. 1498ರಲ್ಲಿ ಪೋರ್ಚುಗೀಸರು ಮಂಗಳೂರಿಗೆ ಬಂದರು ವಾಸ್ಕೋಡಿಗಾಮ ಮಂಗಳೂರಿನ ಬಳಿ ಸೆಂಟ್ ಮೇರಿ ದೀಪದಲ್ಲಿ ಬಂದು ಇಳಿದನು. ಕ್ರಿ.ಶ. 1520ರ ನಂತರ ಪೋರ್ಚುಗೀಸರು ಈ ಭಾಗದಲ್ಲಿ ನಿಯಂತ್ರಣ ಹೊಂದಿದರು. ಕ್ರಿ.ಶ. 16 ಮತ್ತು 17ನೇ ಶತಮಾನದಲ್ಲಿ ಅರಬ್ಬೀ ಸಮುದ್ರದ ಮೇಲಿನ ಪೋರ್ಚುಗೀಸರ ಒಡೆತನಕ್ಕೆ ಮಂಗಳೂರು ನಗರ ಪ್ರಮುಖ ಕೇಂದ್ರವಾಯಿತು. ಕ್ರಿ.ಶ. 1695ರಲ್ಲಿ ಈ ನಗರವನ್ನು ಅರಬ್ಬರು ಸುಟ್ಟುಹಾಕಿದರು ಆದರೂ ಮತ್ತೆ ಈ ನಗರ ಪುನರ್ ನಿರ್ಮಾಣಗೊಂಡು ತಕ್ಷಣವೇ ತನ್ನ ಅಭಿವೃದ್ಧಿಯನ್ನು ಪಡೆದುಕೊಂಡಿತು. ಈ ನಗರ ಪೋರ್ಚುಗೀಸರು ಮತ್ತು ಅರಬ್ಬರ ಪ್ರಮುಖ ವ್ಯಾಪಾರಿ ಕೇಂದ್ರವಾಗಿತ್ತು. ಇಲ್ಲಿ ಸ್ಥಳೀಯ ಅರಬ್ಬ್ ಜನಾಂಗವನ್ನು ಮಾಪಿಳ್ಳೆಗಳೆಂದು ಕರೆಯುತ್ತಿದ್ದರು. ಪೋರ್ಚುಗೀಸರು ಆಧಿಪತ್ಯಕ್ಕೆ ಬಂದ ನಂತರ ಇದು ಒಂದು ಉತ್ತಮವಾದ ವಾಣಿಜ್ಯ ಕೇಂದ್ರವಾಗಿ ಬೆಳವಣಿಗೆ ಹೊಂದಿತ್ತು.[43] ಮಂಗಳೂರು ಬಂದರು ಅತ್ಯಂತ ಪ್ರಾಚೀನ ಬಂದರುಗಳಲ್ಲಿ ಒಂದಾಗಿದ್ದು ಈ ಬಂದರಿನ ಮೂಲಕ ವಿಶ್ವದ ವಿವಿಧ ಭಾಗಗಳಲ್ಲಿ ವ್ಯಾಪಾರ ನಡೆಯುತ್ತಿತ್ತು. ಇದರಿಂದಾಗಿ ಇದು ಒಂದು ವಾಣಿಜ್ಯ ನಗರವಾಗಿ ಬೆಳವಣಿಗೆ ಹೊಂದುವುದರೊಂದಿಗೆ ನಗರವಾಗಿ ಬೆಳವಣಿಗೆ ಪಡೆದುಕೊಂಡಿತ್ತು.

**ಕ್ಯಾಲಿಕಟ್**

ಕ್ಯಾಲಿಕಟ್ ನಗರವು ಈ ಕಾಲದ ಮತ್ತೊಂದು ಪ್ರಮುಖವಾದ ನಗರವಾಗಿ ಬೆಳವಣಿಗೆ ಹೊಂದಿತ್ತು. ಈ ನಗರವನ್ನು ಸತ್ಯದ ನಗರ, ಸಾಂಬಾರ ಪದಾರ್ಥಗಳ ನಗರ ಮತ್ತು ಶಿಲ್ಪಗಳ ನಗರವೆಂದು ಕರೆಯುತ್ತಾರೆ. ಈ ನಗರ ಕೇರಳದ ಮಲಬಾರ್ ತೀರ ಪ್ರದೇಶದಲ್ಲಿ ಬೆಳವಣಿಗೆ ಹೊಂದಿದೆ. ಈ ಭಾಗವು ಜಾಮೋರಿನ್‌ನಿಂದ ಆಳ್ವಿಕೆಗೆ ಒಳಪಟ್ಟಿತ್ತು. ಕ್ರಿ.ಶ. 7ನೇ ಶತಮಾನದಲ್ಲಿ ಅರಬ್ಬರು ಇಲ್ಲಿ ತಮ್ಮ ವ್ಯಾಪಾರ ಸಂಬಂಧಗಳನ್ನು ಅಭಿವೃದ್ಧಿ ಪಡಿಸಿಕೊಂಡರು. ನಂತರ ಕ್ರಿ.ಶ.

1498ರಲ್ಲಿ ವಾಸ್ಕೋಡಿಗಾಮನು ಭಾರತಕ್ಕೆ ಹೊಸ ಜಲಮಾರ್ಗವನ್ನು ಕಂಡು ಹಿಡಿದು ಈ ನಗರಕ್ಕೆ ಬಂದು ಇಳಿದನು. ಇಲ್ಲಿಂದ ನೇರವಾಗಿ ಯುರೋಪಿನೊಂದಿಗೆ ವ್ಯಾಪಾರ ಸಂಪರ್ಕ ಏರ್ಪಡಿಸಿದನು. ಅರಬ್ಬರು, ಪೋರ್ಚುಗೀಸರು ಮತ್ತು ಚೀನಿಯರು ಇಲ್ಲಿ ವ್ಯಾಪಾರ ಸ್ವಾತಂತ್ರವನ್ನು ಪಡೆದಿದ್ದರು. ಇಬನ್ ಬತೂತನು ಇಲ್ಲಿಗೆ ಭೇಟಿ ನೀಡಿ ಈ ನಗರವನ್ನು ಕುರಿತು ವರ್ಣಿಸಿದ್ದಾನೆ. ಕ್ಯಾಲಿಕಟ್ ಬಂದರು ಪ್ರಮುಖವಾದ ಬಂದರಾಗಿದ್ದು, ಈ ಭಾಗದಲ್ಲಿ ಎಲ್ಲಾ ಬಗೆಯ ವಿಶ್ವದ ವ್ಯಾಪಾರಿಗಳನ್ನು ಕಾಣಬಹುದೆಂದು ಹೇಳಿದ್ದಾನೆ. ಅಬ್ದುಲ್ ರಜಾಕ್ ಭೇಟಿಮಾಡಿ ಈ ನಗರದ ವರ್ಣನೆ ಮಾಡಿದ್ದಾನೆ. ನಿಕೋಲೋ ಡಿ ಕೌಂಟಿಯ ಪ್ರಕಾರ ಇಲ್ಲಿ ಅತಿ ಹೆಚ್ಚಾಗಿ ಸಾಂಬಾರ, ಬೆಳ್ಳುಳ್ಳಿ, ಇನ್ನುಳಿದ ಆಹಾರ ಪದಾರ್ಥಗಳು ಹೆಚ್ಚಾಗಿ ದೊರೆಯುತ್ತಿದ್ದವೆಂದು ಹೇಳಿದ್ದಾನೆ.[44]

ಪೋರ್ಚುಗೀಸರು ಇಲ್ಲಿಗೆ ಆಗಮಿಸಿದ ನಂತರ ಪೋರ್ಚುಗೀಸರು ಮತ್ತು ಅರಬ್ಬರ ನಡುವೆ ದ್ವೇಷ ಅಸೂಯೆಗಳು ಹೆಚ್ಚಾಗ ತೊಡಗಿದವು. ಕೊನೆಗೆ ಜಾಮೋರಿನನು ಅರಬ್ಬರಿಗೆ ಸಹಾಯಮಾಡಿ ಪೋರ್ಚುಗೀಸರಿಗೆ ವಿರೋದ ವ್ಯಕ್ತಪಡಿಸಿದನು. ನಂತರ ಪೋರ್ಚುಗೀಸರು ಕೊಚ್ಚಿನ್‌ನ ರಾಜನೊಂದಿಗೆ ಉತ್ತಮ ಸಬಂಧ ಬೆಳೆಸಿಕೊಂಡರು. ಈ ನಗರ ಒಂದು ಪ್ರಮುಖ ವ್ಯಾಪಾರ ಮತ್ತು ವಾಣಿಜ್ಯದ ಕೇಂದ್ರವಾಗಿದ್ದು ನಗರದ ಬೆಳವಣಿಗೆಗೆ ಪ್ರಮುಖ ಕಾರಣವಾಯಿತು.

**ಕೃಷ್ಣಾಪುರ**

ಕೃಷ್ಣಾಪುರವು ಕೃಷ್ಣದೇವರಾಯನ ಕಾಲದಲ್ಲಿ ನಿರ್ಮಾಣವಾಗಿತ್ತು. ಕೃಷ್ಣಾಪುರವು ಪ್ರಮುಖ ನಗರವಾಗಿತ್ತು, ಕೃಷ್ಣಾಪುರವು ಪ್ರಮುಖ ನಗರವಾಗಿದ್ದು ಕೃಷ್ಣದೇವಾಲಯವನ್ನು ನಿರ್ಮಾಣ ಮಾಡಿದರಿಂದಾಗಿ ಈ ನಗರಕ್ಕೆ ಕೃಷ್ಣಾಪುರ ಎಂಬ ಹೆಸರು ಬಂದಿತು. ಕ್ರಿ.ಶ. 1513ರಲ್ಲಿ ಹೊರಡಿಸಿರುವ ಶಾಸನಗಳ ಪ್ರಕಾರ ಶ್ರೀ ಕೃಷ್ಣದೇವರಾಯನು ಕೃಷ್ಣನ ಮೂರ್ತಿಯನ್ನು ಒರಿಸ್ಸಾದ ಗಜಪತಿಯನ್ನು ಸೋಲಿಸಿ ಉದಯಗಿರಿಯಿಂದ ತಂದು ಇಲ್ಲಿ ಸ್ಥಾಪಿಸಿದನು.

ವಿಜಯನಗರ ಆಡಳಿತ ಅವಧಿಯಲ್ಲಿ ಕೃಷ್ಣಾಪುರವು ಕೇವಲ ಒಂದು ಧಾರ್ಮಿಕ ಕೇಂದ್ರವಾಗಿರದೇ ಪ್ರಮುಖವಾದ ವ್ಯಾಪಾರ ವಾಣಿಜ್ಯ ಕೇಂದ್ರವಾಗಿ ಬೆಳವಣಿಗೆ ಪಡೆದಿತ್ತು. ಈ ನಗರದಲ್ಲಿ ಬ್ರಾಹ್ಮಣರ ಮನೆಗಳು, ಪೇಟೆಗಳು ಹೆಚ್ಚು ಬೆಳವಣಿಗೆ ಹೊಂದಿದ್ದವು. ಅಚ್ಚುತರಾಯನ ವಾರ್ಷಿಕ 800 ಗದ್ಯಾಣಗಳನ್ನು ಈ ನಗರದ ಬೆಳವಣಿಗೆಗೆ ದಾನವಾಗಿ ನೀಡಿದ್ದನು. ಇತ್ತೀಚಿನ ಸಂಶೋಧನೆಗಳ ಪ್ರಕಾರ ಈ ನಗರದಲ್ಲಿ ಚೀನಾ ದೇಶಕ್ಕೆ ಸಂಬಂಧಿಸಿದ ಹಲವಾರು ಪರಿಕರಗಳು ಮತ್ತು ಪತ್ರಗಳು ದೊರೆತಿವೆ. ಬಾರ್ಬೋಸನ ಪ್ರಕಾರ ಈ ನಗರವು ಅಂತರರಾಷ್ಟ್ರೀಯ

ವ್ಯಾಪಾರದಲ್ಲಿ ಚೀನಾದೊಂದಿಗೆ ಸಂಬಂಧ ಹೊಂದಿತ್ತೆಂದು ವಿವರಣೆ ನೀಡಿದ್ದಾನೆ. ಮುತ್ತುಗಳು, ರತ್ನಗಳು ಮತ್ತು ಬೆಲೆಬಾಳುವ ವಸ್ತುಗಳು ಓರ್ಮಜ್ ಮತ್ತು ಶ್ರೀಲಂಕಾದಿಂದ ಆಮದಾಗುತ್ತಿದ್ದವು. ಈ ನಗರದ ವ್ಯಾಪಾರದಿಂದಾಗಿ ಈ ನಗರ ಪ್ರಾಮುಖ್ಯತೆಗಳಿಸಿತ್ತು.

**ವಿಠಲಪುರ**

ವಿಠಲಪುರ ವಿಜಯನಗರ ಸಾಮ್ರ್ಯಾಜ್ಯದಲ್ಲಿ ಬೆಳವಣಿಗೆ ಹೊಂದಿದ್ದ ಪ್ರಮುಖವಾದ ಮತ್ತೊಂದು ನಗರವಾಗಿತ್ತು. ಈ ನಗರವು ತುಂಗಭದ್ರ ನದಿಯ ದಕ್ಷಿಣದ ದಂಡೆಯಲ್ಲಿ ಬೆಳವಣಿಗೆ ಹೊಂದಿತ್ತು. ಈ  ನಗರದ ಪ್ರಮುಖವಾದ ಕೇಂದ್ರವೇ ವಿಠಲದೇವಸ್ಥಾನ. ಈ ದೇವರಿಂದಲೇ ಈ ನಗರಕ್ಕೆ ವಿಠಲಪುರವೆಂದು ಕರೆಯಲಾಗಿದೆ. ಇಲ್ಲಿ ವಿಠಲ ಬಜಾರು ನಿರ್ಮಾಣವಾಗಿತ್ತು. ಈ ಬಜಾರ್‌ನಲ್ಲಿ ಅಮೂಲ್ಯವಾದ ಸರಕುಗಳನ್ನು ಇಲ್ಲಿ ಮಾರಾಟ ಮಾಡಲಾಗುತ್ತಿತ್ತು. ಈ ನಗರದಲ್ಲಿನ ದೇವಾಲಯಗಳು ವ್ಯಾಪಾರ ಮತ್ತು ವಾಣಿಜ್ಯಕ್ಕೆ ಬಹಳಷ್ಟು ಪ್ರಾಮುಖ್ಯತೆಗೊಳಿಸಿದ್ದವು. ಇಲ್ಲಿಗೆ ಬರುತ್ತಿದಂತಹ ಎಲ್ಲಾ ವ್ಯಾಪಾರಿಗಳು ದೇವಾಲಯಗಳಿಗೆ ದಾನದತ್ತಿಗಳನ್ನು ನೀಡುವ ಮೂಲಕ ದೇವಾಲಯಗಳ ಅಭಿವೃದ್ಧಿಗೆ ಕಾರಣರಾಗಿದ್ದರು. ಇವು ನಗರಗಳ ಬೆಳವಣಿಗೆಗೂ ಕೂಡ ಕಾರಣವಾದವು.[45]

ಹೀಗೆ ಈ ಮೇಲ್ಕಂಡ ನಗರಗಳ ಬೆಳವಣಿಗೆಯಿಂದಾಗಿ ವಿಜಯನಗರ ಸಾಮ್ರಾಜ್ಯವು ಶ್ರೀಮಂತಿಕೆಯನ್ನು ಪಡೆದುಕೊಂಡು ಒಂದು ದೊಡ್ಡ ಸಾಮ್ರಾಜ್ಯವಾಗಿ ಬೆಳವಣಿಗೆ ಪಡೆಯಿತು. ನಗರಗಳ ಬೆಳವಣಿಗೆ ವ್ಯಾಪಾರ ಮತ್ತು ವಾಣಿಜ್ಯಕ್ಕೆ ಹೆಚ್ಚು ಪ್ರಾಮುಖ್ಯತೆ ನೀಡಿದವು. ಆಂತರಿಕ ವ್ಯಾಪಾರ ಮತ್ತು ಅಂತರರಾಷ್ಟ್ರೀಯ ವ್ಯಾಪಾರವು ಇಲ್ಲಿ ಹೆಚ್ಚಾಗಿ ಬೆಳವಣಿಗೆ ಹೊಂದಲು ಕಾರಣವಾಯಿತು. ವಿಜಯನಗರ ಸಾಮ್ರಾಜ್ಯವು ತನ್ನ ಆಡಳಿತದ ಅವಧಿಯಲ್ಲಿ  ವಿವಿಧ ಬಗೆಯ ಸರಕುಗಳ ವ್ಯಾಪಾರದಲ್ಲಿ ತೊಡಗಿಸಿಕೊಂಡಿತ್ತು. ದೇಶೀಯ ವಿದೇಶಿಯ ಸರಕುಗಳು ಇಲ್ಲಿ ವ್ಯಾಪಾರದ ಸರಕುಗಳಾಗಿದ್ದವು. ಹೀಗೆ ನಗರಗಳ ಬೆಳವಣಿಗೆ ವ್ಯಾಪಾರದ ಅಭಿವೃದ್ಧಿಗೂ ಕಾರಣವಾಗಿತ್ತು.

**6.5 ವ್ಯಾಪಾರಿ ಸಂಘಗಳು**

ವಿಜಯನಗರ ಆಡಳಿತ ಅವಧಿಯಲ್ಲಿ ಹಲವಾರು ವ್ಯಾಪಾರ ಸಂಘಗಳೂ ವ್ಯಾಪಾರದ ಅಭಿವೃದ್ಧಿಗೆ ಬಹಳಷ್ಟು ಕಾಣಿಕೆ ನೀಡಿವೆ. ಯಾವುದೇ ವ್ಯಾಪಾರದ ಬೆಳವಣಿಗೆಗೆ ವ್ಯಾಪಾರಿಗಳು ಕಾರಣಕರ್ತರಾಗುತ್ತಾರೆ. ಈ ಎಲ್ಲಾ ವ್ಯಾಪಾರಿಗಳು ಸೇರಿಕೊಂಡು ತಮ್ಮ ವ್ಯಾಪಾರದ ರಕ್ಷಣೆ

ಮತ್ತು ಅಭಿವೃದ್ಧಿಗೆ ತಮ್ಮದೇ ಯಾದ ವ್ಯಾಪಾರಿ ಸಂಸ್ಥೆಗಳನ್ನು ಕಟ್ಟಿಕೊಂಡಿದ್ದರು. ಈ ವ್ಯಾಪಾರಿ ಸಂಘಗಳು ಕೇವಲ ವ್ಯಾಪಾರ ಮತ್ತು ವಾಣಿಜ್ಯದ ಚಟುವಟಿಕೆಗಳಿಗೆ ಸೀಮಿತವಾಗಿರದೇ ಅನ್ಯ ಧಾರ್ಮಿಕ ಬೆಳವಣಿಗೆಗೆ ಆರ್ಥಿಕ ಬೆಳವಣಿಗೆಗೆ ಪ್ರಮುಖಪಾತ್ರವನ್ನು ಸಹ ವಹಿಸುತ್ತಿದ್ದವು. ವರ್ತಕ ಸಮುದಾಯವು ಪ್ರಾಚೀನ ಕಾಲದಿಂದಲೂ ಬೆಳವಣಿಗೆ ಹೊಂದಿಕೊಂಡು ಬಂದ ಪ್ರಮುಖವಾದ ಸಂಘಟನೆಗಳಾಗಿದ್ದವು. ಮೌರ್ಯರ ಆಡಳಿತದಲ್ಲಿ ಶಾತವಾಹನರು ವ್ಯಾಪಾರ ಮತ್ತು ವಾಣಿಜ್ಯವನ್ನು ಕೈಗೊಂಡಿದ್ದರು. ನಂತರ ಅವರು ತಮ್ಮದೇ ಸಾಮಾರ್ಥದಿಂದ ಸಾಮ್ರಾಜ್ಯವನ್ನು ಕಟ್ಟಿ ಬೆಳೆಸಿದರು. ಹೀಗೆ ವರ್ತಕ ಸಮುದಾಯಗಳು ವ್ಯಾಪಾರದಿಂದ ಸಾಮ್ರಾಜ್ಯದ ನಿರ್ಮಾಣದವರೆಗೆ ತಮ್ಮ ವರ್ಚಸ್ಸನ್ನು ಬೆಳೆಸಿಕೊಂಡಿದುದರ ಬಗ್ಗೆ ಬಹಳಷ್ಟು ಉಲ್ಲೇಖಗಳಿವೆ.

ವ್ಯಾಪಾರಿ ಸಂಘಗಳು ಸಾಮ್ರಾಜ್ಯದ ವಿವಿಧ ಭಾಗಗಳಿಂದ ಸರಕುಗಳನ್ನು ಕೊಂಡುಕೊಂಡು ಬಂದು ಪ್ರಮುಖ ಕೇಂದ್ರಗಳಲ್ಲಿ ಮರಾಟ ಮಾಡುತ್ತಿದ್ದರು. ವಿದೇಶೀ ವ್ಯಾಪಾರದಲ್ಲೂ ಈ ಸಂಘಗಳು ಪ್ರಮುಖ ಪಾತ್ರವನ್ನು ವಹಿಸಿದ್ದವು. ವಿದೇಶದಿಂದ ಬರುವ ಸರಕುಗಳನ್ನು ಸಾಮ್ರಾಜ್ಯದ ವಿವಿಧ ಮೂಲೆಗಳಲ್ಲಿ ತೆಗೆದುಕೊಂಡು ಹೋಗಿ ಮಾರಾಟ ಮಾಡುತ್ತಿದ್ದರು. ಕರಾವಳಿ ತೀರದ ವ್ಯಾಪಾರ ಬಹಳಷ್ಟು ಪ್ರಾಮುಖ್ಯತೆಗಳಿಸಿತ್ತು. ಕಡಲ ತೀರದ ಬಂದರುಗಳಿಗೆ ಪ್ರದೇಶಗಳ ಬಂದರುಗಳಿಗೆ ಈ ವ್ಯಾಪಾರಿ ಸಂಘಗಳು ಪ್ರಮುಖವಾಗಿ ಸರಕುಗಳನ್ನು ಸರಬರಾಜು ಮಾಡುತ್ತಿದ್ದವು. ಕಡಲಿನ ಹಿನ್ನಾಡಿನ ಪ್ರದೇಶಗಳಿಂದ ವಿದೇಶಕ್ಕೆ ರಫ್ತು ಮಾಡುತ್ತಿದ್ದ ಸರಕುಗಳನ್ನು ತಂದು ವಿದೇಶಿ ವರ್ತಕರಿಗೆ ಮಾರಾಟ ಮಾಡಿ ಅವರಿಂದ ಸರಕುಗಳನ್ನು ಪಡೆದುಕೊಂಡು ವ್ಯಾಪಾರ ಮಾಡುತ್ತಿದ್ದರು. ಹೀಗೆ ಈ ಸರಕುಗಳ ವಿನಿಮಯದಿಂದ ವ್ಯಾಪಾರ ಮತ್ತು ವಾಣಿಜ್ಯವು ಅಭಿವೃದ್ಧಿ ಹೊಂದಿ ಆರ್ಥಿಕವಾಗಿ ಸಾಮ್ರಾಜ್ಯ ಬೆಳವಣಿಗೆ ಹೊಂದಲು ಕಾರಣವಾಯಿತು. [46]

ವ್ಯಾಪಾರಿ ಸಂಘಗಳು ಅವುಗಳ ರಚನೆ ಮತ್ತು ಚಟುವಟಿಕೆಗಳ ಆಧಾರದ ಮೇಲೆ ಹಲವಾರು ಗುಂಪುಗಳಾಗಿ ವಿಂಗಡಿಸಲಾಗಿತ್ತು. ಈ ವ್ಯಾಪಾರಿ ಸಂಘಗಳಲ್ಲಿ ದೇಶೀಯ ವ್ಯಾಪಾರಿ ಸಂಘಗಳು ಮತ್ತು ವಿದೇಶೀ ವ್ಯಾಪಾರಿ ಸಂಘಗಳೆಂದು ಎರಡು ಬಗೆಗಳಿದ್ದವು. ಸ್ಥಳೀಯ ವ್ಯಾಪಾರಗಳು ತಮ್ಮದೇ ಜನಾಂಗದೊಂದಿಗೆ ರಚಿಸಿಕೊಂಡಿದ್ದ ವ್ಯಾಪಾರಿ ಸಂಘಗಳನ್ನು ದೇಶೀಯ ವ್ಯಾಪಾರಿ ಸಂಘಗಳೆಂದು ಕರೆಯುತ್ತಿದ್ದರು. ವಿದೇಶೀ ವ್ಯಾಪಾರಿ ಸಂಘಗಳು ವಿದೇಶಿಯರಿಂದ

ಸಂಘಟಿತವಾಗಿತ್ತು, ಈ ಎರಡು ವ್ಯಾಪಾರ ಸಂಘಗಳು ವ್ಯಾಪಾರ ಕ್ಷೇತ್ರದಲ್ಲಿ ಬಹಳಷ್ಟು ಪ್ರಾಮುಖ್ಯತೆಗಳಿಸಿದ್ದವು.

**ದೇಶೀಯ ವ್ಯಾಪಾರ ಸಂಘಗಳು**

ಸಾಮ್ರಾಜ್ಯದಲ್ಲಿ ವ್ಯಾಪಾರ ವಹಿವಾಟಿಗೆ ಹುಟ್ಟಿಕೊಂಡ ಸಂಘಗಳಿವು. ಸ್ಥಳೀಯ ವ್ಯಾಪಾರಗಳಿಂದ ರಚನೆಗೊಂಡಿದ್ದ ಈ ವ್ಯಾಪಾರಿ ಸಂಘಗಳು ಆಂತರಿಕ ವ್ಯಾಪಾರವನ್ನು ಅಭಿವೃದ್ಧಿ ಪಡಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದವು. ಈ ವ್ಯಾಪಾರಿ ಸಂಘಗಳು ಮುಖ್ಯವಾಗಿ ಒಳನಾಡಿನಲ್ಲಿ ದೊರಕುತ್ತಿದ್ದವು. ಸರಕುಗಳನ್ನು ಮಾರಾಟ ಮಾಡುತ್ತಿದ್ದವು. ಈ ಸಂಘಗಳು ಬೇರೆ ಬೇರೆ ಪ್ರದೇಶಗಳಿಗೆ ಭೇಟಿ ನೀಡಿ ಸ್ಥಳೀಯ ಕುಶಲ ಕರ್ಮಿಗಳು ಹಾಗೂ ರೈತರು ಬೆಳೆದ ಮತ್ತು ತಯಾರಿಸಿದ ವಸ್ತುಗಳನ್ನು ಕೊಂಡುಕೊಂಡು ಬಂದರುಗಳಿಗೆ ತಂದು ಅಲ್ಲಿ ವಿದೇಶೀಯರಿಗೆ ಮಾರಾಟ ಮಾಡುತ್ತಿದ್ದರು. ಬಣಜಿಗ ಶೆಟ್ಟಿ, ಐಹೊಳೆ 500, ನಾನಾದೇಶೀ ಮತ್ತು ಉಭಯ ನಾನಾ ದೇಶೀಗಳು ಪ್ರಮುಖ ದೇಶೀಯ ವ್ಯಾಪಾರಿ ಸಂಘಗಳಾಗಿದ್ದವು. ಪ್ರಮುಖ ಕೆಲವು ವ್ಯಾಪಾರಿ ಸಂಘಗಳ ಬೆಳವಣಿಗೆ ಅವುಗಳ ಚಟುವಟಿಕೆ ಕುರಿತು ಈ ಕೆಳಕಂಡಂತೆ ವಿವರಿಸಲಾಗಿದೆ.

**ಬಣಜಿಗರು**

ವ್ಯಾಪಾರಿ ವರ್ಗಗಳಲ್ಲಿ ಬಣಜಿಗವು ಪ್ರಮುಖವಾದ ಒಂದು ವ್ಯಾಪಾರಿ ವರ್ಗವಾಗಿತ್ತು. ಮಧ್ಯಕಾಲೀನ ಭಾರತದ ಹಲವಾರು ಶಾಸನಗಳಲ್ಲಿ ಬಣಜಿಗ ವ್ಯಾಪಾರಿವರ್ಗವು ಆರ್ಥಿಕ ಚಟುವಟಿಕೆಗಳ ಬಗ್ಗೆ ಬೆಳಕು ಚೆಲ್ಲಿದ್ದಾರೆ. ಬಣಜಿಗ ಪದವು ಸಂಸ್ಕೃತ ಪದವಾದ ವ್ಯಾನಿಕ್ ಎಂಬ ಪದದಿಂದ ಬಂದಿದ್ದು. ಈ ಪದವು ವ್ಯಾಪಾರಿ ಎಂಬ ಅರ್ಥವನ್ನು ನೀಡುತ್ತದೆ. ಈ ವ್ಯಾಪಾರಿ ಸಂಘಟನೆಯಲ್ಲಿ ಯಾವುದೇ ಜಾತಿಧರ್ಮಗಳ ಬೇದಭಾವವಿಲ್ಲದೆ ಎಲ್ಲರೂ ಒಟ್ಟಾಗಿ ಸಂಘಟಿತರಾಗಿದ್ದರು ಈ ಮಾದರಿಯ ಬಣಜಿಗ ವ್ಯಾಪಾರಿ ಸಂಘಟನೆ ವಿಜಯನಗರ ಕಾಲದಲ್ಲಿ ಆಂಧ್ರಪ್ರದೇಶದ ರಾಯಲ್ ಸೀಮದಲ್ಲಿ ಹೆಚ್ಚಾಗಿ ಕಾರ್ಯನಿರ್ವಹಿಸುತ್ತಿದ್ದವು.

**ವೀರಬಣಜಿಗರು**

ವೀರ ಬಣಜಿಗರು ಮತ್ತೊಂದು ಪ್ರಮುಖವಾದ ವ್ಯಾಪಾರಿ ಸಂಘಟನೆಯಾಗಿದ್ದು ವ್ಯಾಪಾರ ಮತ್ತು ವಾಣಿಜ್ಯದಲ್ಲಿ ತೊಡಗಿಸಿಕೊಂಡಿತ್ತು. ವೀರ ಬಣಜಿಗವು ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರ ಸಂಘಟನೆಯಾಗಿತ್ತು. ಈ ವೀರ ಬಣಜಿಗರು ಸ್ವತಂತ್ರವಾಗಿ ಸಂಘಟಿತರಾಗಿದ್ದರು.ಈ

ಸಂಘಟನೆಯು ಮುಖ್ಯ ವಾಣಿಜ್ಯ ಕೇಂದ್ರಗಳಲ್ಲಿ ರಚನೆಗೊಂಡಿತ್ತು. ಈ ಸಂಘಟನೆಯ ವ್ಯಾಪಾರಿಗಳು ತಮಿಳು, ತೆಲಗು ಮತ್ತು ಕನ್ನಡ ಭಾಷೆಗಳನ್ನು ಮಾತನಾಡುತ್ತಿದ್ದರು. ವೀರಬಣಜಿಗರು ವೀಳ್ಯದ ಎಲೆ ಮಾರಾಟ ಮಾಡುತ್ತಿದ್ದರು. ವೀರಬಣಜಿಗರು ಪ್ರಮುಖವಾದ ಸಂಘಟನೆಯಾಗಿದ್ದು ಹತ್ತಿಬಟ್ಟೆ ವ್ಯಾಪಾರ, ಬಳೆಗಳ ವ್ಯಾಪಾರ ಹಾಗೂ ಹೂವಿನ ವ್ಯಾಪಾರವನ್ನು ಮಾಡುತ್ತಿದ್ದರು.

**ಸಾಲು ಮೌಲೆ ಬಣಜಿಗ**

ವಿಜಯನಗರ ಕಾಲದಲ್ಲಿ ಬಣಜಿಗ ಸಂಘಟನೆಯ ಮತ್ತೊಂದು ಉಪ ವ್ಯಾಪಾರಿ ಸಂಘಟನೆ ಸಾಲು ಮೌಲೆ ಬಣಜಿಗವಾಗಿತ್ತು. ಕ್ರಿ.ಶ. 1398ರ ಬೇಲೂರು ಶಾಸನದ ಉಲ್ಲೇಖಗಳ ಪ್ರಕಾರ ಸಾಲು ಮೌಲೆ ಬಣಜಿಗವು ಒಂದು ಉತ್ತಮವಾದ ವ್ಯಾಪಾರಿ ಸಂಘಟನೆಯಾಗಿತ್ತು. ಈ ಸಂಘಟನೆಯು ವಿಜಯನಗರ ಸಾಮ್ರಾಜ್ಯದೊಂದಿಗೆ ಸಂಯೋಜನೆಗೊಂಡಿತ್ತು. ಈ ಸಂಘಟನೆಯು ವಿಜಯನಗರ ಸಾಮ್ರಾಜ್ಯದೊಂದಿಗೆ ತೆರಿಗೆಗೆ ಸಂಬಂಧಿಸಿದ ಒಪ್ಪಂದಗಳಿಗೆ ಅವು ಸಹಿ ಮಾಡಿದ್ದವು. ಕ್ರಿ.ಶ. 1379ರ ಶಿರಾದಲ್ಲಿ ದೊರಕಿರುವ ಶಾಸನದ ಪ್ರಕಾರ ಈ ವ್ಯಾಪಾರಿ ಸಂಘಟನೆಯ ಇಬ್ಬರು ವ್ಯಾಪಾರಿಗಳು ನಾಯಕನ ವಿರುದ್ಧ ಮಾತನಾಡಿದ್ದರು. ಅವರನ್ನು ಕ್ಷಮಿಸಿ ಮತ್ತೆ ವ್ಯಾಪಾರಕ್ಕೆ ಅವಕಾಶ ಕೊಡಲಾಗಿತ್ತು ಹಾಗೂ ವ್ಯಾಪಾರಕ್ಕೆ ಧಕ್ಕೆಯಾಗದಂತೆ ಕಾನೂನುಗಳನ್ನು ರಚಿಸಲಾಯಿತು.[47]

**ಶೆಟ್ಟಿಗಳು**

ಬಣಜಿಗ ಸಂಘಟನೆಗಳ ನಂತರ ವಿಜಯನಗರ ಕಾಲದಲ್ಲಿ ಬೆಳವಣಿಗೆ ಹೊಂದಿದ್ದ ಮತ್ತೊಂದು ಸಂಘಟನೆ ಅದುವೇ ಶೆಟ್ಟಿಗಳು. ಇದು ದಕ್ಷಿಣಭಾರತದ ಮಧ್ಯಮ ವರ್ಗದ ಜನರಿಂದ ರಚನೆಗೊಂಡಿದ್ದವು. ಇವರನ್ನು ಚೆಟ್ಟಿಗಳೆಂದು ಸಹ ಕರೆಯುತ್ತಿದ್ದರು. ಈ ಸಂಘಟನೆಗಳು ಆರ್ಥಿಕ ಅಭಿವೃದ್ಧಿಯಲ್ಲಿ ಬಹಳ ಪ್ರಮುಖಪಾತ್ರ ವಹಿಸಿದ್ದವು. ಈ ವ್ಯಾಪಾರ ಸಂಘಗಳ ಪ್ರಮುಖ ಕರ್ತವ್ಯ ವ್ಯಾಪಾರ ವಾಣಿಜ್ಯ ಮತ್ತು ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದವು. ಕನ್ನಡ ಶಾಸನಗಳು ಉಲ್ಲೇಖಿಸುವ ಪ್ರಕಾರ ಈ ಸಂಘಟನೆಗಳು ವಾಣಿಜ್ಯ ಮತ್ತು ಧಾರ್ಮಿಕ ಚಟುವಟಿಕೆಗಳನ್ನು ಕೈಗೊಳ್ಳುತ್ತಿದ್ದವು. ವಿಜಯನಗರ ಕಾಲದಲ್ಲಿ ವ್ಯಾಪಾರಿ ಸಂಘಟನೆಗಳು ಮುಖ್ಯವಾಗಿ ಬಟ್ಟೆಗಳು, ಆಭರಣಗಳು ಮತ್ತು ಸಾಂಬಾರ ಪದಾರ್ಥಗಳನ್ನು ಮಾರಾಟ ಮಾಡುತ್ತಿದ್ದರು. ವಿದೇಶೀ ಪ್ರವಾಸಿಗನಾದ ಬಾರ್ಬೋಸನ ಪ್ರಕಾರ ಶೆಟ್ಟಿ ವ್ಯಾಪಾರಿ ಸಂಘಗಳು ಮಲಬಾರ್ ಮತ್ತು ಕೋರಮಂಡಲ ಭಾಗಗಳಲ್ಲಿ ಅತಿ ಹೆಚ್ಚಾಗಿ

ವ್ಯಾಪಾರ ವಹಿವಾಟು ನಡೆಸುತ್ತಿದ್ದರೆಂದು ಹೇಳಿದ್ದಾನೆ. ಶೆಟ್ಟಿಗಳು ಮುದಗಲ್‌ನಲ್ಲಿ ಪ್ರಮುಖವಾದ ಒಂದು ವ್ಯಾಪಾರ ಕೇಂದ್ರವನ್ನು ಸ್ಥಾಪಿಸಿದ್ದರು. ಈ ಸಂಘಟನೆಯು ಕೇವಲ ವ್ಯಾಪಾರ ವಾಣಿಜ್ಯ ಲಾಭದ ಉದ್ದೇಶವಲ್ಲದೇ ದೇವದಾಸಿಗಳ ನಿರ್ಮಾಣದಲ್ಲೂ ತೊಡಗಿದ್ದರು.[48]

**ನಾನಾದೇಶಿ**

ನಾನಾದೇಶಿ ವಿಜಯನಗರ ಕಾಲದ ಪ್ರಮುಖ ವ್ಯಾಪಾರಿ ಸಂಘಟನೆಗಳಾಗಿದ್ದವು. ಈ ಸಂಘಟನೆಗಳು ವಿಜಯನಗರ ಸಾಮ್ರಾಜ್ಯದ ಪೂರ್ವಕಾಲದಲ್ಲಿಯೇ ರಚನೆಯಾಗಿ ವಿಜಯನಗರ ಕಾಲದಲ್ಲಿ ಪ್ರಮುಖವಾದ ಪಾತ್ರವನ್ನು ನಿರ್ವಹಿಸಿದವು. ನಾನಾದೇಶೀ ವ್ಯಾಪಾರಿ ಸಂಘಟನೆಯು ಮುಖ್ಯವಾಗಿ ವಿದೇಶೀ ವ್ಯಾಪಾರವನ್ನು ನಿಯಂತ್ರಿಸುತ್ತಿತ್ತು. ಅರಬ್ ಪ್ರವಾಸಿಗರಾದ ಇರ್ದಸಿ, ಯಾಕುತ್, ಅಬ್ದುಲ್‌ವದ, ಚೌ–ಜು–ಕೌ ಮತ್ತು ಮಾರ್ಕೋಪೊಲೊ ರವರ ಪ್ರಕಾರ ಹೊನ್ನಾವರ, ಭಟ್ಕಳ ಮತ್ತು ಮಂಗಳೂರು ಭಾಗಗಳಲ್ಲಿ ಈ ಸಂಘಟನೆ ವಿದೇಶೀ ವ್ಯಾಪಾರದ ಮೇಲೆ ನಿಯಂತ್ರಣ ಹೊಂದಿದ್ದರು ಎಂದು ತಿಳಿಸಿದ್ದಾರೆ. ವಿದೇಶೀ ವ್ಯಾಪಾರಿಗಳು ಸ್ಥಳೀಯ ನಾನಾದೇಶಿ ವ್ಯಾಪಾರಿಗಳಿಂದ ಸರಕುಗಳನ್ನು ಕೊಂಡುಕೊಂಡು ತಮ್ಮ ದೇಶಗಳಿಗೆ ಕೊಂಡೊಯ್ಯುತ್ತಿದ್ದರು. ಶಾಸನಗಳು ಉಲ್ಲೇಖಿಸುವ ಪ್ರಕಾರ ಈ ಸಂಘಟನೆಯು ಆರು ಖಂಡಗಳೊಂದಿಗೆ ವ್ಯಾಪಾರ ಸಂಪರ್ಕವನ್ನು ಹೊಂದಿತ್ತು. ಇದರೊಂದಿಗೆ ಪರ್ಷಿಯಾ ದೇಶವು ಅತಿ ಹೆಚ್ಚು ವಾಣಿಜ್ಯ ಸಂಪರ್ಕ ಹೊಂದಿತ್ತು. ಇದರೊಂದಿಗೆ ಇವರು ಇಂಡೋನೇಷ್ಯಾ, ಚೀನಾ, ಮಲಕ್ಕಾ ಮತ್ತು ಪಾರ್ಮೋಸ ಸಂಪರ್ಕ ಹೊಂದಿದ್ದವು.

**ಉಭಯನಾನಾದೇಶಿ**

ಉಭಯ ನಾನಾದೇಶಿ ವ್ಯಾಪಾರ ಸಂಘಟನೆಯೂ ಮುಖ್ಯವಾಗಿ ಆಮದು ಮತ್ತು ರಫ್ತು ವಹಿವಾಟಿನಲ್ಲಿ ಪ್ರಮುಖವಾಗಿ ತೊಡಗಿಸಿಕೊಂಡಿತ್ತು. ಕ್ರಿ.ಶ. 1404ರ ಕೋಲಾರದ ಶಾಸನದ ಪ್ರಕಾರ ಒಂದನೇ ದೇವರಾಯನು ಉಭಯ ನಾನಾದೇಶಿಯ ಸಂಘಟನೆಯ ನಾಯಕನಾದ ಮಹಾವದೇವನ ಹರಿಯನ್ನು ಭೇಟಿ ಮಾಡಿದ ವಿಚಾರವನ್ನು ಉಲ್ಲೇಖಿಸುತ್ತದೆ.ಈ ಸಂಘಟನೆಯು ಭೂಮಿ ಮತ್ತು ಹಣವನ್ನು ದೇವಾಲಯದ ಅಭಿವೃದ್ಧಿಗೆ ದಾನವಾಗಿ ನೀಡುತ್ತಿತ್ತು.[49] ವಿಜಯನಗರ ಕಾಲದಲ್ಲಿ ಈ ಸಂಘಟನೆಯು ಬಹಳಷ್ಟು ಸಕ್ರಿಯವಾಗಿತ್ತು. ಈ ಸಂಘಟನೆಗಳು ಕೇಂದ್ರಿಯ ಮತ್ತು ಸ್ಥಳೀಯ ಸರ್ಕಾರಗಳ ಮೇಲೆ ಪ್ರಭಾವವನ್ನು ಸಹ ಹೊಂದಿದ್ದರು. ಸರ್ಕಾರಗಳು ಈ ಸಂಘಟನೆಗಳ ಬೇಡಿಕೆಗಳನ್ನು ಕ್ಷಣಾರ್ಧದಲ್ಲಿಯೇ ಹಿಡೇರಿಸುತ್ತಿದ್ದವು.

**ಮುಮುರಿದಂಡಸ್**

ಮುಮುರಿದಂಡಸ್ ಮಧ್ಯಕಾಲೀನ ಕರ್ನಾಟಕದಲ್ಲಿನ ಮತ್ತೊಂದು ಪ್ರಮುಖ ವ್ಯಾಪಾರಿ ಸಂಘಟನೆಯಾಗಿತ್ತು. ವಿಜಯನಗರ ಸಾಮ್ರಾಜ್ಯದಲ್ಲಿ ಈ ಮುಮುರಿದಂಡಸ್ ಸಂಘಟನೆಗಳು ಬಹಳಷ್ಟು ಸಕ್ರಿಯವಾಗಿದ್ದವು. ಮುಖ್ಯವಾಗಿ ಚಿತ್ರದುರ್ಗ, ಶಿವಮೊಗ್ಗ, ತುಮಕೂರು, ಬಳ್ಳಾರಿ, ಬಿಜಾಪುರ, ಧಾರವಾಡ, ಬೆಳಗಾಂ ಮತ್ತು ರಾಯಚೂರು ಭಾಗಗಳಲ್ಲಿ ಇವು ವ್ಯಾಪಾರ ವಾಣಿಜ್ಯದಲ್ಲಿ ತೊಡಗಿಸಿಕೊಂಡಿದ್ದವು. ಈ ಸಂಘಟನೆಯು ಐದುನೂರು ಐಹೊಳೆ ಸ್ವಾಮೀಸ್ ಜೊತೆಗೆ ಸಂಘಟನೆಗೊಂಡಿತ್ತು. ಈ ಸಂಘಟನೆಗಳು ವ್ಯಾಪಾರ ಮತ್ತು ವಾಣಿಜ್ಯದೊಂದಿಗೆ ದೇವಾಲಯಗಳಿಗೆ ದಾನದತ್ತಿಗಳನ್ನು ನೀಡುತ್ತಿದ್ದವು. ಈ ಸಂಘಟನೆಯ ಮುಖ್ಯಸ್ಥರು ದೇವಾಲಯಗಳ ಧರ್ಮದರ್ಶಿಗಳಾಗಿ ಕಾರ್ಯನಿರ್ವಹಿಸುತ್ತಿದ್ದರು. ತಮ್ಮ ಆದಾಯದ ಒಂದಷ್ಟು ಭಾಗವನ್ನು ಅವರು ತಮ್ಮ ದೇವಾಲಯಗಳಿಗೆ ದಾನವಾಗಿ ನೀಡುತ್ತಿದ್ದರು. ಹೀಗೆ ಈ ಮೇಲ್ಕಂಡ ಪ್ರಮುಖ ವ್ಯಾಪಾರಿ ಸಂಘಗಳು ಆಂತರಿಕ ವ್ಯಾಪಾರದಲ್ಲಿ ಪ್ರಮುಖಪಾತ್ರ ವಹಿಸಿದ್ದವು.

**ವಿದೇಶೀ ವ್ಯಾಪಾರಿ ಸಂಘಗಳು**

ಅರಬ್ಬರು ಮತ್ತು ಪೋರ್ಚುಗೀಸರು ವಿಜಯನಗರ ಸಾಮ್ರಾಜ್ಯದೊಂದಿಗೆ ನೇರವಾದ ವ್ಯಾಪಾರ ಸಂಪರ್ಕವನ್ನು ಹೊಂದಿದ್ದರು. ಈ ದೇಶದ ವ್ಯಾಪಾರಿಗಳು ಅತಿ ಹೆಚ್ಚಾಗಿ ವಿಜಯನಗರ ಸಾಮ್ರಾಜ್ಯದಲ್ಲಿ ನೆಲೆಸಿದ್ದರು. ಈ ವ್ಯಾಪಾರಿಗಳು ತಮ್ಮ ವ್ಯಾಪಾರದ ಅನುಕೂಲಕ್ಕಾಗಿ ಸಂಘಟನೆಗಳನ್ನು ನಿರ್ಮಿಸಿಕೊಂಡಿದ್ದರು. ಕರ್ನಾಟಕದ ಕರಾವಳಿಯಿಂದ ವ್ಯಾಪಾರ ನಡೆಸುತ್ತಿದ್ದಾಗ ಕೇವಲ ದೇಶೀಯ ವ್ಯಾಪಾರಿ ಸಂಘಟನೆಗಳಲ್ಲದೆ ವಿದೇಶೀ ಸಂಘಗಳು ಬಹಳಷ್ಟು ಸಕ್ರಿಯವಾಗಿದ್ದವು. ಭಾರತದ ಸರಕುಗಳಿಗೆ ವಿದೇಶದಲ್ಲಿ ಬಹಷ್ಟು ಬೇಡಿಕೆ ಇತ್ತು. ಅದರಿಂದಾಗಿ ಅವರು ಭಾರತಕ್ಕೆ ಬಂದು ಸರಕುಗಳನ್ನು ಹಡಗುಗಳ ಮೂಲಕ ಕೊಂಡೊಯ್ಯುತ್ತಿದ್ದರು. ಇವರು ಬಂದರು ಪಟ್ಟಣಗಳಿಗೆ ಬಂದು ಅಲ್ಲಿ ವ್ಯಾಪಾರ ವಹಿವಾಟು ನಡೆಸುತ್ತಿದ್ದರು. ಸ್ಥಳೀಯ ವ್ಯಾಪಾರಿಗಳು ಒಳನಾಡಿನ ಭಾಗಗಳಲ್ಲಿ ಸರಕುಗಳನ್ನು ಕೊಂಡುಕೊಂಡು ಬಂದು ವಿದೇಶೀ ವ್ಯಾಪಾರಿಗಳಿಗೆ ಮಾರಾಟ ಮಾಡುತ್ತಿದ್ದರು. ಹಾಗೆಯೇ ವಿದೇಶೀಯರು ತಂದ ಸರಕುಗಳನ್ನು ಒಳನಾಡುಗಳೀಗೆ ಮಾರಾಟ ಮಾಡುತ್ತಿದ್ದರು.

ಕರ್ನಾಟಕದ ಕರಾವಳಿ ತೀರದಲ್ಲಿ ಇಂದಿಗೂ ನೋಡಸಿಗುವ ಡಾಲ್ಜಿಗಳು, ನವಾಯುತರು ಹಾಗೂ ಬ್ಯಾರಿಗಳು ವಿದೇಶದಿಂದ ಬಂದ ವ್ಯಾಪಾರಿಗಳ ವಂಶಸ್ಥರೆಂದು ಗುರ್ತಿಸಲಾಗುತ್ತದೆ. ಬೇರೆ ಬೇರೆ ಕಾಲವಧಿಯಲ್ಲಿ ಇಲ್ಲಿಗೆ ಬಂದ ಈ ವ್ಯಾಪಾರಿಗಳು ಇಲ್ಲಿಯೇ ಉಳಿದುಕೊಂಡರು.

ಸ್ಥಳೀಯ ಭಾಷೆ, ಸಂಸ್ಕೃತಿಗಳೊಂದಿಗೆ ಒಂದಾದರು. ಇಂತಹ ಕೆಲವು ವ್ಯಾಪಾರಿ ಸಂಘಗಳ ಕುರಿತು ಶಾಸನಗಳು ತಿಳಿಸುತ್ತವೆ. ವಿದೇಶಿಯ ವ್ಯಾಪಾರಿಗಳ ಆಗಮನ ಮತ್ತು ಇಲ್ಲಿ ನಡೆಯುತ್ತಿದ್ದ ವ್ಯಾಪಾರದ ಬಗ್ಗೆ ಮೋತಿಚಂದ್ರರು ಹೀಗೆ ಹೇಳಿದ್ದಾರೆ. "ದಕ್ಷಿಣ ಭಾರತದ ಸಂಸ್ಕೃತಿಯು ಉತ್ತರ ಭಾರತದ ಸಂಸ್ಕೃತಿಗೆ ಏನೂ ಕಡಿಮೆ ಇರಲಿಲ್ಲ. ವಿದೇಶಿ ವ್ಯಾಪಾರದಿಂದ ದಕ್ಷಿಣ ಭಾರತಕ್ಕೆ ಹೇರಳವಾಗಿ ಬರುತ್ತಿತ್ತು.[50] ಕಡಲ ವ್ಯಾಪಾರದಿಂದ ದಕ್ಷಿಣ ಭಾರತದ ಸಂಬಂಧವು ಸಮುದ್ರ ದಕ್ಷಿಣ ದಂಡೆಯಲ್ಲಿ ಪಶ್ಚಿಮದ ಸಿಂಧ್ ವರೆಗೆ ಮತ್ತು ಪೂರ್ವದ ತಾಮ್ರಲಿಪ್ತಿವರೆಗೆ ಹಬ್ಬಿತ್ತು. ದಕ್ಷಿಣದ ವರ್ತಕರು ತಮ್ಮ ಸರಕುಗಳನ್ನು ಸಿಂಹಳ, ಸುವರ್ಣದ್ವೀಪ, ಮತ್ತು ಆಫ್ರಿಕಾದವರೆಗೆ ಒಯ್ಯುತ್ತಿದ್ದರು. ರೋಮನ್ ವ್ಯಾಪಾರಿಗಳು ಯಾವಾಗಲು ದಕ್ಷಿಣದ ರೇವುಗಳಲ್ಲಿ ವ್ಯಾಪಾರ ನಡೆಸುತ್ತಿದ್ದರು. ನಂತರ ಅರಬ್ಬರು, ಯುರೋಪಿಯನ್ನರು ಭಾರತದೊಂದಿಗೆ ವ್ಯಾಪಾರ ಸಂಪರ್ಕ ಹೊಂದಿದ್ದರು".

**ಹಂಜಮಾನರು**

ಹಂಜಮಾನ ಎಂಬುದು ವಿದೇಶೀ ವ್ಯಾಪಾರಿಗಳ ಸಂಘವಾಗಿದ್ದು ಕರಾವಳಿ ಭಾಗಗಳಲ್ಲಿ ಬಂದರುಗಳನ್ನು ಅವಲಂಬಿಸಿ ಸರಕುಗಳ ವ್ಯಾಪಾರವನ್ನು ನಡೆಸುತ್ತಿದ್ದರು. ಹಂಜಮಾನ ಎಂಬ ಪದವು ಅಂಜುಮಾನ್ ಎಂಬ ಪರ್ಷಿಯಾದ ಪದದಿಂದ ಬಂದಿದೆ. ಅಂ ಮುಂದೆ ಹಂ ಆಗಿ ಹಂಜಮಾನ್ ಎಂದಾಗಿದೆ. ಕ್ರಿ.ಶ. 13 ಮತ್ತು 14 ನೇ ಶತಮಾನದ ಸಂದರ್ಭದಲ್ಲಿ ಕರ್ನಾಟಕದ ಕರಾವಳಿ ಬಂದರುಗಳಲ್ಲಿ ಪರ್ಷಿಯಾ ಮತ್ತು ಅರೇಬಿಯಾದ ವ್ಯಾಪಾರಿಗಳು ನಿರ್ಮಾಣ ಮಾಡಿಕೊಂಡ ಪ್ರಮುಖ ಸಂಘಟನೆಯಾಗಿದೆ. ಈ ವ್ಯಾಪಾರಿ ಸಂಘಟನೆಯು ಅಲ್ಪಕಾಲವಧಿಯಲ್ಲಿ ರೇವುಗಳ ಪಟ್ಟಣಗಳನ್ನು ಸ್ಥಾಪಿಸಿತು. ಪ್ರಮುಖವಾಗಿ ಮಂಗಳೂರು, ಬಾರ್ಕೂರು, ಬಸರೂರು ಮತ್ತು ಹೊನ್ನಾವರದ ವ್ಯಾಪಾರ ಮತ್ತು ವಾಣಿಜ್ಯವನ್ನು ಕೈಗೊಂಡಿದುದರ ಬಗ್ಗೆ ಈ ಭಾಗದ ಶಾಸನಗಳು ಉಲ್ಲೇಖಿಸುತ್ತವೆ.

ಹಂಜಮಾನರು ಕರಾವಳಿಯ ರೇವು ಪಟ್ಟಣಗಳಲ್ಲಿ ಗುಂಪಾಗಿ ವಾಸಿಸುತ್ತ ಪರ್ಷಿಯಾದ ಮೂಲಕ ತಂದ ಅಲ್ಲಿಯ ಹಾಗೂ ಬೇರೆ ದೇಶಗಳ ಸರಕುಗಳನ್ನು ಮಾರಾಟ ಮಾಡುತ್ತ ಸ್ಥಳೀಯವಾಗಿ ದೊರೆಯುತ್ತಿದ್ದ ಬೆಲೆಬಾಳುತ್ತಿದ್ದ ಸರಕುಗಳನ್ನು ಕೊಂಡು ಸಂಗ್ರಹಿಸುತ್ತಿದ್ದರು. ವಿಜಯನಗರ ಕಾಲದಲ್ಲಿ ಈ ಹಂಜಮಾನ ಸಂಘವು ತುಂಬಾ ಉಚ್ಛ್ರಾಯ ಸ್ಥಿತಿಯಲ್ಲಿದ್ದರು. ವಿಜಯನಗರದ ಸೈನ್ಯಕ್ಕೆ ಬೇಕಿದ್ದ ಉತ್ತಮ ತಳಿಯ ಕುದುರೆಗಳನ್ನು ಇವರಿಂದಲೇ ತರಿಸಲ್ಪಡುತ್ತಿತ್ತು. ವಿಜಯನಗರ ಶಾಸನದ ಪ್ರಕಾರ ಒಂದು ಹಂಜಮಾನದವರ ಪಳ್ಳಿಯೊಂದಕ್ಕೆ

ದಕ್ಕೆ ಉಂಟುಮಾಡಿದ್ದಕ್ಕೆ ಪರಿಹಾರ ಒದಗಿಸಿದ್ದನ್ನು ತಿಳಿಸುತ್ತದೆ. ಹಂಜಮಾನರು ವಿಜಯನಗರ ಕಾಲದಲ್ಲಿ ಪಡೆದಿದ್ದ ಗೌರವ ಹಾಗೂ ಪ್ರತಿಷ್ಠೆಯನ್ನು ತೋರಿಸುವ ಶಾಸನಗಳಿವೆ ಹಾಗೂ ಹಂಜಮಾನರು ವ್ಯಾಪಾರದಲ್ಲಿ ಪಡೆಯುತ್ತಿದ್ದ ಲಾಭ ಸ್ಥಳೀಯರಲ್ಲಿ ಅಸಮಾದಾನವನ್ನುಂಟು ಮಾಡಿದವೆಂದು ತಿಳಿಯುತ್ತದೆ.[51]

ಹಂಜಮಾನರು ತಾವು ನಡೆಸುವ ವ್ಯಾಪಾರವನ್ನು ನಖರರ ಮೂಲಕ ನಡೆಸುತ್ತಿದ್ದರೆಂದು ಊಹಿಸಬಹುದಾಗಿದೆ. ಶಾಸನಗಳಲ್ಲಿ ನಖರ ಹಂಜಮಾನ ಎಂಬ ಶಬ್ದವನ್ನು ಆಗಾಗ ನೋಡಬಹುದಾದ ಸ್ಥಳೀಯ ಭಾಷೆ ಹಾಗೂ ರೀತಿ ನೀತಿಗಳು ಸರಿಯಾಗಿ ತಿಳಿಯದಿದ್ದರಿಂದ ಒಳನಾಡಿನ ವ್ಯಾಪಾರಕ್ಕೆ ಸ್ಥಳೀಯರಾದ ನಖರ ಅಥವಾ ನಕರರ ಸಹಾಯ ಪಡೆಯುತ್ತಿದ್ದರು. ಅವರ ಮೂಲಕ ತಮ್ಮ ವಿದೇಶಿ ಸರಕುಗಳನ್ನು ಮಾರಾಟ ಮಾಡಿಸುವುದು ತಮಗೆ ಬೇಕಾದ ಸ್ಥಳೀಯ ಸರಕುಗಳನ್ನು ಸಂಗ್ರಹಿಸುವ ಕೆಲಸ ಮಾಡುತ್ತಿದ್ದರು.

ನಕರ ಸಂಘವು ಪ್ರಾಚೀನವಾಗಿದ್ದು ಅದು ಸ್ಥಳೀಯವಾಗಿ ಹಾಗೂ ರಾಜ್ಯದ ವಿವಿಧ ಪ್ರಮುಖ ವ್ಯಾಪಾರಿ ಪಟ್ಟಣಗಳಲ್ಲಿ ವ್ಯಾಪಕವಾಗಿ ಹಬ್ಬಿತ್ತು. ನಖರರು ಎಲ್ಲಾ ವಿಧದ ವ್ಯಾಪಾರ ಮಾಡುತ್ತಿದ್ದರು. ಇವರು ಬೆಲೆಬಾಳುವ ಹರಳುಗಳನ್ನು, ಉತ್ತಮ ತಳಿಯ ಕುದುರೆಗಳನ್ನು ಮುಂತಾದವುಗಳ ವ್ಯಾಪಾರದಲ್ಲಿ ತೊಡಗಿದ್ದನ್ನು ತೋರಿಸುವ ಉಲ್ಲೇಖನಗಳು ಸಿಗುತ್ತವೆ. ವಿಜಯನಗರದ ಅರಸರಿಗೆ ಹರಳು, ಮುತ್ತು, ವಜ್ರ ಹಾಗೂ ಕುದುರೆ ಮುಂತಾದ ವಿದೇಶಿಯ ವಸ್ತುಗಳನ್ನು ಪ್ರಾಣಿಗಳನ್ನು ಒದಗಿಸುತ್ತಿದ್ದರು. ಇವರು ಪರ್ಷಿಯಾ, ಅರೇಬಿಯಾ ಮುಂತಾದ ದೇಶಗಳ ವ್ಯಾಪಾರಿಗಳಾಗಿದ್ದರೆಂದು ತಿಳಿಯಬಹುದಾಗಿದೆ.

ಬಾರ್ಕೂರು, ಮಂಗಳೂರು, ಬಸರೂರು, ಮೂಡಬಿದರೆ, ವೇಣೂರು, ಕುಂದಾಪುರ, ಗಂಗೋಳ್ಳಿ, ಬೈಂದೂರು, ಭಟ್ಕಳ, ಹಾಡೋವಳ್ಳಿ, ಕೈಕಿಣಿ, ಮುರುಡೇಶ್ವರ, ಹೊನ್ನಾವರ, ಕಾಸರಗೂಡು, ಗೇರುಸೋಪ್ಪಾ, ಕುಮಟಾ, ಚಂದಾವರ, ಅಂಕೋಲಾ, ಹಟ್ಟಿಕೇರಿ, ಅವರ್ಸಾ ಅಲಿಗದ್ದಾ, ಅಮದಳ್ಳಿ, ಕಾರವಾರ ಮುಂತಾದವು ಇವರ ಪ್ರಮುಖ ಕೇಂದ್ರಗಳಾಗಿದ್ದವು.[52]

ಹಂಜಮಾನರು ಶ್ರೀಮಂತ ವರ್ತಕರಾಗಿದ್ದಂತೆ ಸ್ಥಳೀಯರೊಂದಿಗೆ ಉತ್ತಮ ಬಾಂದವ್ಯವನ್ನು ಹೊಂದಿದ್ದರು. ಸೌಹಾರ್ಧತೆಯಿಂದ ನಡೆದುಕೊಳ್ಳುತ್ತಿದ್ದರು. ಬಸನೂರಿನ ದಾಖಲೆಯೊಂದರಲ್ಲಿ ತಿಳಿಸಿದಂತೆ ಇವರು ಮಾಡಿದ ಕೊಲೆಗೆ ಕ್ಷಮೆಯಾಗಿ ದಂಡತೆತ್ತಿದ್ದು ದೇವಾಲಯಕ್ಕೆ ದಾನ ನೀಡಿದ್ದು ತಿಳಿಯುತ್ತದೆ. ಸ್ಥಳೀಯರೊಂದಿಗೆ ಇವರ ಹೊಂದಾಣಿಕೆ

ಉತ್ತಮವಾಗಿತ್ತು. ಮುಂದೆ ಬದಲಾವಣೆಗಳಿಂದ ಮತ್ತು ಐರೋಪ್ಯರ ಆಗಮನದೊಂದಿಗೆ ಇವರು ಹಿನ್ನೆಲೆಗೆ ಸರಿದರು.

**ವ್ಯಾಪಾರಿ ಸಂಘಗಳ ಕಾರ್ಯಗಳು**

ವ್ಯಾಪಾರಿ ಸಂಘಗಳು ಕೇವಲ ವ್ಯಾಪಾರ ಮತ್ತು ವಾಣಿಜ್ಯದಲ್ಲಿ ಮಾತ್ರವೇ ತಮ್ಮನ್ನು ತೊಡಗಿಸಿಕೊಳ್ಳದೇ ಸಾಮಾಜಿಕ ಮತ್ತು ಧಾರ್ಮಿಕ ಕಾರ್ಯಗಳಲ್ಲೂ ತಮ್ಮನ್ನು ತಾವು ಸಮರ್ಪಕವಾಗಿ ತೊಡಗಿಸಿಕೊಂಡಿದ್ದರು. ಈ ವ್ಯಾಪಾರಿ ಸಂಘಗಳು ಬಹಳಷ್ಟು ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವ ಮೂಲಕ ಸಾಮಾಜಿಕ ಮತ್ತು ಧಾರ್ಮಿಕ ಶ್ರೇಯಾಭಿವೃದ್ಧಿಗೆ ಅವರು ಅಪಾರವಾದ ಕೊಡುಗೆಯನ್ನು ನೀಡಿದ್ದರು. ಅಂತಹ ಪ್ರಮುಖವಾದ ಕಾರ್ಯಗಳೆಂದರೆ

**1. ವ್ಯಾಪಾರಿ ಸಂಘಗಳು ದೇವಾಲಯಗಳನ್ನು ನಿರ್ಮಿಸುತ್ತಿದ್ದವು**

ವ್ಯಾಪಾರಿ ಸಂಘಗಳು ವ್ಯಾಪಾರ ಮತ್ತು ವಾಣಿಜ್ಯದೊಂದಿಗೆ ಪ್ರಮುಖವಾದ ಧಾರ್ಮಿಕ ಕಾರ್ಯವಾದ ದೇವಾಲಯಗಳ ನಿರ್ಮಾಣ ಕಾರ್ಯದಲ್ಲಿ ತೊಡಗಿದ್ದರು. ಆ ಕಾಲದಲ್ಲಿ ದೇವಾಲಯಗಳು ಪ್ರಮುಖ ಕೇಂದ್ರಗಳಾಗಿದ್ದು ದೇವಾಲಯಗಳು ಪ್ರಮುಖ ಕೇಂದ್ರಗಳಾಗಿದ್ದು ದೇವಾಲಯಗಳು ನಗರಗಳ ಬೆಳವಣಿಗೆಗೆ ಮತ್ತು ವ್ಯಾಪಾರ ವಾಣಿಜ್ಯದ ಬೆಳವಣಿಗೆಗೆ ಕಾರಣವಾಗಿದ್ದವು ಹಾಗೂ ದೇವರ ಕಾರ್ಯಗಳನ್ನು ಕೈಗೊಂಡರೆ ತಮ್ಮ ವ್ಯಾಪಾರ ವಾಣಿಜ್ಯವು ಸುಲಭವಾಗಿ ನಡೆಯುತ್ತದೆ ಎಂಬ ನಂಬಿಕೆಯಿಂದ ದೇವಾಲಯಗಳ ನಿರ್ಮಾಣದಲ್ಲಿ ತೊಡಗಿದ್ದರು.

**2. ವ್ಯಾಪಾರಿ ಸಂಘಗಳು ಭೂಮಿಯನ್ನು ದಾನವಾಗಿ ನೀಡುತ್ತಿದ್ದವು.**

ವ್ಯಾಪಾರಿ ಸಂಘಗಳ ಮತ್ತೊಂದು ಪ್ರಮುಖ ಕಾರ್ಯವೆಂದರೆ, ದೇವಾಲಯಗಳನ್ನು ನಿರ್ವಹಣೆ ಮಾಡುವ ಉದ್ದೇಶದಿಂದ ದೇವಾಲಯಗಳಿಗೆ ದಾನದ ದತ್ತಿಯ ಭಾಗವಾಗಿ ಭೂಮಿಗಳನ್ನು ನೀಡುತ್ತಿದ್ದುದು. ಭೂಮಿಯಿಂದ ಬರುವ ಆದಾಯದಲ್ಲಿ ಆ ದೇವಾಲಯದ ನಿರ್ವಹಣೆ ಕಾರ್ಯ ಸಮರ್ಪಕವಾಗಿ ನಡೆಯುತ್ತಿತ್ತು. ಆ ಭೂಮಿಗಳು ತೆರಿಗೆ ರಹಿತ ಭೂಮಿಗಳಾಗಿದ್ದವು. ಈ ಭೂಮಿಗಳನ್ನು ಪಾರಂಪರಿಕವಾಗಿ ದೇವಾಲಯ ಆಡಳಿತ ಮಂಡಲಿ ನೋಡಿಕೊಂಡು ಹೋಗುತ್ತಿತ್ತು.

### 3. ವ್ಯಾಪಾರಿ ಸಂಘಗಳು ನೀತಿ ಸಂಹಿತೆಯನ್ನು ಪಾಲಿಸುತ್ತಿದ್ದವು.

ವ್ಯಾಪಾರಿ ಸಂಘಗಳು ಮುಖ್ಯವಾಗಿ ನೀತಿ ಸಂಹಿತೆಯನ್ನು ಪಾಲಿಸುತ್ತಿದ್ದವು. ರಾಜನ ಆಜ್ಞೆಗಳನ್ನು ಪಾಲಿಸುವುದು, ಸಾಮ್ರಾಜ್ಯದಲ್ಲಿ ಶಾಂತಿ ಸುವ್ಯವಸ್ಥೆ ಕಾಪಾಡುವುದು, ಜೊತೆಗೆ ಜನರನ್ನು ರಕ್ಷಣೆ ಮಾಡುವುದು, ಕಳ್ಳಕಾಕರಿಂದ ವ್ಯಾಪಾರಿಗಳ ರಕ್ಷಣೆ ಮಾಡುವುದು ಹಬ್ಬ ಹರಿದಿನಗಳನ್ನು ಆಯೋಜಿಸುವುದು ಪ್ರಮುಖವಾದ ಕಾರ್ಯವಾಗಿತ್ತು.

### 4. ವ್ಯಾಪಾರಿ ಸಂಘಗಳು ಜಾತ್ರೆ ಮತ್ತು ಸಂತೆಗಳನ್ನು ಆಯೋಜಿಸುತ್ತಿದ್ದವು.

ವ್ಯಾಪಾರಿ ಸಂಘಗಳ ಪ್ರಮುಖವಾದ ಮತ್ತೊಂದು ಕಾರ್ಯವೆಂದರೆ ಜಾತ್ರೆಗಳನ್ನು ಮತ್ತು ಸಂತೆಗಳನ್ನು ಆಯೋಜಿಸುವುದು. ಪ್ರತಿವಾರ ವ್ಯಾಪಾರಿ ಸಂಘಗಳು ಸಂತೆಗಳನ್ನು ಏರ್ಪಡಿಸುತ್ತಿದ್ದವು. ಈ ಸಂತೆಗಳಲ್ಲಿ ಸಾರ್ವಜನಿಕರಿಗೆ ಅವಶ್ಯಕವಾಗಿದ್ದ ಸರಕುಗಳನ್ನು ತಂದು ಮಾರಾಟ ಮಾಡಲಾಗುತ್ತಿತ್ತು. ಜಾತ್ರೆ ಸಂದರ್ಭಗಳಲ್ಲಿಯೂ ಸಂತೆಗಳನ್ನು ಆಯೋಜಿಸುತ್ತಿದ್ದರು. ಈ ಸಂತೆಗಳು ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದವು.

### 5. ವ್ಯಾಪಾರಿ ಸಂಘಗಳು ಪಂಚಾಯಿತಿಗಳಾಗಿ ಕಾರ್ಯನಿರ್ವಹಿಸುತ್ತಿದ್ದವು.

ವಿಜಯನಗರ ಸಾಮ್ರಾಜ್ಯದಲ್ಲಿ ವ್ಯಾಪಾರಿ ಸಂಘಗಳು ಪಂಚಾಯಿತಿಗಳಾಗಿಯೂ ಸಹ ಕಾರ್ಯ ನಿರ್ವಹಿಸುತ್ತಿದ್ದವು. ಪ್ರಮುಖ ಪ್ರಕರಣಗಳಲ್ಲಿ ಮುಖ್ಯವಾಗಿ ವ್ಯಾಪಾರಿಗಳ ನಡುವಿನ ಕಲಹ ಮತ್ತು ಅವರ ಸಮಸ್ಯೆಗಳನ್ನು ನಿವಾರಿಸುತ್ತಿದ್ದರು. ವ್ಯಾಪಾರಿಗಳು ಏನಾದರೂ ತಪ್ಪು ಮಾಡಿದರೆ ಅವರಿಗೆ ಶಿಕ್ಷೆಗಳನ್ನು ಸಹ ನೀಡುತ್ತಿದ್ದರು. ವ್ಯಾಪಾರಿ ಸಂಘಗಳು ಕೆಲವೊಂದು ಕಾನೂನುಗಳನ್ನು ಮಾಡಿ ಆ ಕಾನೂನುಗಳನ್ನು ಪ್ರತಿಯೊಬ್ಬ ವ್ಯಾಪಾರಿಯೂ ಕ್ರಮಬದ್ಧವಾಗಿ ಪಾಲಿಸಬೇಕೆಂದು ಆಜ್ಞೆಯನ್ನು ಹೊರಡಿಸಿದ್ದರು.

### 6. ವ್ಯಾಪಾರಿ ಸಂಘಗಳು ಗಡಿಭಾಗಗಳಲ್ಲಿ ಸುಂಕವನ್ನು ವಸೂಲಿ ಮಾಡುತ್ತಿದ್ದವು.

ವ್ಯಾಪಾರಿ ಸಂಘಗಳು ಸಂತೆಗಳಿಗೆ ತರುವ ಸರಕುಗಳ ಮೇಲೆ ಸುಂಕವನ್ನು ವಿಧಿಸುತ್ತಿದ್ದವು. ಈ ಸುಂಕವನ್ನು ತಮ್ಮ ಸಂಘದ ಚಟುವಟಿಕೆಗಳಿಗೆ ಸಮರ್ಪಕವಾಗಿ ಬಳಸಿಕೊಳ್ಳಲಾಗುತ್ತಿತ್ತು.

### 7. ವ್ಯಾಪಾರಿ ಸಂಘಗಳು ವ್ಯಾಜ್ಯಗಳನ್ನು ಸಮರ್ಪಕವಾಗಿ ಬಗೆಹರಿಸುತ್ತಿದ್ದವು.

ವ್ಯಾಪಾರಿ ಸಂಘಗಳು ಮುಖ್ಯವಾಗಿ ಸಂಘಗಳ ನಡುವಿನ ಮತ್ತು ಸಂಘದೊಳಗಿನ ವ್ಯಾಜ್ಯಗಳನ್ನು ನಿವಾರಿಸುತ್ತಿದ್ದವು. ವ್ಯಾಪಾರಿಗಳ ನಡುವಿನ ಕಲಹಗಳನ್ನು ಬಗೆಹರಿಸುವ ಕೆಲಸ ಮಾಡುತ್ತಿದ್ದರು.

ವ್ಯಾಪಾರಿಗಳ ನಡುವಿನ ಮೇಲಾಟವನ್ನು ನಿಯಂತ್ರಿಸುವ ಕಾರ್ಯವನ್ನು ಸಹ ವ್ಯಾಪಾರಿ ಸಂಘಗಳು ಮುಖ್ಯವಾಗಿ ಮಾಡುತ್ತಿದ್ದವು.

**8. ವ್ಯಾಪಾರಿ ಸಂಘಗಳು ಕಾನೂನು ಉಲ್ಲಂಘಿಸುವವರನ್ನು ಶಿಕ್ಷಿಸುತ್ತಿದ್ದವು.**

ವ್ಯಾಪಾರಿ ಸಂಘಗಳು ಮುಖ್ಯವಾಗಿ ಕಾನೂನನ್ನು ಉಲ್ಲಂಘಿಸಿದವರನ್ನು ಶಿಕ್ಷಿಸುತ್ತಿದ್ದರು. ವ್ಯಾಪಾರಿ ಸಂಘಗಳು ಕೆಲವೊಂದು ಕಾಯ್ದೆ ಮತ್ತು ಕಾನೂನುಗಳನ್ನು ಅಳವಡಿಸಿಕೊಂಡಿದ್ದವು ಈ ಕಾನೂನುಗಳನ್ನು ಪ್ರತಿಯೊಬ್ಬ ವ್ಯಾಪಾರಿಯು ಪಾಲಿಸಬೇಕಾಗಿತ್ತು. ಗ್ರಾಹಕರಿಗೆ ತೊಂದರೆ ಉಂಟಾಗದಂತೆ ವ್ಯಾಪಾರವನ್ನು ನಿರ್ವಹಿಸಬೇಕಿತ್ತು. ಗ್ರಾಹಕರಿಗೆ ಮೋಸ ಮಾಡುವ ಪ್ರತಿಯೊಬ್ಬ ವ್ಯಾಪಾರಿಗೂ ಈ ವ್ಯಾಪಾರಿ ಸಂಘಗಳು ಶಿಕ್ಷೆವಿಧಿಸುತ್ತಿದ್ದವು.

**9. ವ್ಯಾಪಾರಿ ಸಂಘಗಳು ದೇಣಿಗೆಯನ್ನು ಸ್ವೀಕರಿಸುತ್ತಿದ್ದವು.**

ವ್ಯಾಪಾರಿ ಸಂಘಗಳು ರಾಜರಿಂದ ದೇಣಿಗೆಯನ್ನು ಸ್ವೀಕರಿಸುತ್ತಿದ್ದವು. ವ್ಯಾಪಾರಿ ಸಂಘಗಳು ದಿವಾಳಿಯಾಗಿದ್ದ ಸಂದರ್ಭದಲ್ಲಿ ರಾಜರು ನೀಡುತ್ತಿದ್ದ ದೇಣಿಗೆಯನ್ನು ಪಡೆದುಕೊಂಡು ತಮ್ಮನ್ನು ಸುಧಾರಿಸಿಕೊಳ್ಳುತ್ತಿದ್ದವು. ಕೆಲವು ಶ್ರೀಮಂತ ವ್ಯಾಪಾರಿಗಳು ವ್ಯಾಪಾರಿ ಸಂಘಗಳಿಗೆ ದೇಣಿಗೆಯನ್ನು ನೀಡುತ್ತಿದ್ದರು. ಈ ದೇಣಿಗೆಯನ್ನು ವ್ಯಾಪಾರಿ ಸಂಘಗಳು ದೇವಾಲಯ ನಿರ್ಮಾಣ ಹಾಗೂ ಸಾಮಾಜಿಕ ಚಟುವಟಿಕೆಗಳಿಗೆ ಸಮರ್ಪಕವಾಗಿ ಬಳಸಿಕೊಳ್ಳುತ್ತಿದ್ದರು.

ಹೀಗೆ ಈ ಮೇಲ್ಕಂಡ ಮಾದರಿಯಲ್ಲಿ ವ್ಯಾಪಾರಿ ಸಂಘಗಳು ಆಯೋಜನೆಯಗೊಂಡು ಸಂಪೂರ್ಣವಾಗಿ ಸಾಮಾಜಿಕ ಹಾಗೂ ಧಾರ್ಮಿಕ ಕಾರ್ಯಗಳಲ್ಲಿ ತೊಡಗಿಸಿಕೊಂಡು ಕಾರ್ಯನಿರ್ವಹಿಸುತ್ತಿದ್ದವು. ವ್ಯಾಪಾರಿ ಸಂಘಗಳನ್ನು ದೇಶೀಯ ವ್ಯಾಪಾರಿ ಸಂಘಗಳು ಮತ್ತು ವಿದೇಶಿ ವ್ಯಾಪಾರಿ ಸಂಘಗಳೆಂದು ವಿಂಗಡಿಸಿ ಅವು ಪರಸ್ಪರ ಸೌಹಾರ್ದಯುತವಾಗಿ ಕಾರ್ಯನಿರ್ವಹಿಸುತ್ತಿದ್ದವು. ವಿದೇಶಿ ವ್ಯಾಪಾರ, ಆಂತರಿಕ ವ್ಯಾಪಾರಗಳು ಹೆಚ್ಚು ರೀತಿಯಲ್ಲಿ ಆಯೋಜನೆಗೊಂಡು ಸಾಮ್ರಾಜ್ಯದ ಆರ್ಥಿಕ ಅಭಿವೃದ್ಧಿಗೆ ಸಮರ್ಪಕವಾಗಿ ದುಡಿಯುತ್ತಿದ್ದವು. ವ್ಯಾಪಾರಿ ಸಂಘಗಳು ಸಂಪೂರ್ಣವಾಗಿ ಸ್ವತಂತ್ರ ಸಂಘಟನೆಗಳಾಗಿದ್ದು ತಮ್ಮದೇಯಾದ ಕಾಯ್ದೆ ಕಾನೂನುಗಳೊಂದಿಗೆ ರಚಿಸಿಕೊಂಡು ವ್ಯಾಪಾರಿಗಳ ಜೊತೆಗೆ ಗ್ರಾಹಕರ ಮತ್ತು ಸಾರ್ವಜನಿಕರ ಹಿತಾಸಕ್ತಿಗೆ ದುಡಿಯುತ್ತಿದ್ದವು. ಇದರೊಂದಿಗೆ ಸಾಮಾಜಿಕವಾಗಿ ಈ ಸಂಘಗಳು ಸಂಘಟನೆಯಾಗಿದ್ದು ಇವುಗಳ ಕಾರ್ಯವು ಶ್ಲಾಘನೀಯವಾಗಿತ್ತೆಂದು ಹೇಳಬಹುದು.

**6.6 ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯಲ್ಲಿ ಸಂತೆಗಳ ಪಾತ್ರ.**

ಸಂತೆಗಳು ಪ್ರಾಚೀನ ಕಾಲದಿಂದಲೂ ಬಹಳಷ್ಟು ಪ್ರಾಮುಖ್ಯತೆ ಪಡೆದಿದ್ದು ಆಧುನಿಕ ಮಾರುಕಟ್ಟೆಗಳಂತೆ ಕಾರ್ಯನಿರ್ವಹಿಸುತ್ತಿದ್ದವು. ಈ ಸಂತೆಗಳು ಪ್ರತಿವಾರ ಆಯೋಜನೆಗೊಳ್ಳುತ್ತಿದ್ದವು. ಕ್ರಿ.ಶ 15ನೇ ಶತಮಾನದ ಶಾಸನಗಳು ಎರಡು ಮಾದರಿಯ ಸಂತೆಗಳ ಬಗ್ಗೆ ಉಲ್ಲೇಖಿಸಿವೆ ಅವುಗಳೆಂದರೆ, ಮಡಿಸಂತೆ ಮತ್ತು ಮೈಲಾಸಂತೆ ಮೈಲಾಸಂತೆಗಳಲ್ಲಿ ಮುಖ್ಯವಾಗಿ ಮಾಂಸ ಮತ್ತು ಮೀನನ್ನು ಮಾರಾಟ ಮಾಡಲಾಗುತ್ತಿತ್ತು. ಮಡಿಸಂತೆಗಳಲ್ಲಿ ತರಕಾರಿ ಮತ್ತು ದಿನಿಸುಗಳನ್ನು ಮಾರಾಟ ಮಾಡುತ್ತಿದ್ದರು. ಸಂತೆಗಳು ಮುಖ್ಯವಾಗಿ ನಗರಗಳಲ್ಲಿ ಆಯೋಜನೆಗೊಳ್ಳುತ್ತಿದ್ದವು. ಸಂತೆಗಳು ವಾರದ ಒಂದೇ ನಿರ್ದಿಷ್ಟ ಮುಖ್ಯವಾಗಿ ನಗರಗಳಲ್ಲಿ ಆಯೋಜನೆಗೊಳ್ಳುತ್ತಿದ್ದವು. ಸಂತೆಗಳು ವಾರದ ಒಂದೇ ನಿರ್ದಿಷ್ಟ ದಿನದಂದು ಆಯೋಜನೆಗಳ್ಳುತ್ತಿದ್ದವು. ನಂಜನಗೂಡಿನಲ್ಲಿ ಶುಕ್ರವಾರದ ಸಂತೆ, ನರಸೀಪುರದಲ್ಲಿ ಸೋಮವಾರದ ಸಂತೆ ಮತ್ತು ಪುಣೇಯಲ್ಲಿ ಶುಕ್ರವಾರ ಪೇಟೆ ಎಂಬ ಹೆಸರಿನ ಸಂತೆಗಳು ಇಂದಿಗೂ ಆಯೋಜನೆಗೊಳ್ಳುತ್ತವೆ. ವಿಜಯನಗರ ಕಾಲದಲ್ಲಿ ಮುಖ್ಯವಾಗಿ ಆಂಧ್ರಪ್ರದೇಶದ ಚಿತ್ತೂರು, ಕರ್ನಾಟಕದ ಮೈಸೂರಿನ ಹಲವು ಭಾಗಗಳಲ್ಲಿ ಸಂತೆಗಳು ಆಯೋಜನೆ ಗೊಳ್ಳುತ್ತಿದ್ದುದರ ಬಗ್ಗೆ ಮಾಹಿತಿಗಳಿವೆ. ಇವುಗಳು ಇಂದಿಗೂ ಸಂತೆಪೇಟೆಗಳಾಗಿ ಪುನರ್ ವಿಂಗಡಣೆಗೊಂಡಿವೆ.

ಅಮುಕ್ತಮಾಲ್ಯದಲ್ಲಿ ಕೃಷ್ಣದೇವರಾಯನು ಉಲ್ಲೇಖಿಸಿರುವ ಪ್ರಕಾರ ಪ್ರತಿಯೊಂದು ಗ್ರಾಮವು ತನ್ನದೇಯಾದ ಸಂತೆ ಹೊಂದಿತ್ತು. ಆ ಸಂತೆಗಳು ಸ್ಥಳೀಯರಿಂದ ಆಯೋಜನೆ ಗೊಳ್ಳುತ್ತಿದ್ದವು ಹಾಗೂ ಆ ಸಂತೆಗಳಿಗೆ ಸುತ್ತಮುತ್ತಲಿನ ಜನ ಬಂದು ಸರಕುಗಳನ್ನು ಕೊಂಡುಕೊಳ್ಳುತ್ತಿದುದರ ಬಗ್ಗೆ ಉಲ್ಲೇಖಿಸಿದ್ದಾನೆ. ಹಂಸವಿಂಸತಿ ಗ್ರಂಥದಲ್ಲಿ ಉಲ್ಲೇಖಿಸುವ ಪ್ರಕಾರ ಸುಮಾರು ನೂರ ಇಪತ್ತೈದು ಹಳ್ಳಿಗಳಲ್ಲಿ ಆಂದ್ರ, ತಮಿಳುನಾಡು ಮತ್ತು ಕರ್ನಾಟಕದ ಭಾಗಗಳಲ್ಲಿ ಆಯೋಜನೆಗೊಂಡಿದ್ದು ಸಂತೆಗಳ ಬೆಳವಣಿಗೆಗೆ ಸಾಕ್ಷಿಯಾಗಿದೆ.

ಕ್ರಿ.ಶ.1364ರ ನೆಲ್ಲೂರಿನ ಶಾಸನದ ಪ್ರಕಾರ ನೆಲ್ಲೂರಿನ ಸ್ಥಳೀಯ ಮುಖ್ಯಸ್ಥರು ಆಯೋಜನೆ ಮಾಡುತ್ತಿದ್ದ ಸಂತೆಗಳಿಗೆ ವಿವಿದೆಡೆಗಳಿಂದ ವ್ಯಾಪಾರಿಗಳು ಬಂದು ಶುಕ್ರವಾರದ ಸಂತೆಯನ್ನು ಯಶಸ್ವಿಗೊಳಿಸುತ್ತಿದುದ್ದರ ಬಗ್ಗೆ ಬಹಳಷ್ಟು ದಾಖಲೆಗಳು ಉಲ್ಲೇಖಿಸುತ್ತವೆ.[54] ಸತ್ಯನಾರಾಯಣರವರು ನೀಡಿರುವ ಹೇಳಿಕೆಯ ಪ್ರಕಾರ ವಾರದ ಸಂತೆಗಳು ಗ್ರಾಮೀಣ ಜನರ ಆರ್ಥಿಕ ಬೆಳವಣಿಗೆಯಲ್ಲಿ ಮತ್ತು ಸ್ಥಳೀಯ ಜನರ ಸ್ವಾವಲಂಬನೆಯಲ್ಲಿ ಪ್ರಮುಖವಾದ

ಪಾತ್ರವನ್ನು ನಿರ್ವಹಿಸಿದ್ದವು ಎಂದು ವಿವರಿಸಿದ್ದಾರೆ. ವಿದೇಶದಲ್ಲಿ ಹತ್ತಿಬಟ್ಟೆಗಳಿಗಿದ್ದ ಬೇಡಿಕೆಗಳಿಂದಾಗಿ ವಿದೇಶಗಳಿಗೆ ಸರಬರಾಜಗುತ್ತಿದ್ದ ಸರಕುಗಳಲ್ಲಿ ಕೃಷಿ ಮತ್ತು ಉದ್ಯಮ ಪ್ರಮುಖಪಾತ್ರವಹಿಸಿದ್ದವು ಈ ಎಲ್ಲಾ ಸರಕುಗಳು ಮುಖ್ಯವಾಗಿ ಸ್ಥಳೀಯ ಸಂತೆಗಳಲ್ಲಿ ದೊರಕುತ್ತಿದ್ದವು ಅಲ್ಲಿಂದ ವಿದೇಶಗಳಿಗೆ ರಫ್ತಾಗುತ್ತಿದ್ದವು. ಸಂತೆಗಳಲ್ಲಿ ಉಳಿದ ಸರಕುಗಳನ್ನು ಕ್ರಮಬದ್ದವಾಗಿ ಹೊಂದಿಸಿದ ಆ ಸರಕುಗಳನ್ನು ಹಳ್ಳಿಗಳಿಗೆ ತೆಗೆದುಕೊಂಡು ಹೋಗಿ ಅಲ್ಲಿ ಸರಕುಗಳ ವಿನಿಮಯ ಮಾಡಿಕೊಂಡು ವ್ಯಾಪಾರ ವಹಿವಾಟನ್ನು ನಡೆಸುತ್ತಿದ್ದರು. ಬಿ.ವಿ. ಮಹಾಲಿಂಗಂರವರ ಪ್ರಕಾರ ಸಂತೆಗಳನ್ನು ಸಾಮಾನ್ಯವಾಗಿ ಪಾಳೆಗಾರರು ಅಥವಾ ಸರದಾರರು ಆಯೋಜನೆ ಮಾಡುತ್ತಿದ್ದರು, ಸಂತೆಗಳ ಆಯೋಜನೆಗೆ ಪ್ರಮುಖ ಕಾರಣ ಸಾಮ್ರಾಜ್ಯದಲ್ಲಿ ವ್ಯಾಪಾರ ವಹಿವಾಟನ್ನು ಉನ್ನತೀಕರಿಸಲು ಮತ್ತು ಸ್ಥಳೀಯ ಜನರ ಬೇಡಿಕೆಗಳನ್ನು ಸಮರ್ಪಕವಾಗಿ ಒದಗಿಸಲು ಆಯೋಜಿಸಲಾಗುತ್ತಿತ್ತು. ಕೆಲವೊಂದು ಸಣ್ಣ ಪುಟ್ಟ ವ್ಯಾಪಾರಿಗಳು ನಾಗರಿಕರಿಗೆ ಎಲ್ಲಾ ಮುಖ್ಯ ಬೇಡಿಕೆಗಳನ್ನು ಈಡೇರಿಸಲು ಸಾಧ್ಯವಾಗದ ಕಾರಣ ಈ ರೀತಿ ಸಂತೆಗಳನ್ನು ಸ್ಥಳೀಯ ಸರದಾರರು ಆಯೋಜನೆ ಮಾಡುತ್ತಿದ್ದರು. ಈ ರೀತಿಯ ಸಂತೆಗಳನ್ನು ಆಯೋಜನೆ ಮಾಡುವುದರಿಂದ ಸರ್ಕಾರಕ್ಕೆ ಈ ಸಂತೆಗಳಲ್ಲಿ ಮಾರಾಟ ಮಾಡುವ ಸರಕುಗಳ ಮೇಲೆ ವಿಧಿಸುತ್ತಿದ್ದ ಸುಂಕದಿಂದ ಆದಾಯ ಬರುತ್ತಿತ್ತು.

ಸಂತೆಗಳು ವಿವಿಧ ಮೂಲಗಳಿಂದ ವ್ಯಾಪಾರಿಗಳನ್ನು ಆಕರ್ಷಿಸುತ್ತಿದ್ದವು ಈ ಸಂತೆಗಳು ಸಾಮೂಹಿಕ ವ್ಯಾಪಾರಕ್ಕೆ ಸಲಕರಣೆಗಳಾಗಿದ್ದವು. ಸಾಮಾನ್ಯವಾಗಿ ಸಂತೆಗಳು ವಾರದಲ್ಲಿ ಒಂದು ಅಥವಾ ಎರಡು ದಿನ ಆಯೋಜನೆಗೊಳ್ಳುತ್ತಿದ್ದವು. ವಿಜಯನಗರ ಸಾಮ್ರಜ್ಯದ ರಾಜಧಾನಿಯಾದ ಹಂಪೆ ಅಥವಾ ವಿಜಯನಗರದಲ್ಲಿ ಮತ್ತು ವಿವಿಧ ನಗರಗಳಲ್ಲಿ ಪ್ರತಿದಿನ ಸಂತೆಗಳು ಆಯೋಜನೆಗೊಳ್ಳುತ್ತಿದ್ದುದರ ಬಗ್ಗೆ ಮರೆತು ಹೋದ ಮಹಾ ಸಾಮ್ರಾಜ್ಯದಲ್ಲಿ ರಾಬರ್ಟ್ ಸಿವೆಲ್ ಉಲ್ಲೇಖಿಸಿದ್ದಾರೆ. ಸರಕುಗಳನ್ನು ಸಂತೆಗಳಿಗೆ ಎತ್ತಿನಗಾಡಿಗಳು ಮತ್ತು ಕುದುರೆಗಾಡಿಗಳಿಂದ ತರುತ್ತಿದ್ದರು ಹಾಗೂ ಅತಿ ಹೆಚ್ಚು ಗ್ರಾಹಕರನ್ನು ಸಂತೆಗಳಿಗೆ ಸೆಳೆಯುವ ಉದ್ದೇಶದಿಂದ ಸಂತೆಗಳಲ್ಲಿ ಕೆಲವೊಂದು ವಿನಾಯಿತಿಗಳನ್ನು ನೀಡಲಾಗುತ್ತಿತ್ತು. ಸಂತೆಗಳಲ್ಲಿ ಚಿಲ್ಲರೆ ವ್ಯಾಪಾರವು ಸಾಮಾನ್ಯವಾಗಿ ಅಸ್ತಿತ್ವದಲ್ಲಿತ್ತು. ಸಂತೆಗಳು ಕ್ರಮೇಣ ನಗರ ಪ್ರದೇಶಗಳಾಗಿ ಬೆಳವಣಿಗೆ ಹೊಂದ ತೊಡಗಿದ್ದವು. ಈ ಸಂತೆಗಳಲ್ಲಿ ವಿವಿಧ ಭಾಗಗಳಿಂದ ತಂದ ಕೆಲವು ಸಿದ್ದ ವಸ್ತುಗಳನ್ನು ಸಹ ಮಾರಾಟ ಮಾಡಲಾಗುತ್ತಿತ್ತು.

ಸಂತೆಗಳು ಸ್ಥಳೀಯರ ಅಗತ್ಯತೆಗಳನ್ನು ಪೂರೈಸುವ ಜೊತೆಗೆ ಸ್ಥಳೀಯ ಜನರ ಆರ್ಥಿಕ ಬೆಳವಣಿಗೆಗೂ ಕಾರಣವಾಗಿದ್ದವು. ಸಂತೆಗಳಲ್ಲಿ ನಾಗರಿಕರು ತಮಗೆ ಅವಶ್ಯಕವಾಗಿದ್ದ ಸರಕುಗಳನ್ನು ಅಲ್ಲಿ ಕೊಂಡುಕೊಳ್ಳುತ್ತಿದ್ದರು. ಜೊತೆಗೆ ಹಲವಾರು ವಿದೇಶಿಯರು ದೊಡ್ಡ ದೊಡ್ಡ ಸಂತೆಗಳಲ್ಲಿ ಭಾಗವಹಿಸಿ ತಮಗೆ ಅವಶ್ಯಕವಾಗಿದ್ದ ಸರಕುಗಳನ್ನು ಕೊಂಡುಕೊಳ್ಳುತ್ತಿದ್ದರು. ಈ ಎಲ್ಲಾ ಚಟುವಟಿಕೆಗಳು ಆರ್ಥಿಕಾಭಿವೃದ್ಧಿ ಮತ್ತು ವ್ಯಾಪಾರದ ಬೆಳವಣಿಗೆಗೆ ಸಾಕ್ಷಿಯಾದವು. ಇಂದಿನ ಆಧುನಿಕ ಮಾರುಕಟ್ಟೆಗಳನ್ನು ನಾಚಿಸುವಂತಹ ಮಟ್ಟದಲ್ಲಿ ಸಂತೆಗಳು ಸ್ಥಾಪನೆಯಾಗಿ ಕಾರ್ಯ ನಿರ್ವಹಿಸುತ್ತಿದ್ದವು. ಸಂತೆಗಳು ಬೆಳವಣಿಗೆಯೊಂದಿದಂತೆ ಜನರಲ್ಲಿ ಪರಸ್ಪರ ಸ್ನೇಹ ಸೌಹರ್ದ ಭಾವನೆಗಳು ಬೆಳೆಯಿತು.

ವಿಜಯನಗರ ಕಾಲದಲ್ಲಿ ಸಂತೆಗಳು ಅಥವಾ ಬಜಾರುಗಳು ಆರ್ಥಿಕ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸಿದ್ದವು. ಹಂಪೆಯ ಕೇಂದ್ರವಲಯವನ್ನು ಮತ್ತು ವ್ಯವಸಾಯವಲಯವನ್ನು ಒಳಗೊಂಡಂತೆ ಸುಮಾರು ವಿವಿಧ ಬಗೆಯ ಏಳು ಬಜಾರುಗಳು ಕಾರ್ಯನಿರ್ವಹಿಸುತ್ತಿದ್ದವು. ಈ ಬಜಾರುಗಳಲ್ಲಿ ಮುಖ್ಯವಾಗಿ ಮುತ್ತು, ರತ್ನ, ವಜ್ರ ಮುಂತಾದ ಬಗೆಯ ಸರಕುಗಳ ವ್ಯಾಪಾರ ವಾಣಿಜ್ಯ ನಡೆಯುತ್ತಿತ್ತು. ಪ್ರಮುಖ ಬಜಾರುಗಳ ಬಗ್ಗೆ ಕೆಲವು ಮಾಹಿತಿಯನ್ನು ಈ ಕೆಳಕಂಡಂತೆ ವಿವರಿಸಲಾಗಿದೆ.

1. **ವಿರೂಪಾಕ್ಷ ಬಜಾರು:** ವಿರೂಪಾಕ್ಷ ದೇವಾಲಯದ ಮುಂದಿನ ಈ ಬಜಾರು ವಿಜಯನಗರದ ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ಈ ಬಜಾರಿನ ಉದ್ದ ಸುಮಾರು 800 ಮೀಟರ್‌ಗಳು ಹಾಗೂ ಅಗಲ 35 ರಿಂದ 40 ಮೀಟರ್‌ಗಳು. ಇದು ಹಂಪಿ ಬಜಾರೆಂದು ಖ್ಯಾತಿ ಪಡೆದಿದ್ದು ಪ್ರಸ್ತುತ ಇಂದಿಗೂ ಈ ಬಜಾರು ಅಸ್ತಿತ್ವದಲ್ಲಿದೆ.
2. **ಕೃಷ್ಣಾಬಜಾರು:** ಕೃಷ್ಣದೇವರಾಯನ ಕಾಲದಲ್ಲಿ ನಿರ್ಮಾಣವಾದ ಈ ನಗರವು ಕೃಷ್ಣಾನಗರವೆಂದೇ ಖ್ಯಾತಿ ಪಡೆದಿತ್ತು. ಈ ನಗರದಲ್ಲಿ ಕೃಷ್ಣಾ ಬಜಾರು ನಿರ್ಮಾಣಕೊಂಡು ಪ್ರಮುಖ ವಾಣಿಜ್ಯ ಕೇಂದ್ರವಾಗಿ ಬೆಳೆಯಿತು ಈ ಬಜಾರಿನ ಉದ್ದ ಸುಮಾರು ಐದುನೂರ ಎಪ್ಪತ್ತು ಮೀಟರ್ ಮತ್ತು ಅಗಲ ಸುಮಾರು ನಲವತ್ತೈದು ಮೀಟರ್‌ಗಳು. ಇಲ್ಲಿ ಹೆಚ್ಚಾಗಿ ದವಸ ಧಾನ್ಯಗಳ ಮಳಿಗೆಗಳಿದ್ದವು ಕೃಷ್ಣದೇವರಾಯನ ಕಾಲದಲ್ಲಿ ಇಲ್ಲಿ ಚೀನಾದ ಜೊತೆಗೂ ವ್ಯಾಪಾರ ವಹಿವಾಟು ನಡೆಯುತಿತ್ತು ಎಂಬುದರ ಬಗ್ಗೆ ಬಾರ್ಬೋಸನ ದಾಖಲೆಗಳು ಸ್ಪಷ್ಟಪಡಿಸುತ್ತವೆ.[56] ಪುರಾತತ್ವ ಇಲಾಖೆಯವರು ನಡೆಸಿದ ಉತ್ಪನ್ನದಲ್ಲಿ ಚೀನಾ ಪಿಂಗಾಣಿ ಪಾತ್ರೆಗಳು, ಚೀನಿ ಅಕ್ಷರದ ಮಡಿಕೆ ಚೂರುಗಳು

ದೊರಕಿವೆ. ಈ ಕೃಷ್ಣ ಬಜಾರಿಗೆ ಓರ್ಮಾಜ್ ಮತ್ತು ಸಿಲೋನ್‌ನಿಂದ ಮುತ್ತು ರತ್ನಗಳು, ಚೀನಾ ಮತ್ತು ಅಲೆಗ್ಸಾಂಡ್ರಿಯಾದಿಂದ ರೇಷ್ಮೆ, ಕಡುಗೆಂಪು ಬಟ್ಟೆ, ಹವಳಗಳು ಬರುತಿದ್ದವು ಇದು ಒಂದು ಆಮದು ಮಾರುಕಟ್ಟೆಯಾಗಿ ಕಾರ್ಯನಿರ್ವಹಿಸುತ್ತಿತ್ತು.

3. **ವಿಠಲ ಬಜಾರು:** ಕಲ್ಲಿನ ರಥ ವಿಜಯ ವಿಠಲ ದೇವಸ್ಥಾನ ಬಳಿ ಇರುವ ಪ್ರಮುಖ ಬಜಾರಾಗಿದೆ. ಇದು ಸುಮಾರು ಒಂದು ಕಿಲೋಮೀಟರ್ ಉದ್ದ ಇರುವ ಮತ್ತು ಸುಮಾರು ಮುನ್ನೂರ ಆರವತ್ತೊಂಬತ್ತು ಮಿಟರ್ ಅಗಲವಾಗಿದೆ. ಇದು ವಿಜಯನಗರ ಕಾಲದ ಪ್ರಮುಖ ದೊಡ್ಡದಾದ ಮತ್ತು ವಿಶಾಲವಾದ ಬಜಾರಾಗಿತ್ತು.
4. **ಪಾನ್‌ಸುಪಾರಿ ಬಜಾರು:** ಅರಮನೆ ಪ್ರದೇಶದಲ್ಲಿರುವ ಈ ಬಜಾರಿಗೆ ವಿಶಿಷ್ಟ ಸ್ಥಾನಮಾನವಿತ್ತು. ಇದರ ಉದ್ದ ಒಂಬೈನೂರ ಮೂವತ್ತು ಮೀಟರ್ ಇದ್ದು ಇಲ್ಲಿ ಮುಖ್ಯವಾಗಿ ವೀಳ್ಯದೆಲೆ, ಅಡಿಕೆ, ತಾಂಬೂಲಕ್ಕೆ ಸಂಬಂಧಿಸಿದ ಸಾಮಾಗ್ರಿಗಳು ಮಾರಾಟವಾಗುತ್ತಿದ್ದವು. ಇವುಗಳ ಜೊತೆಗೆ ಹೂವು, ಹಣ್ಣು, ಕಾಯಿ, ಚಿನ್ನ, ಬೆಳ್ಳಿ, ಆಭರಣಗಳು, ಮುತ್ತುರತ್ನಗಳು, ಕುದುರೆ, ಕೋಳಿ, ಹಸು, ಕುರಿಗಳು ಮಾರಾಟವಾಗುತ್ತಿದ್ದವು.
5. **ಅಚ್ಯುತ ಬಜಾರು:** ಹಂಪಿಯ ತಿರುವೆಂಗಳನಾಥ ದೇವಾಲಯದ ಉತ್ತರಕ್ಕೆ ತುಂಗಭದ್ರ ನದಿ ದಂಡೆವರೆಗಿನ ಪ್ರದೇಶವೇ ಅಚ್ಯುತ ಬಜಾರು ಇಲ್ಲಿ ವಾರಕ್ಕೊಂದು ಸಂತೆ ನಡೆಯುತಿತ್ತು. ಇಲ್ಲಿ ಎಲ್ಲಾ ರೀತಿಯ ವಸ್ತುಗಳು ದೊರೆಯುತ್ತಿದ್ದವು. ಈ ಬಜಾರಿನಲ್ಲಿ ನೃತ್ಯ ಶಾಲೆಗಳು ಇದ್ದವು. ಹಾಗಾಗಿ ಇದು ಸೂಳೆ ಬಜಾರು ಎಂದು ಕರೆಯಲ್ಪಡುತ್ತಿತ್ತು.
6. **ಮೌಲ್ಯವಂತ ಬಜಾರು** : ಇದು ಮತ್ತೊಂದು ಪ್ರಮುಖ ಬಜಾರಾಗಿದ್ದು ಕಮಲಾಪುರದಲ್ಲಿ ಕಂಡು ಬರುತಿತ್ತು. ಇಲ್ಲಿ ಮುಖ್ಯವಾಗಿ ಎಲ್ಲಾ ಮಾದರಿಯ ಸರಕುಗಳನ್ನು ಮಾರಾಟ ಮಾಡಲಾಗುತಿತ್ತು.
7. **ವರದರಾಜಮ್ಮನ ಬಜಾರು:** ಇದು ಕೂಡ ಕಮಲಾಪುರದ ಬಳಿ ರಘುನಾಥ ದೇವಾಲಯದಲ್ಲಿ ವರದ ರಾಜಮ್ಮನ ಪಟ್ಟಣದಲ್ಲಿ ಕಂಡುಬರುತಿತ್ತು ಇದು ಕೂಡ ಪ್ರಮುಖ ವ್ಯಾಪಾರಿ ಕೇಂದ್ರವಾಗಿತ್ತು. ಇಲ್ಲಿ ಸಾಮಾನ್ಯವಾಗಿ ಎಲ್ಲಾ ಸರಕುಗಳನ್ನು ಮಾರಾಟ ಮಾಡಲಾಗುತಿತ್ತು. ವಿವಿಧ ಭಾಗಗಳಿಂದ ಬರುತ್ತಿದ್ದ ರೈತರು ಮತ್ತು ವ್ಯಾಪಾರಿಗಳು ಇಲ್ಲಿ ವ್ಯಾಪಾರ ವಾಣಿಜ್ಯ ನಡೆಸುತ್ತಿದ್ದರು.

ಹೀಗೆ ಈ ಮೇಲ್ಕಂಡ ಎಲ್ಲಾ ಬಜಾರುಗಳು ಪ್ರಮುಖವಾಗಿ ಸಾಮ್ರಾಜ್ಯದ ಆರ್ಥಿಕತೆಯ ಬೆಳವಣಿಗೆಗೆ ಕಾರಣವಾಗುವುದರೊಂದಿಗೆ ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಗೆ

ಪೂರಕವಾಗಿ ಸಾಮಾನ್ಯ ಜನರ ಅವಶ್ಯಕತೆಗಳನ್ನು ಈಡೇರಿಸಲು ಶ್ರಮಿಸಿದ್ದವು. ಬಜಾರುಗಳು–ಸಂತೆಗಳು ಪ್ರಮುಖ ಜಾತ್ಯಾತೀತ ಕೇಂದ್ರಗಳಾಗಿದ್ದು ಇಲ್ಲಿ ಯಾವುದೇ ಜಾತಿ ಧರ್ಮದ ಬೇದ ಭಾವವಿಲ್ಲದೇ ವ್ಯಾಪಾರ ನಡೆಯುತಿತ್ತು.ಅರಬ್ಬರು ಅನ್ಯಧರ್ಮಿಯರಾಗಿದ್ದು ಈ ಬಜಾರುಗಳಲ್ಲಿ ವ್ಯಾಪಾರ ನಡೆಸುತ್ತಿದ್ದರು. ಹಾಗೆಯೇ ಪೋರ್ಚುಗೀಸರು, ಚೀನಿಯರು ಹೀಗೆ ವಿಶ್ವದ ವಿವಿಧ ಮೂಲೆಗಳಿಂದ ಬರುತ್ತಿದ್ದ ವಿದೇಶಿ ವ್ಯಾಪಾರಿಗಳು ವ್ಯಾಪಾರ ಮತ್ತು ವಾಣಿಜ್ಯದಲ್ಲಿ ತೊಡಗಿಸಿಕೊಂಡಿದ್ದರು. ಡೊಮಿಂಗೋ ಪಾಯಸ್‌ನು ತನ್ನ ದಾಖಲೆಗಳಲ್ಲಿ ಉಲ್ಲೇಖಿಸಿರುವಂತೆ ಈ ಮೇಲ್ಕಂಡ ಸಾಮಾನ್ಯವಾಗಿ ಎಲ್ಲಾ ಬಜಾರುಗಳಲ್ಲಿ ವಜ್ರ ಮತ್ತು ವೈಡೂರ್ಯಗಳನ್ನು ಮೂಟೆಗಳಲ್ಲಿ ತೆಗೆದುಕೊಂಡು ಬಂದು ವ್ಯಾಪಾರ ಮಾಡುತ್ತಿದುದ್ದರ ಬಗ್ಗೆ ಮಾಹಿತಿ ನೀಡುತ್ತಾನೆ. ಇವನ ಹೇಳಿಕೆಯಿಂದ ವಿಜಯನಗರ ಸಾಮ್ರಾಜ್ಯ ಒಂದು ದೊಡ್ಡ ಶ್ರೀಮಂತ ಮತ್ತು ಸಂಪದ್ಭರಿತ ಸಾಮ್ರಾಜ್ಯವಾಗಿತ್ತೆಂದು ಹೇಳಬಹುದು.

## 6.7 ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯಲ್ಲಿ ಉದ್ಯಮಗಳ ಪಾತ್ರ.

ವಿಜಯನಗರ ಕಾಲದಲ್ಲಿ ಹಲವಾರು ಉದ್ಯಮಗಳು ಅಥವಾ ಕೈಗಾರಿಕೆಗಳು ಸ್ಥಾಪನೆಗೊಂಡು ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯಲ್ಲಿ, ಆರ್ಥಿಕಾಭಿವೃದ್ಧಿಯಲ್ಲಿ ಮಹತ್ತರವಾದ ಪಾತ್ರವನ್ನು ವಹಿಸಿದ್ದವು. ಈ ಎಲ್ಲಾ ಪ್ರಮುಖ ಉದ್ಯಮಗಳಿಂದ ಜನರ ಜೀವನ ಮಟ್ಟ ಉತ್ತಮವಾಗಿತ್ತು ಈ ಉದ್ಯಮಗಳು ಗೃಹ ಕೈಗಾರಿಕೆಗಳಾಗಿದ್ದು ಮತ್ತು ಕೃಷಿ ಸರಕು ಆಧಾರಿತ ಉದ್ಯಮಗಳಾಗಿದ್ದು ಕೃಷಿ, ವ್ಯಾಪಾರ ವಾಣಿಜ್ಯ, ಆರ್ಥಿಕತೆ ಮುಂತಾದ ಕ್ಷೇತ್ರಗಳ ಬೆಳವಣಿಗೆಗೆ ಕಾರಣವಾಗಿದ್ದವು. ಹಲವಾರು ಕೈಗಾರಿಕೆಗಳು ಅಥವಾ ಉದ್ಯಮಗಳು ತಯಾರಿಸುತ್ತಿದ್ದ ವಸ್ತುಗಳನ್ನು ವಿದೇಶಗಳಿಗೆ ರಫ್ತು ಮಾಡಲಾಗುತ್ತಿತ್ತು. ಪ್ರಮುಖ ಉದ್ಯಮಗಳ ವಿವರಣೆ ಈ ಕೆಳಕಂಡಂತೆ ವಿವರಿಸಲಾಗಿದೆ.

### ನೇಯ್ಗೆ ಉದ್ಯಮ

ನೇಯ್ಗೆ ಉದ್ಯಮದಲ್ಲಿ ಮುಖ್ಯವಾಗಿ ಹತ್ತಿಯನ್ನು ಬಳಸಲಾಗುತ್ತಿತ್ತು ಭಾರತದಲ್ಲಿ ಹತ್ತಿಯ ಬೆಳವಣಿಗೆಯನ್ನು ಸಿಂಧೂ ಬಯಲಿನ ನಾಗರಿಕತೆಯಿಂದ ಗುರ್ತಿಸಬಹುದಾಗಿದೆ. ಈ ಭಾಗದ ಕಪ್ಪು ಮಣ್ಣು ಹತ್ತಿ ಬೆಳೆಯಲು ಹೆಚ್ಚು ಸಹಕಾರಿಯಾಗಿತ್ತು. ಕರ್ನಾಟಕದ ಒಣ ಮತ್ತು ಬಿಸಿಯಾದ ವಾತಾವರಣವು ಕೂಡ ಹತ್ತಿ ಬೆಳೆಗೆ ಸಹಕಾರಿಯಾಗಿತ್ತು. ಪರ್ಷಿಯಾದ ರಾಯಭಾರಿಯಾದ ಅಬ್ದುಲ್‌ರಜಾಕ್‌ನು ಎರಡನೇ ದೇವರಾಯನ ಆಸ್ಥಾನಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಕೆಲವೊಂದು ಅಂಶಗಳನ್ನು ಉಲ್ಲೇಖಿಸಿದ್ದಾನೆ. ಅವನ ಪ್ರಕಾರ "ವಿಜಯನಗರ ಸಾಮ್ರಾಜ್ಯದ

ಸಾಮಾನ್ಯ ಜನರು ಹತ್ತಿ ಬಟ್ಟೆಗಳನ್ನು ಹೆಚ್ಚಾಗಿ ಬಳಸುತ್ತಿದ್ದರು ಮತ್ತು ಅತಿ ಕಡಿಮೆ ಉಣ್ಣೆ ಬಟ್ಟೆಗಳು ಚಾಲ್ತಿಯಲ್ಲಿದ್ದವು ಹಾಗೂ ಭಾರತೀಯ ಹತ್ತಿ ಬಟ್ಟೆಗಳಿಗೆ ವಿದೇಶಗಳಲ್ಲಿ ಅಪಾರವಾದ ಬೇಡಿಕೆ ಇತ್ತು ವಿವಿಧ ದೇಶಗಳಿಂದ ಬರುತ್ತಿದ್ದ ವ್ಯಾಪಾರಿಗಳು ಭಾರತದ ಸಮುದ್ರ ವ್ಯಾಪಾರದಿಂದ ಈ ಬಟ್ಟೆಗಳನ್ನು ಪಡೆದುಕೊಂಡು ಹೋಗುತ್ತಿದ್ದರು".

ವಿದೇಶಿ ಪ್ರವಾಸಿಗರ ದಾಖಲೆಗಳು ಮತ್ತು ಶಾಸನಗಳು ವಿವಿಧ ಬಗೆಯ ಬಟ್ಟೆಗಳ ಬಗ್ಗೆ ಮಾಹಿತಿ ನೀಡುತ್ತವೆ. ಉದಾ:– ಕ್ರಿ.ಶ.1382ರ ಒಂದನೇ ಬುಕ್ಕನ ಬೇಲೂರು ಶಾಸನ ಹಲವಾರು ವಿವಿಧ ಬಗೆಯ ಬಟ್ಟೆಗಳ ಬಗ್ಗೆ ವಿವರಣೆ ನೀಡುತ್ತದೆ. ವಿಜಯನಗರ ಕಾಲದಲ್ಲಿ ಈ ಬಗೆಯ ಬಟ್ಟೆಗಳು ಜನಪ್ರಿಯವಾಗಿದ್ದವು ಅವುಗಳೆಂದರೆ ದೇವಗಿರಿ ಜವಳಿ, ಮದುವೆಯ ಜವಳಿ, ಬಿಳಿಬಣ್ಣದ ಜವಳಿ, ಎಂಭತ್ತರ ಜವಳಿ ಪಟ್ಟೆನೂಲು ಜವಳಿ, ಹತ್ತಿಯ ಜವಳಿ, ರತ್ನಗಂಭಳಿ ಮುಂತಾದ ಬಟ್ಟೆಗಳ ಬಗ್ಗೆ ಉಲ್ಲೇಖಿಸಿವೆ ಸಾಲು ಮಾಲೆ ಬಣಜಿಗರು ಈ ಬಟ್ಟೆಗಳ ವ್ಯಾಪಾರದಲ್ಲಿ ಪ್ರಮುಖವಾಗಿ ತೊಡಗಿಸಿಕೊಂಡಿದ್ದರು.[57]

ಹತ್ತಿಯ ಬಟ್ಟೆಗಳಲ್ಲದೆ ರೇಷ್ಮೆ ಬಟ್ಟೆಗಳು ಕೂಡ ಅಲ್ಲಿ ತಯಾರಾಗುತ್ತಿದ್ದವು. ಈ ಕಾಲದಲ್ಲಿ ಹಲವಾರು ಪ್ರಮುಖ ಕೇಂದ್ರಗಳು ನೇಯ್ಗೆ ಉದ್ಯಮದ ಬೆಳವಣಿಗೆಗೆ ಕಾರಣವಾಗಿದ್ದವು ಪ್ರಮುಖ ನೇಯ್ಗೆ ಉದ್ಯಮ ಕೇಂದ್ರಗಳೆಂದರೆ ಗೋವಾ ಒಂದು ಪ್ರಮುಖ ನೇಯ್ಗೆಯ ಕೇಂದ್ರವಾಗಿತ್ತೆಂದು ನ್ಯೂನಿಜ್‌ನು ತನ್ನ ಬರವಣಿಗೆಯಲ್ಲಿ ಉಲ್ಲೇಖಿಸಿದ್ದಾನೆ ಕಾರಣ ಈ ಭಾಗದಲ್ಲಿ ಹತ್ತಿ ಹೆಚ್ಚಾಗಿ ಬೆಳೆಯುತ್ತಿದ್ದರು. ಪೋರ್ಚುಗಲ್‌ನ ಪ್ರವಾಸಿಗನಾದ ಬಾರ್ಬೋಸನು ತನ್ನ ಬರವಣಿಗೆಯಲ್ಲಿ ಪುಲಿಕಾಟ್ ಪ್ರಮುಖ ನೇಯ್ಗೆ ಕೇಂದ್ರವೆಂದು ಉಲ್ಲೇಖಿಸಿದ್ದಾನೆ. ಮಲ ಪೆಗು, ಸುಮಾತ್ರ ಮತ್ತು ಭಾರತದ ಉತ್ತರಭಾಗ ಗುಜರಾತ್‌ಗಳಿಗೆ ಬಟ್ಟೆಗಳೂ ಇಲ್ಲಿಂದ ರಫ್ತಾಗುತ್ತಿದ್ದವೆಂದು ಉಲ್ಲೇಖಿಸಿದ್ದಾನೆ, ಹಾಗೂ ಮುಂದುವರೆದಂತೆ ಪಶ್ಚಿಮ ಕರಾವಳಿ ಭಾಗಗಳಲ್ಲಿ ರೇಷ್ಮೆ ಬಟ್ಟೆ ಮತ್ತು ಬಣ್ಣದ ಮಕಮಲ್ಲು ಬಟ್ಟೆಗಳನ್ನು ತಯಾರಿಸಲಾಗುತ್ತಿದಂದು ಉಲ್ಲೆಖಿಸಿದ್ದಾನೆ.[58] ಚಿತ್ರದುರ್ಗ ಜಿಲ್ಲೆಯ ಬೂದಿಹಾಳ ಭಾಗವು ನೇಯ್ಗೆ ಕೇಂದ್ರವಾಗಿತ್ತು ಇಲ್ಲಿ ನಾರು ಬಟ್ಟೆಗಳು ಅತಿ ಹೆಚ್ಚಾಗಿ ದೊರಕುತ್ತಿದ್ದವು. ಮತ್ತೊಂದು ಪ್ರಮುಖವಾದ ನೇಯ್ಗೆ ಕೇಂದ್ರವೆಂದರೆ ಅದು ಕ್ಯಾಲಿಕಟ್ ಆಗಿತ್ತು. ಇಲ್ಲಿ ಅಪಾರ ಪ್ರಮಾಣದ ಬಟ್ಟೆಯನ್ನು ನೇಯಲಾಗುತಿತ್ತು.

ನೇಯ್ಗೆ ಉದ್ಯಮವನ್ನು ಸಮರ್ಪಕವಾಗಿ ಅಭಿವೃದ್ಧಿಗೊಳಿಸುವ ಉದ್ದೇಶಕ್ಕಾಗಿ ಈ ವೃತ್ತಿ ಮಾಡುವವರು ತಮ್ಮದೇಯಾದ ಸಂಘಗಳನ್ನು ನಿರ್ಮಾಣ ಮಾಡಿಕೊಂಡಿದ್ದರು. ಈ ಸಂಘದವರನ್ನು ದೇವಾಂಗರೆಂದು ಕರೆಯಲಾಗುತಿತ್ತು. ಈ ದೇವಾಂಗರು ಉತ್ತಮ ಬಗೆಯ

ಬಟ್ಟೆಗಳನ್ನು ತಯಾರಿಸುತ್ತಿದ್ದರು.ಈ ದೇವಾಂಗ ಸಂಘದವರು ಉತ್ತಮ ತರಬೇತಿಯನ್ನು ಬಟ್ಟೆ ತಯಾರಿಕೆಯಲ್ಲಿ ಪಡೆದುಕೊಳ್ಳುತ್ತಿದ್ದರು ಬಟ್ಟೆಗಳನ್ನು ಕೈಗಳಿಂದ ನೇಯುತ್ತಿದ್ದರು. ಈ ಬಟ್ಟೆಗಳ ಮೇಲೆ ಸ್ವಸ್ತಿಕ್ ಗುರುತು, ಆನೆ, ಕುದುರೆಗಳು, ರಥಗಳು, ಜಿಂಕೆಗಳು, ಹೂವುಗಳು, ಹಕ್ಕಿಗಳು ಮುಂತಾದ ಚಿತ್ರಗಳನ್ನು ಬಿಡಿಸುತ್ತಿದ್ದರು. ಈ ಉದ್ಯಮದ ಮೇಲೆ ಸರ್ಕಾರಗಳು ತೆರಿಗೆಯನ್ನು ವಿಧಿಸುತ್ತಿದ್ದವು. ಎಲ್ಲಾ ಕಾಲದಲ್ಲೂ ಸಾಮಾನ್ಯವಾಗಿ ಮಗ್ಗಸುಂಕ ಎಂಬ ಸುಂಕವನ್ನು ವಿಧಿಸುವುದು ಸಾಮಾನ್ಯವಾಗಿತ್ತು. ಕ್ರಿ.ಶ.1513ರ ಗುಂಡ್ಲುಪೇಟೆ ಶಾಸನವು ಕೃಷ್ಣದೇವರಾಯನು ಅಮರನಾಯಕ ಗೋವಿಂದರಾಜಯ್ಯ ದೇವಾಲಯಕ್ಕೆ ಮಗ್ಗ ಸುಂಕದಿಂದ ದೇಣಿಗೆಯನ್ನು ನೀಡಿದ್ದರ ಬಗ್ಗೆ ಉಲ್ಲೇಖವಿದೆ. ಕ್ರಿ.ಶ.1490ರ ನಂಜನಗೂಡಿನ ಶಾಸನ ಹತ್ತಿಯ ಮೇಲಿನ ಸುಂಕವನ್ನು ವಿಧಿಸಿ ಆ ಸುಂಕದ ಹಣವನ್ನು ತಗಡೂರಿನ ಮೂಲನಾಥದೇವ ಮತ್ತು ಲಕ್ಷ್ಮೀಕಾಂತದೇವ ದೇವಾಲಯಕ್ಕೆ ದತ್ತಿ ನೀಡಿದರ ಬಗ್ಗೆ ಉಲ್ಲೇಖಗಳಿವೆ.[59] ಹೀಗೆ ನೇಯ್ಗೆ ಉದ್ಯಮವನ್ನು ಕೈಗೊಂಡಿದರ ಫಲವಾಗಿ ಅದರಿಂದ ಉದ್ಯಮದ ಜೊತೆಗೆ ಆರ್ಥಿಕ ಬೆಳವಣಿಗೆ ಉಂಟಾಗಿತ್ತು. ಈ ನೇಯ್ಗೆ ಕೇಂದ್ರಗಳಿಗೆ ವಿಧಿಸಿದ್ದ ಸುಂಕದಿಂದಾಗಿ ಅ ಸುಂಕಗಳನ್ನು ದೇವಾಲಯದ ಅಭಿವೃದ್ಧಿಗೆ ಬಳಸಲಾಗುತ್ತಿತ್ತು. ಇದೆಲ್ಲದರಿಂದಾಗಿ ಉತ್ತಮವಾದ ಆರ್ಥಿಕ ಅಭಿವೃದ್ಧಿ ಮತ್ತು ಧಾರ್ಮಿಕ ಬೆಳವಣಿಗೆಗೆ, ವ್ಯಾಪಾರದ ಅಭಿವೃದ್ದಿಗೆ ಉಂಟಾಯಿತೆನ್ನಬಹುದು.

**ಎಣ್ಣೆ ಗಿರಣಿಗಳು**

ವಿಜಯನಗರ ಕಾಲದಲ್ಲಿ ಪ್ರಮುಖವಾಗಿ ಬೆಳವಣಿಗೆ ಹೊಂದಿದ್ದ ಮುಖ್ಯವಾದ ಮತ್ತೊಂದು ಉದ್ಯಮವೆಂದರೆ ಎಣ್ಣೆಗಿರಣಿಗಳು. ಎಣ್ಣೆಯನ್ನು ಎರಡು ಕಾರ್ಯಗಳಿಗೆ ಬಳಸಲಾಗುತ್ತಿತ್ತು. ಒಂದು ಅಡುಗೆ ಮಾಡಲು ಮತ್ತು ಮತ್ತೊಂದು ದೀಪ ಉರಿಸುವ ಉದ್ದೇಶದಿಂದ, ದೇವಾಲಯಗಳಲ್ಲಿ ಧಾರ್ಮಿಕ ಚಟುವಟಿಕೆಗಳಿಗೂ ಸಹ ಎಣ್ಣೆಯನ್ನು ಬಳಸಲಾಗುತ್ತಿತ್ತು. ಎಣ್ಣೆಯನ್ನು ಪ್ರಮುಖವಾಗಿ ಕೃಷಿಯ ನಾಲ್ಕು ಪದಾರ್ಥಗಳಿಂದ ತಯಾರಿಸಲಾಗುತ್ತಿತ್ತು ಅವುಗಳೆಂದರೆ ತೆಂಗಿನಕಾಯಿ, ಕಡಲೆಕಾಯಿ, ಹರಳು ಮತ್ತು ಶುಂಠಿ, ಕ್ರಿ.ಶ.1438ರ ಮಂಗಳೂರು ಶಾಸನವು ಈ ವಿಚಾರಗಳನ್ನು ಕುರಿತು ಮಾಹಿತಿ ನೀಡುತ್ತದೆ. ಕ್ರಿ.ಶ 12ನೇ ಶತಮಾನದಿಂದಲೂ ಅಧಿಕವಾಗಿ ಎಣ್ಣೆಗರಣಿಗಳು ಸ್ಥಾಪನೆಯಾಗಿದ್ದವು. ಎಣ್ಣೆ ಗಿರಣಿಗಳಲ್ಲಿ ಮೂರು ವಿಧಗಳಿದವು. ಕೈಗಿರಣಿಗಳು, ಎತ್ತುಗಿರಣಿಗಳು ಮತ್ತು ಮೆಟ್ಟುಗಣ ಗಿರಣಿಗಳು, ಎತ್ತುಗಿರಣಿಗಳಿಗೆ ವಿದಿಸುತ್ತಿದ್ದ ಅರ್ಧದಷ್ಟು ತೆರಿಗೆಯನ್ನು ಕೈಗಿರಣಿಗಳಿಗೆ ವಿದಿಸಲಾಗುತ್ತಿತ್ತು.[60]

ಕ್ರಿ.ಶ. 14 ಮತ್ತು 16ನೇ ಶತಮಾನದ ವಿಜಯನಗರ ಕಾಲದ ಪ್ರಮುಖ ಶಾಸನಗಳು ಕೋಲಾರ, ಶಿಕಾರಿಪುರ, ಚಾಮರಾಜನಗರ, ಚನ್ನರಾಯಪಟ್ಟಣ, ಹೊಸಪೇಟೆ ಮತ್ತು ಮಂಗಳೂರು ಶಾಸನಗಳು ಬಹಳಷ್ಟು ಮಾಹಿತಿಗಳನ್ನು ಈ ಎಣ್ಣೆ ಗಿರಣಿಗಳ ಬಗೆಗ ನೀಡಿವೆ. ದಕ್ಷಿಣ ಕನ್ನಡದಲ್ಲಿ ಅತಿ ಹೆಚ್ಚು ತೆಂಗಿನಕಾಯಿ ಬೆಳೆಯುತ್ತಿದ್ದರು. ಎಣ್ಣೆಯನ್ನು ಅಡುಗೆಗೆ ಮತ್ತು ಧಾರ್ಮಿಕ ಚಟುವಟಿಕೆಗಳಿಗೆ ಬಳಸುತ್ತಿದ್ದರು. ಎಣ್ಣೆಗಿರಣಿಗಳು ನೇರವಾಗಿ ವಿಜಯನಗರ ಸಾಮ್ರಾಜ್ಯಕ್ಕೆ ತೆರಿಗೆಯ ರೂಪದಲ್ಲಿ ಹಣವನ್ನು ಸಂದಾಯ ಮಾಡುತ್ತಿದ್ದವು. ಇಡೀ ಸಾಮ್ರಾಜ್ಯದಾದ್ಯಂತ ಗಾಣದ ಅಥವಾ ಗಿರಣಿಯ ತೆರಿಗೆಯನ್ನು ವಸೂಲಿ ಮಾಡುತ್ತಿದುದ್ದಕ್ಕೆ ಹಲವಾರು ಶಾಸನಗಳು ಸಾಕ್ಷಿಯಾಗಿವೆ ಅವುಗಳೆಂದರೆ ಕ್ರಿ.ಶ 1513ರ ಗುಂಡ್ಲುಪೇಟೆ ಶಾಸನವು ಕೃಷ್ಣದೇವರಾಯನ ಅಮರನಾಯಕ ನಾಗಿದ್ದ ಗೋವಿಂದ ರಾಜಯ್ಯ ಗಿರಣಿಯಿಂದ ಬಂದ ಹಣದಲ್ಲಿ ತ್ರಿಯಂಭಕ ದೇವರಿಗೆ ದೇಣಿಗೆ ಕೊಟ್ಟ ಬಗ್ಗೆ ಮಾಹಿತಿ ಇದೆ. ಕ್ರಿ.ಶ 1521ರ ಗುಂಡ್ಲುಪೇಟೆಯ ಮತ್ತೊಂದು ಶಾಸನ ಎಣ್ಣೆಗಿರಣಿಯಿಂದ ಪಡೆದ ತೆರಿಗೆಯನ್ನು ಎರಡು ಗ್ರಾಮಗಳ ಅಭಿವೃದ್ಧಿ ನೀಡಿರುವುದಾಗಿ ಮಾಹಿತಿ ಇದೆ. ಕ್ರಿ.ಶ.1490ರ ನಂಜನಗೂಡಿನ ಶಾಸನದ ಉಲ್ಲೇಖದ ಪ್ರಕಾರ ಎಣ್ಣೆಗಿರಣಿಯಿಂದ ಬಂದ ಹಣದಲ್ಲಿ ತಗಡೂರಿನ ಮೂಲನಾಥದೇವ ಮತ್ತು ಲಕ್ಷ್ಮಿಕಾಂತೆದೇವ ದೇವಾಲಯಕ್ಕೆ ದೇಣಿಗೆ ನೀಡಿದ್ದರ ಬಗ್ಗೆ ಮಾಹಿತಿ ಇದೆ.[61]

ವಿಜಯನಗರ ಕಾಲದಲ್ಲಿ ಎಣ್ಣೆ ಮಾರುವವರು ತಮ್ಮದೇಯಾದ ಸಂಘಗಳನ್ನು ಸ್ಥಾಪಿಸಿಕೊಂಡಿದ್ದರು. ಎಣ್ಣೆ ಮಾರುವ ಸಂಘಗಳು ದೇವಾಲಯಗಳಿಗೆ ಎಣ್ಣೆಯನ್ನು ದೇಣಿಗೆಯಾಗಿ ನೀಡುತ್ತಿದ್ದವು. ಈ ವ್ಯಾಪಾರಿ ಸಂಘಗಳು ಎಣ್ಣೆಯನ್ನು ಸಂತೆಗಳಿಗೆ ತಂದು ಮಾರಾಟ ಮಾಡುತ್ತಿದ್ದರು. ಸಂತೆಗಳಿಗೆ ಬರುತ್ತಿದ್ದ ಗ್ರಾಹಕರು ತಮಗೆ ಅವಶ್ಯಕವಾಗಿದ್ದ ಎಣ್ಣೆಯನ್ನು ಪಡೆದುಕೊಳ್ಳುತ್ತಿದ್ದರು. ಈ ವ್ಯಾಪಾರದಿಂದಾಗಿ ವ್ಯಾಪಾರ ಮತ್ತು ವಾಣಿಜ್ಯವು ಪ್ರಗತಿ ಹೊಂದಿತ್ತು.

**ಲೋಹದ ಉದ್ಯಮಗಳು**

ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಲೋಹದ ಉದ್ದಿಮೆಗಳು ಬೆಳವಣಿಗೆ ಹೊಂದಿದ್ದವು. ಲೋಹವನ್ನು ಧಾರ್ಮಿಕ ಮತ್ತು ಧಾರ್ಮಿಕವಲ್ಲದ ಚಟುವಟಿಕೆಗಳಿಗೆ ಬಳಸಲಾಗುತ್ತಿತ್ತು. ದೇವಾಲಯದಲ್ಲಿ ಕೆಲವೊಂದು ವಿಗ್ರಹಗಳು ಲೋಹದವಾಗಿದ್ದವು ಮತ್ತು ಮನೆಗೆ ಬಳಸುತ್ತಿದ್ದ ಸಾಮಾಗ್ರಿಗಳು ಲೋಹವಾಗಿದ್ದವು. ಹೀಗಾಗಿ ಲೋಹಕ್ಕೆ ಬಹಳಷ್ಟು ಬೇಡಿಕೆ ಇತ್ತು. ಇದು ಮುಖ್ಯವಾಗಿ ನೈಪುಣ್ಯತೆ ಹೊಂದಿದ್ದ ಉದ್ಯಮವಾಗಿತ್ತು. ಪ್ರತಿಯೊಂದು ಜಾತಿಯು

ಲೋಹ ತಯಾರಿಕೆಗಳಲ್ಲಿ ಜ್ಞಾನವನ್ನು ಪಡೆದಿದ್ದರು. ಉದಾ:- ಅಕ್ಕಸಾಲಿಗರು ಚಿನ್ನ ಮತ್ತು ಬೆಳ್ಳಿಯೊಂದಿಗೆ ಕಾರ್ಯನಿರ್ವಹಿಸುತ್ತಿದರು, ಕಬ್ಬಿಣ ತಯಾರಿಸುವವರು ಕಬ್ಬಿಣದೊಂದಿಗೆ ಕಾರ್ಯನಿರ್ವಹಿಸುತ್ತಿದ್ದರು. ಲೋಹದ ಉದ್ಯಮವು ಸಂಪೂರ್ಣವಾಗಿ ಲೋಹಗಳ ಲಭ್ಯತೆಯ ಆಧಾರದ ಮೇಲೆ ನಿಂತಿತ್ತು. ಉದಾ: ಚಿನ್ನ, ಬೆಳ್ಳಿ, ಕಬ್ಬಿಣ, ತಾಮ್ರ ಮತ್ತು ಕಂಚು ಲಭ್ಯತೆ ಬಹಳ ಮುಖ್ಯವಾಗಿತ್ತು. ಈ ಲೋಹಗಳು ಕರ್ನಾಟಕದ ಗಣಿಗಳಲ್ಲಿ ದೊರಕುತ್ತಿದ್ದವು ಉದಾ: ಕಬ್ಬಿಣವು ಬಳ್ಳಾರಿ, ಹೊಸಪೇಟೆ, ರಾಮಗಿರಿ, ಕೆಮಣ್ಣುಗುಂಡಿ, ಹೊನ್ನಾವರ ಮುಂತಾದ ಕಡೆ ಸಿಗುತ್ತಿದ್ದವು. ಪೋರ್ಚುಗಲ್‌ನ ಪ್ರವಾಸಿಗ ನ್ಯೂನಿಜ್‌ನು ನೀಡಿರುವ ದಾಖಲೆಗಳ ಪ್ರಕಾರ ವಿಜಯನಗರ ಕಾಲದಲ್ಲಿ ಬಹಳಷ್ಟು ಕಬ್ಬಿಣ ದೊರಕುತ್ತಿತ್ತೆಂದು ಹೇಳಿದ್ದಾನೆ. ತಾಮ್ರವು ಚಿತ್ರದುರ್ಗ ಮತ್ತು ಮೈಸೂರಿನಲ್ಲಿ ದೊರಕುತಿತ್ತು ಹಾಗೂ ಚಿನ್ನವು ಕೋಲಾರ ಮತ್ತು ರಾಯಚೂರಿನಲ್ಲಿ ಹೆಚ್ಚಾಗಿ ದೊರಕುತ್ತಿತ್ತು.

ಲೋಹದ ಉದ್ಯಮ ಬೆಳವಣಿಗೆ ಹೊಂದಲು ಹಲವಾರು ಅಂಶಗಳು ಕಾರಣವಾಗಿದ್ದವು ಭಾರತೀಯರು ಪ್ರಾಚೀನ ಕಾಲದಿಂದಲೂ ಆಭರಣ ಪ್ರಿಯರಾಗಿದ್ದರು ಈ ಆಭರಣಗಳ ತಯಾರಿಕೆಯಲ್ಲಿ ಲೋಹಗಳು ಮಹತ್ತರ ಪಾತ್ರ ನಿರ್ವಹಿಸುತ್ತಿದ್ದವು. ವಿಜಯನಗರ ಕಾಲದ ಶಿಲ್ಪಿಗಳು ಕೂಡ ಅಂದಿನ ಜನರು ಬಳಸುತ್ತಿದ್ದ ವಿವಿಧ ಬಗೆಯ ಆಭರಣಗಳ ಬಗ್ಗೆ ಮಾಹಿತಿ ನೀಡುವರು. ಲೋಹ ಉದ್ಯಮದ ಮೇಲೆ ವಿಜಯನಗರ ಕಾಲದಲ್ಲಿ ತೆರಿಗೆಗಳನ್ನು ವಿಧಿಸಲಾಗುತ್ತಿತ್ತು. ಕ್ರಿ.ಶ. 1513ರ ಕೃಷ್ಣದೇವರಾಯನ ಕಾಲದ ಗುಂಡ್ಲುಪೇಟೆ ಶಾಸನ ಉಲ್ಲೇಖಿಸಿರುವ ಪ್ರಕಾರ ಕಂಚುಗಾರ, ಶಿಲ್ಪಗಾರ, ಲೋಹಕಾರ ಮುಂತಾದವರ ಮೇಲೆ ತೆರಿಗೆ ವಿಧಿಸುತ್ತಿದ್ದವರ ಬಗ್ಗೆ ಉಲ್ಲೇಖವಿದೆ. ಕ್ರಿ.ಶ. 1381ರ ಕೊಳ್ಳೇಗಾಲ ಶಾಸನವು ಲೋಹ ಉದ್ಯಮದ ಮೇಲೆ ತೆರಿಗೆ ವಿಧಿಸುದುದರ ಬಗ್ಗೆ ಉಲ್ಲೇಖಿಸುತ್ತದೆ.[62] ಕ್ರಿ.ಶ. 1506ರ ಗುಂಡ್ಲುಪೇಟೆ ಶಾಸನ ಅಕ್ಕಸಾಲಿಗರ ಮೇಲೆ ತೆರಿಗೆ ವಿಧಿಸಿದ್ದವರ ಬಗ್ಗೆ ಉಲ್ಲೇಖವಿದೆ. ಅಕ್ಕಸಾಲಿಗರು ಚಿನ್ನವನ್ನು ತಯಾರಿಸುತ್ತಿದ್ದರು, ವಿಶ್ವಕರ್ಮ ಬ್ರಾಹ್ಮಣರೆಂದು ಕರೆಯುತ್ತಿದ್ದ ಈ ವರ್ಗಕ್ಕೆ ಸೇರಿದವರು ದೇವರ ಮೂರ್ತಿಗಳನ್ನು ತಯಾರುಮಾಡಿ ಮಾರಾಟ ಮಾಡುತ್ತಿದ್ದರು ಸಾಮಾನ್ಯವಾಗಿ ಇವರನ್ನು ಇಂದಿಗೂ ಅಚಾರಿಗಳೆಂದು ಕರೆಯಲಾಗುತ್ತದೆ. ಲೋಹವನ್ನು ಬಳಸಿ ಖಡ್ಗಗಳನ್ನು ಸಹ ತಯಾರಿಸಲಾಗುತ್ತಿತ್ತು. ಬರ್ಜ್‌ಗಳು ಲೋಹದ ಪ್ರಮುಖ ಉತ್ಪಾದನೆಗಳಾಗಿದ್ದವು.

ವಿಜಯನಗರ ಕಾಲದಲ್ಲಿ ದಂತವನ್ನು ಬಳಸಿ ವಿವಿಧ ಬಗೆಯ ಶಿಲ್ಪಗಳನ್ನು ತಯಾರಿಸಲಾಗುತ್ತಿತ್ತು. ಕೈಬಳೆಗಳು, ಖಡ್ಗದ ಹಿಡಿಗಳು ಚದುರಂಗದ ಬೋರ್ಡ್‌ಗಳು ಹೀಗೆ ಹತ್ತು

ಹಲವಾರು ಸರಕುಗಳನ್ನು ತಯಾರಿಸಲಾಗುತ್ತಿತ್ತು.ಬಿದರಿ ಕಲೆ ಮತ್ತೊಂದು ಪ್ರಮುಖ ಕಲೆಯಾಗಿತ್ತು. ಈ ಕಲೆಯಲ್ಲಿ ಚಿನ್ನ ಮತ್ತು ಬೆಳ್ಳಿಯನ್ನು ಬಳಸಿಕೊಂಡು ಕೆಲವೊಂದು ಸರಕುಗಳನ್ನು ತಯಾರಿಸಲಾಗುತ್ತಿತ್ತು.ಇವೆಲ್ಲ ವಸ್ತುಗಳು ಮಾರುಕಟ್ಟೆಗೆ ತಂದು ಮಾರಾಟ ಮಾಡುವ ಮೂಲಕ ವ್ಯಾಪಾರದ ಅಭಿವೃದ್ಧಿಗೆ ಸಹಾಯಕವಾಗಿದ್ದವು.

**ಮಡಿಕೆ ತಯಾರಿಕೆ ಉದ್ಯಮ**

ಮಡಿಕೆ ತಯಾರಿಕೆಯು ವಿಜಯನಗರ ಕಾಲದ ಪ್ರಮುಖ ಗ್ರಾಮೀಣ ಉದ್ಯಮವಾಗಿತ್ತು. ಸಾಮಾನ್ಯ ಜನರು ತಮ್ಮ ಮನೆಯ ಪಾತ್ರೆಗಳಾಗಿ ಮಡಿಕೆಯ ಪಾತ್ರೆಗಳನ್ನು ಬಳಸುತ್ತಿದ್ದರು. ಇದನ್ನು ತಯಾರು ಮಾಡುವವರನ್ನು ಕುಂಬಾರರೆಂದು ಕರೆಯುತ್ತಿದ್ದರು. ಮದ್ಯಕಾಲೀನ ಭಾರತದಲ್ಲಿ ಈ ಉದ್ಯಮವು ಆರ್ಥಿಕ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿತ್ತು. ಈ ಉದ್ಯಮವು ಇಂದಿಗೂ ಪ್ರಾಮುಖ್ಯತೆಗಳಿಸಿದೆ. ಈ ಉದ್ಯಮವು ಬೆಳವಣಿಗೆ ಹೊಂದಲು ಪ್ರಮುಖ ಕಾರಣ ಸಾಮ್ರಾಜ್ಯದಲ್ಲಿ ಬಡವರು ಅವರ ದಿನನಿತ್ಯದ ಅವಶ್ಯಕತೆಗೆ ಬೇಕಾದ ವಸ್ತುಗಳ ಪಡೆಯುವುದಾಗಿತ್ತು. ಮಡಿಕೆಗಳಲ್ಲಿ ಎರಡು ವಿಧಗಳಿದ್ದವು ಒಂದು ಮರಗುಕೊಟ್ ಮಡಿಕೆಗಳು ಮತ್ತೊಂದು ಮೆರಗು ಇಲ್ಲದ ಮಡಿಕೆಗಳು. ಮೆರಗು ಇರುವ ಮಡಿಕೆಗಳನ್ನು ತಯಾರಿಸಲು ವಿಶೇಷವಾದ ನೈಪುಣ್ಯತೆ ಹೊಂದಿರಬೇಕಿತ್ತು. ಕ್ರಿ.ಶ. 1533, 1547, 1544 ಕಾಲದ ಮುಳಬಾಗಿಲು, ಹರಿಹರ ಮತ್ತು ಶಿರಾ ಶಾಸನಗಳು ಮಡಿಕೆ ತಯಾರಿಕಾ ಉದ್ಯಮದ ಮೇಲೆ ವಿಧಿಸುತ್ತಿದ್ದ ತೆರಿಗೆಗಳ ಬಗ್ಗೆ ಮಾಹಿತಿ ನೀಡುತ್ತವೆ. ಇವರು ನೀಡುತ್ತಿದ್ದ ತೆರಿಗೆಯನ್ನು ಕುಂಬಾರ ತೆರಿಗೆ ಎಂದು ಕರೆಯಲಾಗುತ್ತಿತ್ತು.[63] ಈ ಸರಕುಗಳನ್ನು ಸಂತೆಗಳಿಗೆ ತಂದು ಅಲ್ಲಿ ಮಾರಾಟ ಮಾಡುವ ಮೂಲಕ ಇವರು ವ್ಯಾಪಾರ ವಾಣಿಜ್ಯದ ಅಭಿವೃದ್ಧಿಯಲ್ಲಿ ತುಂಬಾ ಪ್ರಭಾವ ಬೀರಿದ್ದರೆಂದು ಹೇಳಬಹುದು.

**ಉಪ್ಪು ತಯಾರಿಕೆ ಉದ್ಯಮ**

ವಿಜಯನಗರ ಕಾಲದಲ್ಲಿ ಪ್ರಮುಖವಾಗಿದ್ದ ಮತ್ತೊಂದು ಉದ್ಯಮ ಉಪ್ಪು ತಯಾರಿಕೆ ಈ ಜನಾಂಗವನ್ನು ಉಪ್ಪಾರರೆಂದು ಕರೆಯಲಾಗುತ್ತಿತ್ತು. ಉಪ್ಪಾರರು ಕಾರುಭೂಮಿಯಿಂದ ಉಪ್ಪನ್ನು ತೆಗೆಯುತ್ತಿದ್ದರು. ಬ್ರಿಟಿಷರ ಆಗಮನದವರೆಗೂ ಉಪ್ಪಿನ ಉದ್ಯಮ ಇವರ ನಿಯಂತ್ರಣದಲ್ಲಿಯೇ ಇತ್ತು ಆದರೆ ಕ್ರಿ.ಶ. 1880 ರಲ್ಲಿ ಉಪ್ಪು ತಯಾರಿಕೆಯನ್ನು ಬ್ರೀಟಿಷರು ನಿಷೇದಿಸಿದರು. ವಿಜಯನಗರ ಕಾಲದಲ್ಲಿ ಈ ಉದ್ಯಮದ ಮೇಲೂ ತೆರಿಗೆಯನ್ನು ವಿಧಿಸಲಾಗುತ್ತಿತ್ತು ಅದನ್ನು ಉಪ್ಪಲಿಗ ಖಾವಲಿ ಸುಂಕವೆಂದು ಕರೆಯುತ್ತಿದ್ದರು. ಉಪ್ಪು ಎಲ್ಲರಿಗೂ ಅವಶ್ಯಕವಾಗಿದ್ದರಿಂದ ಈ

ಉದ್ಯಮ ಬಹಳಷ್ಟು ಪ್ರಾಮುಖ್ಯತೆಗಳಿಸಿತ್ತು. ಕ್ರಿ.ಶ. 1513ರ ಕೃಷ್ಣ ದೇವರಾಯನ ಕಾಲದ ಗುಂಡ್ಲುಪೇಟೆ ಶಾಸನ ಮತ್ತು ಕ್ರಿ.ಶ 1506ರ ನರಸಿಂಹನ ಕಾಲದ ಶಾಸನಗಳು ಉಪ್ಪಿನ ಮೇಲೆ ತೆರಿಗೆ ವಿಧಿಸುದ್ದರ ಬಗ್ಗೆ ಉಲ್ಲೇಖಿಸುತ್ತವೆ.[64] ಈ ಎರಡು ಶಾಸನಗಳಿಂದ ಈ ಕಾಲದಲ್ಲಿ ಉಪ್ಪಿನ ಉದ್ಯಮದ ಮೇಲೆ ತೆರಿಗೆ ವಿಧಿಸುವುದರ ಬಗ್ಗೆ ತಿಳಿದು ಬಂದಿತು. ಎರಡು ಬಗೆಯ ಉಪ್ಪಿನ ತೆರಿಗೆಗಳಿದ್ದವು ಅಥವಾ ಎರಡು ಹಂತದಲ್ಲಿ ತೆರಿಗೆಗಳನ್ನು ಹಾಕಲಾಗುತ್ತಿತ್ತು ಅವುಗಳೆಂದರೆ ಉಪ್ಪಿನ ಹರಿವಾಣಗಳ ಮೇಲೆ ತೆರಿಗೆ ಮತ್ತು ಉದ್ದಿಮೆಗಾರರ ಮೇಲಿನ ತೆರಿಗೆ ಎಂದು ವಿವರಿಸಲಾಗಿತ್ತು.

ಉಪ್ಪಾರರು ತಮ್ಮದೇಯಾದ ಸಂಘಗಳನ್ನು ನಿರ್ಮಿಸಿಕೊಂಡು ವ್ಯಾಪಾರ ವಹಿವಾಟು ನಡೆಸುತ್ತಿದ್ದರು. ಕ್ರಿ.ಶ. 1551ರ ಶಾಸನವು ವಿಜಯನಗರ ಸಾಮ್ರಾಜ್ಯವು ಚಿತ್ರದುರ್ಗದ ಮೊಳಕಾಲೂರಿನಲ್ಲಿ ಉಪ್ಪಾರರಿಗೆ ತೆರಿಗೆರಹಿತ ಭೂಮಿ ನೀಡಿ ಉಪ್ಪು ತಯಾರಿಕೆಗೆ ಅವಕಾಶ ನೀಡಿದುದರ ಬಗ್ಗೆ ಉಲ್ಲೇಖಿಸಿದೆ. ಕ್ರಿ.ಶ.1500ರ ಚನ್ನರಾಯಪಟ್ಟಣ ಶಾಸನವು ಉಪ್ಪು ತಯಾರಿಕರ ಮೇಲೆ ತೆರಿಗೆ ವಿಧಿಸುದರ ಬಗ್ಗೆ ಉಲ್ಲೇಖಿಸಿದೆ. ಕ್ರಿ.ಶ 1480ರ ದಕ್ಷಿಣ ಕನ್ನಡ ಜಿಲ್ಲೆಯ ಶಾಸನವೊಂದು ಉಪ್ಪು ತಯಾರಿಸುತ್ತಿದ್ದ ಸ್ಥಳವನ್ನು ಉಪ್ಪಿನಕಳ ಎಂದು ಉಲ್ಲೇಖಿಸಿದೆ. ಉಪ್ಪನ್ನು ಮಾರಾಟ ಮಾಡುತ್ತಿದ್ದುದ್ದರ ಮೇಲೆ ಉಪ್ಪಿನ ತೆರಿಗೆ ವಿಧಿಸುತಿದ್ದುದ್ದರ ಬಗ್ಗೆ ಉಲ್ಲೇಖಗಳಿವೆ.[65]

### ಮರಗೆಲಸ ಉದ್ಯಮ

ಬಡಗಿ ಅಥವಾ ಮರಗೆಲಸ ಉದ್ಯಮ ವಿಜಯನಗರ ಕಾಲದಲ್ಲಿ ಬೆಳವಣಿಗೆ ಹೊಂದಿದ ಪ್ರಮುಖವಾದ ಮತ್ತೊಂದು ಉದ್ಯಮವಾಗಿತ್ತು. ಇವರನ್ನು ಬಡಗಿಗಳೆಂದು ಕರೆಯುತ್ತಿದ್ದರು. ಇವರು ಕೃಷಿ ಸಲಕರಣೆಗಳನ್ನು ತಯಾರಿಸುತ್ತಿದ್ದರು. ತೊಲಗಳು, ಪಿಠೋಪಕರಣಗಳು, ಎತ್ತಿನಗಾಡಿಗಳು, ದೋಣಿಗಳು ಮತ್ತು ದಿನನಿತ್ಯದ ವಿವಿಧ ಬಗೆಯ ವಸ್ತುಗಳನ್ನು ತಯಾರಿಸುತ್ತಿದ್ದರು. ಈ ವರ್ಗವನ್ನು ನೈಪುಣ್ಯತೆ ಹೊಂದಿದ ಬಡಗಿಗಳು ಮತ್ತು ನೈಪುಣ್ಯತೆ ಇಲ್ಲದ ಬಡಗಿಗಳು ಎಂದು ವರ್ಗೀಕರಿಸಲಾಗಿತ್ತು ಬಡಗಿಗಳು ವಿವಿಧ ಬಗೆಯ ಮರಗಳನ್ನು ಬಳಸಿ ಸರಕುಗಳನ್ನು ತಯಾರಿಸುತ್ತಿದ್ದರು. ಅವರು ಬಳಸುತ್ತಿದ್ದ ಪ್ರಮುಖ ಮರಗಳೆಂದರೆ ಹೊನ್ನೆ, ತೇಗ, ಮತ್ತು ಬೀಟೆಗಳು ಬಾರ್ಬೋಸನು ವಿಜಯನಗರ ಕಾಲದಲ್ಲಿ ಉತ್ತಮ ಮನೆಗಳು ನಿರ್ಮಾಣವಾಗಿದ್ದವು ಪ್ರತಿಯೊಂದು ಮನೆಯಲ್ಲೂ ಪಿಠೋಪಕರಣಗಳಿದ್ದವೆಂದು ಹೇಳಿದ್ದಾನೆ.

ಬಡಗಿಗಳು ಮುಖ್ಯವಾಗಿ ಹಡಗು ನಿರ್ಮಾಣದಲ್ಲಿ ಪ್ರಮುಖವಾಗಿ ತೊಡಗಿಸಿ ಕೊಂಡಿದ್ದರು. ವಿವಿಧ ಬಗೆಯ ಹಡಗುಗಳು ಮತ್ತು ದೋಣಿಗಳ ನಿರ್ಮಾಣವನ್ನು ಅವರು ಮಾಡುತ್ತಿದ್ದರು. ದೊಡ್ಡ ದೋಣಿಗಳನ್ನು ತಾಳೆ ಜಾತಿಯ ಮರದಿಂದ ನಿರ್ಮಾಣ ಮಾಡುತ್ತಿದ್ದರು. ಬಡಗಿಗಳು ರೈತರಿಗೆ ಅವಶ್ಯಕವಾದ ಹಲವಾರು ಸಲಕರಣೆಗಳನ್ನು ತಯಾರಿಸುತ್ತಿದ್ದರು. ಈ ಮೂಲಕ ಗ್ರಾಮೀಣ ಆರ್ಥಿಕಾಭಿವೃದ್ಧಿಗೆ ಅವರು ಅಪಾರವಾದಂತಹ ಕೊಡುಗೆ ನೀಡಿದ್ದರು. ಈ ಕಾರ್ಯ ನಿರ್ವಹಿಸಿದಕ್ಕಾಗಿ ಅವರಿಗೆ ಹಲವಾರು ಭೂಮಿಯನ್ನು ದಾನವಾಗಿ ನೀಡಿ ಅವರ ವೃತ್ತಿಗೆ ಪ್ರೋತ್ಸಾಹ ನೀಡುತ್ತಿದ್ದರು. ಕಡೂರು, ಬೇಲೂರು ಮತ್ತು ಮುಳಬಾಗಿಲು ಶಾಸನದಲ್ಲಿ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಬಡಗಿಗಳಿಗೆ ನೀಡಿದ ಭೂಮಿಯ ದೇಣಿಗೆಯ ಬಗ್ಗೆ ಉಲ್ಲೇಖಿಸುತ್ತವೆ.

**ವಜ್ರದ ಉದ್ಯಮ**

ವಿಜಯನಗರ ಕಾಲದ ಅತ್ಯಂತ ಶ್ರೀಮಂತ ಉದ್ಯಮ ವಜ್ರದ ಉದ್ಯಮವಾಗಿತ್ತು. ವಜ್ರಕ್ಕೆ ಬಹಳಷ್ಟು ಬೇಡಿಕೆ ಇತ್ತು. ವಿಜಯನಗರ ಕಾಲದ ಶ್ರೀಮಂತ ವರ್ಗ ಮತ್ತು ಅರಸರು ಹೆಚ್ಚಾಗಿ ಈ ವಜ್ರಗಳನ್ನು ಬಳಸುತ್ತಿದ್ದರು. ಸಾಮ್ರಾಜ್ಯದ್ದಲ್ಲಿ ಈ ವಜ್ರಕ್ಕೆ ತುಂಬಾ ಬೇಡಿಕೆ ಇತ್ತು. ವಿದೇಶದಿಂದ ವಜ್ರವನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು. ಅತಿ ಹೆಚ್ಚಾಗಿ ಸಿಲೋನ್‌ನಿಂದ ವಜ್ರವನ್ನು ಆಮದು ಮಾಡಿಕೊಂಡು ದೇಶದ ವಿವಿಧ ಭಾಗಗಳಿಗೆ ರವಾನಿಸಲಾಗುತ್ತಿತ್ತು. ಕ್ರಿ.ಶ.1516 ರಲ್ಲಿ ಬಾರ್ಬೋಸನು ಸಿಲೋನ್‌ನಲ್ಲಿ ದೊರಕುತ್ತಿದ್ದ ವಿವಿಧ ಬಗೆಯ ಮುತ್ತು ರತ್ನಗಳ ಬಗ್ಗೆ ಉಲ್ಲೇಖಿಸಿದ್ದಾನೆ. ಎರಡನೇ ದೇವರಾಯನ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯವು ಬರ್ಮಾ, ಪೆಗು ಮುಂತಾದ ದೇಶಗಳ ವಜ್ರ ವ್ಯಾಪಾರಿಗಳೊಂದಿಗೆ ನೇರವಾದ ಸಂಪರ್ಕ ಹೊಂದಿತ್ತು. ಬ್ಯಾಬಿಲೋನಿಯಾದಿಂದ ಬೆಲೆ ಬಾಳುವ ಮುತ್ತುರತ್ನಗಳನ್ನು ಆಮದು ಮಾಡಿಕೊಳ್ಳಲಾಗುತ್ತಿತ್ತು. ಬಾರ್ಬೋಸನು ಮಲಬಾರ್‌ನಲ್ಲಿ ಅಮೂಲ್ಯ ಮುತ್ತುರತ್ನಗಳ ವ್ಯಾಪಾರದ ಬಗ್ಗೆ ಉಲ್ಲೆಖಿಸಿದ್ದಾನೆ. ರಷ್ಯಾದ ಪ್ರವಾಸಿಗನಾದ ನಿಕೆಟಿನನು ಕೂಡ ವಿಜಯನಗರ ಸಾಮ್ರಾಜ್ಯದಲ್ಲಿದ್ದ ವಜ್ರದ ಉದ್ಯಮದ ಬಗ್ಗೆ ಉಲ್ಲೇಖಿಸಿದ್ದಾನೆ.[66]

ಕರ್ನಾಟಕದಲ್ಲಿ ವಜ್ರದ ಗಣಿಗಳಿರಲಿಲ್ಲ, ಆದರೆ ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಆಂಧ್ರಪ್ರದೇಶದ ಗುತ್ತಿಯಲ್ಲಿ ವಜ್ರದ ಗಣಿಗಳಿದ್ದುದರ ಬಗ್ಗೆ ಬಹಳಷ್ಟು ಆಧಾರಗಳು ನಮಗೆ ಮಾಹಿತಿ ನೀಡುತ್ತವೆ. ವಿಜಯನಗರ ಸಾಮ್ರಾಜ್ಯವು ವಜ್ರದ ಉದ್ಯಮದ ಮೇಲೆ ಏಕಸಾಮ್ಯವನ್ನು

ಪಡೆದಿತ್ತು. ಗುತ್ತಿಯ ರಾಜ್ಯಪಾಲನು ವಿಜಯನಗರದ ರಾಜನಿಗೆ ಎಲ್ಲಾ ವಜ್ರಗಳನ್ನು ನೀಡಿದ್ದರ ಬಗ್ಗೆ ನ್ಯೂನಿಜ್‌ನು ಮಾಹಿತಿಯನ್ನು ನೀಡುತ್ತಾನೆ.

**ಮೀನುಗಾರಿಕೆ ಉದ್ಯಮ**

ವಿಜಯನಗರ ಸಾಮ್ರಾಜ್ಯದಲ್ಲಿ ಮೀನುಗಾರಿಕೆ ಉದ್ಯಮ ಬಹಳಷ್ಟು ಪ್ರಾಮುಖ್ಯತೆಗಳಿಸಿತ್ತು. ವಿಜಯನಗರ ಸಾಮ್ರಾಜ್ಯ ಕಡಲು ತೀರ ಪ್ರದೇಶಗಳ ಮೇಲೆ ಏಕಸಾಮ್ಯ ಹೊಂದಿರುವುದರಿಂದ ಬಂದರುಗಳು ಮತ್ತು ಸಮುದ್ರದ ಮೇಲೆ ಒಡೆತನ ಹೊಂದಿದ್ದರು. ವಿಜಯನಗರದ ರಾಜಧಾನಿಯು ನದಿಗಳಿಂದ ಸಮುದ್ರಗಳಿಂದ ತರುತ್ತಿದ್ದ ಮೀನುಗಳನ್ನು ಪಡೆದುಕೊಳ್ಳುತ್ತಿತ್ತು ಮಲಬಾರ್‌ನ ಕರಾವಳಿ ಭಾಗವಾದ ಮಂಗಳೂರು, ಭಟ್ಕಳ, ಕಾರವಾರ ಮುಖ್ಯವಾದ ಮೀನುಗಾರಿಕೆ ಉದ್ಯಮದ ಕೇಂದ್ರಗಳಾಗಿದ್ದವು. ಮೀನುಗಾರರು ಪ್ರತಿದಿನ ಶೇಕಡ ನಾಲ್ಕರಷ್ಟು ಒಣಮೀನುಗಳು ಮೇಲೆ ತೆರಿಗೆ ವಿಧಿಸುತ್ತಿದ್ದರು. ಆದರೆ ತಾಜ ಮೀನುಗಳೇ ಕಡಿಮೆ ಬೆಲೆಗೆ ದೊರಕುತ್ತಿದ್ದವು. ಬಾರ್ಬೋಸನ ಪ್ರಕಾರ ಮೀನುಗಾರರಲ್ಲೂ ಅತಿ ಶ್ರೀಮಂತರಿದ್ದರೆಂದು ಉಲ್ಲೇಖಿಸಿದ್ದಾನೆ. ಪಶ್ಚಿಮ ಕರಾವಳಿಯಲ್ಲಿ ಮೀನುಗಾರರು ಮೀನುಗಾರಿಕೆಯನ್ನು ನಂಬಿ ಬದುಕುತ್ತಿದ್ದರು. ಕೊಚ್ಚಿನ್  ಕೂಡ ಮತ್ತೊಂದು ಪ್ರಮುಖವಾದ ಮೀನುಗಾರಿಕಾ ಕೇಂದ್ರವಾಗಿತ್ತು. ಈ ಭಾಗದ ಮೀನುಗಳನ್ನು ಒಳನಾಡಿನ ವಿವಿಧ ಭಾಗಗಳಿಗೆ ಅವರು ಮಾರಾಟ ಮಾಡುತ್ತಿದ್ದರು.[67]

**ಸುಗಂದದ್ರವ್ಯಗಳ ಉದ್ಯಮ**

ಸುಗಂದ ದ್ರವ್ಯಗಳ ಉದ್ಯಮ ಒಂದು ಸಣ್ಣ ಉದ್ಯಮವಾಗಿತ್ತು. ಈ ಭಾಗದ ಜನರು ಸುಗಂದ ದ್ರವ್ಯಗಳ ಪ್ರಿಯರಾಗಿದ್ದರು. ಬಾರ್ಬೋಸನ ಪ್ರಕಾರ ಬಿಳಿಮರಗಳು, ಕಿತ್ತಾಳೆಯಗಿಡ, ಕಸ್ತೂರಿ, ಕುಂಕುಮ ಹೂವು ಮತ್ತು ಪನ್ನೀರನ್ನು ಬಳಸಿ ಸುಗಂದ ದ್ರವ್ಯವನ್ನು ತಯಾರಿಸಲಾಗುತ್ತಿತ್ತು. ದಕ್ಷಿಣ ಭಾರತದಲ್ಲಿ ಬೆಳವಣಿಗೆ ಹೊಂದಿದ್ದ ಮುಸ್ಲಿಂ ಸಾಮ್ರಾಜ್ಯಗಳು ಮತ್ತು ಮುಸ್ಲಿಂ ಜನಾಂಗ ಅತಿಹೆಚ್ಚಾಗಿ ಸುಗಂದ ದ್ರವ್ಯಗಳನ್ನು ಬಳಸುತ್ತಿದ್ದರು. ಶ್ರೀಮಂತರು, ರಾಜರು ಹೆಚ್ಚಾಗಿ ಬಳಸುತ್ತಿದ್ದರು. ಇದು ಪ್ರಮುಖವಾಗಿ ಶ್ರೀಮಂತರಿಗೆ ಬಳಕೆಯಲ್ಲಿದ್ದ ಸರಕಾಗಿತ್ತು.[68]

ವಿಜಯನಗರ ಕಾಲದಲ್ಲಿ ಕೃಷಿಯ ಅಭಿವೃದ್ಧಿಯು ಈ ಮೇಲಿನ ಎಲ್ಲಾ ಉದ್ಯಮಗಳ ಬೆಳವಣಿಗೆಗೆ ಕಾರಣವಾಗಿತ್ತು. ಈ ಮೇಲ್ಕಂಡ ಉದ್ಯಮಗಳಲ್ಲದೆ ಹಲವಾರು ಉದ್ಯಮಗಳು ನಗರ ಮತ್ತು ಗ್ರಾಮೀಣ ಪ್ರದೇಶದಲ್ಲಿ ಬೆಳವಣಿಗೆ ಹೊಂದಿದ್ದವು. ಈ ಮೇಲಿನ ಎಲ್ಲಾ ಉದ್ಯಮಗಳನ್ನು

ಸ್ಥೂಲವಾಗಿ ಅಧ್ಯಯನ ಮಾಡಿದಾಗ ನಮಗೆ ತಿಳಯುವುದೇನೆಂದರೆ ಕೃಷಿಕರಲ್ಲದ ಒಂದು ಪಂಗಡ ಈ ಉದ್ಯಮಗಳ ಬೆಳವಣಿಗೆಯಲ್ಲಿ ತೊಡಗಿಸಿಕೊಂಡರು. ಜನರು ತಮ್ಮದೇಯಾದ ಪ್ರತ್ಯೇಕ ಜಾತಿ ವ್ಯವಸ್ಥೆ ನಿರ್ಮಿಸಿಕೊಂಡು ಈ ಉದ್ಯಮಗಳ ಬೆಳವಣಿಗೆಯಲ್ಲಿ ತೊಡಗಿದ್ದರು. ಅವರ ವೃತ್ತಿ ಅಥವಾ ಉದ್ಯಮದ ಆಧಾರದ ಮೇಲೆ ಅವರನ್ನು ಜಾತಿಗಳಾಗಿ ವಿಂಗಡಿಸಲಾಗಿತ್ತು. ಉದಾ: ಮಡಿಕೆ ತಯಾರಕರನ್ನು ಕುಂಬಾರರೆಂದು, ಆಭರಣ ತಯಾರಕರನ್ನು ಅಕ್ಕಸಾಲಿಗರೆಂದು, ಉಪ್ಪುತಯಾರಕರನ್ನು ಉಪ್ಪಾರರೆಂದು ಹೀಗೆ ಅವರ ಜಾತಿ ಆಧಾರಿತ ಸಂಘಗಳು ಅವರ ಉದ್ಯಮದ ಬೆಳವಣಿಗೆಗೆ ಪ್ರಮುಖ ಪಾತ್ರ ನಿರ್ವಹಿಸಿದವು. ವ್ಯಾಪಾರ ಮತ್ತು ವಾಣಿಜ್ಯದಲ್ಲಿ ತೊಡಗಿಸಿಕೊಂಡು ಈ ಸಂಘಗಳು ಪರಸ್ಪರ ಆಂತರಿಕ ಮತ್ತು ವಿದೇಶಿ ವ್ಯಾಪಾರದ ಬೆಳವಣಿಗೆಗೆ ಪ್ರಮುಖವಾಗಿ ಸಹಾಯಕವಾದವು.

## ಗ್ರಂಥಸೂಚಿ


1. ನಿರುಪಮಾ, ಶ್ರೀ ಕೃಷ್ಣದೇವರಾಯನ ಆಮುಕ್ತ ಮೌಲ್ಯದ P –20
2. Aiyar Subrahmanya, South Indian inscription VOL – VII
3. Longwath Manasel, The Book of durate Bar bosa P – 195 – 196
4. Jain V.K. Trade and Traders In western India, P- 37
5. Epigrapica Indica, Xi No. 23, P -62
6. Ramesh K.V. A History of South kanara, P – 281
7. Mahalingam T.V. Sangama Dynasty and the Ceylon, P – 403 – 409
8. ನಿರುಪಮಾ, ಶ್ರೀಕೃಷ್ಣ ದೇವರಾಯನ ಆಮುಕ್ತ ಮೌಲ್ಯದ P -115
9. Shastry B.S. The Poruguese in karnara, P- 68 - 69
10. Ramesh K.V. a History of South kanara, P -285
11. Shastry B.S. the portuguese in kanara, P – 90
12. Ramesh K.V. A History of South kanara P – 290
13. ಅದೇ, P – 295
14. Tamil increptions, lines 403 and 408, VOL – III, P- 149 – 157
15. Aiyangar S.K. Sources of vijayanagara History P – 116
16. ಚಂದ್ರಶೇಖರ ಟಿ.ಆರ್. ಕನ್ನಡ ನಾಡಿನ ಸಂಚಾರ ಸಂಪರ್ಕ P – 10
17. ಸುರೇಶ್ ಎಂ. ತಾಂಡೇಲ, ಕರ್ನಾಟಕದ ಬಂದರುಗಳ ಸಾಂಸ್ಕೃತಿಕ ಮತ್ತು ಆರ್ಥಿಕ ಇತಿಹಾಸ, P – 84
18. ಅದೇ – P – 85
19. ಜಯಪ್ಪಗೌಡ ಡಿ.ಎಸ್. ಕರ್ನಾಟಕದ ಕಡಲಾಚೆಯ ಸಂಪರ್ಕಗಳು P – 17
20. ಅದೇ – P – 19
21. ಗುರುವ ಎನ್.ಆರ್. ಕಾರವಾರ ಜಿಲ್ಲೆಯ ಶಾಸನಗಳು, P – 12
22. ಅದು, P – 15
23. ಪ್ರವಾಸಿ ಕಂಡ ಇಂಡಿಯಾ, ಸಂ, I, P – 62
24. ಸೂರ್ಯನಾಥ ಕಾಮತ್ ಉತ್ತರ ಕನ್ನಡ ಜಿಲ್ಲಾ ಗ್ರೆಜಿಟಿಯರ್,
25. ಅದೇ – P – 68

26. ಶೆಟ್ಟರ್ ಷ, ಶಂಗಂ ತಮಿಳಗಂ ಹಾಗೂ ಕನ್ನಡ ನಾಡುನುಡಿ, P – 74
27. Appadoari A,Ecomamic condition of South India P – 250
28. ಪ್ರವಾಸಿ ಕಂಡ ಇಂಡಿಯಾ ಸಂ – P –106 – 107
29. ರಮೇಶ್ ಕೆ.ವಿ. ಶರ್ಮಾ ಎಮ್. ಜೆ. ತುಳುನಾಡಿನ ಅರಸ ಮನೆತನಗಳು P – 52
30. ಅದೇ – P – 2 - 3
31. S I I, vol VII No.179, 332, 306, 341, 342 vol -9 416, Vol - 7, 229
32. Neelakanta sastri K.A. A History of South India, P- 35 -36
33. Epigrapica curnatica , VII ಮದ್ದೂರು, 62, 61, 41, 42
34. Epigrapica curnatica ಯಳಂದೂರು, 62, 61, 41, 42
35. S.I.I. IX I 450, 448 : IX, II. 423, 414, 471, 479
36. Epigrapia Indica, ಸಂಪುಟ – XXVIII P – 35 – 58
37. Hayavadana Rao - Mysore Gazetteer VOL, II, pt, III, P -1416
38. S..I.I. Vol IX, Vol IV, No – 254
39. ಅದೇ Vol , Vol, Iv, No – 254
40. Neela kanta sastri K.A. Ramanayya, V. V. Funther Soverces of vijayanagar Histrory, P - 46
41. Dikshit G.S. Eary Vijayanagara studies in it’s History nd culture, P - 204
42. Panikar K.M. Malabar and Portuguese, P – 150
43. ಜಯಪ್ಪಗೌಡ ಡಿ. ಎನ್. ಕರ್ನಾಟಕದ ಕಡಲಾಚೆಯ ಸಂಪರ್ಕಗಳು P – 50
44. ಅದೇ P – 55
45. Padamnabha Menon, History of Keral p – 320
46. S.I.I. Vol IV, No-272, 2P – 69
47. Jain V.K.Trade and Traders in westrrn India, P – 227
48. ರಮೇಶ್ ಕೆ.ವಿ. ತುಳುನಾಡಿನ ಇತಿಹಾಸ, P – 70
49. ಅದೇ P – 70 – 71
50. ಹಿರೇಮಠ ಬಿ.ಆರ್. ಶಾಸನಗಳಲ್ಲಿ ಕರ್ನಾಟಕದ ವರ್ತಕರು
51. ನಾಗೇಗೌಡ ಎಚ್. ಎಲ್. ಪ್ರವಾಸಿ ಕಂಡ ಇಂಡಿಯಾ ಸಂಪುಟ I, P – 64

52. ವರ್ಮಾ ಶೈಲಾ ಟಿ. ತುಳುನಾಡಿನ ಶಾಸನಗಳ ಸಾಂಸ್ಕೃತಿಕ ಅಧ್ಯಯನ P – 143
53. ಗುರುವ.ಆರ್.ಎನ್, ಕಾರವಾರ ಜಿಲ್ಲೆಯ ಶಾಸನಗಳು, P –4-12
54. S.I.I. Vol IV No.272, P – 69
55. Appadari A Economic Condition of south India, P-230
56. S.I.I Vol, IX No 668, P-661
57. Epigrapia Carratica, VII, 123, P-43
58. E I VI, P-232
59. E C XI C 1, P – 21
60. S.I.I VI, P -261
61. ಅದೇ, P -301
62. Paes, Sewell, A forgotten Empire, P-273
63. E C, XII Mulabagal P-74, E C, XI Harihara P-36, E C, XII Sira P-41
64. E C III P-136
65. S I I , VII P-217
66. Barbosa, II P-217
67. Barbos I P-188-189
68. ಅದೇ, P -205

# ಅಧ್ಯಾಯ – 07

# ಉಪಸಂಹಾರ

ವಿಜಯನಗರ ಕಾಲದ ಸಾಗರೋತ್ತರ ಸಂಬಂಧಗಳು ಎಂಬ ವಿಷಯದ ಕುರಿತು ನಾನು ಸಂಶೋಧನೆಯನ್ನು ಕೈಗೊಂಡಿದ್ದು ಈಗ ಈ ಸಂಶೋದನೆಯ ಕೊನೆಗೆ ಬಂದು ತಲುಪಿದ್ದೇನೆ. ಸಂಶೋಧನೆಯು ಒಂದು ವಿವರಣಾತ್ಮಕ ವಿಶ್ಲೇಷಣೆಯಾಗಿದ್ದು ಇತಿಹಾಸದಲ್ಲಿ ಹುದುಗಿ ಹೋಗಿರುವ ಸತ್ಯ ಸಂಗತಿಗಳನ್ನು ಹೊರತರುವ ಪ್ರಯತ್ನವನ್ನು ಮಾಡುತ್ತದೆ. ನನ್ನ ಸಂಶೋದನೆಯ ಉದ್ದೇಶವು ಕೂಡ ಅದೇ ಕೆಲವೊಂದು ಸತ್ಯಸಂಗತಿಗಳನ್ನು ಹೊರತರುವ ಪ್ರಯತ್ನ ಮಾಡಲಾಗಿದೆ. ನನ್ನ ಸಂಶೋಧನೆಯ ಮುಖ್ಯ ಉದ್ದೇಶ ವಿಜಯನಗರ ಸಾಮ್ರಾಜ್ಯವು ತನ್ನ ಆಡಳಿತದ ಅವಧಿಯಲ್ಲಿ ಹೇಗೆ ವಿಶ್ವದ ವಿವಿಧ ರಾಷ್ಟ್ರಗಳೊಂದಿಗೆ ವ್ಯಾಪಾರ ವಾಣಿಜ್ಯ ಸಂಬಂಧ ಮತ್ತು ಸಾಂಸ್ಕೃತಿಕ ಸಂಬಂಧಗಳನ್ನು ಹೊಂದಿತ್ತು. ಹಾಗೂ ಇದೇ ಕಾಲದಲ್ಲಿ ವಿಜಯನಗರ ಸಾಮ್ರಾಜ್ಯದಲ್ಲಿ ಬೆಳವಣಿಗೆ ಹೊಂದಿದ ನಗರಗಳು, ವ್ಯಾಪಾರ ಮಾರ್ಗಗಳು, ವ್ಯಾಪರು ಸಂಘಗಳ ಬಗ್ಗೆಯೂ ಕೂಡ ಅದ್ಯಯನ ಮಾಡುವುದಾಗಿತ್ತು. ಹತ್ತು ಹಲವಾರು ವಿಚಾರಗಳನ್ನು ಚರ್ಚಿಸಿ ನನ್ನ ಸಂಶೊಧನಾ ಪ್ರಬಂಧವನ್ನು ತಯಾರಿಸಲಾಗಿದೆ.

ವಿಜಯನಗರ ಸಾಮ್ರಾಜ್ಯವು ದಕ್ಷಿಣ ಭಾರತದಲ್ಲಿ ಆಳ್ವಿಕೆ ಮಾಡಿದ ಪ್ರಮುಖ ಸಾಮ್ರಾಜ್ಯಗಳಲ್ಲಿ ಅಗ್ರಗಣ್ಯ ಸ್ಥಾನವನ್ನು ಪಡೆದುಕೊಂಡಿದೆ. ಕ್ರಿ.ಶ. 1336ರಲ್ಲಿ ಸ್ಥಾಪನೆಗೊಂಡ ಈ ಸಾಮ್ರಾಜ್ಯವು ಪ್ರಮುಖ ನಾಲ್ಕು ಸಂತತಿಗಳಾದ ಸಂಗಮ, ಸಾಳ್ವ, ತುಳುವ, ಮತ್ತು ಅರವೀಡು ಆಳ್ವಿಕೆಗೆ ಒಳಪಟ್ಟಿತ್ತು. ದಕ್ಷಿಣ ಭಾರತದಲ್ಲಿ ಹಿಂದೂ ಧರ್ಮದ ರಕ್ಷಣೆಯೊಂದಿಗೆ ಹಲವಾರು ವಿಭಿನ್ನ ಬೆಳವಣಿಗೆಗೆ ಕಾರಣ ಭೂತವಾಯಿತು.  ಈ ಕಾಲದಲ್ಲಿ ಉತ್ತಮವಾದ ಆಡಳಿತವನ್ನು ರಚಿಸಲಾಯಿತು, ವಿಶ್ವದ ವಿವಿಧ ಭಾಗಗಳೊಂದಿಗೆ ವ್ಯಾಪಾರ ಸಂಪರ್ಕವನ್ನು ಏರ್ಪಡಿಸಿಕೊಳ್ಳಲಾಗಿತ್ತು. ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯಿಂದಾಗಿ ಆರ್ಥಿಕ ಪರಿಸ್ಥಿತಿ ಉತ್ತಮಗೊಂಡು ಒಂದು ಶ್ರೀಮಂತ ರಾಜ್ಯವಾಗಿ ಮರೆಯಿತು. ವ್ಯಾಪಾರ ಮತ್ತು ವಾಣಿಜ್ಯದ ಬೆಳಣಿಗೆಯೊಂದಿಗೆ ವ್ಯಾಪಾರ ವರ್ಗದ ಉಗಮ ವಿವಿಧ ಕುಶಲಕರ್ಮಿಗಳ ವರ್ಗಗಳ ಬೆಳವಣಿಗೆ, ವ್ಯಾಪಾರ ಸಂಘಗಳ ಬೆಳವಣಿಗೆ ಹಾಗೂ ಹತ್ತು ಹಲವಾರು ವಿಚಾರಗಳ ಬೆಳವಣಿಗೆಗೆ ಈ ಸಾಮ್ರಾಜ್ಯ ತನ್ನದೇ ಕಾಣಿಕೆಯನ್ನು ಸಲ್ಲಿಸಿದೆ.

ನನ್ನ ಸಂಶೋಧನೆಯ ಭಾಗವಾಗಿ ನಾನು ಹಲವಾರು ಉದ್ದೇಶ ಮತ್ತು ಮಹತ್ವವನ್ನಿಟ್ಟುಕೊಂಡು ಸಂಶೋದನೆಯನ್ನು ಕೈಗೊಳ್ಳಲಾಗಿದೆ. ವಿಜಯನಗರ ಸಾಮ್ರಾಜ್ಯ ಮತ್ತು ಅದರ ಸಾಗರೋತ್ತರ ಸಂಬಂದಗಳು, ಅರಬ್ಬರೊಂದಿಗಿನ ಸಂಬಂಧ, ಪೋರ್ಚುಗಿಸರೊಂದಿಗಿನ ಸಂಬಂಧ ಪ್ರಮುಖ ಬಂದರುಗಳು, ಏಷ್ಯಾರಾಷ್ಟ್ರಗಳೊಂದಿಗಿನ ಸಂಬಂಧ, ವ್ಯಾಪಾರಿ ಮಾರ್ಗಗಳು, ನಗರಗಳ ಬೆಳವಣಿಗೆ, ಆಮದು ಮತ್ತು ರಫ್ತುಗಳ ಪ್ರಕ್ರಿಯೆ, ಸಾಹಿತ್ಯಕ ಮತ್ತು ಸಾಂಸ್ಕೃತಿಕ ಬದಲಾವಣೆಗಳು, ವ್ಯಾಪಾರದ ಪರಿಣಾಮ ಹೀಗೆ ನನ್ನ ಉದ್ದೇಶವನ್ನು ನನ್ನ ಸಂಶೋದನೆಯಲ್ಲಿ ಹಿಡೇರಿಸುವ ಪ್ರಯತ್ನ ಮಾಡಲಾಗಿದೆ. ನನ್ನ ಸಂಶೋಧನೆಗೆ ಹಲವಾರು ಆಧಾರಗಳು ಸಹಾಯಕವಾಗಿವೆ. ಪುರಾತತ್ವ ಆಧಾರಗಳು ಮತ್ತು ಸಾಹಿತ್ಯಕ ಆಧಾರಗಳನ್ನು ಬಳಸಿ ನನ್ನ ಸಂಶೋಧಣಾ ಪ್ರಬಂಧವನ್ನು ಸಿದ್ಧಪಡಿಸಿದ್ದೇನೆ. ವಿಜಯಗರ ಕಾಲದಲ್ಲಿ ಹೊರಡಿಸಿರುವ ಹಲವಾರು ಶಾಸನಗಳು, ಕೈಪಿಯತ್ತುಗಳು, ಗ್ರಂಥಗಳನ್ನು ಅಧ್ಯಯನ ಮಾಡಿ ಅವು ಸಂಶೋಧನಾ ಕ್ರಮವನ್ನು ಬಳಸಿ ಪೂರ್ಣಗೊಳಿಸಿದ್ದೇನೆ. ನನ್ನ ಸಂಶೋಧನೆಗೆ ಪೂರಕವಾಗಿ ಹಲವಾರು ಅಧ್ಯಯನಗಳು ನಡೆದಿವೆ. ಆ ಅಧ್ಯಯನದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ವಿಮರ್ಶೆಗೆ ಒಳಪಡಿಸಿ ನನ್ನ ಸಂಶೋಧನಾ ಪ್ರಬಂಧವನ್ನು ನಾನು ತಯಾರಿಸಿದ್ದೇನೆ.

ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಅರಬ್ಬರು ಭಾರತ ಮತ್ತು ಪರ್ಷಿಯಾ ಮತ್ತು ಅರೇಬಿಯಾದೊಂದಿಗೆ ಉತ್ತಮವಾದ ವ್ಯಾಪಾರ ಮತ್ತು ವಾಣಿಜ್ಯ ಸಂಪರ್ಕವನ್ನು ಏರ್ಪಡಿಸಿಕೊಂಡಿದ್ದರು. ಭಾರತಕ್ಕೆ ಅರಬ್ಬರ ಆಗಮನ ಬಹಳ ಹಿಂದೆಯೇ ಆಯಿತು. ಕ್ರಿ.ಶ. 712ರಲ್ಲಿ ಮಹಮ್ಮದ್-ಬಿನ್-ಖಾಸಿಮನ್ನು ಭಾರತದ ಮೇಲೆ ದಾಳಿ ಮಾಡುವುದರೊಂದಿಗೆ ಅರಬ್ಬರ ನೇರವಾದ ಸಂಪರ್ಕವನ್ನು ಸಾಧಿಸಿದನು. ಈ ದಾಳಿಗೆ ಮುನ್ನವೂ ಭಾರತ ಅರಬ್ ಮತ್ತು ಪರ್ಷಿಯಾ ದೇಶಗಳೊಂದಿಗೆ ವ್ಯಾಪಾರ ಸಂಪರ್ಕವನೊಂದಿತ್ತು. ಅರಬ್ಬರು ಭಾರತದೊಂದಿಗೆ ವ್ಯಾಪಾರ ಮತ್ತು ವಾಣಿಜ್ಯ ಸಂಬಂಧವನ್ನು ಬೆಳೆಸಿಕೊಂಡು ವ್ಯಾಪಾರ ವಹಿವಾಟು ನಡೆಸುತ್ತಿದ್ದರು. ಕೆಲವು ಮುಸ್ಲಿಂ ದಾಖಲೆಗಳ ಪ್ರಕಾರ ಮುಸ್ಲಿಂರ ಮೊದಲ ಮಾನವ 'ಆಡಂ' ಎಂಬುವವನು ದಕ್ಷಿಣಭಾರತದ ಒಂದು ಭಾಗವಾಗಿದ್ದ ಶ್ರೀಲಂಕಾದಲ್ಲಿ ನೇರವಾಗಿ ಆಕಾಶದಿಂದ ಭೂಮಿಕೆ ಇಳಿದು ಅಲ್ಲಿಂದ ಭಾರತದ ಮಾರ್ಗವಾಗಿ ಸೌದೀ ಅರೇಬಿಯಾವನ್ನು ತಲುಪಿದನು. ಈತನೇ ಭಾರತಕ್ಕೆ ಮೊದಲು ಪಾದಾರ್ಪಣೆ ಮಾಡಿದ ಮುಸ್ಲಿಂ ಜನಾಂಗದ ತತ್ವಜ್ಞಾನಿ ಅಥವಾ ಧರ್ಮದ ಅನುಯಾಯಿ ಎಂದು ದಾಖಲೆಗಳು ಉಲ್ಲೇಖಿಸುತ್ತವೆ.

ಭಾರತ ಪ್ರಾಚೀನ ಕಾಲದಿಂದಲೂ ರೋಮ್, ಗ್ರೀಕ್, ಪರ್ಷಿಯಾ ದೇಶಗಳೊಂದಿಗಿನ ವ್ಯಾಪಾರ ಸಂಪರ್ಕವನ್ನು ಹೊಂದಿತ್ತು. ಆದರೆ ಭಾರತಕ್ಕೆ ಕ್ರಿ.ಶ. 7ನೇ ಶತಮಾನದಲ್ಲಿ ಅರಬ್ಬರ ನೇರ ದಾಳಿಯ ನಂತರ ಭಾರತ ಮತ್ತು ಪಶ್ಚಿಮ ದೇಶಗಳ ನಡುವಿನ ವ್ಯಾಪಾರದಲ್ಲಿ ಬಹಳಷ್ಟು ಬದಲಾವಣೆಗಳು ಉಂಟಾದವು. ಅರಬ್ಬರು ಭಾರತದೊಂದಿಗೆ ಪ್ರಾರಂಭದ ದಿನಗಳಲ್ಲಿ ವ್ಯಾಪಾರದೊಂದಿಗೆ ಸಾಹಿತ್ಯಿಕ ಬದಲಾವಣೆಗಳಲ್ಲಿಯೂ ತಮ್ಮನ್ನು ತಾವು ಸಮರ್ಪಕವಾಗಿ ತೊಡಗಿಸಿಕೊಂಡಿದ್ದರು. ಭಾರತದ ತತ್ವಶಾಸ್ತ್ರ ಮತ್ತು ವೈಜ್ಞಾನಿಕ ಸಾಹಿತ್ಯವು ಅರೇಬೀಕ್ ಮತ್ತು ಪರ್ಷಿಯನ್ ಭಾಷೆಗೆ ತರ್ಜುಮೆಗೊಳ್ಳುವ ಮೂಲಕ ಭಾರತದ ಸಾಹಿತ್ಯವನ್ನು ಅವರು ತಿಳಿಯುವ ಪ್ರಯತ್ನ ಮಾಡಿದರು. ಭಾರತದ ಆಯುರ್ವೇದ ಪದ್ಧತಿ, ಗಣಿತಶಾಸ್ತ್ರ ತತ್ವಶಾಸ್ತ್ರ ಮತ್ತು ಖಗೋಳಶಾಸ್ತ್ರಗು ಅರಬ್ಬರ ಶಿಕ್ಷಣದಲ್ಲಿ ಮಹತ್ತರವಾದ ಬದಲಾವಣೆಗಳನ್ನು ತಂದವು. ಭಾರತದ ಪ್ರಮುಖ ವೈಜ್ಞಾನಿಕ ಮತ್ತು ಖಗೋಳಶಾಸ್ತ್ರಗಳು ಗ್ರಂಥಗಳಾದ ಆರ್ಯಭಟ್ಟನ ಆರ್ಯಭಟನ್, ಬ್ರಹ್ಮಗುಪ್ತನ ಖಂಡಕದಾಯಕ, ಸಿದ್ಧಾಂತ, ಚರಕ ಸಂಹಿತೆ, ಶುಶ್ರೂದ್, ಅವ್ಯಾಂಕ ವೈದ್ಯ ಗಣಿತಶಾಸ್ತ್ರದ ಕೃತಿಗಳು, ತರ್ಜುಮೆಗೊಂಡು ಅರಬೀಕ್ ಭಾಷೆಯನ್ನು ಉನ್ನತಿಗೊಳಿಸಿದವು. ಭಾರತದ ಗಣಿತಶಾಸ್ತ್ರದ ಪ್ರಮುಖ ಕೊಡುಗೆಗಳಲ್ಲಿ ಒಂದಾದ ಸೊನ್ನೆಯು ಕೂಡ ಅರಬ್ಬರಿಗೆ ಪರಿಚಯಿಸಲ್ಪಟ್ಟಿತ್ತು. ಮತ್ತು ಅಲ್ಲಿಂದ ಯುರೋಪಿಯನ್ ದೇಶಗಳಿಗೆ ಸೊನ್ನೆಯು ತಲುಪಿ ಗಣಿತ ಕ್ಷೇತ್ರದಲ್ಲಿ ಬಹಳಷ್ಟು ಬದಲಾವಣೆಗಳು ಕಂಡು ಬಂದವು.

ಪ್ರಾರಂಭದ ಅರಬ್ ವ್ಯಾಪಾರಿಗಳು ಭಾರತಕ್ಕೆ ವ್ಯಾಪಾರ ಉದ್ದೇಶದಿಂದ ಆಗಮಿಸಿ ಭಾರದ ಕಡಲ ಭಾಗಗಳಲ್ಲಿ ತಮ್ಮ ನೆಲೆಗಳನ್ನು ಸ್ಥಾಪಿಸಿ ವ್ಯಾಪಾರ ಕೈಗೊಳ್ಳುತ್ತಿದ್ದರು. ಭಾರತಕ್ಕೆ ಅರಬ್ಬರ ನೇರ ದಾಳಿಯ ನಂತರ ಭಾರತ ಮತ್ತು ಅರಬ್ಬರ ನಡುವಿನ ವ್ಯಾಪಾರ ಸಂಬಂಧಗಳಲ್ಲಿ ಬಹಳಷ್ಟು ಬದಲಾವಣೆಗಳು ಕಂಡು ಬಂದವು. ಭಾರತದಲ್ಲಿ ಮುಸ್ಲಿಮರ ಆಳ್ವಿಕೆಯ ನಂತರ ಭಾರತದಲ್ಲಿ ಮುಸ್ಲಿಮರ ಜನಸಂಖ್ಯೆ ಅಧಿಕವಾಗ ತೊಡಗಿತು. ಭಾರತದಲ್ಲಿ ಮುಸ್ಲಿಮರ ಜನಸಂಖ್ಯೆ ಅಧಿಕಗೊಳ್ಳಲು ಅವರು ಸ್ಥಳೀಯರೊಂದಿಗೆ ವಿವಾಹ ಸಂಪರ್ಕ ಏರ್ಪಡಿಸಿಕೊಂಡರು, ಹಲವಾರು ಹಿಂದೂಗಳನ್ನು ಮುಸ್ಲಿಂ ಧರ್ಮಕ್ಕೆ ಮತಾಂತರಿಸಿದರು ಮತ್ತು ಭಾರತೀಯರನ್ನು ಮುಸ್ಲಿಂ ದರ್ಜೆಯ ವ್ಯಾಪಾರಿಗಳಾಗಿ ಸೇರಿಸಿಕೊಂಡು ತಮ್ಮ ಜನಸಂಖ್ಯೆಯನ್ನು ಬೆಳೆಸಿಕೊಂಡರು. ಮುಸ್ಲಿಮರ ಜನಸಂಖ್ಯೆ ಭಾರತದಲ್ಲಿ ಹೆಚ್ಚಿದಂತೆಲ್ಲ ಇದು ಹಲವಾರು ಸಮಸ್ಯೆಗಳಿಗೆ ದಾರಿ ಮಾಡಿಕೊಟ್ಟಿತ್ತು. ಭಾರತದ ಪ್ರಮುಖ ವ್ಯಾಪಾರಿ ನಗರಗಳಾದ, ಗುಜರಾತ್, ಮಲಬಾರ್ ಮತ್ತು ಬಂಗಾಳ ಭಾಗಗಳಲ್ಲಿ ಹೆಚ್ಚಾಗಿ ಅರಬ್ಬರು ತಮ್ಮ ನೆಲೆಗಳನ್ನು ಸ್ಥಾಪಿಸಿಕೊಂಡರು. ಅದರಲ್ಲಿ ಮುಖ್ಯವಾಗಿ ಕರ್ನಾಟಕದ ಕರಾವಳಿ ತೀರ ಪ್ರದೇಶಗಳಾದ ಮಂಗಳೂರು, ಹೊನ್ನಾವರ, ಭಟ್ಕಳ

ಹಾಗು ಗೋವಾದ ಭಾಗಗಳಲ್ಲಿ ಕ್ಯಾಲಿಕಟ್ ಮತ್ತು ಕೊಚ್ಚಿನ್‌ಗಳಲ್ಲಿ ಅತಿ ಹೆಚ್ಚು ನೆಲೆಗಳನ್ನು ಅವರು ಸ್ಥಾಪಿಸಿ ಕೊಂಡಿದ್ದರು.

ಭಾರತದಲ್ಲಿ ಅರಬ್ಬರು ಅಭಿವೃದ್ಧಿ ಹೊಂದಲು ಭಾರತೀಯರಾದರು ಮತ್ತು ಭಾರತೀಯ ಸಮುದಾಯದವರು ಅರಬ್ಬರಿಗೆ ಬಹಳಷ್ಟು ಸಹಾಯ ಹಸ್ತವನ್ನು ಚಾಚಿದರು ಮತ್ತು ಮುಸ್ಲಿಂ ಆಳ್ವಿಕೆಯ ಭಾಗಗಳಲ್ಲಿ ಅವರಿಗೆ ಸಾಮಾನ್ಯವಾಗಿ ಅವರ ಬೆಂಬಲವಿತ್ತು. ಸೋಮನಾಥದರಲ್ಲಿ ಆಳ್ವಿಕೆ ಮಾಡುತ್ತಿದ್ದ ಶ್ರೀ ಚಂದ್ರ  ಎಂಬ ಹಿಂದೂ ರಾಜನು ಮುಸ್ಲಿಮರಿಗೆ ಮಸೀದಿಯನ್ನು ಕಟ್ಟಿಕೊಳ್ಳಲು ಅವಕಾಶ ಮಾಡಿಕೊಟ್ಟಿದ್ದನು. ಅಲಲಿ ನೂರುದ್ದೀನ್ ವಿರೋದ್ ಎಂಬ ಮುಸಿಂ ವರ್ತಕನು ಒಂದು ಮಸೀದಿಯನ್ನು ಕಟ್ಟಿಸಿದನು. ಕ್ರಿ.ಶ. 1211ರಲ್ಲಿ ಗುಜರಾತಿನ ಕ್ಯಾಂಬೆಯಲ್ಲಿ ಹಲವಾರು ಸುನ್ನಿ ಮುಸಲ್‌ಮಾನರು ನೆಲೆಸಿದ್ದರು. ಇವರ ಮೇಲೆ ಮುಸ್ಲಿಮೇತರ ವರ್ಗದವರು ದಾಳಿ ಮಾಡಿ ಅಲ್ಲಿದ್ದ ಮಸೀದಿಯನ್ನು ಸುಟ್ಟುಹಾಕಿದರು. ಹಾಗೂ  ಅಲ್ಲಿನ ಪರಿಸ್ಥಿತಿಯನ್ನು ಅವಲೋಕಿಸಿ ತಪಿತಸ್ಥರನ್ನು ಬಂದಿಸಿ ಮತ್ತೆ ಮಸೀದಿಯನ್ನು ಪುನರ್ ನಿರ್ಮಾಣ ಮಾಡುವ ಬಗ್ಗೆ ಭರವಸೆ ನೀಡಿ ಸಾಮರಸ್ಯವನ್ನು ಬೆಳೆಸುವ ಪ್ರಯತ್ನವನ್ನು ಮಾಡಿದನು. ಭಾರತೀಯ ರಾಜರು ಅರಬ್ ವರ್ತಕರಿಗೆ ತುಂಬಾ ಕರುಣಾಮಯಿಗಳಾಗಿ ನಡೆದುಕೊಂಡಿದ್ದರು. ಕಾರಣ ಅರಬ್ಬರು ಭಾರತದೊಂದಿಗಿನ ವ್ಯಾಪಾರದಿಂದಾಗಿ ಭಾರತೀಯರಿಗೆ ಅಪಾರವಾದ ಲಾಭವುಂಟಾಗುತಿತ್ತು. ಲಾಭದ ಉದ್ದೇಶದಿಂದ ಮುಸ್ಲಿಮರೊಂದಿಗೆ ದ್ವೇಷ–ಅಸೂಯೆ ಭಾವನೆಗಿಂತ ಸಾಮರಸ್ಯ ಭಾವನೆಯನ್ನು ಬೆಳೆಸಿಕೊಳ್ಳುವ ಪ್ರಯತ್ನವನ್ನು ಮಾಡಿದರು. ರಾಜಕೀಯವಾಗಿ ಬಹಳಷ್ಟು ತಾರತಮ್ಯಗಳಿದ್ದರೂ ಸ್ಥಳೀಯವಾಗಿ ಇಬ್ಬರ ನಡುವೆ ಉತ್ತಮವಾದ ವ್ಯಾಪಾರ ಸಂಬಂಧಗಳಿದ್ದವು.

ಹೀಗೆ ಅರಬ್ಬರ ಜನಸಂಖ್ಯೆ ಭಾರತದಲ್ಲಿ ಹೆಚ್ಚಿದಂತೆಲ್ಲ ಅವರಿಗೆ ಸ್ಥಳೀಯ ರಾಜರ ಸಂಪೂರ್ಣ ಬೆಂಬಲ ದೊರಕಿದ ನಂತರ ಭಾರತೀಯ ಸಮುದ್ರ ವ್ಯಾಪಾರದ ಮೇಲೆ ಅರಬ್ಬರು ಸಂಪೂರ್ಣವಾದ ನಿಯಂತ್ರಣವನ್ನು ಹೊಂದಿದ್ದರು. ಈ ನಿಯಂತ್ರಣದಿಂದಾಗಿ ಭಾರತೀಯ ವಿದೇಶೀ ವ್ಯಾಪಾರಿಗಳು ಬಹಳಷ್ಟು ಸಂಕಷ್ಟಕ್ಕೆ ಒಳಗಾದರು. ಅಲ್ಲಿಯವರೆಗೆ ವಿದೇಶೀ ವ್ಯಾಪಾರದಲ್ಲಿ ಏಕಸಾಮ್ಯ ಪಡೆದಿದ್ದ ಭಾರತೀಯರು ಅರಬ್ಬರ ಏಳಿಗೆಯ ನಂತರ ತಮ್ಮ ಸ್ವಾಧೀನವನ್ನು ಹಂತಹಂತವಾಗಿ ಕಳೆದುಕೊಂಡು ಕೇವಲ ಸ್ಥಳೀಯ ವ್ಯಾಪಾರಿಗಳಾಗಿ ಮಾರ್ಪಟ್ಟರು. ಆದರೂ ಕೂಡ ಕೆಲವೊಂದು ವರ್ಗದವರು ತಮ್ಮ ಏಕಸಾಮ್ಯವನ್ನು ಅಂತರ ರಾಷ್ಟ್ರೀಯ ವ್ಯಾಪಾರದಲ್ಲಿ ಮುಂದುವರೆಸಿದರು. ಅರಬ್ಬರು ಭಾರತದ ಬಂದರುಗಳ ಮೇಲೆ ಏಕಸ್ವಾಮ್ಯಗಳಿಸಿ ಹಡಗುಗಳನ್ನು

ಬಳಸಿ ವ್ಯಾಪಾರ ನಡೆಸುತ್ತಿದ್ದರು. ಹಲವಾರು ಹಿಂದೂ ವ್ಯಾಪಾರಿಗಳು ಪರ್ಷಿಯನ್ ಕೊಲ್ಲಿಗೆ ಭೇಟಿ ನೀಡಿ ವ್ಯಾಪಾರ ಕೈಗೊಂಡಿದ್ದರು. ಜಗದು ಎಂಬ ಹಿಂದೂ ವ್ಯಾಪಾರಿಯೂ ಓರ್ಮುಜ್‌ನಲ್ಲಿ ಭಾರತದ ವ್ಯಾಪಾರದ ಮದ್ಯವರ್ತಿಯಾಗಿ ಪರ್ಷಿಯಾದೊಂದಿಗೆ ನಿಯಮಿತವಾದ ವ್ಯಾಪಾರವನ್ನು ಹೊಂದಿದ್ದನು. ಹಾಗೂ ಅವನು ತನ್ನದೇ ಹಡಗುಗಳಿಂದ ಷರ್ಪಿಯಾದಿಂದ ಭಾರತಕ್ಕೆ ಮತ್ತು ಭಾರತದಿಂದ ಪರ್ಷಿಯಾಕ್ಕೆ ಸರಕುಗಳನ್ನು ಸರಬರಾಜು ಮಾಡುತ್ತಿದ್ದನು.

ಅರಬ್ಬರು ತಮ್ಮ ವ್ಯಾಪಾರ ಮತ್ತು ವಾಣಿಜ್ಯವನ್ನು ವಿಶ್ವದಾದ್ಯಂತ ಉನ್ನತೀಕರಿಸಿಕೊಳ್ಳುವ ಉದ್ದೇಶದಿಂದ ವರ್ತಕರಿಗೆ ಅನುಕೂಲವಾಗುವಂತೆ ಹಣಕಾಸು ಸಂಸ್ಥೆಗಳನ್ನು ಸ್ಥಾಪಿಸಿಕೊಂಡಿದ್ದರು. ಪರ್ಷಿಯಾದಲ್ಲಿ ಅಂತರರಾಷ್ಟ್ರೀಯ ಬ್ಯಾಂಕ್ ಅನ್ನು ಸ್ಥಾಪನೆಮಾಡಿ ವರ್ತಕರಿಗೆ ಸಾಲ ಸೌಲಭ್ಯವನ್ನು ವಿತರಿಸಿದರು. ಅರಬ್ಬರು ಪ್ರಥಮಬಾರಿಗೆ ಸಂಯುಕ್ತ ದಾಸ್ತಾನು ಪದ್ಧತಿಯನ್ನು ಜಾರಿಗೊಳಿಸುವ ಮೂಲಕ ವ್ಯಾಪಾರದ ಮೇಲೆ ಬಂಡವಾಳವನ್ನು ಹೂಡಿ ಅಧಿಕ ಲಾಭಗಳಿಸುತ್ತಿದ್ದರು. ಹೀಗೆ ವ್ಯಾಪಾರ ಏಕೀಕರಣಗೊಂಡ ನಂತರ ಭಾರತದ ಬಂದರುಗಳಿಂದ ಅತಿ ಹೆಚ್ಚಿನ ಐಶರಾಮಿ ಸರಕುಗಳನ್ನು ರಫ್ತು ಮಾಡಲಾಗುತಿತ್ತು. ಆರಬ್ ಮತ್ತು ಪರ್ಷಿಯಾ ದೇಶಗಳಲ್ಲಿ ಭಾರತದ ಸಾಗರ ವ್ಯಾಪಾರವು ಬಹಳಷ್ಟು ಪ್ರಾಮುಖ್ಯತೆಗಳಿಸಿತ್ತು. ವಿಶ್ವದೊಂದಿಗಿನ ವ್ಯಾಪಾರದಲ್ಲಿ ಅರೇಬಿಯಾದ ದ್ವೀಪ ಕಲ್ಪವೂ ಪ್ರಮುಖ ಪಾತ್ರವನ್ನು ವಹಿಸಿತ್ತು. ಅರೇಬಿಯಾದ ದ್ವೀಪಕಲ್ಪವು ಒಂದು ನಿಲ್ದಾಣದಂತೆ ಕಾರ್ಯನಿರ್ವಹಿಸುತಿತ್ತು. ಅರಬ್ಬರು ವಿಶ್ವದ ಸುಮಾರು ಏಳು ಸಮುದ್ರಗಳ ಮೇಲೆ ಒಡೆತನವನ್ನು ಹೊಂದಿದ್ದರು. ಭಾರತದ ಮೂರು ಸಮುದ್ರಗಳಾದ ಅರಬ್ಬೀ ಸಮುದ್ರ, ಬಂಗಾಳ ಕೊಲ್ಲಿ, ಹಿಂದೂಮಹಾಸಾಗರ, ಹಾಗೂ ಪರ್ಷಿಯನ್ ಕೊಲ್ಲಿ, ಕೆಂಪು ಸಮುದ್ರ, ಪೆಸಿಪಿಕ್ ಮಹಾಸಾಗರ, ಮೆಡಿಟರೇನಿನ್ ಸಮುದ್ರಗಳು ಅರಬ್ಬರ ವ್ಯಾಪಾರದ ಪ್ರಮುಖ ಭಾಗಗಳಾಗಿದ್ದವು.

ಅರಬ್ಬರು ವ್ಯಾಪಾರದೊಂದಿಗೆ ಉತ್ತಮವಾದ ಸಂಪರ್ಕ ಮಾದ್ಯಮವನ್ನು ವಿಸ್ತರಿಸಿದರು. ರಸ್ತೆಗಳನ್ನು ನಿರ್ಮಾಣಮಾಡಿ ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯೊಂದಿಗೆ ಅವರು ಧಾರ್ಮಿಕವಾಗಿ ಹಜ್ ಯಾತ್ರೆಯನ್ನು ಕೈಗೊಳ್ಳುವ ಯಾತ್ರಿಕರಿಗೆ ಸಹಾಯಕರಾದರು. ಬಾಗ್ದಾದ್‌ನಿಂದ ಸುತ್ತಮುತ್ತಲಿನ ವ್ಯಾಪಾರಿ ಕೇಂದ್ರಗಳಿಗೆ ರಸ್ತೆ ಸಂಪರ್ಕವನ್ನು ಏರ್ಪಡಿಸಲಾಗಿತ್ತು. ರಸ್ತೆಗಳಲ್ಲಿ ವ್ಯಾಪಾರಿಗಳಿಗೆ ಯಾತ್ರಿಕರಿಗೆ ಉತ್ತಮವಾದ ಭದ್ರತೆಯನ್ನು ಒದಗಿಸಲಾಗಿತ್ತು. ಪಶ್ಚಿಮ ಬಂದರುಗಳಿಂದ ಅರಬೀಸಮುದ್ರ ಮಾರ್ಗವಾಗಿ ಕೆಂಪುಸಮುದ್ರ ಮತ್ತು ಪರ್ಷಿಯನ್ ಕೊಲ್ಲಿಗಳಿಗೆ ಉತ್ತಮವಾದ ಜಲ ಮಾರ್ಗ ರೂಪುಗೊಂಡಿತ್ತು.

ಮಲಬಾರ್ ತೀರ ಪ್ರದೇಶಗಳಲ್ಲಿ ಅರಬ್ಬರು ಕ್ರಿ.ಶ 14ನೇ ಶತಮಾನದ ಸಂದರ್ಭದಲ್ಲಿ ತಮ್ಮ ಏಕಸ್ವಾಮ್ಯವನ್ನು ಸ್ಥಾಪಿಸಿದರು. ಮಲಬಾರ್ ತೀರ ಪ್ರದೇಶಗಳಲ್ಲಿ ಕಂಡು ಬರುವ ಪ್ರಮುಖ ಬಂದರುಗಳಾದ ಕ್ಯಾಲಿಕಟ್, ಕೊಚ್ಚಿನ್, ಮಂಗಳೂರು, ಭಟ್ಕಳ, ಹೊನ್ನಾವರ, ಮುಂತಾದ ಹಲವಾರು ಬಂದರುಗಳಲ್ಲಿ ಅವರು ತಮ್ಮ ನೆಲೆಗಳನ್ನು ಸ್ಥಾಪಿಸಿದರು. ಅರಬ್ಬರು ಮಧ್ಯಕಾಲೀನ ಭಾರತದಲ್ಲಿ ಮಲಬಾರನ್ನು ಪ್ರಮುಖ ಸಾಂಬಾರ ಪದಾರ್ಥಗಳ ವ್ಯಾಪಾರದ ಪ್ರಮುಖ ಕೇಂದ್ರವಾಗಿ ಅಭಿವೃದ್ಧಿ ಪಡಿಸಿದರು. ಈ ನಾಡನ್ನು 'ಸಾಂಬಾರ ನಾಡು' ಎಂದು ಕರೆದರು. ಮಲಬಾರ್ ಎಂಬ ಪದವು ಕೂಡ ಅರಬರಿಂದ ಕರೆಯಲ್ಪಟ್ಟಿತ್ತು. ಪಶ್ಚಿಮ ಘಟ್ಟಗಳು ಮತ್ತು ಅದರಲ್ಲಿ ಕಂಡು ಬರುವ ಎತ್ತರವಾದ ಗುಡ್ಡಗಳು ಹಡಗುಗಳಿಗೆ ದಾರಿದೀಪವಾಗಿದವು. ಸ್ವಾಭಾವಿಕ ಬಂದರುಗಳು ಹಡಗುಗಳನ್ನು ಲಂಗಾರು ಮಾಡಲು ಸಾಧ್ಯವಾದವು ಹಿನ್ನೀರಿನ ಭಾಗಗಳು ಅವರಿಗೆ ಪೂರಕವಾಗಿ ಪರಿಣಮಿಸಿದವು. ಕೇರಳದ ರಾಜ ಜಾಮಾರಿನ್‌ನು ಅರಬ್ಬರಿಗೆ ಎಲ್ಲಾ ರೀತಿಯ ವ್ಯಾಪಾರ ರಿಯಾಯಿತಿಗಳನ್ನು ನೀಡಿ ಅವರನ್ನು ಉತ್ತೇಜಿಸಿದನು.

ಕರ್ನಾಟಕದ ಕರಾವಳಿ ಭಾಗಗಳಲ್ಲಿ ಅರಬ್ಬರು ತಮ್ಮ ಏಕಸಾಮ್ಯ ಸಾಧಿಸಿದರು. ಮಂಗಳೂರು ಬಂದರು ಪ್ರಮುಖವಾಗಿ ಅರಬ್ಬರ ವ್ಯಾಪಾರ ಕೇಂದ್ರವಾಗಿತ್ತು. ಮಂಗಳೂರಿಗೆ ಅರಬ್ಬರ ಪ್ರವೇಶದ ಬಗ್ಗೆ ಸ್ಪಷ್ಟ ನಿದರ್ಶನಗಳು ಇಲ್ಲದಿದ್ದರೂ ಕೂಡ ಮಂಗಳೂರಿನಲ್ಲಿ ಅವರು ತಮ್ಮ ಉತ್ತಮ ನೆಲೆಗಳನ್ನು ಹೊಂದಿದ್ದರು. ಬ್ಯಾರಿಗಳೆಂಬ ಮತ್ತು ಮಾಪಿಳ್ಳೆಗಳೆಂಬ ಎರಡು ಪ್ರಮುಖ ಅರಬ್ ಪಂಗಡಗಳು ಮಂಗಳೂರಿನಲ್ಲಿ ನೆಲೆಸಿದ್ದವು. ಮಲಬಾರ್‌ಗಳಲ್ಲಿ ಬಂದು ನೆಲೆಸಿದ್ದ ಅರಬ್ಬರು ಸ್ಥಳೀಯರೊಂದಿಗೆ ವೈವಾಹಿಕ ಸಂಬಂಧವನ್ನು ಏರ್ಪಡಿಸಿಕೊಂಡು ತಮ್ಮ ಜನಸಂಖ್ಯೆಯನ್ನು ಹೆಚ್ಚಿಸಿಕೊಂಡರು. ಮಂಗಳೂರಿನ ವ್ಯಾಪಾರದಲ್ಲಿ ಶೇ 85%ರಷ್ಟು ಬ್ಯಾರೀಗಳೇ ನಿಯಂತ್ರಣ ಹೊಂದಿದ್ದರು. ಹಾಗೆಯೇ ಮಂಗಳೂರಿನಲ್ಲಿ ವಿವಿಧ ಮುಸ್ಲಿಂ ಪಂಗಡಗಳಿದ್ದವು. ಮೆಮನ್, ನವಾಯುತ, ದಬನಿ, ಪುಸಲರು, ಹಂಜಮಾನಗಳು ಪ್ರಮುಖ ಪಂಗಡಗಳಾಗಿದ್ದವು. ಭಾರತದ ಪೂರ್ವಭಾಗಗಳೊಂದಿಗೆ ಮತ್ತು ಸಿಂದ್ ಪ್ರಾಂತ್ಯದೊಂದಿಗೂ ಅರಬ್ಬರು ಉತ್ತಮವಾದ ಸಂಬಂಧವನ್ನು ಹೊಂದಿದ್ದರು.

ಅರಬ್ಬರ ಕಾಲದಲ್ಲಿ ಹಲವಾರು ಬಂದರುಗಳು ಅವರ ನಿಯಂತ್ರಣದಲ್ಲಿದ್ದವು. ಕರ್ನಾಟಕದ ಪ್ರಮುಖ ಬಂದರುಗಳಾದಂತಹ ಬಾರ್ಕೂರು, ಮಂಗಳೂರು ಹಾಗೂ ಮಲಬಾರಿನ ಪ್ರಮುಖ ಬಂದರುಗಳಾದ, ಕಣ್ಣೂರು, ಬಲಿಪಟ್ನಂ, ಧರ್ಮಾಧಂ, ಪಂದಾಲಿನ್, ಕ್ಯಾಲಿಕಟ್, ಚಲಿಯಂ, ಕಡಲುಂಡಿ, ಕೊಡುವಗಲ್ಲಾರ್ ಮತ್ತು ಕೊಲ್ಲಂ ಪ್ರಮುಖವಾದವುಗಳಾಗಿದ್ದವು. ಈ

ಬಂದರುಗಳ ಮೂಲಕ ಅರಬ್ಬರು ಆಮದು ಮತ್ತು ರಫ್ತು ಪ್ರಕ್ರಿಯೆಗಳನ್ನು ನಡೆಸುತ್ತಿದ್ದರು. ಬಂದರುಗಳು ಪ್ರಮುಖ ವ್ಯಾಪಾರಿ ಕೇಂದ್ರಗಳಾಗಿದ್ದು ಒಳನಾಡಿನ ಭಾಗಗಳಿಗೆ ಸಂಪರ್ಕ ಕಲ್ಪಿಸುವ ಮೂಲಕ ಆಂತರಿಕ ವ್ಯಾಪಾರಕ್ಕೂ ಪ್ರಮುಖವಾದ ಪಾತ್ರ ನಿರ್ವಹಿಸಿದವು. ಬಂದರುಗಳು ಧರ್ಮ ಪ್ರಚಾರಕ ಕೇಂದ್ರಗಳು ಕೂಡ ಆಗಿದ್ದವು. ಅರಬ್ ಮತ್ತು ಪರ್ಷಿಯಾದಿಂದ ಭಾರತಕ್ಕೆ ಬಂದ ಮುಸ್ಲಿಂ ಧರ್ಮದ ಮುಖಂಡರು ಈ ಭಾಗಗಳಲ್ಲಿ ಉಳಿದುಕೊಂಡು ಹಂತ ಹಂತವಾಗಿ ಭಾರತೀಯ ಹಾಗೂ ಸಮುದಾಯವನ್ನು ತಮ್ಮ ಮುಸ್ಲಿಂ ಧರ್ಮಕ್ಕೆ ಮತಾಂತರಿಸುವ ಕೆಲಸವನ್ನು ಮಾಡುತ್ತಿದ್ದರು. ಮತಾಂತರ ಪ್ರಕ್ರಿಯೆಯು ಆ ಕಾಲಘಟ್ಟದಲ್ಲಿ ಅಷ್ಟೇನೂ ವಿಶೇಷತೆ ಪಡೆದುಕೊಂಡಿರಲಿಲ್ಲ. ನಂತರ ಅದು ಒಂದು ದೊಡ್ಡ ಘಟನಾವಳಿಯಾಗಿ ಸಂಭವಿಸಿತು.

ವಿಜಯನಗರ ಸಾಮ್ರಾಜ್ಯ ಮತ್ತು ಅರಬ್ಬರ ನಡುವೆ ಹಲವಾರು ಸರಕುಗಳು ವಿನಿಮಯವಾಗುತ್ತಿದ್ದವು. ಭಾರತವು ಅರಬ್ ಮತ್ತು ಪರ್ಷಿಯಾ ದೇಶಗಳಿಂದ ಹಲವಾರು ಸರಕುಗಳನ್ನು ಆಮದು ಮಾಡಿಕೊಳ್ಳುತಿತ್ತು ಮತ್ತು ಕೆಲವೊಂದು ಸರಕುಗಳನ್ನು ರಫ್ತು ಮಾಡುತಿತ್ತು. ವಿಜಯನಗರ ಸಾಮ್ರಾಜ್ಯದಿಂದ ಕೆಲವೊಂದು ಐಶರಾಮಿ ವಸ್ತುಗಳಾದ ಬಟ್ಟೆಗಳು, ರೇಷ್ಮೆ, ಮಸ್ಲಿನ್ ಬಟ್ಟೆ, ಮುತ್ತು ರತ್ನಗಳು ಆನೆಯ ದಂತ ಘೇಂಡಾಮೃಗದ ಕೊಂಬು, ಸಾಂಬಾರ ಪದಾರ್ಥಗಳು, ಕಷಾಯದ ಬೇರುಗಳು ಹತ್ತಿ, ಇಂಡಿಗೋ ಅಥವಾ ನೀಲಿ, ಕಸ್ತೂರಿ, ಮರಗಳು, ಕಲ್ಲು ಸಕ್ಕರೆ ಹಾಗೂ ವಿವಿಧ ಬಗೆಯ ಹಣ್ಣುಗಳನ್ನು ರಫ್ತು ಮಾಡಲಾಗುತಿತ್ತು. ಭಾರತದ ಸರಕುಗಳಗೆ ಇಡೀ ಪರ್ಷಿಯಾ ಮತ್ತು ಅರೇಬೀಯಾದಲ್ಲಿ ಮಾತ್ರವಲ್ಲದೇ ಆಫ್ರಿಕಾ ಮತ್ತು ಯುರೋಪಿನ ದೇಶಗಳಲ್ಲಿ ಅಪಾರವಾದ ಬೇಡಿಕೆ ಇತ್ತು. ಅದೇ ರೀತಿ ಅರೇಬಿಯಾ ಮತ್ತು ಪರ್ಷಿಯಾದಿಂದ ಹಲವಾರು ಸರಕುಗಳು ಭಾರತಕ್ಕೆ ಆಮದಾಗುತ್ತಿದ್ದವು. ಪ್ರಮುಖ ಸರಕುಗಳೆಂದರೆ, ಕುದುರೆಗಳು, ರೇಷ್ಮೆ ವಸ್ತುಗಳು ಮತ್ತು ಬಟ್ಟೆಗಳು, ಲೋಹಗಳು, ಅಮೂಲ್ಯವಾದ ರತ್ನಗಳು, ಸಾಂಬಾರ ಮತ್ತು ಕಷಾಯ, ತುಪ್ಪಳ ಮತ್ತು ಪಶುರೋಮ, ಗುಲಾಮರು, ಹಣ್ಣುಗಳು ಮತ್ತು ಒಣಹಣ್ಣುಗಳು, ಯುದ್ಧಶಸ್ತ್ರಾಸ್ತ್ರಗಳು, ಪರಮುಖವಾದವುಗಳು. ಆಮದು ಮತ್ತು ರಫ್ತು ಪ್ರಕ್ರಿಯೆ ಅಧಿಕ ಗೊಂಡಂತೆಲ್ಲ ರಾಜ್ಯದ ಆರ್ಥಿಕ ಪರಿಸ್ಥಿತಿಯು ಕೂಡ ಉತ್ತೇಜನಗೊಂಡಿತ್ತು. ಜನರು ತಮಗೆ ಅವಶ್ಯಕವಿದ್ದ ಸರಕುಗಳನ್ನು ಸುಲಭವಾಗಿ ಪಡೆದುಕೊಳ್ಳಲು ಸಾಧ್ಯವಾಯಿತು.

ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಅರಬ್ಬರ ವ್ಯಾಪಾರದಿಂದಾಗಿ ಹಲವಾರು ಪರಿಣಾಮಗಳುಂಟಾದವು. ಅಂತಹ ಪ್ರಮುಖ ಪರಿಣಾಮಗಳಲ್ಲಿ ಸಾಂಸ್ಕೃತಿಕವಾಗಿ ಉಂಟಾದ ಬದಲಾವಣೆಗಳು ಮುಖ್ಯವಾಗಿವೆ. ಸಾಂಸ್ಕೃತಿಕವಾಗಿ ಉಂಟಾದ ಬದಲಾವಣೆಗಳು ಮುಖ್ಯವಾಗಿವೆ.

ಸಾಂಸ್ಕೃತಿಕವಾಗಿ ಪರಸ್ಪರ ಸಂಸ್ಕೃತಿಯ ಸಮಾಗಮವಾಯಿತು. ವಿವಿಧ ವಿಭಿನ್ನತೆಯಿಂದ ಕೂಡಿದ ಸಂಸ್ಕೃತಿಯ ಬೆಳವಣಿಗೆಗೆ ಸಾಕ್ಷಿಯೊಂದಿತ್ತು. ಆರ್ಥಿಕವಾಗಿ ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯಿಂದಾಗಿ ಜನರ ಜೀವನ ಮಟ್ಟ ಸುಧಾರಿಸಿತು. ರಾಜಕೀಯವಾಗಿ ಹೊಸ ಹೊಸ ರಾಜ್ಯಗಳ ಬೆಳವಣಿಗೆ ಉತ್ತರ ಭಾರತದಲ್ಲಿ ಮುಸ್ಲಿಂ ಸಾಮ್ರಾಜ್ಯಗಳ ಬೆಳವಣಿಗೆ ಹೊಂದಿ ಅವು ರಾಜಕೀಯ ಶಕ್ತಿಯಾಗಿ ಬೆಳೆದವು. ದಕ್ಷಿಣ ಭಾರತದಲ್ಲಿ ಬಹುಮನಿ ಸುಲ್ತಾನರು ರಾಜಕೀಯವಾಗಿ ಬೆಳವಣಿಗೆ ಹೊಂದಿದ್ದರು.

ಈ ರೀತಿಯಾಗಿ ತಮ್ಮ ಕುಶಲತೆ ಬುದ್ಧಿಮತ್ತೆಯಿಂದ ಭಾರತದೊಂದಿಗಿನ ವ್ಯಾಪಾರದಲ್ಲಿ ಅಗ್ರಗಣ್ಯ ಸ್ಥಾನ ಪಡೆದಿದ್ದ ಅರಬ್ಬರು ಭಾರತಕ್ಕೆ ಪೋರ್ಚುಗೀಸರ ಆಗಮನದ ನಂತರ ಅವರ ಜೊತೆ ಪೈಪೋಟಿ ಮಾಡಲಾಗದೇ ಭಾರತದಲ್ಲಿ ತಮ್ಮ ಏಕಸಾಮ್ಯವನ್ನು ಹಂತ ಹಂತವಾಗಿ ಮುರಿದುಕೊಂಡು ಬಂದರು. ಪೋರ್ಚುಗೀಸರು ವಿಜಯನಗರ ಸಾಮ್ರಾಜ್ಯದೊಂದಿಗೆ ಹೊಂದಿದ್ದ ಉತ್ತಮ ಸಂಬಂಧ ಅರಬ್ಬರ ಅವನತಿಗೆ ಕಾರಣವಾಯಿತು. ಅರಬ್ಬರು ಬಾರತದಲ್ಲಿ ಧರ್ಮದ ಆದಾರದ ಮೇಲೆ ನಡೆದುಕೊಳ್ಳಲು ಪ್ರಾರಂಭಿಸಿದರು. ದಕ್ಷಿಣ ಭಾರತದ ಪ್ರಮುಖ ಮುಸ್ಲಿಂ ರಾಜ್ಯವಾದ ಬಹುಮನಿ ಸುಲ್ತಾನರಿಗೆ ವಿಜಯನಗರ ಅರಸರ ಬದಲಾಗಿ ಅವರಿಗೆ ಕುದುರೆಗಳನ್ನು ಸರಭರಾಜು ಮಾಡುತ್ತಿದ್ದರು. ಇದನ್ನು ತಿಳಿದ ವಿಜಯನಗರ ಅರಸರು ಭಾರತಕ್ಕೆ ಪೋರ್ಚುಗೀಸರ ಆಗಮನದ ನಂತರ ಅವರಿಗೆ ಸಂಪೂರ್ಣ ಸಹಕಾರ ಮತ್ತು ಬೆಂಬಲವನ್ನು ನೀಡಿ ವ್ಯಾಪಾರದ ರಿಯಾಯಿತಿಗಳನ್ನು ನೀಡಿದರು.

ಕ್ರಿ.ಶ. 1498ರಲ್ಲಿ ಭಾರತಕ್ಕೆ ಪೋರ್ಚುಗೀಸರು ಹೊಸ ಜಲಮಾರ್ಗವನ್ನು ಕಂಡು ಹಿಡಿದು ಅದರ ಮೂಲಕ ಕ್ಯಾಲಿಕಟ್‌ಗೆ ಬಂದು ತಲುಪಿದರು. ಪೋರ್ಚುಗೀಸರು ಭಾರತಕ್ಕೆ ಬಂದ ಮೊದಲ ಯುರೋಪಿಯನ್ನರಾಗಿದ್ದರು. ಪೋರ್ಚುಗೀಸರ ದೊರೆ ಜಾನ್ ಕ್ರಿ.ಶ. 1484ರಲ್ಲಿ ಭಾರತದ ಬಗ್ಗೆ ಸ್ವಲ್ಪ ಜ್ಞಾನವನ್ನು ಹೊಂದಿದ್ದ ಹಾಗೂ ಪೂರ್ವದಲ್ಲಿರುವ ಶ್ರೀಮಂತ ಹಾಗೂ ಕುತೂಹಲಕಾರಿ ದೇಶಗಳನ್ನು ಶೋಧಿಸುವ ಸಾಧ್ಯತೆ ಕುರಿತು ಅವನು ಯೋಜನೆ ರೂಪಿಸಿದ್ದ ಅವನು ಅಲ್ಪ ಕಾಲದಲ್ಲೇ ಮರಣ ಹೊಂದಿದ್ದರಿಂದ ಅವನ ಉತ್ತರಾಧಿಕಾರಿ ಈ ಕಾರ್ಯವನ್ನು ಮುಂದುವರಿಸಿ ಭಾರತಕ್ಕೆ ಹೊಸ ಜಲಮಾರ್ಗವನ್ನು ಕಂಡು ಹಿಡಿಯವ ಕಾರ್ಯಕ್ಕೆ ಅಸ್ತಿಭಾರ ಹಾಕಿದನು.

ಕ್ರಿ.ಶ. 1453ರಲ್ಲಿ ಆಟೋಮನ್ ಟರ್ಕರು ಕಾನ್ಸ್ಟಂಟಿನೋಪಲನ್ನು ವಶಪಡಿಸಿಕೊಂಡ ಮೇಲೆ ಭಾರತದ ಸರಕುಗಳಿಗೆ ಅವಲಂಬನೆಯಾಗಿದ್ದ ಯುರೋಪಿಗೆ ಸರಕುಗಳ ಸೇವೆ

ಸ್ಥಗಿತಗೊಂಡಿತ್ತು. ಟರ್ಕರು ಭಾರತೀಯ ಸರಕುಗಳಿಗೆ ಹೆಚ್ಚು ಹೆಚ್ಚು ತೆರಿಗೆಯನ್ನು ವಿಧಿಸಿ ಅಧಿಕ ಬೆಲೆಗೆ ಮಾರಾಟ ಮಾಡುತ್ತಿದ್ದರು. ಇದರಿಂದ ಅತಿ ಹೆಚ್ಚು ಬೆಲೆಕೊಟ್ಟು ಖರೀದಿಸಲಾಗಿದೆ. ಹೊಸ ಜಲಮಾರ್ಗವನ್ನು ಕಂಡು ಹಿಡಿಯುವ ಕೆಲಸಕ್ಕೆ ಪೋರ್ಚುಗೀಸರು ಕೈಹಾಕಿದರು. ಭಾರತಕ್ಕೆ ಬಂದ ಪೋರ್ಚುಗೀಸರನ್ನು ಜಾಮೋರಿನ್‌ನ್ನು ಆತ್ಮೀಯವಾಗಿ ಸ್ವಾಗತಿಸಿ ಭಾರತದಲ್ಲಿ ವ್ಯಾಪಾರವನ್ನು ಕೈಗೊಳ್ಳುವಂತೆ ಅವರಿಗೆ ಸಹಾಯ ಹಸ್ತವನ್ನು ಚಾಚಿದನು. ಅದೆ ಫಲವಾಗಿ ಅವರು ಪ್ರಾರಂಭದಲ್ಲಿ ಕ್ಯಾಲಿಕಟ್‌ನಲ್ಲಿ ವ್ಯಾಪಾರವನ್ನು ಕೈಗೊಂಡರು.

ಭಾರತಕ್ಕೆ ಪೋರ್ಚುಗೀಸರು ಆಗಮನದ ನಂತರ ಅವರು ಬಹಳಷ್ಟು ಸಮಸ್ಯೆಗಳನ್ನು ಹುಟ್ಟುಹಾಕಿದರು. ಮೊದಲು ಅರಬ್ಬರು ಮತ್ತು ಪೋರ್ಚುಗೀಸರ ನಡುವೆ ವ್ಯಾಪಾರಕ್ಕಾಗಿ ಕಲಹಗಳು ಸಂಭವಿಸಿದವು. ಹಾಗೂ ಬಾರತೀಯ ಸ್ಥಳೀಯ ರಾಜರೊಂದಿಗೆ ಯುದ್ಧವನ್ನು ಮಾಡುವ ಅವರು ತಮ್ಮ ದಬ್ಬಾಳಿಕೆಯನ್ನು ಮುಂದುವರೆಸಿದರು. ಮೊದಲು ಪೋರ್ಚುಗೀಸರು ಜಾಮಾರಿನ್‌ನೊಂದಿಗೆ ಯುದ್ಧಕ್ಕಿಳಿದು ಅರಬ್ಬರನ್ನು ಕ್ಯಾಲಿಕಟ್‌ನಿಂದ ಹೊರಹಾಕುವಂತೆ ಬೆದರಿಸಿದನು. ಆದರೆ ಅದನ್ನು ಸ್ವೀಕರಿಸಿದ ಜಾಮಾನ್ ಪೋರ್ಚುಗೀಸರನ್ನು ಸೋಲಿಸಿದನು. ನಂತರ ಪೋರ್ಚುಗೀಸರು ಜಾಮೊರಿನ್‌ನ ಶತ್ರುವಾಗಿದ್ದ ಕೊಚ್ಚಿನ್ ರಾಜನ ಬಳಿ ಆಶ್ರಯ ಪಡೆದರು. ಕ್ರಿ.ಶ. 1506ರಲ್ಲಿ ಪೋರ್ಚುಗೀಸರು ಕ್ಯಾಲಿಕಟ್‌ನ ರಾಜನಿಗೆ ಸೇರಿದ ಹಡಗಿನ ಮೇಲೆ ದಾಳಿ ಮಾಡಿದರು. ಪಶ್ಚಿಮ ಕರಾವಳಿಯಲ್ಲಿದ್ದ ದೇವಾಲಯಗಳು ಮತ್ತು ಕೆಲವು ಸಣ್ಣ ಪುಟ್ಟ ಸಂಸ್ಥಾನಗಳ ಮೇಲೆ ದಾಳಿಮಾಡಿ ಅವುಗಳನ್ನು ದರೊಡೆ ಮಾಡಿದರು. ಭಟ್ಕಳದ ರಾಣಿಯ ಮೇಲೆ ದಾಳಿ ಮಾಡಿ ಹೊನ್ನಾವರನ್ನು ವಶಪಡಿಸಿಕೊಂಡರು. ಹೀಗೆ ಹಂತಹಂತವಾಗಿ ಪ್ರದೇಶಗಳನ್ನು ವಶಪಡಿಸಿಕೊಂಡು ತಮ್ಮ ದಬ್ಬಾಳಿಕೆಗಳನ್ನು ಮುಂದುವರಿಸಿದರು. ಅವರ ಎಲ್ಲಾ ದಾಳಿಗಳಲ್ಲಿ ಪ್ರಮುಖವಾದದು ಗೋವಾದ ಆಕ್ರಮಣವಾಗಿದೆ. ಕ್ರಿ.ಶ. 1510ರಲ್ಲಿ ಗೋವಾ ಪಟ್ಟಣದ ಮೇಲೆ ದಾಳಿ ಮಾಡಿದ ಅಲ್ಬುಕರ್ಕ್‌ನು ಗೋವಾವನ್ನು ವಶಪಡಿಸಿಕೊಂಡನು.

ಗೋವಾದ ಆಕ್ರಮಣಕ್ಕೆ ವಿಜಯನಗರದ ಅರಸರ ಸಂಪೂರ್ಣವಾದ ಪರೋಕ್ಷ ಬೆಂಬಲವಿತ್ತು. ಬಿಜಾಪುರದ ಆದಿಲ್‌ಷಾನ ಪ್ರಭಾವವನ್ನು ಮಲಬಾರ್ ಭಾಗಗಳಲ್ಲಿ ಕಡಿತಗೊಳಿಸಿ ಅರಬ್ಬರ ವ್ಯಾಪಾರ ಏಕಸ್ವಾಮ್ಯವನನು ಅಂತ್ಯಗೊಳಿಸಿ ಈ ಭಾಗದಲ್ಲಿ ಪೋರ್ಚುಗೀಸರ ಆದಿಪತ್ಯವನ್ನು ಸ್ಥಾಪಿಸಿದರೆ ಅದು ಮುಂದೆ ವಿಜಯನಗರ ಸಾಮ್ರಾಜ್ಯಕ್ಕೆ ವರದಾನವಾಗುತ್ತದೆಂಬ ಉದ್ದೇಶದಿಂದಾಗಿ ವಿಜಯನಗರದ ಅರಸರು ಪೋರ್ಚುಗೀಸರಿಗೆ ಸಹಾಯ ಮಾಡಿದರು.

ಗೋವಾವನ್ನು  ಆಕ್ರಮಣ ಮಾಡಿಕೊಂಡ ನಂತರ ಅಲ್ಲಿ ಮಂಡಲಾದಿಪತಿಗಳು ಗೋವಾದಿಂದ ಆಳ್ವಿಕೆ ಮಾಡಿದರು.

ಪೋರ್ಚುಗಿಸರು ಕರ್ನಾಟಕದ ಬಂದರುಗಳಲ್ಲಿ ತಮ್ಮ ಆದಿಪತ್ಯವನ್ನು ಹಂತ ಹಂತವಾಗಿ ವಿಸ್ತರಿಸುತ್ತ ಸಾಗಿದರು. ಕ್ರಿ.ಶ. 1512ರಲ್ಲಿ ಮಂಗಳೂರನ್ನು ವಶಪಡಿಸಿಕೊಂಡರು. ಬಟ್ಕಾಳದ ರಾಣಿ ಅಬ್ಬಕಾ ದೇವಿಯು ಸಂಪೂರ್ಣವಾಗಿ ಪೋರ್ಚುಗೀಸರಿಗೆ ಶರಣಾದಳು ಒಪ್ಪಂದವನ್ನು ಏರ್ಪಡಿಸಿಕೊಂಡ ಪೋರ್ಚುಗೋಸರು ಪ್ರತಿ ವರ್ಷ ಎರಡು ಸಾವಿರದ ನಾಲ್ಕುನಾರು ಲೋಡ್ ಅಕ್ಕಿಯನ್ನು ಕಪ್ಪಕೊಡುವಂತೆ ಅಬ್ಬಕ ದೇವಿಗೆ ಆಜ್ಞೆ ಹೊರಡಿಸಿದರು. ಪೋರ್ಚುಗೀಸರು ವಿಜಯನಗರ ಅರಸರಲ್ಲದೇ ಆದಿಲ್‌ಷಾಹಿಗಳು, ಕೆಳದಿಯ ನಾಯಕರೊಂದಿಗೆ ಉತ್ತಮವಾದ ಸಂಬಂಧವನ್ನು ಏರ್ಪಡಿಸಿಕೊಂಡಿದ್ದರು. ವಿಜಯನಗರದೊಂದಿಗೆ ಉತ್ತಮವಾದ ಸಂಬಂಧವನ್ನು ಏರ್ಪಡಿಸಿಕೊಂಡಿದ್ದರು. ವಿಜಯನಗರದೊಂದಿಗೆ ಉತ್ತಮವಾದ ಸಂಬಂಧವನ್ನು ಏರ್ಪಡಿಸಿ ಕೊಳ್ಳುವ ಸಲುವಾಗಿ ಪೋರ್ಚುಗೀಸರು ಹಲವಾರು ನಿಯೋಗಗಳನ್ನು ಕಳುಹಿಸಿ ವ್ಯಾಪಾರದ ರಿಯಾಯಿತಿಗಳನ್ನು ಪಡೆದುಕೊಂಡರು. ಕೃಷ್ಣದೇವರಾಯನು ಅಧಿಕಾರಕ್ಕೆ ಬಂದ ನಂತರ ಪೋರ್ಚುಗೀಸರು ತಮ್ಮ ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯಲ್ಲಿ ಏಕಸ್ವಾಮ್ಯವನ್ನು ಗಳಿಸಿದರು. ಅಲ್ಫೆಪಿನೂ ಡಿ ಅಲ್ಬುಕರ್ಕ್ ಮತ್ತು ಕೃಷ್ಣದೇವರಾಯನ ನಡುವೆ ಉತ್ತಮವಾದ ರಾಜತಾಂತ್ರಿಕ ಸಂಬಂಧಗಳು ಏರ್ಪಟ್ಟಿದ್ದವು. ಕೃಷ್ಣದೇವರಾಯನು ಬಾರ್ಕೂರಿನ ರಾಜ್ಯಪಾಲ ರತ್ನಂಶೆಟ್ಟಿಯ ನೇತೃತ್ವದಲ್ಲಿ ಗೋವಾಕ್ಕೆ ಒಂದು ನಿಯೋಗವನ್ನು ಕಳುಹಿಸಿದನು. ವಿಜಯನಗರಕ್ಕೆ ಭೇಟಿ ನೀಡಿದ್ದ ಇಟಲಿಯ ಪ್ರವಾಸಿಗ ನಿಕೋಲೋಕೋಂಟಿ ಮತ್ತು ರಷ್ಯಾದ ನಿಕೆಟಿನ್ ವಿಜಯನಗರ ಸಾಮ್ರಾಜ್ಯವು ಐರೋಪ್ಯರೊಂದಿಗೆ ವಿಶೇಷವಾದ ಸಂಬಂಧವನ್ನು ಹೊಂದಿತ್ತೆಂದು ತಮ್ಮ ದಾಖಲೆಗಳಲ್ಲಿ ಉಲ್ಲೇಖಿಸಿದ್ದಾರೆ. ಕೃಷ್ಣದೇವರಾಯನು ತಿಮ್ಮಯ್ಯನನ್ನು ಕೆನರಾದ ಮಾಂಡಲಿಕನಾಗಿ ನೇಮಿಸಿ ಪೋರ್ಚುಗೀಸರನ್ನು ನಿಯಂತ್ರಿಸುವ ಪ್ರಯತ್ನ ಮಾಡಿದನು. ಹಾಗೂ ಇವನ ಮೂಲಕ ಕೆಲವೊಂದು ನಿಬಂದನೆಗಳನ್ನು ಅವರಿಗೆ ತಲಪಿಸಿದನು. ಕೃಷ್ಣದೇವರಾಯನು ಪೋರ್ಚುಗೀಸರಿಗೆ ವ್ಯಾಪಾರ ರಿಯಾಯಿತಿ ನೀಡಿದರು. ಸಹ ಅವನ್ನು ಸ್ವತಂತ್ರವಾಗಿರಲು ಇಚ್ಛಿಸಲಿಲ್ಲ.

ಪೋರ್ಚುಗೀಸರು ಭಾರತದಲ್ಲಿ ವ್ಯಾಪಾರದ ಏಕಸ್ವಾಮ್ಯವನ್ನು ಗಳಿಸಿದ ಮೇಲೆ ಹಲವಾರು ಸರಕುಗಳ ಆಮದು ಮತ್ತು ರಫ್ತು ಪ್ರಕಿಯೆಯಲ್ಲಿ ತೊಡಗಿಸಿಕೊಂಡರು. ಯುರೋಪಿನಲ್ಲಿ ಬಹಳಷ್ಟು ಬೇಡಿಕೆ ಹೊಂದಿದ್ದ ಸಾಂಬಾರ ಪದಾರ್ಥಗಳ ವ್ಯಾಪಾರ ಹಾಗೂ

ಭಾರತದಲ್ಲಿ ಬೇಡಿಕೆ ಹೊಂದಿದ್ದ ಕುದುರೆಗಳ ವ್ಯಾಪಾರದಲ್ಲಿ ತೊಡಗಿಸಿಕೊಂಡಿದ್ದರು. ಪ್ರಾರಂಭದಲ್ಲಿ ಅರಬ್ಬರು ಕುದುರೆ ವ್ಯಾಪಾರದ ಮೇಲೆ ನಿಯಂತ್ರಣ ಹೊಂದಿದ್ದರು. ಭಾರತಕ್ಕೆ ಪೋರ್ಚುಗೀಸರು ಬಾರತಕ್ಕೆ ಆಗಮನದ ನಂತರ ಈ ಕುದುರೆ ವ್ಯಾಪಾರದ ಮೇಲೆ ನಿಯಂತ್ರಣ ಹೊಂದಿದರು. ಸರಕುಗಳನ್ನು ಅವುಗಳ ಮೌಲ್ಯ ಮತ್ತು ಲಕ್ಷಣಗಳ ಆಧಾರದ ಮೇಲೆ ವಿಂಗಡಿಸಲಾಗಿತ್ತು. ಜಾಪದಿ, ಕರ್ಪೂರ, ಸುಗಂದದ್ರವ್ಯಗಳು, ಲೋಹ, ಅಮೂಲ್ಯ ರತ್ನಗಳು, ರೇಷ್ಮೆ, ಕುದುರೆಗಳು ಮುಂತಾದ ವಸ್ತುಗಳು ಭಾರತಕ್ಕೆ ಆಮದಾಗುತ್ತಿದ್ದವು. ಹಾಗೆಯೇ ಮಲಬಾರ್ ಬಂದರುಗಳಿಂದ ವಿಶೇಷವಾದ ಕೆಲವೊಂದು ಸರಕುಗಳು ರಫ್ತಾಗುತ್ತಿದ್ದವು. ಸಾಂಬಾರ ಪದಾರ್ಥಗಳಾದ ಮೆಣಸು, ದಾಲ್ಚಿನ್ನಿ, ಚೆಕ್ಕೆ, ಲವಂಗ, ಶುಂಠಿ, ಜಾಪಾತ್ರೆ, ಏಲಕ್ಕಿ, ಗೊಧಿ, ಅಕ್ಕಿ, ಸಾಸಿವೆ, ಸಕ್ಕರೆ, ತೆಂಗಿನಕಾಯಿ, ಗಿಡಮೂಲಿಕೆ ಮತ್ತು ಕಚ್ಚಾ ಸಾಮಾಗ್ರಿಗಳು, ಲೋಹಗಳು ಮತ್ತು ಸಿದ್ಧ ವಸ್ತುಗಳು ಮುಖ್ಯವಾದವುಗಳಾಗಿದ್ದವು.

ಹೀಗೆ ವ್ಯಾಪಾರ ಮತ್ತು ವಾಣಿಜ್ಯದ ಏಕಸ್ವಾಮ್ಯವನ್ನು ಹೊಂದಿದ್ದ ಪೋರ್ಚುಗೀಸರು ಕ್ರಿ.ಶ. 1600 ರ ನಂತರ ಹಂತ ಹಂತವಾಗಿ ಭಾರತದಲ್ಲಿ ಅವನತಿ ಹೊಂದಿದರು. ಪ್ರಾರಂಭದಲ್ಲಿ ಪೋರ್ಚುಗೀಸರಿಗೆ ಯಾರು ವ್ಯಾಪಾರ ಪೈಪೋಟಿಯನ್ನು ನೀಡಲಿಲ್ಲ. ಆದರೆ ಭಾರತಕ್ಕೆ ಬ್ರಿಟಿಷರು ಮತ್ತು ಪ್ರೆಂಚರ ಆಗಮನದ ನಂತರ ವ್ಯಾಪಾರದಲ್ಲಿ ಪೈಪೋಟಿ ಉಂಟಾಗಿ ಕೊನೆಗೆ ಪೋರ್ಚುಗೀಸರು ತಮ್ಮ ಪ್ರಭಾವವನ್ನು ಕಳೆದುಕೊಂಡರು. ಭಾರತದಲ್ಲಿ ಪೋರ್ಚುಗೀಸರ ಆಗಮನದೊಂದಿಗೆ ಕೆಲವೊಂದು ಬದಲಾವಣೆಗ ಳುಂಟಾದವು. ಕ್ರೈಸ್ತಧರ್ಮದ ಪ್ರಚಾರ, ಭಾರತಕ್ಕೆ ಮುದ್ರಣ ಯಂತ್ರದ ಬೆಳವಣಿಗೆ ಹಾಗೂ ಕೆಲವೊಂದು ಧಾರ್ಮಿಕ ಅಂದಾಣುಕರಣಿಗಳು ಹೋಗಲಾಡಿಸುವ ಪ್ರಯತ್ನ ಕೂಡ ಅಲ್ಬುಕರ್ಕ್‌ನಿಂದ ನಡೆಯಿತು. ಪೋರ್ಚುಗೀಸರ ಆಗಮನದ ಭಾರತದ ಇತಿಹಾಸದಲ್ಲಿ ಆಧುನಿಕ ಯುಗವಾಗಿ ಪರಿವರ್ತನೆ ಹೊಂದಿತ್ತು.

ವಿಜಯನಗರ ಸಾಮ್ರಾಜ್ಯವು ಅರಬ್ ಮತ್ತು ಪೋರ್ಚುಗೀಸರೊಂದಿಗೆ ಮಾತ್ರವಲ್ಲದೇ ಏಷ್ಯಾದ ಈತನ ರಾಷ್ಟ್ರಗಳೊಂದಿಗೂ ಉತ್ತಮವಾದ ಸಂಬಂಧವನ್ನು ಅಭಿವೃದ್ಧಿ ಪಡಿಸಿಕೊಂಡಿತ್ತು. ವಿಜಯನಗರ ಸಾಮಾಜ್ಯವು ಚೀನಾ, ಶ್ರೀಲಂಕಾ, ಬರ್ಮಾ ಅಥವಾ ಮಯನ್ಮಾರ್ ಮತ್ತು ಮಲಯಾ ದೇಶಗಳೊಂದಿಗೆ ವ್ಯಾಪಾರ ಮತ್ತು ರಾಜತಾಂತ್ರಿಕ ಸಂಬಂಧಗಳನ್ನು ಹೊಂದಿತ್ತು. ಚೀನಾವು ಏಷ್ಯಾದ ಪ್ರಾಚೀನ ರಾಷ್ಟ್ರವಾಗಿದ್ದು ಪ್ರಾರಂಭದಿಂದಲ್ಲೂ ಇದು ಭಾರತದೊಂದಿಗೆ ವ್ಯಾಪಾರ ಸಂಬಂಧವನ್ನು ಹೊಂದಿತ್ತು. ಚೀನಾದ ಎರಡು ಪ್ರಮುಖ ಸರಕುಗಳು ಇಡೀ ವಿಶ್ವದಾದ್ಯಂತ ಅತಿ ಹೆಚ್ಚು ಪ್ರಾಮುಖ್ಯತೆ ಗಳಿಸಿದ್ದವು. ಅವುಗಳೆಂದರೆ ಒಂದು ಚೀನಾದ ರೇಷ್ಮೆ ಮತ್ತು ಪಿಂಗಾಣಿ ಪಾತ್ರೆಗಳು ಈ ಸರಕುಗಳು ಭಾರತದ ಬಂದರುಗಳಿಗೆ ಅಮದಾಗುತ್ತಿದ್ದವು.

ಭಾರತ ಮತ್ತು ವಿಜಯನಗರ ಸಾಮ್ರಾಜ್ಯದೊಂದಿಗೆ ಉತ್ತಮವಾದ ಸಂಬಂಧ ಏರ್ಪಡಿಸುವ ಉದ್ದೇಶದಿಂದ ಕ್ರಿ.ಶ. 1405 ರಿಂದ 1433ರವರೆಗೆ ಏಳು ಸಮುದ್ರಯಾನಗಳು ಭಾರತದೊಂದಿಗೆ ಸಂಭವಿಸಿದವು. ಚೀನಾದ ವ್ಯಾಪಾರಿಗಳು ಭಾರತದ ಮಲಬಾರ್ ಬಂದರುಗಳೊಂದಿಗೆ ಉತ್ತಮವಾದ ಸಂಬಂಧ ಹೊಂದಿದ್ದರು. ಚೀನಾದ ಹಡಗುಗಳು ಪಶ್ಚಿಮ ಮತ್ತು ಪಶ್ಚಿಮ ಕರಾವಳಿಗಳಿಗೆ ಬಂದು ತಲುಪುತ್ತಿದ್ದವು. ಮತ್ತು ಸರಕುಗಳನ್ನು ವಿನಿಮಯ ಮಾಡಿಕೊಳ್ಳುತ್ತಿದ್ದವು. ಮಲಬಾರಿನ ಕೊಲ್ಲಂ ಬಂದರು ಚೀನಾದ ವ್ಯಾಪಾರಿಗಳ ಪ್ರಮುಖ ಬಂದರುಗಳಲ್ಲಿ ಒಂದಾಗಿತ್ತು. ಇದಲ್ಲದೆ ಮಂಗಳೂರು, ಭಟ್ಕಳ, ಹೊನ್ನಾವರ ಹಾಗೂ ಪೂರ್ವ ಬಂದರುಗಳಾದ ಬಂಗಾಳ, ವಿಶಾಖಪಟ್ಟಣಗಳಲ್ಲಿಯೂ ಅವರು ತಮ್ಮ ವ್ಯಾಪಾರದ ನಿಯಂತ್ರಣವನ್ನು ಹೊಂದಿದ್ದರು.

ಚೀನಾದಿಂದ ಮೂರು ನಿಯೋಗಗಳು ವಿಜಯನಗರಕ್ಕೆ ಭೇಟಿ ನೀಡಿ ಭಾರತ ಮತ್ತು ಚೀನಾದ ನಡುವೆ ಉತ್ತಮವಾದ ಸಂಬಂಧ ಬೆಳೆಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದವು. ಭಾರತಕ್ಕೆ ವ್ಯಾಪಾರ ಉದ್ದೇಶದಿಂದ ಬರುತ್ತಿದ್ದ ಚೀನಿ ವ್ಯಾಪಾರಿಗಳು ಭಾರತದ ಕಡಲ್ಗಳ್ಳರಿಂದ ರಕ್ಷಣೆ ಪಡೆದುಕೊಳ್ಳಲು ತಮ್ಮ ಜೊತೆಗೆ ತಮ್ಮದೇಯಾದ ಸೈನ್ಯವನ್ನು ಕರೆದುಕೊಂಡು ಬರುತ್ತಿದ್ದರು. ಭಾರತದ ಬಂದರುಗಳು ಮಾತ್ರವಲ್ಲದೇ ಆಫ್ರಿಕಾ ಮತ್ತು ಅರೇಬಿಯಾದ ಬಂದರುಗಳಿಗೆ ಅವರು ತಮ್ಮ ಹಡಗುಗಳ ಯಾನವನ್ನು ಕೈಗೊಳ್ಳುತ್ತಿದ್ದರು. ತೇಗದ ಮರಗಳು, ರೇಷ್ಮೆ ಮತ್ತು ಪಿಂಗಾಣಿ ಪಾತ್ರೆಗಳು ಚೀನಾದಿಂದ ಭಾರತಕ್ಕೆ ರಫ್ತಾಗುತ್ತಿದ್ದವು. ಮಲಬಾರ್ ಬಂದರುಗಳಿಂದ ಚೀನಾಕ್ಕೆ ಕೆಲ ವೊಂದು ಸರಕುಗಳು ರಫ್ತಾಗುತ್ತಿದ್ದವು. ಸಾಂಬಾರ ಪದಾರ್ಥಗಳು, ವೀಳ್ಯದ ಎಲೆ ಮತ್ತು ಅಡಿಕೆ, ಒಣ ಮೀನು, ಆಭರಣಗಳು, ಛತ್ರಿಗಳು ಮತ್ತು ಬಟ್ಟೆಗಳು ಪ್ರಮುಖ ವಾದವುಗಳಾಗಿದ್ದವು.

ಭಾರತ ಮತ್ತು ಚೀನಾದ ನಡುವೆ ಕೇವಲ ವ್ಯಾಪಾರ ಸಂಬಂಗಳಲ್ಲದೆ ಸಾಂಸ್ಕೃತಿಕ ಸಂಬಂಧಗಳು ಕೂಡ ಉನ್ನತೀಕರಣಗೊಂಡಿದ್ದವು. ಭಾರತದಲ್ಲಿ ಸ್ಥಾಪನೆಯಾದ ಬೌದ್ಧಧರ್ಮವು ನಂತರ ವಿಶ್ವದ ಭಾಗಗಳಲ್ಲಿ ಹರಡಿತು. ಹಾಗೆಯೇ ಭಾರತಕ್ಕೆ ಈ ಧರ್ಮದ ಬೆಳವಣಿಗೆ ಉಂಟಾಗಿ ಹಲವಾರು ಚೀನಾದ ಬೌದ್ಧ ಭಿಕ್ಷುಗಳು ಚೀನಾಕ್ಕೆ ಭೇಟಿ ನೀಡಿ ಪರಸ್ಪರ ಸಾಂಸ್ಕೃತಿಕ ಸಂಬಂಧಗಳನ್ನು ಬೆಸೆಯುವ ಪ್ರಯತ್ನ ಮಾಡಿದರು.

ಭಾರತ ಮತ್ತು ಚೀನಾದ ನಡುವೆ ಎರಡು ಪ್ರಮುಖ ಮಾರ್ಗಗಳಿದ್ದವು. ಒಂದು ಜಲಮಾರ್ಗ ಮತ್ತೊಂದು ಭೂ ಮಾರ್ಗವಿತ್ತು. ಭೂಮಾರ್ಗವನ್ನು ಸಾಮಾನ್ಯವಾಗಿ ರೇಷ್ಮೆಮಾರ್ಗವೆಂದು ಸಹ ಕರೆಯಲಾಗುತಿತ್ತು. ಚೀನಾದಿಂದ ಕೊಚ್ಚಿನ್ ಗಲ್ಲಿಟ್ ಜಿಲಾನ್ ಮಾರ್ಗವಾಗಿ ಭಾರತಕ್ಕೆ ಬರುತ್ತಿದ್ದರು. ಚೀನಾದಿಂದ ಟಿಬೆಟಿನ ಮಾರ್ಗವಾಗಿ ಭಾರತಕ್ಕೂ

ಸಂಪರ್ಕ ಕಲ್ಪಿಸಲಾಗಿತ್ತು. ಭಾರತ ಮತ್ತು ಚೀನಾದ ನಡುವೆ ಉತ್ತಮವಾದ ಜಲಮಾರ್ಗವು ಸಹ ಇತ್ತು. ಚೀನಾದಿಂದ ಸುಮಾತ್ರ ಮಲಯಾ ಮಾರ್ಗವಾಗಿ ಅಂಡಮಾನ್ ಮತ್ತು ನಿಕೋಬಾರ್‌ಗಳನ್ನು ದಾಟಿ ಭಾರತದ ಬಂದರುಗಳಿಗೆ ಭೇಟಿ ನೀಡುತ್ತಿದ್ದರು. ಪ್ರಮುಖವಾಗಿ ಎಲ್ಲಾ ಹಡಗುಗಳ ದಕ್ಷಿಣ ಚೀನಾ ಸಮುದ್ರದಿಂದ ಹೊರಟು ಮಲಯಾ ಸುಮಾತ್ರ ಮಾರ್ಗವಾಗಿ ಶ್ರೀಲಂಕಾವನ್ನು ಸಂದಿಸಿ ಪಶ್ಚಿಮ ಬಂದರುಗಳಿಗೆ ಬೇಟಿ ನೀಡುತ್ತಿದ್ದರು. ಚೀನಿಯರು ಪೂರ್ವ ಮತ್ತು ಪಶ್ಚಿಮ ಕರಾವಳಿ ಎರಡು ಭಾಗಗಳಲ್ಲಿಯೂ ವ್ಯಾಪಾರದ ಏಕಸ್ವಾಮ್ಯವನ್ನು ಪಡೆದಿದ್ದರು.

ವಿಜಯನಗರ ಸಾಮ್ರಾಜ್ಯ ಮತ್ತು ಶ್ರೀಲಂಕಾದ ನಡುವೆ ಉತ್ತಮವಾದ ಸಂಬಂಧಗಳು ಬೆಳವಣಿಗೆ ಹೊಂದಿದ್ದವು. ಪ್ರಾಚೀನ ಕಾಲದಿಂದಲ್ಲೂ ಭಾರತ ಶ್ರೀಲಂಕಾದೊಂದಿಗೆ ಉತ್ತಮವಾದ ಸಂಬಂಧವನ್ನು ಹೊಂದಿತ್ತು. ಚೋಳರು ಶ್ರೀಲಂಕಾದ ಮೇಲೆ ದಾಳಿ ಮಾಡಿ ಅದನ್ನು ತಮ್ಮ ಒಂದು ಪ್ರಾಂತ್ಯವಾಗಿ ರೂಪಿಸಿದ್ದರು. ಹಾಗೆಯೇ ವಿಜಯನಗರದ ಸಾಮ್ರಾಜ್ಯದ ಅವಧಿಯಲ್ಲಿ ಶ್ರೀಲಂಕಾದೊಂದಿಗೆ ಹಲವಾರು ನೌಕಾ ಯುದ್ಧಗಳು ಸಂಭವಿಸಿ ಶ್ರೀಲಂಕಾವು ವಿಜಯನಗರ ಸಾಮ್ರಾಜ್ಯದೊಂದಿಗೆ ವಿಲೀನಗೊಂಡಿತ್ತು. ಪ್ರಾರಂಭದಲ್ಲಿ ವೀರ ಕುಮಾರ ಕಪ್ಪಣನು ಉತ್ತಮ ಸಂಬಂಧದ ಬಗ್ಗೆ ಶ್ರೀಲಂಕಾದ ಪ್ರಮುಖ ಗ್ರಂಥಗಳಾದ ಕುಲವಂಶ ಮತ್ತು ರಾಜವಳ್ಳಿಗಳು ಮಾಹಿತಿ ನೀಡುತ್ತವೆ. ಎರಡನೇ ದೇವರಾಯನ ದಂಡನಾಯಕನಾದ ಲಕ್ಷ್ಮಣ ದಂಡೇಶನು ಶ್ರೀಲಂಕಾದ ಮೇಲೆ ದಾಳಿ ಮಾಡಿದುದರ ಬಗಗೆ ಅಬ್ದುಲ್ ರಜಾಕ್‌ನು ಮಾಹಿತಿ ನೀಡುತ್ತಾನೆ. ಶ್ರೀಲಂಕಾದ ಅರಸರು ಮತ್ತು ಮಲಬಾರಿನ ಅರಸರು ವಿಜಯನಗರ ಸಾಮ್ರಾಜ್ಯಕ್ಕೆ ಕಪ್ಪ ಕಾಣಿಕೆಗಳನ್ನು ಸಲ್ಲಿಸುತ್ತಿದ್ದರೆಂದು ವಿದೇಶಿಯರ ಬರವಣಿಗೆಗಳು ನಮಗೆ ಮಾಹಿತಿ ನೀಡುತ್ತವೆ. ಕೃಷ್ಣದೇವರಾಯನ ಕಾಲದಲ್ಲೂ ಶ್ರೀಲಂಕಾದೊಂದಿಗೆ ಉತ್ತಮವಾದ ಸಂಬಂಧಗಳು ಬೆಳವಣಿಗ ಹೊಂದಿದ್ದವು.

ಶ್ರೀಲಂಕಾ ಮತ್ತು ವಿಜಯನಗರ ಸಾಮ್ರಾಜ್ಯದ ನಡುವೆ ಹಲವಾರು ಸರಕುಗಳು ವಿನಿಮಯವಾಗುತ್ತಿದ್ದವು. ವಸ್ತುಗಳನ್ನು ಅವುಗಳ ಲಕ್ಷಣದ ಆಧಾರದ ಮೇಲೆ ವಿವಿಧ ಭಾಗಗಳಾಗಿ ವಿಂಗಡಿಸಲಾಗಿತ್ತು. ಸರ್ಕಾರದ ಅವಶ್ಯಕ ವಸ್ತುಗಳು, ವಿನಿಮಯ ವ್ಯಾಪಾರಕ್ಕೆ ಪೂರಕವಾಗಿತ್ತು. ಶ್ರೀಲಂಕಾದಿಂದ ಆನೆಗಳು, ಭಾರತಕ್ಕೆ ರಫ್ತಾಗುತ್ತಿದ್ದವು. ಭಾರತದಲ್ಲಿ ಆನೆಗಳು ದೊರೆತರೂ ಸಹ ಶ್ರೀಲಂಕಾದ ಆನೆಗಳು ಅತಿ ಹೆಚ್ಚು ಭಾರತಕ್ಕೆ ರಫ್ತಾಗುತ್ತಿದ್ದವು. ಭಾರತದಿಂದ ರಫ್ತಾಗುತ್ತಿದ್ದ ವಸ್ತುಗಳನ್ನು ಮೂರು ಭಾಗಗಳಾಗಿ ವಿಂಗಡಿಸಲಾಗಿತ್ತು, ಆಹಾರ ಪದಾರ್ಥಗಳು, ಲೋಹಗಳು

ಮತ್ತು ಸಿದ್ಧಪಡಿಸಿದ ವಸ್ತುಗಳು ವಿಜಯನಗರ ಸಾಮ್ರಾಜ್ಯದಿಂದ ಶ್ರೀಲಂಕಾಕ್ಕೆ ರಫ್ತಾಗುತ್ತಿದ್ದವು. ಹೀಗೆ ಪರಸ್ಪರ ವಸ್ತು ವಿನಮಯದ ಮೂಲಕ ಉತ್ತಮ ಸಂಬಂಧ ಬೆಳವಣಿಗೆ ಹೊಂದಿತ್ತು.

ಏಷ್ಯಾದ ರಾಷ್ಟ್ರಗಳಾದ ಚೀನಾ ಮತ್ತು ಶ್ರೀಲಂಕಾ ವಲ್ಲದೇ ಬರ್ಮಾ ಅಥವಾ ಮಯನ್ಮಾರ್ ಮತ್ತು ಮಲಯಾದೊಂದಿಗೆ ವಿಜಯನಗರ ಸಾಮ್ರಾಜ್ಯವು ಉತ್ತಮ ಸಂಬಂಧಗಳು ಏರ್ಪಟಿದ್ದವು. ಬರ್ಮಾ ಮತ್ತು ಮಲಯಾಗಳು ಭಾರತದೊಂದಿಗೆ ನೇರವಾದ ಸಂಪರ್ಕವನ್ನು ಹೊಂದಿದ್ದರು. ಕೆಲವೊಂದು ಸಂದರ್ಭಗಳಲ್ಲಿ ಪರೋಕ್ಷ ಸಂಬಂಧಗಳು ಬೆಳವಣಿಗೆ ಹೊಂದಿದ್ದವು. ಚೀನಾವು ಭಾರತದೊಂದಿಗೆ ಸಂಪರ್ಕಕಲ್ಪಿಸುವ ಮಾರ್ಗದಲ್ಲಿ ಮಲಯಾ ಮತ್ತು ಬರ್ಮಾದೊಂದಿಗೆ ಹಾದು ಭಾರತವನ್ನು ತಲುಪುತಿತ್ತು. ಈ ಸಂದರ್ಭದಲ್ಲಿ ಮಲಯಾ ಮತ್ತು ಬರ್ಮಾದ ನಡುವೆ ಚೀನಾದ ಪ್ರಭಾವವನ್ನು ಕಾಣಬಹುದಾಗಿದೆ.

ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿ ಆಂತರಿಕ ವ್ಯಾಪಾರ ಮತ್ತು ಬಾಹ್ಯ ವ್ಯಾಪಾರ ಸಮರ್ಪಕವಾಗಿ ಬೆಳವಣಿಗೆ ಹೊಂದಿತ್ತು. ಹಲವಾರು ಬಂದರುಗಳ ಬೆಳವಣಿಗೆಯೊಂದಿಗೆ ವ್ಯಾಪಾರ ಅಭಿವೃದ್ಧಿಯನ್ನು ಪಡೆದಿತ್ತು. ವಿವಿಧ ಹೊಸ ವ್ಯಾಪಾರಿ ಮಾರ್ಗಗಳು ಬೆಳವಣಿಗೆ ಹೊಂದಿದವು. ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯೊಂದಿಗೆ ನಗರಗಳು ಬೆಳವಣಿಗೆ ಪಡೆದವು. ಪ್ರಾರಂಭದಲ್ಲಿ ವಸ್ತು ವಿನಿಮಯದ ಪದ್ಧತಿ ರೂಢಿಯಲ್ಲಿತ್ತು. ನಂತರದ ದಿನಗಳಲ್ಲಿ ನಾಣ್ಯಗಳನ್ನು ಬಳಸಿ ವ್ಯಾಪಾರ ಕೈಗೊಳ್ಳುವ ಪ್ರಕ್ರಿಯೆ ಆರಂಭವಾಯಿತು. ಕಾರವಾರ ಭಟ್ಕಳ, ಹೊನ್ನಾವರ, ಬಂದರುಗಳು ಸಂಪರ್ಕ ಕಲ್ಪಿಸುತ್ತಿದ್ದ ಮಾರ್ಗಗಳು ಹಾಗೂ ಭಾರತದ ಬಂದರುಗಳಿಂದ ಸಂಪರ್ಕ ಕಲ್ಪಿಸುತ್ತಿದ್ದ ಮಾರ್ಗಗಳು ಹಾಗೂ ಭಾರತದ ಬಂದರುಗಳಿಂದ ವಿದೇಶಗಳಿಗೆ ಸಂಪರ್ಕ ಕಲ್ಪಸುತ್ತಿದ್ದವು. ಜಲಮಾರ್ಗಗಳು ಮತ್ತು ಭೂ ಮಾರ್ಗಗಳ ಬೆಳವಣಿಗೆಯಿಂದಾಗಿ ವ್ಯಾಪಾರ ಉನ್ನತಿಕರಣಗೊಂಡಿತ್ತು. ನಗರಗಳ ಬೆಳವಣಿಗೆ, ಆಡಳಿತಾತ್ಮಕ ಅಂಶಗಳು, ಮಿಲಿಟರಿ ಅಂಶಗಳು, ವಾಣಿಜ್ಯ ಅಂಶಗಳು ಪ್ರಮುಖವಾಗಿ ಪ್ರಭಾವ ಬೀರಿದವು. ನಗರಗಳ ಬೆಳವಣಿಗೆಯಲ್ಲಿ ಪ್ರಮುಖವಾಗಿ ಸಂತೆಗಳು, ವ್ಯಾಪಾರ ಸಂಘಗಳು ಪ್ರಮುಖ ಪಾತ್ರವನ್ನು ವಹಿಸಿದವು. ಬಣಜಿಗರು, ವೀರಬಣಜಿಗರು, ಸಾಲುಮಾಳೆ ಬಣಜಿಗಳು, ಶೆಟ್ಟಿಗಳು ಹೀಗೆ ಹತ್ತು ಹಲವು ವ್ಯಾಪಾರಿ ಸಂಘಗಳು ವ್ಯಾಪಾರದ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದವು. ವ್ಯಾಪಾರಿ ಸಂಘಗಳು ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಯಲ್ಲದೇ ಕೆಲವು ಸಾರ್ವಜನಿಕ ಕಲ್ಯಾಣ ಕಾರ್ಯಕ್ರಮಗಳನ್ನು ಸಹ ನಡೆಸುತ್ತಿದ್ದವು. ಹಾಗೆಯೇ ವ್ಯಾಪಾರದ ಬೆಳವಣಿಗೆಯಲ್ಲಿ ಕೆಲವೊಂದು ಉದ್ಯಮಗಳು ಪ್ರಮುಖ ಪಾತ್ರ ವಹಿಸಿದವು. ನೇಯ್ಗೆ ಉದ್ಯಮ,

ಎಣ್ಣೆ ಗಿರಣಿಗಳು, ಲೋಹದ ಉದ್ಯಮಗಳು ಮಡಿಕೆ ತಯಾರಿಕೆ ಉದ್ಯಮ, ಉಪ್ಪು ತಯಾರಿಕಾ ಉದ್ಯಮ ಮತ್ತು ಮರೆಗೆಲಸದ ಉದ್ಯಮಗಳು ಅತಿಹೆಚ್ಚು ಬೆಳವಣಿಗೆಗೊಂಡು ವ್ಯಾಪಾರದ ಅಭಿವೃದ್ಧಿಯಲ್ಲಿ ಪೂರಕವಾದ ವಾತಾವರಣವನ್ನು ನಿರ್ಮಿಸಿದ್ದವು.

ಕೊನೆಯದಾಗಿ ಹೇಳುವುದಾದರೆ ವಿಜಯನಗರ ಕಾಲದ ಸಾಗರೋತ್ತರ ಸಂಬಂಧಗಳು ಎಂಬ ಸಂಶೋಧನಾ ಶೀರ್ಷಿಕೆಯಡಿಯಲ್ಲಿ ಐತಿಹಾಸಿಕ ಸಂಶೋಧನಾ ಕ್ರಮವನ್ನು ಬಳಸಿ ನನ್ನ ಸಂಶೋಧನೆಯನ್ನು ಪೂರ್ಣಗೊಳಿಸಿದ್ದೇನೆ. ನನ್ನ ಸಂಶೋಧನೆಯ ಮಹತ್ವ ಮತ್ತು ಉದ್ದೇಶವನ್ನು ಹಿಡೇರಿಸುವ ಪ್ರಾಮಾಣಿಕ ಪ್ರಯತ್ನವನ್ನು ಸಹ ನಾನು ಮಾಡಿದ್ದೇನೆ. ಈ ಸಂಶೋಧನೆಯಲ್ಲಿ ಹಲವಾರು ಫಲಿತಗಳನ್ನು ಕಂಡು ಹಿಡಿಯುವ ಪ್ರಯತ್ನವನ್ನು ಸಹ ನಾನು ಮಾಡಿದ್ದೇನೆ. ಹಾಗೂ ಈ ಕ್ಷೇತ್ರದಲ್ಲಿ ಮತ್ತಷ್ಟು ಸಂಶೋದನೆಗಳು ಆಗಬೇಕಾಗಿದೆ. ನನ್ನ ವ್ಯಾಪ್ತಿಯು ಕೇವಲ ವಿಜಯನಗರ ಸಾಮ್ರಾಜ್ಯದ ಅವಧಿಗೆ ಮಾತ್ರ ಸೀಮಿತಗೊಂಡಿರುವುದರಿಂದ ಈ ಅವಧಿಯ ಸಂಬಂಧಗಳನ್ನು ಮಾತ್ರವೇ ಉಲ್ಲೇಖಿಸಿದ್ದೇನೆ. ಆದರೆ ಅರಬ್ಬರಿಗೆ ಸಂಬಂಧಿಸಿದಂತೆ ಭಾರತಕ್ಕೆ ಅರಬ್ಬರ ಆಗಮನ ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಸಂಬಂಧಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಒಟ್ಟಾರೆಯಾಗಿ ಭಾರತ ಮತ್ತು ವಿವಿಧ ರಾಷ್ಟ್ರಗಳೊಂದಿಗಿನ ಸಂಬಂಧವನ್ನು ಅಧ್ಯಯನ ಮಾಡುವುದಾದರೆ ಬಹಳಷ್ಟು ವಿಚಾರಗಳನ್ನು ಉಲ್ಲೇಖಿಸಬಹುದಾಗಿದೆ. ನನ್ನ ಸಂಶೋದನೆಯಲ್ಲಿ ನನಗೆ ದೊರೆತ ಆಕರಗಳನ್ನು ಬಳಸಿ ಪ್ರಾಮಾಣಿಕವಾಗಿ ನನ್ನ ಸಂಶೋಧನಾ ಉದ್ದೇಶವನ್ನು ಹಿಡೇರಿಸುವ ಪ್ರಾಮಾಣಿಕ ಪ್ರಯತ್ನ ಮಾಡಿ ನನ್ನ ಸಂಶೋಧನಾ ಪ್ರಬಂಧವನ್ನು ಸಿದ್ಧಪಡಿಸಿದ್ದೇನೆ.

# ಪರಾಮರ್ಶನ ಗ್ರಂಥಗಳು


## I. Archaeology

- Andhra Pradesh Government Archaeological Series
- Annual Report of Indian Epigraphy (1945-1946)
- Annual Report of South Indian Epigraphy (1887-1945)
- Annual Report on Kannada Research in Bombay Province for 1939-40 (ed) R.S.Panchamukhi, Dharwar, 1941.
- Archaeological Survey of India Reports (Calcutta, 1887 onwards).
- Epigraphia Carnatica, Vols. I to XVI (Bangalore).
- Epigraphia Indica (Calcutta, 1892 onwards).
- Inscriptions of the Deccan, Naik, A.V. (Poona, 1947).
- Karnataka Inscriptions, Vols. 1-5 (ed) R.S.Panchamuki, Dharwar.
- List of Inscriptions, Topographically arranged-3 volumes, Ragavachari.V.
- Mysore and Coorg from Inscriptions, Rice (Bangalore, 1909)
- Mysore Archaeological Reports, 1906-1956.
- Selected South Indian Inscriptions, (ed) Ramachandra Dikshitar, V.R.
- South Indian Inscriptions – Vols.1 to 15, 17 and 20, 1890 onwards.
- The Historical Inscriptions of Southern India, Sewell and S.K.Iyengar.
- The Inscriptions of the Madras Presidency, Vols. I and II, (ed) Rangacharya, V.
- The Madras Epigraphist's Report.

## II. Chronicles and Travellers' Accounts

- Abdur Razzaq, Elliot's History of India as told by its own Historians, Vol.IV.
- Barbosa, The Book of Durate Barbosa – 2 vols. Translated with notes etc., by Longsworth Dames, London, 1918.
- Bernier, Travels in the Mughal Empire (A.D. 1656-1668). London, 1981.
- Commissariot, M.S., Mandelslo's Travels in Western India (A.D. 1638-39), Madras, 1931.
- Conti, Nicolo Dei: Major, India in the Fifteenth Century.
- Farishta, History of the Rise of the Muhammadan Power in India till the year 1612.

- Fostern, W, Early Travels in India.
- Indian Travels of Thevenot and Careri – Indian Record Series, New Delhi, 1949.
- Niccolai Manucci, Storio Do Mogor (1653-1708) 4 Volumes.
- Nikitin: Major. India in the Fifteenth Century.
- Nilakanta Sastry, K.A. (ed) Foreign Notices of South India.
- Nuniz: Sewell. A Forgotten Empire.
- Paes: Sewell: A Forgotten Empire.
- The English Factories in India – 13 Vols.
- Vasco-de-Gama: The Three Voyages (Hakluyt Society).


**III. English Works (Modern)**


- Abhyankar, Rajenda M. west Asia and the Region : De fining India's Role, Academic foundation, New Delhi , 2008.
- Abraham . L Udovitch, commercial technique is Islam and Trade of Asia London, 1970.
- Adhya, G.L. Early Indian Economics (Studies in the Economic Life of Northern and Western India C. 200 BC to 300 AD), Bombay, 1966.
- Ahmad, Maqbul, Indo – Arab Relations, ICCR, popular prakashan, Bombay, 1969.
- Aiyangar, Krishnaswamy, S. Evolution of the Hindu Administrative Institutions of Southern India, Madras, 1931.
- Aiyangar, Krishnaswamy, S. Sources of Vijayanagara History, Madras, 1919.
- Aiyangar, Krishnaswamy, S.Ancient India, Madras, 1911. A Little Known Chapter of Vijayanagara History, Madras, 1916.
- Aiyangar, Krishnaswamy, S.South India and Her Mohammadan Invaders, Oxford, 1921.
- AIyar subramanya T.V. south Indian inscription
- Altekar, A.S. History of Village Communities in Western India, Bombay, 1927.
- Ancient India and South Indian History and Culture, 2 Vols. Poona, 1941.
- Appa Doori, Economic conditions of South India.
- Appadorai, A. Economic Conditions in Southern India (1000-1500 A.D) Two Volumes, Madras, 1936.

- Asaf A.A.  Fyzee, Introduccing to Middle East. Prasaranga, University of Mysore, 1967.
- Atlekar, A.S. State and Government in Ancient India, Banaras, 1949.
- B.N.Purvi, India and central Asia, prasaranga, mysore, 1984.
- Bagchi, P.C. India and China, Bombay, 1950.
- Bhandarkar, R.G. Early History of the Deccan Down to the Muslim Conquest, Calcutta, 1928.
- Chitnis. Keladi Polity, Dharwar, 1974.
- Chudhuri K.N Trade and civilization is the Indian ocean. Cambridge, university press, 1985.
- Danvers  F.C. The portuguese,   in India, Vol-I London, 1894.
- Danvers. The Portuguese in India. Two Volumes, London, 1894.
- Desai, P.G. Jainism in South India.
- Dikshit, G.S. Local Self-Government in Medieval Karnataka, Dharwar, 1964.
- Durate Barbosa, A Description of the coase of East Africa and Malabar.
- Foster. W the English  Factories in India.
- Francis, W. Bellary, Madras District Gazetters, Madras, 1920.
- Gribble. A History of the Deccan, 2 Vols, London, 1895-1924.
- Gupta, K.M. Land System in South India, (800 A.D. to 1200 A.D), Lahore, 1933.
- Gururaja Bhat, P. Studies in Tuluva History and Culture, 1975.
- Gururajachar, S. Some Aspects of Economic and Social Life in Karnataka (A.D. 1000-1300), Mysore, 1974.
- H.P Keshava Naik, Some Aspects of  Fudal Elements in the Vijayanagara polity. Prasaranga, Mysore, 1998.
- Haraprasad, Ray, Historical Contacts between quilon and china.
- Hariprasad  Ray, Trade between South India and china.
- Hayavadana Rao, C. History of Mysore, Vol. I (1399-1704), Vol.II, (1704-1766) Vol.III (1766-1799), Bangalore, 1948.
- Heras, H. The Aravidu Dynasty of Vijayanagara, Madras, 1927.
- Heras, South India under vijaynagara Empire.
- Hitti, P.K. History of the Arabs, palgrave Macmillan, New Yark, 2002
- Hourani G.F. Arab Seafaring, Newyark, 1975.
- Hussain, the Rehla of Ibn Batuta.

- Ibn Battuta , Travels in Asia and Africa, H.A. R. Gibb New Dekhi, 1990.
- Ilias M.H Cultural conoours of India-west Asia Relations, Century
- Joginder K. chawla. India's overland Trade with central Asia and Persia, munshiram manoharial publishers 2006.
- John king Fairbank, Trade and Diploamcy on the china coast of the Treety ports.
- Karnataka Through the Ages (published by the Government of Mysore), Bangalore, 1968, Gen. Ed. R.R.Dewakar.
- Kenneth MC Pherson, The Indian Ocean, London, 1948.
- Krishna Iyyer, A History of kerala, Coimbatore, 1968.
- Krishnadevaraya of Vijayanagara, (A.D. 1509-1530), Madras, 1917.
- Krishnappa M.V Social and Economic conditions of Karnataka, prasrnga, Mysore, 1994.
- Louise, Levathes, when Arab ruled the seas.
- Mahalingam T.V. Sangama Dynasty and the Ceylon.
- Mahalingam, T.V. Administration and Social Life under Vijayanagar, Madras, 1940.
- Mahalingam, T.V. Economic Life in the Vijayanagara Empire, Madras, 1951.
- Mahalingam, T.V. South Indian Polity, II Edn. Madras, 1967.
- Marthew K.S. studies in maritime History, Pondichery, 1990.
- Mathew, K.S. Indo-portuguese Trade and the fuggers of Germany.
- Mubarakpuri, qazi Athar, Abbasid caliphate and India, Delhi, 2005.
- Mugali, R.S. Heritage of Karnataka, Bangalore, 1946.
- Mugali, R.S. Kannada Sahitya Charitre, Mysore, 1960.
- Mukherjee, R.K. The Economic History of India (1600 to 1800) Bombay.
- Mysore Gazetteers, 2 Vols. Westminister, 1897.
- Nainar, Arab Geographers Knowledge f southern India, Madras, 1942
- Narasimha Murthy, A.V. The Coins of Karnataka, Mysore, 1975.
- Neelakanta Sastri K.A. Foreign Notices of South India.
- Nilakant sastri K.A. The Third Dynastry of vijay Nagara.
- Nilakanta Sastri, K.A. A History of South India, II Edn. Madras, 1966.
- Nilakanta Sastri, K.A. Further Sources of Vijayanagara History, 3 Volumes, Madras, 1946.

- OM. Prakash, Bullion for Goods, European and Indian merchants in the Indian ocean Trade, 1500 -1800, Manohar, 2004.
- Padmanabha menon, History of kerala, cochin Government press, 1924.
- Panikar K.M, History of Kerala
- Panikar K.M. Malabar and portuguese, Bombay-1921
- Panikkar, K.M. India and China: Malabar and the Portuguese.
- Puttanna, M.S. History of Ikkeri.
- Rama Sharma, M.H. (ed) The History of the Vijayanagara Empire. Decline and Disappearance, Two Volumes.
- Ramachandra Rao, P.B. The Palegars of Mysore and their Civilization.
- Ramachandraiyya Orngamti. Studies on Krishnadevaraya of Vijayanagara, Andhra University, 1953.
- Ramesh, K.V. A History of South Kanara, Dharwar, 1970. Tulunadina Itihasa, Mysore, 1969.
- Rao, R.P. poruguese Rule in India.
- Rice, B. Lewis. Mysore and Coorg from the Inscriptions, London, 1909.
- Roteiro devasco – da- Gama.
- S.K. Aruni vijayanagara and Krishna devaraya ICHR ,2018.
- Saletore, B.A. Political and Social Life in the Vijayanagara Empire, Vols. I and II, Madras, 1934.
- Sarkar K.B. Trade and commercial activities of southern India, Vol – I, Culcutta, 1986.
- Sastry, K.R.R. South Indian Guilds, Madras, 1925.
- Sewell, Robert. A Forgotten Empire, I, Indian Edn. Delhi, 1962.
- Shastry B,S. commercial policy of the Portuguese in coastral Karnataka.
- Shastry B,S. Commercial policy of the Portuguese in coastral Karnataka.
- Shastry B,S. Socio-Economic Relation between Karnataka and Goa, New Delhi, 2006.
- Shivanna, K.S. The Agrarian System of Karnataka 1336-1761, Mysore, 1982.
- Smith, V.A. History of Fine Arts of India and Ceylon, Oxford, 1930.
- Some Contributions of South India to Indian Culture, Calcutta, 1923.
- Stein, Burton. Peasants, State and Society in Medieval South India, New Delhi, 1980.

